ವಕ್ತ್ರಂ ಸರ್ವಮವಕ್ರಯತ್ವನುದಿನಂ ಕುಬ್ಜಾತನೂ ಜೃಂಭಕಃ
ಮಲ್ಲಾನಾಂ ಲಯಕೃದ್ಧುನೋತು ಸರಿಪೂನ್ ಕಂಸಸ್ಯ ಹಿಂಸಾಕರಃ ।
ಬಂಧೂನ್ ಬಂಧಕರಾನ್ವಿಜೋಯ ತು ಮೇ ರಮ್ಯಾಂ ಧುರಂ ಮಾಧುರಃ
ಸಂದದ್ಯಾದ್ಧರಿರಂತರಂಗವಿಭವಂ ರಂಗಸ್ಥಲೀರಂಜಕಃ ॥ ೧೦ ॥

ಮಧುರಾ ಮಧುರಾ ಯೇನ ಸಮಭೂತ್ಸಮಭೂಜ್ಝಿತಾ ।
ಸ್ಮರತ ಸ್ಮರತಾತಂ ತಂ ಮಹತಾಮಹತಾರ್ಥದಮ್ ॥ ೧೧ ॥

ಕೃಷ್ಣೋದಾರವಿಹಾರಖಂಡಿತಮಲಂ ಯಸ್ಯಾಂ ಜಲಂ ಮಂಗಲಂ
ತತ್ಪಾದಾಂಬುಜಲಕ್ಷ್ಮಲಕ್ಷ್ಯವಿಭವಾ ಧನ್ಯಸ್ಥಲೀ ಯತ್ಸ್ಥಲೀ ।
ಯದ್ಗೇಹಾನಿ ಕೃತಸ್ಪೃಹಾಣಿ ರಮಯಾ ನಿತ್ಯಂ ಸ್ವಭರ್ತುಃ ಸ್ಥಿತೇಃ
ದದ್ಯಾತ್ ಸಾ ಮಧುರಾಪುರೀ ಶುಭಕರೀ ಶ್ರೇಯಾಂಸಿ ಭೂಯಾಂಸಿ ನಃ ॥ ೧೨ ॥

ಜಗತ್ಪಿತ್ರಾಽಥ ಪಿತರೌ ಮೃದುಭಾಷಣಪೂರ್ವಕಮ್ ।
ನತೌ ನ ತೌ ಪುತ್ರಬುದ್ಧಿಂ ಚಕ್ರತುಶ್ಚಕ್ರಿಣೇಶ್ವರೇ ॥ ೧೩ ॥

ವಿಮುಚ್ಯ ನಿಗಡಾದೀಶಃ ಸ್ಮಿತವಕ್ತ್ರಃ ಪ್ರಿಯಂ ವದನ್ ।
ಕೃತಸ್ನೇಹೋಽಥ ನಿಗಡಂ ಮಾಯಾಮಯಂ ಅಯೂಯುಜತ್ ॥ ೧೪ ॥

ಅಥ ಧರ್ಮಪಥಾಧ್ಯಕ್ಷೋ ಜಗದೇ ಜಗದೇಕರಾಟ್ ।
ವಾರ್ತಯಾಹಂ ಭವತ್ಪುತ್ರೋ ಯಶ್ಚಕಾರ ನವಾಂ ಹಿತಮ್ ॥ ೧೫ ॥

ಸರ್ವಂ ತಾತ ಕೃತಂ ತ್ವಯಾ ಯದುದಿತಂ ಪ್ರೀತ್ಯಾಸ್ಮದೀಯಾನ್ವಯೇ
ತೇನೇದಂ ತಿಲಕೀ ಬಭೂವ ಹಿ ಕುಲಂ ಕೀರ್ತಿಶ್ಚ ಮೇ ವಿಸ್ತೃತಾ ।
ಯೇನಾನೇಕ ಖಲಾನ್ನಿಹತ್ಯ ಬಲಿನಂ ಕಂಸಂ ಚ ವಂಶದ್ರುಹಂ
ಬಂಧಗ್ರಂಥಿರಯಂ ವ್ಯಯೋಜಿ ದಯಯಾ ಕಿಂ ಕಿಂ ಕೃತಂ ನ ತ್ವಯಾ ॥ ೧೬ ॥

ಅಂಬಾ ತಂ ಪರಿರಭ್ಯ ಫುಲ್ಲಕರಸನ್ಮಾಲ್ಯೇನ ತಸ್ಯಾರ್ಚನಂ
ನೇತ್ರಾನಂದ ಜಲೇನ ಸಿಂಚನಮುರೋಜೋದ್ಯತ್ಪಯೋಧಾರಯಾ ।
ನೈವೇದ್ಯಂ ಚ ನಿವೇದ್ಯ ವೀಕ್ಷಣಲಸನ್ನೀರಾಜನಂ ಶೋಭನಂ
ಭಾವಿಸ್ವೀಯವಿಮುಕ್ತಿಕಲ್ಪಲತಿಕಾಬೀಜಂ ನಿಜಂ ನಿರ್ಮಮೇ ॥ ೧೭ ॥

ವ್ರಜೇ ಗೃಹಸ್ಥೋಚಿತರಮ್ಯಲೀಲ
ಪ್ರಚಕ್ರತುರ್ಯೌ ಸಮಮಂಗನಾಭಿಃ ।

ಅಥೋಪನೀತೌ ವಿಧಿನೋಪನೀತೌ
ಸುತೌ ವಿತೇನೇ ಕಿಲಶೂರಸೂನುಃ ॥ ೧೮ ॥

ಮುನಯಃ ಉಪಯಯುರ್ಮಹೇಕ್ಷಣೋತ್ಸುಕಾ
ಧೃತನಿಯಮಾಃ ಕಿಲ ಸರ್ವತಃ ಸಮೇತಾಃ ।
ಜನಿಮಿವ ಪರಿಹರ್ತುಮುತ್ತರತ್ರ
ಹ್ಯುಪನಯನಾದಿ ನಿದಾನಮಾಪ್ತಕಾಮಾಃ ॥ ೧೯ ॥

ವಾದ್ಯಾನಿನೇದುರ್ಮುನಯಶ್ಚ ಮಂತ್ರಾ-
ನುಚ್ಚಾರಯಂತಃ ಸಹ ಬಂದಿವೃಂದೈಃ ।
ವೃಂದಾರಕಾಣಾಂ ಸ್ತುತಯಶ್ಚ ರಮ್ಯ-
ಗಂಧರ್ವಗೀತೈಃ ಸಹ ನಾಕಿಲೋಕೈಃ ॥ ೨೦ ॥

ನಾರ್ಯಃ ಸಮಸ್ತಾಃ ನಯನೋತ್ಸವಂ ತಂ
ರಕ್ತಾಕ್ಷತೈಃ ರಾಗಯುತಾಃ ಮುಕುಂದಮ್ ।
ಅವಾಕಿರಂಸ್ತತ್ಪರಿರಂಭಣೋತ್ಕಾ
ಕುಬ್ಜಾ ದುರಂತಾಂ ಧ್ರುವಮಾಪ ಚಿಂತಾಮ್ ॥ ೨೧ ॥

ಅಂಬಾಯಾಃ ಪಿತುರಂಚತಾಂ ಅಪಿ ಸತಾಂ ಸತ್ಪ್ರೇಮದಾಮೋಪಮಮ್
ಸಂಬದ್ಧಂ ವಿಶದಂ ಗಲೇ ತ್ರಿಗುಣಿತಂ ಯಜ್ಞೋಪವೀತಂ ತಯೋಃ ।
ರೇಜೇ ತದ್ವಿಲಸದ್ಗುಣೈರ್ಬಹುಗುಣೈರಂತರ್ಗರಿಷ್ಠತ್ರಯಂ
ಸ್ತೋತೃಸ್ತವ್ಯತಯಾ ತದಾಶ್ರಯಯುತಂ ಸ್ವಚ್ಛಂ ಶ್ರುತೀನಾಮಿವ ॥ ೨೨ ॥

ಲೋಕಂ ವಿಡಂಬಯಿತುಮೇವ ಮಿಹೋಪನೀತಃ
ಸತ್ಯಾಂ ಕರಿಷ್ಯತಿ ಹರಿರ್ಮದಪತ್ಯವಾಂಛಾಮ್ ।
ಇತ್ಥಂ ಪ್ರಹೃಷ್ಟಹೃದಿವಾಗ್ನಿರಸೌ ವಿಶಂಕಃ
ಜಜ್ವಾಲ ಯಜ್ವವರಮಂತ್ರಹುತೈರ್ಹವಿರ್ಭಿಃ ॥ ೨೩ ॥

ಆಚಾರ್ಯಃ ಪುರಾಣಪುಂಸೇ ಸಕಲವಿದೇ
ಗಾಯತ್ರೀಮನುಮದಿಶನ್ಮೇತ್ಥಮೂಹಃ
ತದ್ವ್ಯಾಜಾತ್ತವ ಗುಣಚಿಂತಕಾಯ ಮಹ್ಯಂ
ಸದ್ಬುದ್ಧಿಂ ದಿಶದಯಯೇತ್ಯಸೌ ಯಯಾಚೇ ॥ ೨೪ ॥

ಇತಃ ಪರಂ ಶ್ರೌತಪಥಸ್ಥಿತೋಽಯಂ
ನ ಯಾತಿಗೋಪಾಲಕಬಾಲಲೀಲಾಮ್ ।

ಇತೀವ ಶೌರಿಃ ಸಹ ದಕ್ಷಿಣಾಭಿ-
ರ್ದದೌ ಮುದಾ ಗಾಃ ಸುಭಗಾ ಮುನಿಭ್ಯಃ ॥ ೨೫ ॥

ಯಜ್ಞೋಪವೀತೋಜ್ವಲಕಂಠದೇಶಃ
ಕೃಷ್ಣಾಜಿನಶ್ರೀರ್ಮುನಿಸಂಘಮಾನ್ಯಃ ।
ಪ್ರಾಣಪ್ರಣೇತಾ ಧೃತತರ್ಕಮುದ್ರಃ
ಧ್ಯಾಯನ್ ಮನುಂ ವ್ಯಾಸ ಇವಾನ್ವಶಿಕ್ಷತ್ ॥ ೨೬ ॥

ದಿನೇ ದಿನೇಗ್ನೌ ಸಮಿಧೋ ಜುಹಾವ
ತಥಾ ಶ್ರುತೀನಾಂ ಜನನೀಂ ಜಜಾಪ ।
ಸ್ವಕುಕ್ಷಿಪೂರ್ತೌ ನ ರತಿರ್ಹಿ ಕಸ್ಯ
ನಿಜಾನುಭಾವಸ್ಮರಣೋತ್ಸವೇ ಚ ॥ ೨೭ ॥

ತಂ ಬ್ರಹ್ಮಚರ್ಯವ್ರತಧುರ್ಯಮಾರ್ಯಾಃ
ಸಂದೃಶ್ಯ ಹೃಷ್ಟಾಃ ಪರಮಬ್ಧಿಪುತ್ರೀ ।
ವಕ್ಷಸ್ಥಲಸ್ಥಾ ತ್ರಪಯಾಕುಲಾಸೀ-
ದಭ್ಯರ್ಥ್ಯಮಾನೌ ಚ ದಿನೇಶವಹ್ನೀ ॥ ೨೮ ॥

ಗುರೋರ್ಗೃಹಂ ಸರ್ವವಿದಗ್ರಗಣ್ಯೌ
ಉಪೇಯತುಸ್ತೌ ಸಮಿಧಃ ಸಮರ್ಪ್ಯ ।
ಭವಾನ್ ಭವಾರಣ್ಯಮಿದಂ ಚಿದಗ್ನಾ-
ವತಃ ಪರಂ ನಿರ್ದಹತಾದಿತೀವ ॥ ೨೯ ॥

ಅಥೋ ಚತುಃಷಷ್ಠಿದಿನೈಃ ಸ ತಾವತ್
ಕಲಾಃ ಪ್ರಜಗ್ರಾಹ ಬಲಶ್ಚ ಧೀಮಾನ್ ।
ಗುರೋಸ್ತತೋಪ್ಯಲ್ಪದಿನೈರ್ಯದಾಸಾಂ
ಸಕೃತ್ಸಮುಚ್ಚಾರಣಮಪ್ಯಶಕ್ಯಮ್ ॥ ೩೦ ॥
ಗುರುಂ ತತೋ ಪೃಚ್ಛದುಪಾಯನಂ ದಿಶನ್
ಸುತಂ ಯಯಾಚೇ ವಿಮಲೀಕೃತಾನ್ವಯಃ ।
ಮುಹುರ್ಮುರಾರೇಃ ಸದಯಾವಲೋಕ-
ನೈಸ್ತಮಪ್ಯವದ್ಯತ್ಪರಿಪಾಲಯನ್ನಿವ ॥ ೩೧ ॥

ಸುತಂ ವಿಜಾನನ್ನಪಿ ಮೃತ್ಯುನೀತಂ
ಸಶಂಖದೈತ್ಯಂ ವಿನಿಹಂತು ಕಾಮಃ ।

ಸಮುದ್ರಮಾಸಾದ್ಯ ನಿಹತ್ಯ ರಕ್ಷೋ
ಲಸದ್ದೃಶಃ ಸಮ್ಮಿತಮಾಪ ಶಂಖಮ್ ॥ ೩೨ ॥

ಸ ಪಂಚಜನ ದೇಹಸ್ಥಾನ್ ಪ್ರಾಕ್ಷಾನ್ನಿಷ್ಕಾಸ್ಯ ಪಂಚ ಚ ।
ಅಪಂಚಜನಮಾತೇನೇ ಸಾಕಂ ತೇನ ಪಯೋನಿಧಿಮ್ ॥ ೩೩ ॥

ಯಮಾಲಯಂ ಪ್ರಾಪ್ಯ ಸ ಕಂಬುಮುದ್ಧೃತಂ
ವಿಭುಃ ಪ್ರದಧ್ಮೌ ರಿಪುದರ್ಪಹಾರಿಣಮ್ ।
ಗುರೋಃ ಸುತಂ ದೇಹಿ ನ ಚೇದಿಯಂದಶಾ
ಭವೇತ್ತವಾಪೀತಿ ನಿದರ್ಶಯನ್ನಿವ ॥ ೩೪ ॥

ಅಮುಷ್ಯ ಲಕ್ಷ್ಮೀಶಗುರೋಃ ಸುತಸ್ಯ
ಧ್ರುವಂ ವಿಮುಕ್ತಿಃ ಕರಸಂಗತಾಸೀತ್ ।
ತ್ವದಾಗಮಾತ್ಪ್ರಾಗಪಿ ತಂ ಜಹಾಸುಂ
ವಿಭುಸ್ತ್ವಮಾಜ್ಞಾಪಯಸೀಶ ಕಿಂ ಮಾಮ್ ॥ ೩೫ ॥

ಇತೀವ ತತ್ತ್ಯಾಗವಿಶಂಕಮಾನಸೋ
ಯಮಃ ಸಮಭ್ಯರ್ಚ್ಯ ಸುತಂ ಸಮಾದಿಶತ್ ।
ಅಲಭ್ಯತದ್ದರ್ಶನ ಜಾತಸಂಭ್ರಮಃ
ಪ್ರಹೃಷ್ಟರೋಮಾ ಪ್ರಣಮನ್ಮುಹುರ್ಮುಹುಃ ॥ ೩೬ ॥

ಸುತಂ ಸಮಾನೀಯ ತತೋಂತಕಾಂತಿಕಾತ್
ಪ್ರದಾಯ ಶೌರಿರ್ಗುರವೇ ಸ್ವತಾಂ ಪುರೀಂ ।
ಉಪೇತ್ಯ ಪಿತ್ರೋರಪಿ ದಕ್ಷಿಣಾಮಿವ
ಪ್ರದರ್ಶಯಾಮಾಸ ನಿಜಾಂ ಸ್ವವಿಗ್ರಹಮ್ ॥ ೩೭ ॥

ರಾಜಧಾನೀ ಜಯತಿ ಸಾ ಭೋಜವೃಷ್ಣ್ಯಂಧಕಾಶ್ರಿತಾ ।
ರಾಜರಾಜಪದ ತ್ರಾತಾ ರಾಜಾ ಯತ್ರ ರಮಾಪತಿಃ ॥ ೩೮ ॥

ಉಗ್ರಸೇನೋ ವಿಜಯತೇ ಸ್ವರ್ಗಿಭಿರ್ಗೀತ ವೈಭವಃ ।
ಅಗ್ರೇಸರಾಃ ಯದ್ಧ್ವಜಿನ್ಯಾಮುಗ್ರಾ ರಮಾದಯೋ ದ್ವಿಷಾಮ್ ॥ ೩೯ ॥

ಹೃದಯಜ್ಞಾ ರಾಜನೀತೇಃ ಸಭಾಯಾಂ ಶಾರ್ಙ್ಗಧನ್ವನಃ ।
ಮಂತ್ರಿಣೋ ಮಂತ್ರತಂತ್ರಜ್ಞಾ ಮಂತ್ರಯಂತೀತ್ಥಮನ್ವಹಮ್ ॥ ೪೦ ॥

ರಣೇ ಯದಾಜ್ಞಾಶರಶಂಕಿಚಿತ್ತಾ
ಭಟಾಃ ಪರಾವೃತ್ಯ ನ ಲಕ್ಷಯಂತೀ
ಜಯಾಂಗನಾಂ ವಾ ದಿವಿಜಾಂಗನಾಂ ವಾ
ಸ್ಪೃಶಂತಿ ರಾಜಾವಿಜಯೀ ಸ ಏವ ॥ ೪೧ ॥

ಚಾರೇಣ ಯೋ ವೇತ್ತಿ ರಿಪೋರ್ವಿಚಾರಂ
ಸದಾ ರಣೋಪಸ್ಕರಣಂ ಯುನಕ್ತಿ ।
ಅಗಮ್ಯಭೂಮಿಃ ಪರಿಖಾದಿನಾನ್ಯೈಃ
ಸ ಏವ ರಾಜಾ ವಿಜಯೀ ನ ಚಾನ್ಯಃ ॥ ೪೨ ॥

ಸ್ವ ಸಂಸದಿ ಪ್ರೌಢಜನೇಷು ಮಂತ್ರಿ–
ವರೇಷು ನೀತ್ಯಾಗಮ ತತ್ವವಿತ್ಸು ।
ಭೂಪಃ ವಿಚಾರ್ಯ ಕುರ್ಯಾದ್ವಿಷತಾಮುಪಾ–
ಯೈರ್ಮಿಥೋ ವಿಭೇದಂ ಸುಖಭಾಕ್ ಸ ॥ ೪೩ ॥

ಉತ್ಸಾಹಸಂಗತಾ ನೀತಿಃ ಸೂತೇ ನರವರೋಚಿತೌ ।
ಕೀರ್ತಿ ಪ್ರತಾಪೌ ರಾಜೇಂದ್ರ ತತ್ರಾಲಸ್ಯಂ ಪ್ರತೀಪಕೃತ್ ॥ ೪೪ ॥

ಸಾಮಾದ್ಯುಪಾಯಾವಸರ ಜ್ಞಾನಶೂನ್ಯಸ್ಯ ಶೂರತಾ ।
ಆಮ್ನಾಯಾರ್ಥಾಪರಿಸ್ಫೂರ್ತೇಃ ಸಾಮರ್ಥ್ಯಮಿವ ವಾದಿನಃ ॥ ೪೫ ॥

ಯಃ ಸಂಧಿಮುಖ್ಯಾಮಲನೀತಿಕಾಲಂ
ಅಜ್ಞಾನ್ಯವಿಜ್ಞಾಯ ರಣಂ ವಿಧತ್ತೇ ।
ಷಣ್ಣಿಗ್ರಹಾಣಾಂ ಸಮಯಾನಭಿಜ್ಞಾ
ವಾದೀವ ಸಂಸತ್ಸು ಸಯಾತ್ಯಕೀರ್ತಿಮ್ ॥ ೪೬ ॥

ನಾನಾ ಪ್ರಕಾರೈರ್ದಶದಿಕ್ಷು ಶತ್ರೂನ್
ಯೋ ನೈವ ಜೇತುಂ ಯತತೇ ಕ್ಷಿತೀಶಃ ।
ಬತಾವಶೀಭೂತದಶೇಂದ್ರಿಯೌಘೋ
ವ್ರತೀವ ನಾಸೌ ಸುಖಭಾಕ್ ಕದಾಪಿ ॥ ೪೭ ॥

ಯತ್ಸೈನ್ಯಕುಂತಾಃ ಸ್ವಸಪತ್ನಚಿಂತಾಂ
ಶಾರ್ದೂಲದಂತಾ ಇವ ಸಾಧಯಂತಿ ।
ಸ್ವರಾಷ್ಟ್ರಸಂತೋಷಮಪಿ ಸ್ವತಂತೌ
ತದೀಯದಂಷ್ಟ್ರಾ ಇವ ಸೋವನೀಶಃ ॥ ೪೮ ॥

ರಾಜನ್ಮುಕ್ತೋಪಿ ತೇ ಬಾಣಃ ನಿಹಂತಿ ದಿಶಿ ದಿಶ್ಯರೀನ್ ।
ಗುಣಿಸಂಗಸ್ಯಾರ್ಜವಸ್ಯ ವಂಶಸ್ಯ ಹಿ ಫಲಂ ಚ ತತ್ ॥ ೪೯ ॥

ಪಾಂಥಾನ್ ಸಮಂತಾದ್ದಿವಸೇ ದಿನೇಶ-
ಪ್ರಖ್ಯೋ ರಜನ್ಯಾಂ ರಜನೀಶಕಲ್ಪಃ ।
ಯಸ್ತಸ್ಕರೇಭ್ಯೋಽವತಿ ದುಷ್ಕರಾಜ್ಞಃ
ಸ ಏವ ಕೀರ್ತ್ಯಾವೃತಿ ದಿಶಾಮುಪಾಂತಮ್ ॥ ೫೦ ॥

ನ್ಯಾಯಂ ಸಂಗೃಹ್ಯ ನೃಪತಿರನ್ಯಾಯಂ ಯಸ್ತು ಸಂತ್ಯಜೇತ್ ।
ಪದೇ ಪದೇ ತಮನ್ಯಾಯಃ ಸನ್ನಮ್ಯಾಭ್ಯರ್ಥಯಿಷ್ಯತೇ ॥ ೫೧ ॥

ದಿನೇ ದಿನೇಶ ಪ್ರಖ್ಯಃ ಯಃ ರಾತ್ರೌ ರಾತ್ರೀಶಸನ್ನಿಭಃ ।
ಕಾಪಥೇಭ್ಯಃ ಪ್ರಜಾರುಂಧೇ ಸ ರಾಜಾ ಸ ವಿಶಾಮಿನಃ ॥ ೫೨ ॥

ಪ್ರಾಯೇಣ ಧನವಾನೇವ ಜಾಯತೇ ಕ್ಲೇಶವಾನಪಿ ।
ಫಲವಾನೇವ ಹಿ ತರುಃ ಕಂಟಕೈರುಪರುಧ್ಯತೇ ॥ ೫೩ ॥

ಕಾಲೇ ಕಾಲೇ ಧನಂ ನೂನಮರ್ಥಿಭ್ಯೋ ವಿತರೇದ್ಧಿಯಃ ।
ಮುಚ್ಯತೇ ಸರ್ವದುಃಖೇಭ್ಯಃ ಕಂಟಕೇಭ್ಯ ಇವ ದ್ರುಮಃ ॥ ೫೪ ॥

ವಿತ್ತೈಃ ಕೀರ್ತಿಂ ಶರೈಃ ಶೌರ್ಯಂ ಪ್ರತ್ಯಹಂ ಯಃ ಸಮಾರ್ಜಯೇತ್ ।
ಸ ಏವ ಧನವಾನ್ ಸಮ್ರಾಟ್ ಅನ್ಯಂ ಮನ್ಯೇ ಹ್ಯಕಿಂಚನಮ್ ॥ ೫೫ ॥

ಅರ್ಥಿಭ್ಯೋಽರ್ಥಮನಾದಿಶ್ಯ ಯಸ್ತನ್ನಿಕ್ಷಿಪತಿ ಕ್ಷಿತೌ ।
ಮೃತ್ಸ್ನಾಂ ಸ್ವಯೋಗ್ಯಾಮಾದಾಯ ವಿತ್ತಂ ಭೂಮ್ಯೈ ಪ್ರದತ್ತವಾನ್ ॥ ೫೬ ॥

ಸರ್ವೇಶೇ ಭುವಿ ಯಸ್ಯ ಭಕ್ತಿರಮಲಾ ನೈವೈತದಾಜ್ಞಾತ್ಮಕೇ
ಧರ್ಮೇ ವಾ ನ ರತಿಸ್ತದಾಶ್ರಿತಜನೇ ಸನ್ಮಾನಲೇಶೋಽಪಿವಾ ।
ದುಷ್ಟಪ್ರೀತಿರತಸ್ಯ ನಿಷ್ಠುರಗಿರೋ ದುರ್ಮಂತ್ರದತ್ತಶ್ರುತೇಃ
ಸಾಮ್ರಾಜ್ಯಂ ನಿಜವಂಶಪಾಂಸನಕೃತೇಃ ಕಂಸಸ್ಯ ಸಂಸಾರವತ್ ॥ ೫೭ ॥

ವಿಷ್ಣುಭಕ್ತಿರತಂ ಭೂಪಂ ನೈವ ತ್ಯಕ್ಷತಿ ತತ್ಪ್ರಿಯಾ ।
ತದ್ವೇಷಿಣಿ ನ ಸಾ ಸ್ಥಾತುಮುತ್ಸಹೇತ ಪತಿವ್ರತಾ ॥ ೫೮ ॥

ಧರ್ಮದ್ವಿತೀಯಂ ನೃಪತಿಂ ಧರ್ಮೋಽನ್ಯೋ ನೈವ ಪೀಡಯೇತ್ ।
ಅನ್ಯಥಾ ಪ್ರತಿಮಲ್ಲೋಽಸೌ ಸಾನ್ವಯಂ ಸಂಹರಿಷ್ಯತಿ ॥ ೫೯ ॥

ವಿಷ್ಣೋರರ್ಭಕ ಸಂಕಾಶಾನ್ ವೈಷ್ಣವಾನ್ ಯಸ್ತು ನಿಂದತಿ ।
ತತ್ರಾಪಿ ನ ಸ್ಥಿರಾ ಶ್ರೀಃಸ್ಯಾತ್ಪುತ್ರದ್ವೇಷಿಣಿ ಮಾತೃವತ್ ॥ ೬೦ ॥

ದುಷ್ಟಪ್ರೀತಿರತಂ ಭೂಪಂ ದೋಷೋಽಪಿ ಸ್ಪೃಶತಿ ಕ್ರಮಾತ್ ।
ದೋಷಿಣಂ ಗುಣಲುಬ್ಧಾ ಶ್ರೀಃ ನಾಶ್ರಯೇ ದಿತಿ ಮೇ ಮತಿಃ ॥ ೬೧ ॥

ಕಠೋರಗಿರಮುತ್ಸೃಜ್ಯ ವೃಣೋತ್ಯಪರಮಿಂದಿರಾ ।
ಘನಂ ಪುರೋಗ್ರಸ್ತನಿತಾದ್ವಿಹಾಯೇವ ತಟಿದ್ದಿಶಃ ॥ ೬೨ ॥

ಸನ್ಮಂತ್ರಶೀರ್ಣೋ ದುರ್ಮಂತ್ರಃ ಪ್ರಯೋಕ್ತಾರಂ ಕ್ಷಿಣೋತಿ ಹಿ ।
ಯಥಾ ನೃಸಿಂಹಸೂಯಾಗ್ರೇ ಭೈರವಃ ಕೈರವದ್ಯುತಿಃ ॥ ೬೩ ॥

ಪ್ರಜಾಯಂ ನ ಪ್ರಶಂಸಂತಿ ನಸ್ತುತಶ್ಚಾರ್ಥಿಭಿಶ್ಚ ಯಃ ।
ವಿಷಯಾಸಕ್ತಕುಮತೇಃ ನ ಸುಖಂ ತಸ್ಯ ಭೂಪತೇಃ ॥ ೬೪ ॥

ಪ್ರಜಾನಾಂ ಪೀಡನಂ ಕೃತ್ವಾ ಯೋ ಲುಬ್ಧೋ ಧನಮಾರ್ಜಯೇತ್ ।
ವಿಕ್ರೀಯ ಸ್ವಸುತಾನೇವ ಸ ವೈ ಸಂಚಿನುತೇ ವಸು ॥ ೬೫ ॥

ಪ್ರಜಾಪರಂಪರಾಮೇತಿ ಪ್ರಜಾರಂಜನಕೃನ್ನೃಪಃ ।
ಪೀಡಿತಾ ಸಾ ಸನಾಮ್ನೀಂ ತಾಂ ನೋತ್ಪಾದಯತಿ ತತ್ಕುಲೇ ॥ ೬೬ ॥

ಅಪೂಜಿತೋಽತಿಥಿಃ ಸ್ವೀಯಮತಿಥಿತ್ವಮಪಾರ್ಥಕಮ್ ।
ಸಮರ್ಪಯತಿ ತತ್ತಿಥ್ಯಾಂ ಅಪೂಜ್ಯತ್ವಮಿವಾರ್ಪಯನ್ ॥ ೬೭ ॥

ವಿಷಯೇಷು ಉಪಭುಕ್ತೇಷು ತೃತೀಯಾಂಶೋಽಸ್ಯ ಜೀರ್ಯತೇ ।
ಶಿಷ್ಟಂ ತು ವಿಷಸಾರೂಪ್ಯಾತ್ ಕಷ್ಟಾಯ ಪರಿಕಲ್ಪತೇ ॥ ೬೮ ॥

ಇತ್ಯಾದ್ಯಮಾತ್ಯ ವರ್ಗೋಕ್ತನೀತ್ಯಾ ಪೃಥ್ವೀಂ ಸ ಪಾಲಯನ್ ।
ಭಕ್ತಿಂ ಮುಕುಂದೇ ಬಿಭ್ರಾಣಸ್ತತ್ಯಾಜ ವಿಷಯಸ್ಪೃಹಾಂ ॥ ೬೯ ॥

ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋ ಮುದಾಂ ದ್ವಾದಶಃ ॥ ೭೦ ॥

॥ ಇತಿ ದ್ವಾದಶಃ ಸರ್ಗಃ ॥

॥ ಶ್ರೀಗುರುಭ್ಯೋ ನಮಃ ॥

# ಭಾವಿಸಮೀರ ಶ್ರೀಮದ್ವಾದಿರಾಜವಿರಚಿತ

# ಶ್ರೀರುಗ್ಮಿಣೀಶವಿಜಯಃ

## ॥ ಸಪ್ತಮಃ ಸರ್ಗಃ ॥

**ಯದುತಿಲಕ ಗತೋऽಸ್ಮಾನ್ ಧೈರ್ಯಮಾತ್ರೇಣ ಹಿತ್ವಾ**
**ತ್ಯಜಸಿ ಕಥಮಯಾಂಚಾಪ್ರಾಪ್ತಸಂಗಂ ನ ಚೇತ್ ತ್ವಮ್ ।**
**ತದಿದಮುಚಿತಮಸ್ಯ ಶ್ರೀಭೃತೋ ಯತ್ ಸಮರ್ಥಾ**
**ಚರಣಕಮಲಧೂಲಿಃ ತನ್ವಿ ತನ್ವೀಂ ವಿಧಾತುಮ್** ॥ ೧ ॥

ಯದುತಿಲಕ=ಯದುವಂಶಕ್ಕೆ ತಿಲಕದಂತೆ ಇರುವ ಕೃಷ್ಣನೇ; ಗತಃ=ಹೋದವನು; ಅಸ್ಮಾನ್=ನಮ್ಮನ್ನು; ಧೈರ್ಯಮಾತ್ರೇಣ=ಕೇವಲ ಧಾರ್ಷ್ಟ್ಯದಿಂದ; ಹಿತ್ವಾ=ಬಿಟ್ಟು; ತ್ಯಜಸಿ=ಬಿಡುತ್ತಿ; ಕಥಂ=ಹೇಗೆ; ಅಯಾಂಚಾ=ಪ್ರಾರ್ಥನೆ ಇಲ್ಲದೆಯೇ; ಪ್ರಾಪ್ತ=ಬಂದಿರುವ ಸ್ತ್ರೀಯರ; ಸಂಗಂ=ಸಂಬಂಧವನ್ನು; ನ ಚೇತ್= ಇಲ್ಲದಿದ್ದರೆ; ತ್ವಂ=ನೀನು; ತತ್=ಅದು; ಇದಂ=ಇದು; ಉಚಿತಂ=ಯೋಗ್ಯವು; ಅಸ್ಯ= ಇವನಿಗೆ; ಶ್ರೀಭೃತಃ=ಲಕ್ಷ್ಮಿಯನ್ನು ಧರಿಸಿದವನಿಗೆ; ಯತ್=ಯಾವ ಕಾರಣದಿಂದ; ಸಮರ್ಥಾ=ಸಮರ್ಥವು; ಚರಣ=ಕಾಲೆಂಬ; ಕಮಲ=ಕಮಲದ; ಧೂಲಿಃ=ಧೂಳು; ತನ್ವಿ=ಎಲೋ ತರುಣಿಯೇ; ತನ್ವೀಂ=ತರುಣಿಯನ್ನಾಗಿ; ವಿಧಾತುಂ= ಮಾಡಲು.

"ಹೇ ಕೃಷ್ಣ, ನೀನು ಯದುವಂಶಕ್ಕೆ ತಿಲಕದಂತೆ ಇರುವವನು. ನೀನು ನಮ್ಮನ್ನು ಬಿಟ್ಟು ಹೋಗಿದ್ದಿ. ಯದ್ಯಪಿ ನಿನಗೆ ನಾವು ಬೇಕಾಗಿದೆ. ಆದರೂ ಹೊರ ನೋಟಕ್ಕೆ ನಮ್ಮ ಅಗತ್ಯ ಇಲ್ಲ ಎಂಬಂತೆ ಒಂದು ಮೊಂಡು ಧೈರ್ಯದಿಂದ ನೀನು ಹೋದದ್ದು. ಯಾಕೆಂದರೆ ಪುರುಷರಿಗಿಂತ ಸ್ತ್ರೀಯರು ಹೆಚ್ಚು ನಿಗ್ರಹವುಳ್ಳವರು. ಪುರುಷರು ಕರೆದರೂ ಸ್ತ್ರೀಯರು ಸುಲಭವಾಗಿ ಬರುವವರಲ್ಲ. ಬಾರದಿದ್ದರೂ ಈ ಹುಡುಗರು ಬಿಡುವವರಲ್ಲ. ಹೀಗಿರುವಾಗ ನೀನು ಕರೆಯದೇ ನಾವಾಗಿ ಬಂದವರು. ಇಂತಹ ನಮ್ಮನ್ನು ತ್ಯಜಿಸಿದ್ದಿ ಅಂದರೆ ಅದು ನಿನ್ನ ಮೊಂಡು ಧೈರ್ಯವೇ ಸರಿ" –ಇಷ್ಟು ಮಾತನ್ನು ಒಬ್ಬಳು ಗೋಪಿಯು ಮೋಹದಿಂದ ಹೇಳಿದಳು. ಆಗ ಮಗದೊಬ್ಬಳು ಈ ರೀತಿ ಹೇಳಿದಳು –ಹೇ ಹೆಣ್ಣೇ, ಕೃಷ್ಣ ನಮ್ಮನ್ನು ಅಗಲಿದ್ದು ಸರಿಯಾಗಿದೆ. ಆತ ಶ್ರೀಧರ. ಸದಾ ತನ್ನ ಎದೆಯಲ್ಲಿ ನಮಗಿಂತ ಚಂದದ ಹುಡುಗಿಯನ್ನು ಧರಿಸಿದ್ದಾನೆ. ಮಾನವಹುಡುಗಿಯರು

ಆತನಿಗೆ ಕಾಲಕಸ ಎಂದು ತಿಳಿಸಲು ತನ್ನ ಕಾಲಿನ ಧೂಳಿನ ಸಂಪರ್ಕದಿಂದ ಒಂದು ಬಂಡೆಯಿಂದ ಹೆಣ್ಣನ್ನು ನಿರ್ಮಿಸಿದನು. ಇಂತಹ ಕೃಷ್ಣನಿಗೆ ನಮ್ಮಂತಹ ಹೆಮ್ಮಕ್ಕಳಿಂದ ಏನೂ ಪ್ರಯೋಜನವಿಲ್ಲ ಎಂದು. ಈಕೆಗೆ ರಾಮನೇ ಕೃಷ್ಣ ಎಂಬ ತತ್ವದ ತಿಳುವಳಿಕೆ ಇದೆ ಎಂದು ಸ್ಪಷ್ಟವಾಗುತ್ತದೆ.

<u>**ಸಂದೇಶ**</u> : 'ಏಕಃ ತಪಸ್ವೀ ದ್ವಿಃ ಅಧ್ಯಾಯೀ' ಜಪ ಮಾಡುವಾಗ ಒಬ್ಬನೇ ಮಾಡಬೇಕು. ದೇವರನ್ನು ತಿಳಕೊಳ್ಳುವಾಗ ಅನೇಕರು ಸೇರಬೇಕು. ಅದರಂತೆ ಇಲ್ಲಿ ಈ ಸ್ತ್ರೀಯರು ದೇವರ ಚಿಂತನೆಯಲ್ಲಿ ತೊಡಗಿದ್ದಾರೆ. ಒಂದುವೇಳೆ ಒಬ್ಬಳೇ ಇದ್ದಿದ್ದರೆ ದೇವರ ಬಗ್ಗೆ ವಿಪರೀತ ತಿಳುವಳಕೆಯೇ ಆಕೆಯಲ್ಲಿ ದೃಢವಾಗುತ್ತಿತ್ತು. ಇನ್ನೊಬ್ಬಳು ಇದ್ದದ್ದರಿಂದ ಈ ವಿಪರೀತ ತಿಳುವಳಕೆಯನ್ನು ತೆಗೆದು ಆಕೆಯನ್ನು ಸ್ವಚ್ಛಮಾಡಿದಳು.

**ಅಶ್ವತ್ಥದ್ರುಮ ನಃ ಪ್ರಿಯಃ ಕಿಲ ಭವನ್ಮಧ್ಯೇ ಸದಾ ವರ್ತತೇ**
**ತಸ್ಮೈ ಜ್ಞಾಪಯ ಬಲ್ಲವೀಜನದಶಾಂ ಕಷ್ಟಾಂ ಅದೃಷ್ಟಪ್ರಿಯಾಮ್ ।**
**ನೋ ಚೇತ್ ತ್ವದ್ಧೃದಿ ಲಗ್ನಮಗ್ನಿಮಥವಾ ತ್ವತ್ಸಂಸ್ಥಿತಿಂ ತೇಽಭಿಧಾಂ**
**ನೋ ದೇಹ್ಯಂಗ ವಿಯೋಗರೋಗರಹಿತಾಂ ತ್ವಂ ಮರ್ತ್ಯತಾಮಾಶ್ರಯ ॥ ೨ ॥**

ಅಶ್ವತ್ಥದ್ರುಮ=ಅಶ್ವತ್ಥಮರವೇ; ನಃ=ನಮಗೆ; ಪ್ರಿಯಃ=ಇಷ್ಟನಾದ. ಭವನ್‌ಮಧ್ಯೇ= ನಿನ್ನ ಮಧ್ಯದಲ್ಲಿ; ಸದಾ=ಯಾವಾಗಲೂ; ವರ್ತತೇ ಕಿಲ=ಇದ್ದಾನಷ್ಟೇ; ತಸ್ಮೈ=ಅವನಿಗೆ; ಜ್ಞಾಪಯ=ತಿಳಿಸು; ಬಲ್ಲವೀಜನದಶಾಂ=ಗೋಪೀಜನರ ಅವಸ್ಥೆಯನ್ನು; ಕಷ್ಟಾಂ= ಕ್ಲೇಶವನ್ನು ಕೊಡುವ; ಅದೃಷ್ಟಪ್ರಿಯಾಂ=ಕಾಣಿಸದೆ ಇರುವ ಕೃಷ್ಣನುಳ್ಳ; ನೋ ಚೇತ್=ಇಲ್ಲದಿದ್ದರೆ; ತ್ವದ್ಧೃದಿ=ನಿನ್ನ ಹೃದಯದಲ್ಲಿ; ಲಗ್ನಂ= ಇರುವ; ಅಗ್ನಿಂ=ಬೆಂಕಿಯನ್ನು. ಅಥವಾ = ಇಲ್ಲದಿದ್ದರೆ; ತ್ವತ್‌ಸಂಸ್ಥಿತಿಂ=ನಿನ್ನ ಅವಸ್ಥೆಯನ್ನು; ತೇ=ನಿನ್ನ. ಅಭಿಧಾಂ= ಹೆಸರನ್ನು; ನಃ=ನಮಗೆ; ದೇಹಿ = ಕೊಡು; ಅಂಗ=ಪ್ರಿಯನೇ. ವಿಯೋಗ=ಅಗಲುವಿಕೆ ಎಂಬ; ರೋಗ=ಕಾಯಿಲೆಯಿಂದ; ರಹಿತಾಂ=ಇಲ್ಲದ; ತ್ವಂ=ನೀನು; ಮರ್ತ್ಯತಾಂ= ಮನುಷ್ಯತ್ವವನ್ನು; ಆಶ್ರಯ=ಹೊಂದು.

ಈ ಬಾಲಿಕೆಯರು ಕೃಷ್ಣನ ವಿರಹದಿಂದ ಹುಚ್ಚಿಯರಂತೆ ಆಗಿದ್ದಾರೆ. ವಿವೇಕಶಕ್ತಿಯನ್ನು ಕಳಕೊಂಡವರಂತೆ ಕಾಡಲ್ಲಿ ಅಲೆಯುತ್ತಾ ಇದ್ದಾರೆ. ಕಂಡಕಂಡ ವಸ್ತುಗಳಲ್ಲಿ ಕೃಷ್ಣನನ್ನು ವಿಚಾರಿಸುತ್ತಿದ್ದಾರೆ. ಇವರಿಗೆ ಈಗ ಅಶ್ವತ್ಥವೃಕ್ಷ ಎದುರಾಗಿದೆ –ಅದರಲ್ಲಿ ಕೃಷ್ಣನನ್ನು ವಿಚಾರಿಸುತ್ತಿದ್ದಾರೆ:

ಹೇ ಅಶ್ವತ್ಥವೇ, ನಮ್ಮ ಪ್ರಿಯಕರ ಕೃಷ್ಣನು ನಿನ್ನಲ್ಲಿ ಇದ್ದಾನೆ. ಆತನಿಗೆ ನೀನು ನಮ್ಮ ಈ ಅವಸ್ಥೆಯನ್ನು ತಿಳಿಸು. ಕೃಷ್ಣನ ವಿರಹದಿಂದ ನಾವು ಬಹಳ ಕಷ್ಟಪಡುತ್ತಿದ್ದೇವೆ. ನಮ್ಮ ಮಾತನ್ನು ನೀನು ತಿಳಿಸದಿದ್ದರೆ ಬೇಡ. ನಿನ್ನಲ್ಲಿದ್ದ ಅಗ್ನಿಯನ್ನು ನಮಗೆ ಕೊಡು.

ಆ ಅಗ್ನಿಯಿಂದ ನಾವು ದೇಹತ್ಯಾಗ ಮಾಡುತ್ತೇವೆ. ಇಲ್ಲ, ನಿನ್ನ ಅವಸ್ಥೆ(ವೃಕ್ಷತ್ವ)ಯನ್ನು ನಮಗೆ ಕೊಡು. ನಿನ್ನ ಹೆಸರನ್ನಾದರೂ ಕೊಡು. ನಿನ್ನ ಹೆಸರು ಅಶ್ವತ್ಥ. ಅಂದರೆ ಶ್ವ = ನಾಳೆ. ನ ತಿಷ್ಠತಿ = ಇರುವುದಿಲ್ಲ. ತಥಾ ಚ ನಾವೂ ನಾಳೆ ಇರುವುದಿಲ್ಲ. ಇದರಿಂದ ಏನುಲಾಭ? ಎಂಬ ಪ್ರಶ್ನೆಗೆ ಇವರ ಉತ್ತರ ಅಗ್ನಿಪ್ರವೇಶ ಅಥವಾ ಮರಣದಿಂದ ದೇವರ ಅಗಲುವಿಕೆ ಎಂಬ ರೋಗದಿಂದ ಬಿಡುಗಡೆಯಾಗುತ್ತದೆ. ಸತ್ತರೆ ದೇವರ ಸಮೀಪವನ್ನೇ ಸೇರುವುದು ತಾನೆ. ಬದುಕಿದ್ದರೆ ಕೃಷ್ಣನ ವಿಯೋಗವು ಸದಾ ಪೀಡಿಸುತ್ತದೆ. ವೃಕ್ಷತ್ವವನ್ನು ಹೊಂದಿದರೂ ಇದೇ ಲಾಭ. ಮರಗಳಿಗೆ ದೇವರ ಯೋಗ ಅಯೋಗದ ವಿವೇಕ ಇರುವುದಿಲ್ಲ. ಆದ್ದರಿಂದ ಅವುಗಳಂತೆ ಹಾಯಾಗಿ ಇರಬಹುದು.

ತಮ್ಮಲ್ಲಿದ್ದ ಅಗ್ನಿಯನ್ನು, ಹೆಸರನ್ನು, ತರುತ್ವವನ್ನು ಇವುಗಳನ್ನು ಕೊಟ್ಟರೆ ನಮಗೆ ಏನು ಉಳಿಯಿತು? ಎಂದು ಮರಗಳು ಕೇಳಿದಾಗ "ನಮ್ಮೀ ಮನುಷ್ಯತ್ವವನ್ನು ನೀವು ಸ್ವೀಕರಿಸಿರಿ" ಎಂದು ಈ ಗೋಪಿಯರು ಮರಗಳಿಗೆ ಹೇಳಿದರು.

<u>ಸಂದೇಶ</u> : ಈ ಗೋಪಿಯರು ದೇವತಾಸ್ತ್ರೀಯರು. ಪುರಾಣಗಳ ತಿಳುವಳಿಕೆ ಚೆನ್ನಾಗಿದೆ. ಬ್ರಹ್ಮಾಂಡಪುರಾಣದಲ್ಲಿ 'ಮೂಲತೋ ಬ್ರಹ್ಮರೂಪಾಯ ಮಧ್ಯತೋ ವಿಷ್ಣು- ರೂಪಿಣೇ। ಅಗ್ರತಃ ಶಿವರೂಪಾಯ ವೃಕ್ಷರಾಜಾಯ ತೇ ನಮಃ ॥ ಎಂಬ ಮಾತಿದೆ. ಇದರ ಅರ್ಥ –ಅಶ್ವತ್ಥಮರದ ಬುಡದಲ್ಲಿ ಬ್ರಹ್ಮದೇವರು ಇದ್ದಾರೆ. ಮಧ್ಯದಲ್ಲಿ ದೇವರು ಇದ್ದಾನೆ. ತುದಿಯಲ್ಲಿ ರುದ್ರದೇವರು ಇದ್ದಾರೆ. ಈ ರೀತಿ ತ್ರಿಮೂರ್ತಿಗಳನ್ನು ತನ್ನಲ್ಲಿ ಇಟ್ಟುಕೊಂಡಿರುವ ವೃಕ್ಷರಾಜ ಅಶ್ವತ್ಥನಿಗೆ ನಮಸ್ಕಾರ ಎಂದು. ಈ ಮಾತಿನ ಆಧಾರದಿಂದ ಗೋಪಿಯರು ನಿನ್ನಲ್ಲಿ ಮಧ್ಯದಲ್ಲಿರುವ ದೇವರನ್ನು ಕೊಡು ಎಂದು ಕೇಳಿದ್ದು. ನಾವು ಪ್ರತಿ ಶನಿವಾರ ಅಶ್ವತ್ಥಕ್ಕೆ ಪ್ರದಕ್ಷಿಣೆ ಬರುವಾಗ ಈ ಅನುಸಂಧಾನವನ್ನು ಮಾಡಬೇಕು. ನಾವು ನಮ್ಮೀ ಬೇಡಿಕೆಗಳನ್ನು ನೇರವಾಗಿ ದೇವರಲ್ಲಿ ಹೇಳುವಂತಿಲ್ಲ. ನಮಗಿಂತ ಉತ್ತಮ ಚೇತನರನ್ನು ಮಾಧ್ಯಮರನ್ನಾಗಿ ಮಾಡಬೇಕು.

ಅಶ್ವತ್ಥದಲ್ಲಿ ಅಗ್ನಿಯ ಸನ್ನಿಧಾನ ಬಹಳ ಇದೆ. ಆದ್ದರಿಂದಲೇ ಅರಣೀಮಥನಕ್ಕೆ ಅಶ್ವತ್ಥದ ಕಟ್ಟಿಗೆಯನ್ನು ಪ್ರಾಯಶಃ ಉಪಯೋಗಿಸುತ್ತಾರೆ. ಈ ತಿಳುವಳಿಕೆಯೂ ಈ ಗೋಪಿಯರಿಗೆ ಇದೆ. ಕುದುರೆಯ ಆಕಾರದಲ್ಲಿ ಅಗ್ನಿಯು ಈ ಮರದಲ್ಲಿದೆ. ಆದ್ದರಿಂದ ಈ ಹೆಸರು. ಒಂದು ವಸ್ತುವನ್ನು ಚಿಂತಿಸುವಾಗ ಅದರಲ್ಲಿರುವ ದೇವತೆಗಳ ಅನುಸಂಧಾನವೂ ಅಗತ್ಯ ಎಂದು ಅಭಿಪ್ರಾಯ. ದೇವರ ವಿಸ್ಮರಣೆಯನ್ನು ಇಟ್ಟುಕೊಂಡು ಬದುಕುವುದಕ್ಕಿಂತ ಸಾಯುವುದೇ ಒಳಿತು ಎಂದು ಈ ಗೋಪಿಯರು ಸಾರುತ್ತಿದ್ದಾರೆ.

ನಮಗೆ ದೇವರ ದರ್ಶನವು ಗುರುಗಳ ಮೂಲಕವೇ ಆಗಬೇಕು. 'ವೈಷ್ಣವಾನಾಂ ಯಥಾ ಶಂಭುಃ' ಎಂಬ ಮಾತಿನಂತೆ ನಮಗೆಲ್ಲಾ ರುದ್ರದೇವರು ಗುರುಗಳು. ರುದ್ರದೇವರ

ಸನ್ನಿಧಾನ ಎಲ್ಲಾ ಮರಗಳಲ್ಲಿಯೂ ಇದೆ. ವ್ಯಾಸರು 'ಪುತ್ರ' ಎಂದು ಶುಕನನ್ನು ಕರೆದಾಗ ಮರಗಳು ಅಲುಗಾಡಿದವು. 'ಪುತ್ರೇತಿ ತನ್ಮಯತಯಾ ತರವೋಽಪಿ ನೇದುಃ' ಎಂದು ವ್ಯಾಸರು ಭಾಗವತದಲ್ಲಿ ಹೇಳಿದ್ದಾರೆ. ಆದ್ದರಿಂದ ಈ ಗೋಪಿಯರು ಮರಗಳಲ್ಲಿ ಕೃಷ್ಣನ ಬಗ್ಗೆ ವಿಚಾರಿಸಿದರು ಅಂದರೆ ಅದರಲ್ಲಿರುವ ರುದ್ರನಲ್ಲಿ ವಿಚಾರಿಸಿದರು ಎಂದರ್ಥ.

ಶ್ರೀ ರಾಜರು ತಮ್ಮ ಕಾವ್ಯದಲ್ಲಿ ಸಿದ್ಧಾಂತವನ್ನು ಸೇರಿಸಿಯೇ ಹೇಳುತ್ತಾರೆ.

**ಮೂಲಾಸೇಚನಪೂರ್ವಕಂ ಪರಿಸರನ್ ತ್ವಾಂ ಆರ್ದ್ರವಸ್ತ್ರಃ ಪುಮಾನ್**
**ಸ್ವಾಭೀಷ್ಟಂ ಲಭತೇ ಕಿಲ ಪ್ರತಿವನಂ ವಿಷ್ವಕ್‌ಚರಂತೀರ್ಬತ ।**
**ಕಾಯಕ್ಲೇಶವಶಾತ್‌ಸಮುತ್ಥಿತಘನಸ್ವೇದಾಂಬುನಾಽಽರ್ದ್ರಾಂಬರಾಃ**
**ಚಾಸ್ರೋಘೈಃ ಕಿಮುಪೇಕ್ಷಸೇ ವಿದಧತೀರಾರ್ದ್ರಾಂ ಭವದ್ವೇದಿಕಾಮ್** ॥ ೩ ॥

ಮೂಲ=ಬುಡಕ್ಕೆ; ಆಸೇಚನ=ನೀರನ್ನು ಸಿಂಪಡಿಸು ವಿಕೆಯು; ಪೂರ್ವಕಂ= ಮೊದಲಾಗಿ; ಪರಿಸರನ್ = ಪ್ರದಕ್ಷಿಣೆ ಮಾಡುತ್ತಾ; ತ್ವಾಂ = ನಿನ್ನನ್ನು; ಆರ್ದ್ರವಸ್ತ್ರಃ =ಒದ್ದೆಬಟ್ಟೆವುಳ್ಳವನಾಗಿ; ಪುಮಾನ್=ಪುರುಷನು; ಸ್ವಾಭೀಷ್ಟಂ=ತನ್ನ ಅಪೇಕ್ಷೆಯನ್ನು; ಲಭತೇಕಿಲ=ಹೊಂದುತ್ತಾನಷ್ಟೇ; ಪ್ರತಿವನಂ = ಎಲ್ಲಾ ಕಾಡಿನಲ್ಲಿಯೂ; ವಿಷ್ವಕ್ = ಸುತ್ತಲೂ; ಚರಂತೀಃ=ತಿರುಗಾಡುವ; ಬತ=ದುಃಖವು; ಕಾಯ=ಶರೀರದ; ಕ್ಲೇಶ =ಕಷ್ಟದ; ವಶಾತ್ = ಕಾರಣದಿಂದ; ಸಮುತ್ಥಿತ = ಉಂಟಾದ; ಘನ=ಬಹಳವಾದ; ಸ್ವೇದ=ಬೆವರಿನ ಅಂಬುನಾ=ನೀರಿನಿಂದ; ಆರ್ದ್ರಾಂಬರಾಃ=ಒದ್ದೆಯಾದ ಬಟ್ಟೆಯುಳ್ಳ; ಚ=ಮತ್ತು; ಅಸ್ರ=ಕಣ್ಣೀರಿನ; ಓಘೈಃ= ಪ್ರವಾಹದಿಂದ; ಕಿಂ ಉಪೇಕ್ಷಸೇ = ಕಡೆಗಣಿಸುತ್ತಿಯೇನು? ವಿದಧತೀಃ=ಮಾಡತಕ್ಕ; ಆರ್ದ್ರಾಂ =ಒದ್ದೆಯನ್ನಾಗಿ; ಭವದ್ವೇದಿಕಾಂ=ನಿನ್ನ ಕಟ್ಟೆಯನ್ನು.

ಈ ಗೋಪಿಯರು ಪುನಃ ಮಾತನ್ನು ಮುಂದುವರಿಸುತ್ತಾರೆ: ಹೇ ಅಶ್ವತ್ಥವೇ, ಜನರು ತಮ್ಮ ಸಮಸ್ಯೆ ಪರಿಹಾರಕ್ಕಾಗಿ ನಿನಗೆ ಪ್ರದಕ್ಷಿಣೆ ನಮಸ್ಕಾರವನ್ನು ಮಾಡುತ್ತಾರೆ. ನಿನ್ನ ಬುಡಕ್ಕೆ ನೀರು ಹಾಕುತ್ತಾರೆ. ಇದಕ್ಕೆ ಮೊದಲು ತಾವು ಸ್ನಾನಮಾಡಿ ಒದ್ದೆಬಟ್ಟೆಯಲ್ಲಿಯೇ ನಿನ್ನಲ್ಲಿಗೆ ಬರುತ್ತಾರೆ. ಹೀಗೆ ಬಹಳ ಬಾರಿ ಮಾಡಿದರೆ ಅವರಿಗೆ ಫಲ ಸಿಗುತ್ತದೆ ಎಂದು ಶಾಸ್ತ್ರಗಳು ಹೇಳುತ್ತವೆ.

ನಾವೂ ಕೂಡಾ ಕೃಷ್ಣನನ್ನು ಹುಡುಕುತ್ತಾ ಇಡೀ ಕಾಡಿಗೇನೇ ಸುತ್ತುಬರುತ್ತಿದ್ದೇವೆ. ನಿನಗೆ ಮಾತ್ರ ಅಲ್ಲ. ಹಾಗೆ ಸುತ್ತಾಡುವಾಗ ಆಯಾಸವಾಗುತ್ತದೆ. ಮೈಯೆಲ್ಲಾ ಬೆವರುತ್ತದೆ. ಇದರಿಂದ ಸ್ನಾನಮಾಡಿದಂತೆ ಆಯಿತು. ಈ ಬೆವರಿನ ಸ್ನಾನದಿಂದ ಬಟ್ಟೆಯೂ ಒದ್ದೆಯಾಗಿದೆ. ದೇವರ ವಿರಹದಿಂದ ದುಃಖ ಉಮ್ಮಳಿಸಿ ಬರುತ್ತಿದೆ. ಆಗ ಹರಿದ ಕಣ್ಣೀರಿನಿಂದ ನಿನ್ನ ಬುಡವನ್ನು ಮಾತ್ರವಲ್ಲದೆ ಇಡೀ ಕಟ್ಟೆಯನ್ನೇ ಒದ್ದೆಮಾಡಿದ್ದೇವೆ.

ಬೇರೆಯವರು ಮಾಡುವ ಎಲ್ಲಾ ರೀತಿಯ ಸೇವೆಯನ್ನೂ ನಾವು ಮಾಡುತ್ತಿದ್ದೇವೆ. ಆದರೂ ನೀನು ನಮ್ಮ ಸೇವೆಯನ್ನು ಗಮನಕ್ಕೆ ಯಾಕೆ ತೆಗೆದುಕೊಳ್ಳುವುದಿಲ್ಲ?

**ಸಂದೇಶ** : ಅಶ್ವತ್ಥನಾರಾಯಣನ ಸೇವೆಯನ್ನು ಯಾವ ರೀತಿ ಮಾಡಬೇಕು ಎಂದು ಈ ಪದ್ಯದಲ್ಲಿ ರಾಜರು ತಿಳಿಸಿದ್ದಾರೆ. ಐಹಿಕವಾಗಿ ಯಾವ ಫಲದ ಅಪೇಕ್ಷೆ ಇದ್ದರೂ ದೇವರ ಸ್ಮರಣೆ ತಪ್ಪಬಾರದು ಎಂಬ ವಿಷಯವನ್ನೂ ಸೂಚಿಸಿದ್ದಾರೆ.

**ನ ವದತಿ ಬತ ಸಖ್ಯಃ ನಃ ಪ್ರಿಯಂ ವಿಪ್ರಿಯಂ ವಾ**
**ನ ದಿಶತಿ ಫಲಮಿಷ್ಟಂ ಸ್ವೈರಮಾರಾಧಿತೋಽಪಿ ।**
**ಹರಿಚರಣವಿದೂರಾಃ ಕೋಽನು ಸಂಭಾಷಯೇನ್ನಃ**
**ಸುಕೃತಮಪಿ ತದಾಜ್ಞಾರೂಪಮಾಪಾದಯೇತ್ ಕಿಮ್** ॥ ೪ ॥

ನ ವದತಿ=ಹೇಳುವುದಿಲ್ಲ; ಬತ=ದುಃಖವು; ಸಖ್ಯಃ=ಗೆಳತಿಯರೆ; ನಃ=ನಮಗೆ; ಪ್ರಿಯಂ = ಇಷ್ಟವನ್ನು; ವಿಪ್ರಿಯಂ ವಾ=ಅನಿಷ್ಟವನ್ನಾಗಲೀ; ನ ದಿಶತಿ=ಕೊಡುವುದಿಲ್ಲ; ಫಲಂ= ಫಲವನ್ನು; ಇಷ್ಟಂ=ಇಷ್ಟವಾದ; ಸ್ವೈರಂ=ಚೆನ್ನಾಗಿ; ಆರಾಧಿತೋಽಪಿ=ಪೂಜಿಸಲ್ಪಟ್ಟರೂ; ಹರಿಚರಣವಿದೂರಾಃ=ದೇವರ ಪಾದಗಳಿಂದ ದೂರರಾದ; ಕಃ=ಯಾರು; ಅನು- ಸಂಭಾಷಯೇತ್=ಮಾತನಾಡಿಸುತ್ತಾರೆ; ನಃ=ನಮ್ಮನ್ನು; ಸುಕೃತಂ ಅಪಿ=ಪುಣ್ಯವೂ ಕೂಡಾ; ತದಾಜ್ಞಾರೂಪಂ=ಕೃಷ್ಣನ ಆಜ್ಞಾರೂಪವಾದ; ಆಪಾದಯೇತ್=ಹೊಂದಿಸುತ್ತದೆ; ಕಿಮ್=ಏನನ್ನು?

ಯದ್ಯಪಿ ಇದು ಮರವಾದ್ದರಿಂದ ಯಾವ ರೀತಿಯಿಂದಲೂ ಪ್ರತಿಕ್ರಿಯಿಸುವುದಿಲ್ಲ. ಆ ವಿವೇಕ ಈ ಗೋಪಿಯರಿಗೆ ಇಲ್ಲ. ಆದ್ದರಿಂದ ಅವರು ಪರಸ್ಪರ ಮಾತನಾಡಿಕೊಳ್ಳುತ್ತಾರೆ –ನಮ್ಮ ಯಾವ ಮಾತಿಗೂ ಇದು ಸ್ಪಂದಿಸುವುದಿಲ್ಲ. ನಮಗೆ ಅನುಕೂಲವಾಗಿ ಅಥವಾ ಪ್ರತಿಕೂಲವಾಗಿ ಉತ್ತರಿಸುವುದಿಲ್ಲ. ನಾವು ಇಷ್ಟು ಚಂದದಿಂದ ಈ ಮರವನ್ನು ಪೂಜಿಸಿದರೂ ನಮಗೆ ಫಲವನ್ನು ಕೊಡಲಿಲ್ಲ. ನಾವು ದೇವರಿಂದ ದೂರ ಆಗಿದ್ದೇವೆ. ಆದ್ದರಿಂದ ನಮ್ಮನ್ನು ಯಾರೂ ಮಾತನಾಡಿಸುವುದಿಲ್ಲ.

ಈ ಮರವು ತಿಳಿಸದಿದ್ದರೂ ಈ ಮರಕ್ಕೆ ಸೇವೆಮಾಡಿದ್ದರಿಂದ ಬಂದಿರುವ ಪುಣ್ಯವಾದರೂ ನಮ್ಮ ಅಭೀಷ್ಟವನ್ನು ಕೊಡಬಾರದಾ?

ಈ ಪುಣ್ಯಾಪಾಪಗಳು ದೇವರ ಆಜ್ಞಾರೂಪಗಳು. ಅಂದರೆ ದೇವರು ಹೇಳಿದರೆ ಮಾತ್ರ ಪುಣ್ಯವು ಫಲವನ್ನು ಕೊಡುತ್ತದೆ. ನಾವು ದೇವರಿಗೆ ವಿಮುಖರಾದ್ದರಿಂದ ಈ ಪುಣ್ಯವೂ ಫಲಕಾರಿಯಲ್ಲ. ಈ ಬಾಲಿಕೆಯರು ಮರಗಳು ಮಾತನಾಡುವುದಿಲ್ಲ ಎಂಬ ತಿಳುವಳಿಕೆಯಿಂದ ರಹಿತರಾಗಿದ್ದಾರೆ. ದೇವರಿಗೆ ವಿಮುಖರಾದವರು ಎಲ್ಲರಿಂದಲೂ

ತಿರಸ್ಕೃತರಾಗುತ್ತಾರೆ ಎಂಬ ತಿಳುವಳಿಕೆ ಉಳ್ಳವರಾಗಿದ್ದಾರೆ. ಆದ್ದರಿಂದ ಇವರು ಪೂರ್ಣವಾಗಿ ಮೋಹಾವಸ್ಥೆಯನ್ನು ಹೊಂದಿಲ್ಲ.

**ಸಂದೇಶ** : ಉಪನಿಷತ್ತಿನಲ್ಲಿ ಒಂದು ಮಾತು ಇದೆ –'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ' –ವಸ್ತುಗಳನ್ನು ಪ್ರೀತಿಸಲು ವಸ್ತುಗಳೇ ಕಾರಣ ಅಲ್ಲ. ಅವುಗಳಲ್ಲಿರುವ ದೇವರು. ದೇವರು ಅಲ್ಲಿರುವುದಕ್ಕೆ ನಾವು ವಸ್ತುಗಳನ್ನು ಪ್ರೀತಿಸುವುದು ಎಂದು. ಈ ಮಾತು ಈ ಗೋಪಿಯರಿಗೆ ಚೆನ್ನಾಗಿ ಅನುಭವಕ್ಕೆ ಬಂದಿದೆ. ಆದ್ದರಿಂದ ನಾವು ಎಲ್ಲ ರಿಗೂ ಬೇಕಾದವರಾಗಿ ಬಾಳಬೇಕಾದರೆ ದೇವರು ಸದಾ ನಮ್ಮ ಜೊತೆಗೇ ಇರುವಂತೆ ನೋಡಿಕೊಳ್ಳಬೇಕು. ಅಂದರೆ ದೇವರ ಸ್ಮರಣೆ ಸದಾ ಬೇಕು. ವಿಸ್ಮರಣೆ ಕೂಡದು.

ಈ ಒಂದು ಅಹಂಕಾರವೂ ಕೂಡದು –ನಾನು ಬಹಳ ಪುಣ್ಯ ಸಂಪಾದಿಸಿದ್ದೇನೆ. ಅದರ ಫಲವಾಗಿ ನಾನು ಸುಖದಿಂದಲೇ ಇರುತ್ತೇನೆ ಎಂದು.

ನಾವು ಗಳಿಸಿದ ಪುಣ್ಯವೇ ನಮ್ಮನ್ನು ಕಾಯುವುದಾದರೆ ಈ ಮಾತು ಸರಿ. ಆದರೆ ಆ ಪುಣ್ಯವನ್ನು ಹಿಡಿತದಲ್ಲಿ ಇಟ್ಟುಕೊಂಡಿರುವ ದೇವರು ಇದ್ದಾನೆ. ಆತನ ಚಿತ್ತಕ್ಕೆ ಬರಬೇಕು. ಆಗ ಮಾತ್ರ ನಮ್ಮ ಪುಣ್ಯವು ಫಲಕಾರಿಯಾಗುತ್ತದೆ. ಇದನ್ನೇ ಶ್ರುತಿಯು 'ತೇನ ವಿನಾ ತೃಣಮಪಿ ನ ಚಲತಿ' ಎಂದು ಹೇಳುತ್ತದೆ. ದೇವರ ಇಚ್ಛೆ ಇಲ್ಲದೆ ಹುಲ್ಲುಕಡ್ಡಿಯೂ ಅಲುಗಾಡುವುದಿಲ್ಲ ಎಂದು ಇದರ ಅರ್ಥ.

**ಪ್ರೇಷ್ಠಂ ಸ್ವಾಂತರಸಂಸ್ಥಿತಂ ನ ದಿಶತೀತ್ಯಾರ್ತಾಃ ಸಮಸ್ತಾಃ ಭೃಶಂ**
**ಕೋಪಾಚ್ಛಾಪಮಯೋಜಯನ್ ಇವ ಸತಾಂ ಸ್ಯಾತ್ ತ್ವತ್‌ಫಲಂ ನಿಷ್ಫಲಮ್ ।**
**ವಿಷ್ಠಾತೋ ಜನಿರಸ್ತು ತೇ ನಿಶಿ ತವ ಛಾಯಾ ವಿಗೇಯಾಽಸ್ತ್ವಿಯಂ**
**ಕ್ರೂರಸ್ತೇ ಹೃದಿ ವಹ್ನಿರಸ್ತು ನ ಸದಾ ಸ್ಪರ್ಶಸ್ಯ ಯೋಗ್ಯೋ ಭವ ॥ ೫ ॥**

ಪ್ರೇಷ್ಠಂ=ಅತ್ಯಂತ ಪ್ರಿಯನಾದ ಕೃಷ್ಣನನ್ನು; ಸ್ವಾಂತರಸಂಸ್ಥಿತಂ=ತಮ್ಮೊಳಗೆ ಇರುವ; ನ ದಿಶತಿ=ಕೊಡುವುದಿಲ್ಲ; ಇತಿ=ಎಂದು; ಆರ್ತಾಃ=ದುಃಖಿತರಾದ; ಸಮಸ್ತಾಃ=ಎಲ್ಲಾ ಗೋಪಿಯರು; ಭೃಶಂ=ಚೆನ್ನಾಗಿ; ಕೋಪಾತ್=ಕೋಪದಿಂದ; ಶಾಪಂ=ಶಾಪವನ್ನು; ಅಯೋಜಯನ್=ಕೊಟ್ಟರು; ಇವ=ಅಂತೆ; ಸತಾಂ=ಸಜ್ಜನರಿಗೆ; ಸ್ಯಾತ್=ಆಗಲಿ; ತ್ವತ್‌ಫಲಂ=ನಿನ್ನ ಫಲವು; ನಿಷ್ಫಲಂ=ವ್ಯರ್ಥವು; ವಿಷ್ಠಾತಃ=ಮಲದಿಂದ; ಜನಿಃ=ಉತ್ಪತ್ತಿಯು; ಅಸ್ತು=ಆಗಲಿ; ತೇ=ನಿನಗೆ; ನಿಶಿ=ರಾತ್ರಿಯಲ್ಲಿ; ತವ=ನಿನ್ನ; ಛಾಯಾ=ನೆರಳು; ವಿಗೇಯಾ=ನಿಷಿದ್ಧವು; ಅಸ್ತು=ಆಗಲಿ; ಇಯಂ=ಈ; ಕ್ರೂರಃ=ತೀಕ್ಷ್ಣವಾದ; ತೇ=ನಿನ್ನ; ಹೃದಿ=ಹೃದಯದಲ್ಲಿ; ವಹ್ನಿಃ=ಬೆಂಕಿಯು; ಅಸ್ತು=ಇರಲಿ; ನ=ಬೇಡ; ಸದಾ=ಯಾವಾಗಲೂ; ಸ್ಪರ್ಶಸ್ಯ=ಮುಟ್ಟುವಿಕೆಗೆ; ಯೋಗ್ಯಃ=ಯೋಗ್ಯನು; ಭವ=ಆಗು.

ಈ ಬಾಲಕಿಯರ ಪ್ರಾರ್ಥನೆಯನ್ನು ಅಶ್ವತ್ಥವು ಪೂರೈಸಲಿಲ್ಲ. ಆಗ ಬಹಳ ದುಃಖಿತ

ಬೇರೆಯವರು ಮಾಡುವ ಎಲ್ಲಾ ರೀತಿಯ ಸೇವೆಯನ್ನೂ ನಾವು ಮಾಡುತ್ತಿದ್ದೇವೆ. ಆದರೂ ನೀನು ನಮ್ಮ ಸೇವೆಯನ್ನು ಗಮನಕ್ಕೆ ಯಾಕೆ ತೆಗೆದುಕೊಳ್ಳುವುದಿಲ್ಲ?

<u>**ಸಂದೇಶ**</u> : ಅಶ್ವತ್ಥನಾರಾಯಣನ ಸೇವೆಯನ್ನು ಯಾವ ರೀತಿ ಮಾಡಬೇಕು ಎಂದು ಈ ಪದ್ಯದಲ್ಲಿ ರಾಜರು ತಿಳಿಸಿದ್ದಾರೆ. ಐಹಿಕವಾಗಿ ಯಾವ ಫಲದ ಅಪೇಕ್ಷೆ ಇದ್ದರೂ ದೇವರ ಸ್ಮರಣೆ ತಪ್ಪಬಾರದು ಎಂಬ ವಿಷಯವನ್ನೂ ಸೂಚಿಸಿದ್ದಾರೆ.

**ನ ವದತಿ ಬತ ಸಖ್ಯಃ ನಃ ಪ್ರಿಯಂ ವಿಪ್ರಿಯಂ ವಾ**
**ನ ದಿಶತಿ ಫಲಮಿಷ್ಟಂ ಸ್ವೈರಮಾರಾಧಿತೋಽಪಿ ।**
**ಹರಿಚರಣವಿದೂರಾಃ ಕೋಽನು ಸಂಭಾಷಯೇನ್ನಃ**
**ಸುಕೃತಮಪಿ ತದಾಜ್ಞಾರೂಪಮಾಪಾದಯೇತ್ ಕಿಮ್** ॥ ೪ ॥

ನ ವದತಿ=ಹೇಳುವುದಿಲ್ಲ; ಬತ=ದುಃಖವು; ಸಖ್ಯಃ=ಗೆಳತಿಯರೆ; ನಃ=ನಮಗೆ; ಪ್ರಿಯಂ = ಇಷ್ಟವನ್ನು; ವಿಪ್ರಿಯಂ ವಾ=ಅನಿಷ್ಟವನ್ನಾಗಲೀ; ನ ದಿಶತಿ=ಕೊಡುವುದಿಲ್ಲ; ಫಲಂ= ಫಲವನ್ನು; ಇಷ್ಟಂ=ಇಷ್ಟವಾದ; ಸ್ವೈರಂ=ಚೆನ್ನಾಗಿ; ಆರಾಧಿತೋಽಪಿ=ಪೂಜಿಸಲ್ಪಟ್ಟರೂ; ಹರಿಚರಣವಿದೂರಾಃ=ದೇವರ ಪಾದಗಳಿಂದ ದೂರರಾದ; ಕಃ=ಯಾರು; ಅನು- ಸಂಭಾಷಯೇತ್=ಮಾತನಾಡಿಸುತ್ತಾರೆ; ನಃ=ನಮ್ಮನ್ನು; ಸುಕೃತಂ ಅಪಿ=ಪುಣ್ಯವೂ ಕೂಡಾ; ತದಾಜ್ಞಾರೂಪಂ=ಕೃಷ್ಣನ ಆಜ್ಞಾರೂಪವಾದ; ಆಪಾದಯೇತ್=ಹೊಂದಿಸುತ್ತದೆ; ಕಿಮ್=ಏನನ್ನು?

ಯದ್ಯಪಿ ಇದು ಮರವಾದ್ದರಿಂದ ಯಾವ ರೀತಿಯಿಂದಲೂ ಪ್ರತಿಕ್ರಿಯಿಸುವುದಿಲ್ಲ. ಆ ವಿವೇಕ ಈ ಗೋಪಿಯರಿಗೆ ಇಲ್ಲ. ಆದ್ದರಿಂದ ಅವರು ಪರಸ್ಪರ ಮಾತನಾಡಿಕೊಳ್ಳುತ್ತಾರೆ –ನಮ್ಮ ಯಾವ ಮಾತಿಗೂ ಇದು ಸ್ಪಂದಿಸುವುದಿಲ್ಲ. ನಮಗೆ ಅನುಕೂಲವಾಗಿ ಅಥವಾ ಪ್ರತಿಕೂಲವಾಗಿ ಉತ್ತರಿಸುವುದಿಲ್ಲ. ನಾವು ಇಷ್ಟು ಚಂದದಿಂದ ಈ ಮರವನ್ನು ಪೂಜಿಸಿದರೂ ನಮಗೆ ಫಲವನ್ನು ಕೊಡಲಿಲ್ಲ. ನಾವು ದೇವರಿಂದ ದೂರ ಆಗಿದ್ದೇವೆ. ಆದ್ದರಿಂದ ನಮ್ಮನ್ನು ಯಾರೂ ಮಾತನಾಡಿಸುವುದಿಲ್ಲ.

ಈ ಮರವು ತಿಳಿಸದಿದ್ದರೂ ಈ ಮರಕ್ಕೆ ಸೇವೆಮಾಡಿದ್ದರಿಂದ ಬಂದಿರುವ ಪುಣ್ಯವಾದರೂ ನಮ್ಮ ಅಭೀಷ್ಟವನ್ನು ಕೊಡಬಾರದಾ?

ಈ ಪುಣ್ಯಪಾಪಗಳು ದೇವರ ಆಜ್ಞಾರೂಪಗಳು. ಅಂದರೆ ದೇವರು ಹೇಳಿದರೆ ಮಾತ್ರ ಪುಣ್ಯವು ಫಲವನ್ನು ಕೊಡುತ್ತದೆ. ನಾವು ದೇವರಿಗೆ ವಿಮುಖರಾದ್ದರಿಂದ ಈ ಪುಣ್ಯವೂ ಫಲಕಾರಿಯಲ್ಲ. ಈ ಬಾಲಿಕೆಯರು ಮರಗಳು ಮಾತನಾಡುವುದಿಲ್ಲ ಎಂಬ ತಿಳುವಳಿಕೆಯಿಂದ ರಹಿತರಾಗಿದ್ದಾರೆ. ದೇವರಿಗೆ ವಿಮುಖರಾದವರು ಎಲ್ಲರಿಂದಲೂ

ತಿರಸ್ಕೃತರಾಗುತ್ತಾರೆ ಎಂಬ ತಿಳುವಳಿಕೆ ಉಳ್ಳವರಾಗಿದ್ದಾರೆ. ಆದ್ದರಿಂದ ಇವರು ಪೂರ್ಣವಾಗಿ ಮೋಹಾವಸ್ಥೆಯನ್ನು ಹೊಂದಿಲ್ಲ.

**ಸಂದೇಶ** : ಉಪನಿಷತ್ತಿನಲ್ಲಿ ಒಂದು ಮಾತು ಇದೆ –'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ' –ವಸ್ತುಗಳನ್ನು ಪ್ರೀತಿಸಲು ವಸ್ತುಗಳೇ ಕಾರಣ ಅಲ್ಲ. ಅವುಗಳಲ್ಲಿರುವ ದೇವರು. ದೇವರು ಅಲ್ಲಿರುವುದಕ್ಕೆ ನಾವು ವಸ್ತುಗಳನ್ನು ಪ್ರೀತಿಸುವುದು ಎಂದು. ಈ ಮಾತು ಈ ಗೋಪಿಯರಿಗೆ ಚೆನ್ನಾಗಿ ಅನುಭವಕ್ಕೆ ಬಂದಿದೆ. ಆದ್ದರಿಂದ ನಾವು ಎಲ್ಲ ರಿಗೂ ಬೇಕಾದವರಾಗಿ ಬಾಳಬೇಕಾದರೆ ದೇವರು ಸದಾ ನಮ್ಮ ಜೊತೆಗೇ ಇರುವಂತೆ ನೋಡಿಕೊಳ್ಳಬೇಕು. ಅಂದರೆ ದೇವರ ಸ್ಮರಣೆ ಸದಾ ಬೇಕು. ವಿಸ್ಮರಣೆ ಕೂಡದು.

ಈ ಒಂದು ಅಹಂಕಾರವೂ ಕೂಡದು –ನಾನು ಬಹಳ ಪುಣ್ಯ ಸಂಪಾದಿಸಿದ್ದೇನೆ. ಅದರ ಫಲವಾಗಿ ನಾನು ಸುಖದಿಂದಲೇ ಇರುತ್ತೇನೆ ಎಂದು.

ನಾವು ಗಳಿಸಿದ ಪುಣ್ಯವೇ ನಮ್ಮನ್ನು ಕಾಯುವುದಾದರೆ ಈ ಮಾತು ಸರಿ. ಆದರೆ ಆ ಪುಣ್ಯವನ್ನು ಹಿಡಿತದಲ್ಲಿ ಇಟ್ಟುಕೊಂಡಿರುವ ದೇವರು ಇದ್ದಾನೆ. ಆತನ ಚಿತ್ತಕ್ಕೆ ಬರಬೇಕು. ಆಗ ಮಾತ್ರ ನಮ್ಮ ಪುಣ್ಯವು ಫಲಕಾರಿಯಾಗುತ್ತದೆ. ಇದನ್ನೇ ಶ್ರುತಿಯು 'ತೇನ ವಿನಾ ತೃಣಮಪಿ ನ ಚಲತಿ' ಎಂದು ಹೇಳುತ್ತದೆ. ದೇವರ ಇಚ್ಛೆ ಇಲ್ಲದೆ ಹುಲ್ಲುಕಡ್ಡಿಯೂ ಅಲುಗಾಡುವುದಿಲ್ಲ ಎಂದು ಇದರ ಅರ್ಥ.

**ಪ್ರೇಷ್ಠಂ ಸ್ವಾಂತರಸಂಸ್ಥಿತಂ ನ ದಿಶತೀತ್ಯಾರ್ತಾಃ ಸಮಸ್ತಾಃ ಭೃಶಂ**
**ಕೋಪಾಚ್ಛಾಪಮಯೋಜಯನ್ ಇವ ಸತಾಂ ಸ್ಯಾತ್ ತ್ವತ್‌ಫಲಂ ನಿಷ್ಫಲಮ್ ।**
**ವಿಷ್ಠಾತೋ ಜನಿರಸ್ತು ತೇ ನಿಶಿ ತವ ಛಾಯಾ ವಿಗೇಯಾಽಸ್ತ್ವಯಂ**
**ಕ್ರೂರಸ್ತೇ ಹೃದಿ ವಹ್ನಿರಸ್ತು ನ ಸದಾ ಸ್ಪರ್ಶಸ್ಯ ಯೋಗ್ಯೋ ಭವ ॥ ೫ ॥**

ಪ್ರೇಷ್ಠಂ=ಅತ್ಯಂತ ಪ್ರಿಯನಾದ ಕೃಷ್ಣನನ್ನು; ಸ್ವಾಂತರಸಂಸ್ಥಿತಂ=ತಮ್ಮೊಳಗೆ ಇರುವ; ನ ದಿಶತಿ=ಕೊಡುವುದಿಲ್ಲ; ಇತಿ=ಎಂದು; ಆರ್ತಾಃ=ದುಃಖಿತರಾದ; ಸಮಸ್ತಾಃ=ಎಲ್ಲಾ ಗೋಪಿಯರು; ಭೃಶಂ=ಚೆನ್ನಾಗಿ; ಕೋಪಾತ್=ಕೋಪದಿಂದ; ಶಾಪಂ=ಶಾಪವನ್ನು; ಅಯೋಜಯನ್=ಕೊಟ್ಟರು; ಇವ=ಅಂತೆ; ಸತಾಂ=ಸಜ್ಜನರಿಗೆ; ಸ್ಯಾತ್=ಆಗಲಿ; ತ್ವತ್‌ಫಲಂ=ನಿನ್ನ ಫಲವು; ನಿಷ್ಫಲಂ=ವ್ಯರ್ಥವು; ವಿಷ್ಠಾತಃ=ಮಲದಿಂದ; ಜನಿಃ=ಉತ್ಪತ್ತಿಯು; ಅಸ್ತು=ಆಗಲಿ; ತೇ=ನಿನಗೆ; ನಿಶಿ=ರಾತ್ರಿಯಲ್ಲಿ; ತವ=ನಿನ್ನ; ಛಾಯಾ=ನೆರಳು; ವಿಗೇಯಾ=ನಿಷಿದ್ಧವು; ಅಸ್ತು=ಆಗಲಿ; ಇಯಂ=ಈ; ಕ್ರೂರಃ=ತೀಕ್ಷ್ಣವಾದ; ತೇ=ನಿನ್ನ; ಹೃದಿ=ಹೃದಯದಲ್ಲಿ; ವಹ್ನಿಃ=ಬೆಂಕಿಯು; ಅಸ್ತು=ಇರಲಿ; ನ=ಬೇಡ; ಸದಾ=ಯಾವಾಗಲೂ; ಸ್ಪರ್ಶಸ್ಯ=ಮುಟ್ಟುವಿಕೆಗೆ; ಯೋಗ್ಯಃ=ಯೋಗ್ಯನು; ಭವ=ಆಗು.

ಈ ಬಾಲಕಿಯರ ಪ್ರಾರ್ಥನೆಯನ್ನು ಅಶ್ವತ್ಥವು ಪೂರೈಸಲಿಲ್ಲ. ಆಗ ಬಹಳ ದುಃಖಿತ

ರಾದ ಇವರು ಈ ಮರಕ್ಕೆ ಶಾಪ ಕೊಡುವಂತೆ ರಾಜರು ವಸ್ತುಸ್ಥಿತಿಯನ್ನೇ ವರ್ಣಿಸುತ್ತಾರೆ –ಹೇ ಮರವೇ, ನಿನ್ನ ಫಲಗಳು ಸಜ್ಜನರಿಗೆ ಅಭೋಜ್ಯಗಳಾಗಲಿ. ಕಾಗೆಗಳು ತಿನ್ನಲು ಯೋಗ್ಯಗಳಾಗಲಿ. ಕಾಗೆಗಳು ತಿಂದ ಆ ಬೀಜಗಳು ಕಾಗೆಗಳ ಮಲದೊಟ್ಟಿಗೆ ಹೊರಬಂದು ಅನಂತರ ಮರಗಳಾಗುತ್ತವೆ. ಆ ಮಲವೇ ಅದಕ್ಕೆ ಗೊಬ್ಬರ. ಇದು ಪ್ರಕೃತಿನಿಯಮ. ಇದನ್ನು ಗೋಪಿಯರು ಶಾಪದ ರೂಪದಲ್ಲಿ ಹೇಳುತ್ತಾರೆ. ಮಲದಿಂದ ನಿನ್ನ ಜನ್ಮವಾಗಲಿ ಎಂದು. ಮಹಾಭಾರತವು ಐದು ಪವಿತ್ರ ವಸ್ತುಗಳನ್ನು ಹೇಳುವಾಗ ಅಶ್ವತ್ಥವನ್ನು 'ಕಾಕವಿಷ್ಠಾಸಮುದ್ಭೂತಂ' ಕಾಗೆಯ ಮಲದಿಂದ ಹುಟ್ಟಿದ್ದು ಎಂದು ಅಶ್ವತ್ಥವನ್ನು ತಿಳಿಸುತ್ತದೆ.

ರಾತ್ರಿಹೊತ್ತು ನಿನ್ನ ನೆರಳು ನಿಷಿದ್ಧವಾಗಲಿ ಎಂದು ಶಪಿಸಿದರು. ಧರ್ಮಶಾಸ್ತ್ರವು ಕೆಲವು ಸಂದರ್ಭಗಳಲ್ಲಿ ಕೆಲವು ವಸ್ತುಗಳ ನೆರಳು ಅಯೋಗ್ಯ ಎಂದು ತಿಳಿಸಿದೆ. 'ದಿವಾ ವಿಭೀತಕಚ್ಛಾಯಾ ರಾತ್ರಾವಶ್ವತ್ಥಸಂಭವಾ । ದಿವಾನಿಶಿ ನರಚ್ಛಾಯಾ ಹಂತಿ ಪುಣ್ಯಂ ಪುರಾತನಂ' ಹಗಲಿನಲ್ಲಿ ಗೂಗೆಯ ನೆರಳು ನಮಗೆ ಬೀಳಬಾರದು. ರಾತ್ರಿಯಲ್ಲಿ ಅಶ್ವತ್ಥಮರದ ಬುಡಕ್ಕೆ ಹೋಗಬಾರದು. ಮಾನವನ ನೆರಳು ಒಬ್ಬನದ್ದು ಮತ್ತೊಬ್ಬನಿಗೆ ಎಂದೂ ಬೀಳಬಾರದು. ಬಿದ್ದರೆ ನಮ್ಮ ಹಿಂದಿನ ಪುಣ್ಯವು ನಶಿಸುತ್ತದೆ.

ಅಶ್ವತ್ಥದ ನೆರಳು ರಾತ್ರಿಯಲ್ಲಿ ಮಾತ್ರ ನಿಷಿದ್ಧ. ಹೆಣ್ಮಕ್ಕಳು ಶಾಪವನ್ನೂ ಅದೇ ರೀತಿ ಕೊಟ್ಟಿದ್ದಾರೆ. ಇವರಿಗೆ ಕೃಷ್ಣನು ರಾತ್ರಿಯಲ್ಲಿ ಬೇಕಾಗಿದ್ದ. ಆ ಸಮಯದಲ್ಲೇ ಈ ಮರದಲ್ಲಿಯೂ ಕೇಳಿದ್ದು. ಅದು ಕೊಡದಿದ್ದಾಗ ರಾತ್ರಿಯಲ್ಲಿ ಮಾತ್ರ ನಿಷೇಧದ ಶಾಪವನ್ನು ಕೊಟ್ಟರು. ಅಪರಾಧಕ್ಕೆ ಅನುಗುಣವಾಗಿ ಶಿಕ್ಷೆಯನ್ನು ಕೊಟ್ಟರು.

ಉರಿಯುವ ಬೆಂಕಿಯು ನಿನ್ನ ಹೃದಯದಲ್ಲಿ ಇರಲಿ. ಅಂದರೆ ಹೊರಗಿನಿಂದ ಜನರಿಗೆ ನೆರಳು ಕೊಡುವವನಾದರೂ ಒಳಗಿನಿಂದ ಬೆಂಕಿಯಂತೆ ಕ್ರೂರಿಯಾಗು ಎಂದರ್ಥ. ಅಶ್ವತ್ಥಮರದಲ್ಲಿ ಸಹಜವಾಗಿ ಅಗ್ನಿಯ ಸನ್ನಿಧಾನ ಇದೆ. ಅದನ್ನೇ ಈ ಗೋಪಿಯರು ಶಾಪದ ನಿಮಿತ್ತದಿಂದ ಹೇಳಿದರು. ಕೆಲವೊಮ್ಮೆ ನೀನು ಅಸ್ಪೃಶ್ಯನಾಗು ಎಂದೂ ಶಪಿಸಿದರು. ಧರ್ಮಶಾಸ್ತ್ರದಲ್ಲಿ ಈ ಒಂದು ಮಾತೂ ಇದೆ– 'ಅಶ್ವತ್ಥಸಾಗರೌ ಸೇವ್ಯೌ ನ ಸ್ಪ್ರಷ್ಟವ್ಯೌ ಕದಾಚನ' –ಅಶ್ವತ್ಥಮರ ಹಾಗೂ ಸಮುದ್ರವನ್ನು ಯಾವಾಗಲೂ ಮುಟ್ಟಬಾರದು. ಅಶ್ವತ್ಥವನ್ನು ಭಾನುವಾರ, ಮಂಗಳವಾರ, ಶುಕ್ರವಾರ ಹಾಗೂ ಮಧ್ಯಾಹ್ನದ ಅನಂತರ ಮುಟ್ಟಬಾರದು. ಸಮುದ್ರವನ್ನು ಮಧ್ಯಾಹ್ನದ ಅನಂತರ ಮುಟ್ಟಬಾರದು. ಈ ಗೋಪಿಯರಿಗೆ ಧರ್ಮಶಾಸ್ತ್ರದ ತಿಳುವಳಿಕೆ ಚೆನ್ನಾಗಿದೆ ಎಂದು ಇದರಿಂದ ತಿಳಿಯುತ್ತದೆ.

**ಸಂದೇಶ** : ದೇವರ ಭಕ್ತರ ಜೊತೆ ನಮ್ಮ ವ್ಯವಹಾರ ಚೆನ್ನಾಗಿ ಇರಬೇಕು. ಅವರು ಮನಸ್ತಾಪವನ್ನು ಹೊಂದಿ ನಮ್ಮನ್ನು ಶಪಿಸಿದರೆ ಅದು ಹಾಗೆಯೇ ಆಗುತ್ತದೆ ಎಂದು.

**ಅಸ್ಮಾಕಂ ನ ಹಿ ಯಃ ಶೃಣೋತಿ ವಚನಂ ಪ್ರತ್ಯುತ್ತರಂ ವಕ್ತಿ ನೋ**
**ಮೂಕೋಽಸೌ ಬದಿರಾಗ್ರಣೀಶ್ಚ ಭವತು ಸ್ವಾಂತಸ್ಥಿತೋಽಪ್ಯಚ್ಯುತಃ ।**
**ನೈತತ್‌ದೃಷ್ಟಿಪಥಂ ಪ್ರಯಾತು ರಮಣಂ ಯೋ ದರ್ಶಯೇನ್ನೈವ ನಃ**
**ತತ್ ಪಾರ್ಶ್ವೇ ವಸತಾತ್ ಅಸೌ ದ್ವಿಜಕುಲೇ ಯಃ ಪ್ರೇತ್ಯ ನ ಸ್ವರ್ಗತಃ ॥ ೬ ॥**

ಅಸ್ಮಾಕಂ=ನಮ್ಮ; ನ=ಇಲ್ಲ; ಹಿ=ಪ್ರಸಿದ್ಧ; ಯಃ=ಯಾರು; ಶೃಣೋತಿ=ಕೇಳುತ್ತಾನೆ; ವಚನಂ=ಮಾತನ್ನು; ಪ್ರತ್ಯುತ್ತರಂ=ಉತ್ತರವನ್ನು; ನೋವಕ್ತಿ=ಹೇಳುವುದಿಲ್ಲ; ಮೂಕಃ= ಬಾಯಿಬಾರದವನು; ಅಸೌ=ಈ ಮರವು; ಬದಿರಾಗ್ರಣೀಃ=ಕಿವಿ ಕೇಳದವನು; ಭವತು= ಆಗಲಿ; ಸ್ವ=ತನ್ನ; ಅಂತಃ=ಒಳಗೆ; ಸ್ಥಿತೋಽಪಿ=ಇದ್ದರೂ; ಅಚ್ಯುತಃ=ದೇವರು; ಏತತ್= ಇದರ; ದೃಷ್ಟಿಪಥಂ=ಕಣ್ಣಿಗೆ ಕಾಣುವಿಕೆಯನ್ನು; ನಪ್ರಯಾತು=ಹೊಂದದೆ ಇರಲಿ; ರಮಣಂ=ಕೃಷ್ಣನನ್ನು; ಯಃ=ಯಾರು; ನೈವ ದರ್ಶಯೇತ್=ತೋರಿಸುವುದಿಲ್ಲ; ನಃ=ನಮಗೆ; ತತ್=ಆ ಮರದ; ಪಾರ್ಶ್ವೇ=ಬಳಿಯಲ್ಲಿ; ವಸತಾತ್=ವಾಸಮಾಡಲಿ; ಅಸೌ= ಅವನು; ದ್ವಿಜಕುಲೇ=ಬ್ರಾಹ್ಮಣರ ವಂಶದಲ್ಲಿ; ಯಃ=ಯಾರು; ಪ್ರೇತ್ಯ=ಸತ್ತು; ನ ಸ್ವರ್ಗತಃ= ಸ್ವರ್ಗವನ್ನು ಸೇರಲಿಲ್ಲ.

ಪುನಃ ಶಾಪವನ್ನು ಮುಂದುವರಿಸುತ್ತಾರೆ –ನಮ್ಮ ಮಾತನ್ನು ಈ ಮರವು ಕೇಳಿಸಿಕೊಳ್ಳುವುದೂ ಇಲ್ಲ. ನಮ್ಮ ಪ್ರಶ್ನೆಗೆ ಉತ್ತರಿಸುವುದೂ ಇಲ್ಲ. ಆದ್ದರಿಂದ ಈ ಮರದ ಕಿವಿ ಬಾಯಿಗಳೆರಡೂ ಹಾಳಾಗಲಿ. ತನ್ನಲ್ಲಿ ದೇವರಿದ್ದಾನೆ. ಆ ದೇವರನ್ನು ನೋಡುವ ತಾಕತ್ತು ಈ ಮರಕ್ಕೆ ಇಲ್ಲದೆ ಹೋಗಲಿ. ಬ್ರಾಹ್ಮಣವರ್ಗದಲ್ಲಿ ಹುಟ್ಟಿದ ಕೆಲವರು ತಮ್ಮ ಧರ್ಮಕ್ಕೆ ಸರಿಯಾಗಿ ಇರುವುದಿಲ್ಲ. ಅಂತಹವರು ಸತ್ತು ಬ್ರಹ್ಮರಾಕ್ಷಸರಾಗುತ್ತಾರೆ. ಅವರಿಗೆ ಸ್ವರ್ಗಾದಿಗಳು ಇಲ್ಲ. ಅಂತಹ ಸಂದರ್ಭದಲ್ಲಿ ಅವರು ಈ ಮರದಲ್ಲಿ ವಾಸಮಾಡಲಿ ಎಂದು.

**ಸಂದೇಶ** : ದೇವರು ಕೊಟ್ಟಿರುವ ಅವಯವಗಳನ್ನು ದೇವರಿಗಾಗಿ ಮೀಸಲಿಡಬೇಕು. ಇಲ್ಲದಿದ್ದರೆ ಮುಂದಿನ ಜನ್ಮದಲ್ಲಿ ದೇವರು ಅವುಗಳನ್ನು ನಮ್ಮಿಂದ ತಪ್ಪಿಸುತ್ತಾನೆ. ಇನ್ನೊಬ್ಬರಿಗೆ ನಾವು ದೇವರ ಬಗ್ಗೆ ಹೇಳುವುದನ್ನು ಮಾಡಬೇಕು. ಯಾಕೆಂದರೆ ಉಪನಿಷತ್ತು 'ತದ್ಧಿ ತಪಃ, ತದ್ಧಿ ತಪಃ । ಸ್ವಾಧ್ಯಾಯ ಪ್ರವಚನ ಏವೇತಿ ನಾಕೋ ಮೌದ್ಗಲ್ಯಃ' –ಅಧ್ಯಯನ ಅಧ್ಯಾಪನಗಳೇ ದೊಡ್ಡ ತಪಸ್ಸು. ಅದನ್ನು ಮಾಡಿದರೆ ಮಾತ್ರ ನಮಗೆ ನಮ್ಮಲ್ಲಿರುವ ದೇವರ ದರ್ಶನ ಆಗುತ್ತದೆ. ಇದನ್ನು ಬಿಂಬಸಾಕ್ಷಾತ್ಕಾರ ಎನ್ನುತ್ತಾರೆ. ಇದು ಇಲ್ಲದಿದ್ದರೆ ಮೋಕ್ಷ ಇಲ್ಲ ಎಂದು ಹೇಳುತ್ತದೆ. ಈ ರೀತಿ ದೇವರ ಬಗ್ಗೆ ಏನೂ ಮಾಡದಿದ್ದರೆ ಕೆಟ್ಟ ಶಕ್ತಿಗಳು ನಮ್ಮಲ್ಲಿ ವಾಸಮಾಡುತ್ತವೆ.

**ಹೇ ಜಾತಿ ಮಾಲತಿ ತುಲಸ್ಯಯಿ ಮಲ್ಲಿಕೇಗ್ರ್ಯೇ**
**ಯೋಗಂ ಸಮಾದಿಶತ ಯೋಗಿಜನಪ್ರಿಯಸ್ಯ ।**

**ಯರ್ಹಿ ಏಕಜನ್ಮನಿ ಕದಾಽಪಿ ತದಂಘ್ರಿಸಂಗಃ**
**ಯುಷ್ಮಭ್ಯಂ ಆಭಿರಬಲಾಭಿರದಾಯಿ ಸಾಧ್ವ್ಯಃ** ॥ ೭ ॥

ಹೇ ಜಾತಿ=ಎಲೋ ಜಾಜಿಯೇ; ಹೇ ಮಾಲತಿ=ಎಲೋ ಮಾಲತಿಯೇ; ತುಲಸಿ=ತುಳಸಿಯೇ; ಅಯಿ=ಎಲೋ; ಮಲ್ಲಿಕೇ=ಮಲ್ಲಿಗೆಯೇ; ಅಗ್ರ್ಯೇ=ಶ್ರೇಷ್ಠಳಾದ; ಯೋಗಂ=ಸಂಬಂಧವನ್ನು; ಸಮಾದಿಶತ=ಕೊಡಿರಿ; ಯೋಗಿಜನ=ಋಷಿಗಳಿಗೆ; ಪ್ರಿಯಸ್ಯ=ಇಷ್ಟನಾದ ಕೃಷ್ಣನ; ಯರ್ಹಿ=ಒಂದುವೇಳೆ; ಏಕಜನ್ಮನಿ=ಒಂದು ಜನ್ಮದಲ್ಲಿ; ಕದಾಪಿ=ಒಮ್ಮೆಯಾದರೂ; ತತ್=ಆ ಕೃಷ್ಣನ; ಅಂಘ್ರಿ=ಪಾದಗಳ; ಸಂಗಃ=ಸಂಬಂಧವು; ಯುಷ್ಮಭ್ಯಂ=ನಿಮಗೆ; ಆಭಿಃ=ಈ; ಅಬಲಾಭಿಃ=ನಾರಿಯರಿಂದ; ಅದಾಯಿ=ಮಾಡಲ್ಪಟ್ಟಿದೆ; ಸಾಧ್ವ್ಯಃ=ಒಳ್ಳೆಯವರೇ.

ಈ ಗೋಪಿಯರು ಮುಂದೆ ಹೋದಾಗ ಜಾಜಿ ಮೊದಲಾದ ಪುಷ್ಪಗಳೂ ತುಳಸಿಯೂ ಎದುರಾದುವು. ಅವುಗಳನ್ನು ಕುರಿತು ಈ ರೀತಿ ಮಾತನ್ನು ಹೇಳುತ್ತಾರೆ –ನೀವು ಕೃಷ್ಣನ ದರ್ಶನವನ್ನು ನಮಗೆ ಮಾಡಿಸಿರಿ. ಆ ಕೃಷ್ಣನು ಸನ್ಯಾಸಿಗಳಿಗೆ ಬಹಳ ಬೇಕಾದವನು. ನಾವು ಈಗ ಸನ್ಯಾಸಿಗಳಂತೆ ಎಲ್ಲವನ್ನೂ ತೊರೆದು ಬಂದವರು. ಅವರು ದೇವರನ್ನು ಬಹಳ ಹಚ್ಚಿಕೊಂಡಂತೆ ನಾವೂ ಹಾಗೆಯೇ ಇದ್ದೇವೆ. ನಾವು ನಿಮ್ಮಲ್ಲಿ ಬೇಡಲು ಕಾರಣ –ನಾವು ಈ ಜನ್ಮದಲ್ಲಿ ನಿಮ್ಮ ಸಂಬಂಧ ದೇವರಿಗೆ ಆಗುವಂತೆ ಮಾಡಲಿಲ್ಲ. ಆದರೆ ಹಿಂದಿನ ಯಾವುದಾದರೊಂದು ಜನ್ಮದಲ್ಲಿ ಮಾಡಿದ್ದಿರಬಹುದು. ಅದರ ಫಲವಾಗಿ ನೀವು ಈಗ ನಮಗೆ ಕೃಷ್ಣನ ಸಂಪರ್ಕವಾಗುವಂತೆ ಮಾಡಿರಿ. ನೀವು ಒಳ್ಳೆಯವರು. ಒಳ್ಳೆಯವರ ಲಕ್ಷಣ ಈ ರೀತಿ ಇದೆ –ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ಮಾಡುವುದು.

**ಸಂದೇಶ** : ಆ ಜನ್ಮದ ಕರ್ಮ ಆ ಜನ್ಮದಲ್ಲಿ ಫಲ ಕೊಡುವುದಿಲ್ಲ. ನಮ್ಮ ಜೊತೆಗೆ ಜನ್ಮಾಂತರಕ್ಕೂ ಬರುತ್ತದೆ. ತುಲಸ್ಯಾದಿಗಳಿಂದ ದೇವರ ಅರ್ಚನೆಯನ್ನು ಮಾಡಬೇಕು. ಅರ್ಚನೆಯು ದೇವರ ಪಾದಕ್ಕೆ ಮಾಡಬೇಕು. ಇದರ ಫಲವನ್ನು ಅಭಿಮಾನಿದೇವತೆಗಳು ನಮಗೆ ಕೊಟ್ಟೇ ಕೊಡುತ್ತಾರೆ.

**ತುಲಸಿ ಮಿಲಸಿ ಕೃಷ್ಣಾಂಘ್ರ್ಯಂಬುಜೇ ಪುಣ್ಯಭೂಜೇ**
**ವರಯ ವರಯತೀಂದ್ರೈಃ ವಂದಿತೇಽಸ್ಮಾನ್ ವಯಸ್ಯಾಃ ।**
**ಮನಸಿ ಮನಸಿಜಾದೇಃ ನಿರ್ವೃತಿಂ ನಿರ್ಮಿಮೀತೇ**
**ವನಜವನಜಗಂಧೋಽಪ್ಯಾಂತರೇಣಾಂಬ ನ ತ್ವಾಮ್ ॥** ॥ ೮ ॥

ತುಲಸಿ=ತುಲಸಿಯೇ; ಮಿಲಸಿ=ಸೇರುತ್ತಿ; ಕೃಷ್ಣ=ದೇವರ; ಅಂಘ್ರಿ=ಪಾದಗಳೆಂಬ; ಅಂಬುಜೇ=ಕಮಲದಲ್ಲಿ; ಪುಣ್ಯ=ಪವಿತ್ರವಾದ; ಭೂ=ಜಾಗದಲ್ಲಿ; ಜೇ=ಹುಟ್ಟಿದ; ವರಯ=ಸ್ವೀಕರಿಸು; ವರ=ಶ್ರೇಷ್ಠರಾದ; ಯತೀಂದ್ರೈಃ=ಉತ್ತಮ ಯತಿಗಳಿಂದ; ವಂದಿತೇ=

ಪೂಜ್ಯಳಾದ; ಅಸ್ಮಾನ್=ನಮ್ಮನ್ನು; ವಯಸ್ಯಾಃ=ಗೆಳತಿಯರಾದ; ಮನಸಿ= ಮನಸ್ಸಿನಲ್ಲಿ; ಮನಸಿಜ=ಕಾಮನಿಗೆ; ಆದೇಃ=ಕಾರಣನಾದ ಕೃಷ್ಣನ; ನಿರ್ವೃತಿಂ= ಆನಂದವನ್ನು; ನ ನಿರ್ಮಿಮೀತೇ=ಉಂಟುಮಾಡುವುದಿಲ್ಲ; ವನಜ=ಕಮಲಗಳ; ವನ= ಸಮೂಹದಿಂದ; ಜ= ಹುಟ್ಟಿದ; ಗಂಧೋಽಪಿ=ಪರಿಮಳವೂ; ಅಂತರೇಣ=ಹೊರತಾಗಿ; ಅಂಬ=ತಾಯಿಯೇ; ತ್ವಾಂ=ನಿನ್ನನ್ನು.

ಎಲೋ ತುಳಸಿಯೇ, ನೀನು ಒಳ್ಳೆಯ ಸ್ಥಳದಲ್ಲಿ ಹುಟ್ಟುವವಳು. ಆದ್ದರಿಂದ ನಿನಗೆ ದೇವರ ಸಂಪರ್ಕ ಆಗುತ್ತದೆ. ಇದು ನಿಶ್ಚಯ. ನಾವು ನಿನ್ನ ಗೆಳತಿಯರು. ನಮ್ಮನ್ನು ಕೃಷ್ಣನಲ್ಲಿಗೆ ಕರೆದುಕೊಂಡು ಹೋಗು. ಕೃಷ್ಣನಿಗೆ ಋಷಿಗಳೆಂದರೆ ಪ್ರಾಣ. ಅಂತಹ ಋಷಿಗಳೂ ನಿನ್ನನ್ನು ಆದರಿಸುತ್ತಾರೆ. ಇಂತಹ ನಿನ್ನನ್ನು ಕೃಷ್ಣ ಸ್ವೀಕರಿಸುತ್ತಾನೆ. ಆದ್ದರಿಂದ, ನಾವೇ ಕೃಷ್ಣನ ಬಳಿಗೆ ಹೋಗಿಲ್ಲ, ನಿಮ್ಮನ್ನು ಹೇಗೆ ಕರೆದುಕೊಂಡು ಹೋಗಲಿ ಎಂದು ನೀವು ಹೇಳುವಂತಿಲ್ಲ. ನಿಮ್ಮಲ್ಲಿ ಕೃಷ್ಣನಿಗೆ ಎಷ್ಟು ಪ್ರೀತಿ ಇದೆ ಅಂದರೆ –ಚೆನ್ನಾಗಿ ಅರಳಿದ, ಪರಿಮಳಿತವಾದ ನೂರಾರು ಕಮಲಗಳಿದ್ದರೂ ದೇವರ ಪೂಜೆಗೆ ನೀನು ಬೇಕೇಬೇಕು. ನೀನು ಇಲ್ಲದಿದ್ದರೆ ದೇವರಿಗೆ ಸಂತೋಷ ಆಗುವುದೇ ಇಲ್ಲ.

**ಸಂದೇಶ** : ದೇವರ ದರ್ಶನಕ್ಕೆ ನಮಗೆ ನಮ್ಮ ಹಿರಿಯರ ನಾಯಕತ್ವ, ಅನುಗ್ರಹ ಬೇಕು. ಹಾಗೆಯೇ 'ಒಲ್ಲನೋ ಹರಿ ಕೊಳ್ಳನೋ। ತಾಳಮೇಳಗಳಿದ್ದು ತುಲಸಿ ಇಲ್ಲದ ಪೂಜೆ' ಎಂಬ ಹಾಡು ಈ ಸಂದರ್ಭದಲ್ಲಿ ಉಚಿತವಾಗಿದೆ.

**ವೃಂದಾವನಂ ಕಿಲ ವನಂ ಭವದೀಯವಾಸಃ**
**ಚಾಂದ್ರಪ್ರಮೋದಕರಚಾರುಕರಾಭಿರಾಮಮ್ ।**
**ಕಂದರ್ಪಬಾಣದಲಿತಂ ಬತ ಯೂಯಮಾಸಾಂ**
**ವೃಂದಂ ವೃಥಾ ಕುರುಥ ಹಾ ವ್ರಜಸುಂದರೀಣಾಮ್ ॥ ॥ ೯ ॥**

ವೃಂದಾವನಂ=ವೃಂದಾವನವೆಂಬ; ಕಿಲ=ಪ್ರಸಿದ್ಧ; ವನಂ=ಕಾಡು; ಭವದೀಯ=ನಿಮ್ಮ; ವಾಸಃ=ವಾಸಸ್ಥಳವು; ಚಾಂದ್ರ=ಚಂದ್ರನ; ಪ್ರಮೋದ=ನೆಮ್ಮದಿಯನ್ನು; ಕರ=ಕೊಡುವ; ಚಾರು=ಚಂದದ; ಕರ=ಕಿರಣದಿಂದ; ಅಭಿರಾಮಂ=ಮನೋಹರವಾದ; ಕಂದರ್ಪ= ಕಾಮನ; ಬಾಣ=ಬಾಣದಿಂದ; ದಲಿತಂ=ಪೀಡಿತವನ್ನಾಗಿ; ಬತ=ಕಷ್ಟವು; ಯೂಯಂ= ನೀವು; ಆಸಾಂ=ಈ; ವೃಂದಂ=ಸಮೂಹವನ್ನು; ವೃಥಾ=ವ್ಯರ್ಥವಾಗಿ; ಕುರುಥ= ಮಾಡುತ್ತೀರಿ; ಹಾ=ದುಃಖವು; ವ್ರಜ=ಗೋಕುಲದ; ಸುಂದರೀಣಾಂ=ಕನ್ನೆಯರ.

ಗೋಪಿಯರು ಜಾಜಿ ಮೊದಲಾದ ಹೂಗಳಲ್ಲಿ ಕೃಷ್ಣನನ್ನು ವಿಚಾರಿಸುತ್ತಾರೆ. ಈ ಹೂಗಳಿಗೆ ವೃಂದಾವನವು ತಾಯಿಯಂತೆ ಆಶ್ರಯವಾಗಿದೆ. ಮನೆಗಳ ಉದ್ಯಾನಗಳಲ್ಲಿ

ಅರಳುವ ಹೂಗಳನ್ನು ಮನೆಮಂದಿಯೇ ಕೀಳುತ್ತಾರೆ. ಇದರಿಂದಾಗಿ ಹೂಗಳಿಗೆ ತೊಂದರೆ ಆಗುತ್ತದೆ. ಆದರೆ ಕಾಡಿನಲ್ಲಿ ಅರಳಿದ ಹೂಗಳನ್ನು ಯಾರೂ ಕೀಳುವುದಿಲ್ಲ. ನೆಮ್ಮದಿಯಿಂದ ಇರುತ್ತವೆ. ರಾತ್ರಿ ಹೊತ್ತಲ್ಲಿ ಚಂದ್ರನ ಚಂದದ ಕಿರಣಗಳು ಇಡೀ ಕಾಡನ್ನು ಆವರಿಸಿವೆ. ಇದರಿಂದ ಕಾಡು ಬಹಳ ಚಂದವಾಗಿ ಕಾಣುತ್ತಿದೆ. ತನ್ನಲ್ಲಿ ಇರುವ ಹೂಗಳನ್ನು ಕಾಡು ರಕ್ಷಿಸುವಂತೆ, ಹೂಗಳ ಬಳಿ ಬಂದಿರುವ ಈ ನಾರಿಯರನ್ನು ಹೂಗಳು ರಕ್ಷಿಸಬೇಕಿತ್ತು. ಆದರೆ ಹೂಗಳು ಹಾಗೆ ಮಾಡದೆ ಈ ನಾರಿಯರನ್ನು ಮಾನಸಿಕವಾಗಿ ಮತ್ತಷ್ಟು ಹಿಂಸಿಸುವಂತಿದ್ದವು. ಅಂದರೆ ಈ ಹೂಗಳೆಲ್ಲಾ ಕಾಮ ಉದ್ದೀಪಕಗಳು. ಇವುಗಳನ್ನು ನೋಡಿದಾಗ ಗೋಪಿಯರ ಮನದಲ್ಲಿ ಕೃಷ್ಣನ ಬಗ್ಗೆ ಕಾಮವು ಇನ್ನಷ್ಟು ಜಾಸ್ತಿಯಾಗಿ ಮತ್ತಷ್ಟು ನೋವನ್ನು ಅನುಭವಿಸಿದರು.

ಎಲೋ ಹೂಗಳೇ, ಸಾಧ್ಯವಾದರೆ ಈ ನಾರಿಯರ ವೃಂದದ=ಸಮೂಹದ, ಅವನಂ=ರಕ್ಷಣೆಯನ್ನು ಮಾಡಿರಿ. ಇಲ್ಲದಿದ್ದರೆ ಸುಮ್ಮನಿರಿ. ಕಾಮೋದ್ದೀಪನ ಮಾಡಿ ನಮ್ಮನ್ನು ನೋಯಿಸದಿರಿ.

<u>**ಸಂದೇಶ**</u> : ಸುಖಿಗಳು ದುಃಖಿಗಳ ದುಃಖನಿವಾರಣೆಗೆ ಯಥಾಶಕ್ತಿ ನೆರವಾಗಬೇಕು. ಬದಲಾಗಿ ದುಃಖದ ಉದ್ದೀಪನೆಗೆ ಕಾರಣವಾಗಬಾರದು.

**ನಃ ಸಂದಿಶಂತು ನಯನೋತ್ಸವಮಚ್ಯುತಂ ತಂ**
**ನಕ್ರಾತಿಭೀತಗಜಗೀತಚರಿತ್ರಜಾತಮ್ ।**
**ಪಶ್ಚಾತ್ ತದಂಘ್ರಿಯುಗಲೇ ವಿನಿವೇಶ್ಯ ಕುರ್ಮಃ**
**ಪದ್ಮಾಸನಾದಿಸುರಸಂಚಯಸತ್ಕೃತಾಃ ವಃ** ॥ ೧೦ ॥

ನಃ=ನಮಗೆ; ಸಂದಿಶಂತು=ಕೊಡಿರಿ; ನಯನ=ಕಣ್ಣಿಗೆ; ಉತ್ಸವಂ=ನೆಮ್ಮದಿಯನ್ನು ಕೊಡುವ; ಅಚ್ಯುತಂ=ಕೃಷ್ಣನನ್ನು; ತಂ=ಆ; ನಕ್ರ=ಮೊಸಳೆಯಿಂದ; ಅತಿಭೀತ=ಬಹಳ ಹೆದರಿದ; ಗಜ=ಆನೆಯಿಂದ; ಗೀತ=ಹಾಡಲ್ಪಟ್ಟ; ಚರಿತ್ರ=ಮಹಿಮೆಯ; ಜಾತಂ= ಸಮೂಹವುಳ್ಳ; ಪಶ್ಚಾತ್=ಅನಂತರ; ತತ್=ಆ ಕೃಷ್ಣನ; ಅಂಘ್ರಿ=ಪಾದಗಳ; ಯುಗಲೇ= ಎರಡರಲ್ಲಿ; ವಿನಿವೇಶ್ಯ=ಅರ್ಪಿಸಿ; ಕುರ್ಮಃ=ಮಾಡುವೆವು; ಪದ್ಮಾಸನ=ಬ್ರಹ್ಮನೇ; ಆದಿ= ಮೊದಲಾದ; ಸುರ=ದೇವತೆಗಳ; ಸಂಚಯ=ಸಮೂಹದಿಂದ; ಸತ್ಕೃತಾಃ= ಆದೃತರನ್ನಾಗಿ; ವಃ=ನಿಮ್ಮನ್ನು.

ಈ ಮಲ್ಲಿಕಾದಿ ಪುಷ್ಪಗಳನ್ನು ಸ್ತುತಿಸಿದರು. ವಂಶವನ್ನು ಹೇಳಿದರು. ಆದರೂ ಇವುಗಳು ಗೋಪಿಯರಿಗೆ ಉತ್ತರ ಕೊಡಲಿಲ್ಲ. ಆಗ ಬಾಲಿಕೆಯರು ಈ ರೀತಿ ಆಲೋಚಿಸಿದರು: ಈ ಪುಷ್ಪಗಳು ಮಧ್ಯಮವರ್ಗದವುಗಳು. ಮಧ್ಯಮವರ್ಗದವರು ಪ್ರತ್ಯುಪಕಾರ ಇಲ್ಲದೆ ಪ್ರತಿಕ್ರಯಿಸುವುದಿಲ್ಲ. ಉತ್ತಮವರ್ಗದವರಾದರೆ ಪ್ರತ್ಯುಪಕಾರವನ್ನು

ಬಯಸುವುದಿಲ್ಲ. ಆದ್ದರಿಂದ ಇವುಗಳಿಗೆ ಉಪಕಾರದ ಭರವಸೆಯನ್ನು ಕೊಡೋಣ ಎಂದು.

ಎಲೋ ಪುಷ್ಪಗಳೇ, ನಮಗೆ ಕೃಷ್ಣನನ್ನು ಕೊಡಿರಿ. ಆತನು ನಮ್ಮೆಲ್ಲರ ಕಣ್ಣಿಗೆ ಹಬ್ಬ. ಆತ ದೋಷರಹಿತ. ಒಮ್ಮೆ ಮೊಸಳೆಗೆ ಹೆದರಿದ ಆನೆಯು ಈತನನ್ನು ಹೊಗಳಿತು. ಆಗ ಆನೆಗೆ ಕಾಣಿಸಿಕೊಂಡನು. ನಮಗೆ ಪುಕ್ಕಟೆಯಾಗಿ ದೇವರನ್ನು ತೋರಿಸಬೇಡಿ. ನಿಮಗೂ ನಾವು ಉಪಕಾರವನ್ನು ಮಾಡುತ್ತೇವೆ. ನೀವು ನಮಗೆ ದೇವರನ್ನು ತೋರಿಸಿದರೆ ನಿಮ್ಮನ್ನು ಆ ದೇವರ ಪಾದಗಳಿಗೆ ಅರ್ಪಿಸುತ್ತೇವೆ. ಅನಂತರ ಬ್ರಹ್ಮಾದಿದೇವತೆಗಳು ನಿಮ್ಮನ್ನು ತಮ್ಮ ತಲೆಯ ಮೇಲಿಟ್ಟು ಆದರಿಸುವಂತೆ ಮಾಡುತ್ತೇವೆ.

<u>**ಸಂದೇಶ**</u> : ಎಲ್ಲಾ ದೇವತೆಗಳೂ ದೇವರ ನಿರ್ಮಾಲ್ಯವನ್ನೇ ಧಾರಣೆ ಮಾಡಬೇಕು. ದೇವರಿಗೆ ಅರ್ಪಿಸದೆ ಇರುವುದನ್ನು ಸುತರಾಂ ಕೂಡದು. ಪ್ರತಿಮೆಯಲ್ಲಿ ದೇವರನ್ನು ಆರಾಧಿಸುವಾಗ ನಾನಾ ಪುಷ್ಪಗಳಿಂದ, ತುಳಸಿಯಿಂದ ಅರ್ಚನೆ ಮಾಡಬೇಕು ಎಂದು.

**ಬತ ನತಜನಬಂಧುಂ ಸಾಂದ್ರಸೌಂದರ್ಯಸಿಂಧುಂ**
**ಯದುನೃಪಕುಲಸಾರಂ ಯಚ್ಛತೋದಾರಹಾರಮ್ ।**
**ತದನು ಶಿರಸಿ ಯುಷ್ಮಾನ್ ಧಾರಯಾಮಃ ಕೃತೇಷ್ಟಾಃ**
**ಪರಮಪದಯುಗಾಬ್ಜೇ ಪೂರಯಾಮಃ ಪ್ರಹೃಷ್ಟಾಃ** ॥ ೧೧ ॥

ಬತ=ಆನಂದವು; ನತಜನ=ವಿನೀತರ; ಬಂಧುಂ=ಬಂಧುವಾದ; ಸಾಂದ್ರ =ಬಹಳವಾದ; ಸೌಂದರ್ಯ=ಚಂದದಿಂದ; ಸಿಂಧುಂ=ಸಮುದ್ರನಾದ; ಯದುನೃಪ= ಯದುರಾಜರ; ಕುಲ=ವಂಶದಲ್ಲಿ; ಸಾರಂ=ಶ್ರೇಷ್ಠನಾದ; ಯಚ್ಛತ=ಕೊಡಿರಿ; ಉದಾರ=ಉತ್ತಮವಾದ; ಹಾರಂ=ಆಭರಣವುಳ್ಳ; ತದನು=ಅನಂತರ; ಶಿರಸಿ=ತಲೆಯಲ್ಲಿ; ಯುಷ್ಮಾನ್=ನಿಮ್ಮನ್ನು; ಧಾರಯಾಮಃ=ಧರಿಸುವೆವು; ಕೃತ=ಮಾಡಲ್ಪಟ್ಟ; ಇಷ್ಟಾಃ=ಅಭೀಷ್ಟವುಳ್ಳ; ಪರಮ=ದೇವರ; ಪದ=ಕಾಲುಗಳ; ಯುಗ=ದ್ವಂದ್ವವೆಂಬ; ಅಬ್ಜೇ=ಕಮಲಗಳಲ್ಲಿ; ಪೂರಯಾಮಃ=ಅರ್ಪಿಸುವೆವು; ಪ್ರಹೃಷ್ಟಾಃ=ಸಂತುಷ್ಟರಾಗಿ.

ಬ್ರಹ್ಮಾದಿದೇವತೆಗಳು ಆದರಿಸುವಂತೆ ಮಾಡುತ್ತೇವೆ ಎಂದು ಹೇಳಿದರೂ ಈ ಹೂಗಳು ಸ್ಪಂದಿಸುವುದಿಲ್ಲ. ಪ್ರಾಯಶಃ ಕಾರಣ ಹೀಗಿದ್ದಿರಬಹುದು– ನಾವು ಈ ಗೋಪಿಯರಿಗೆ ಕೃಷ್ಣನನ್ನು ತೋರಿಸಿ ಉಪಕಾರ ಮಾಡುವುದು. ನಮಗೆ ಮಾತ್ರ ಈ ನಾರಿಯರು ಪ್ರತಿಯಾಗಿ ಉಪಕಾರಮಾಡದೆ ಬ್ರಹ್ಮಾದಿಗಳಿಂದ ಮಾಡಿಸುವುದು. ಆದ್ದರಿಂದ ನಾವೂ ಕೂಡಾ ಈ ನಾರಿಯರಿಗೆ ಉಪಕಾರ ಮಾಡುವುದಿಲ್ಲ ಎಂದು.

ಹೀಗೆ ತಿಳಿದ ನಾರಿಯರು ನಾವೇ ನಿಮಗೆ ಉಪಕಾರ ಮಾಡುತ್ತೇವೆ. ನಮಗೆ

ಕೃಷ್ಣನನ್ನು ತೋರಿಸಿ ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ –ಎಲೋ ಹೂಗಳೇ ನಮಗೆ ಕೃಷ್ಣನನ್ನು ತೋರಿಸಿರಿ. ಆತನು ತುಂಬಾ ಸುಂದರನಾಗಿದ್ದಾನೆ. ತನ್ನನ್ನು ನಂಬಿದವರನ್ನು ಎಂದೂ ಕೈಬಿಡುವವನಲ್ಲ. ಯದುವಂಶದಲ್ಲಿ ಇವನಿಗಿಂತ ಮೊದಲು ಬಹಳ ರಾಜರುಗಳು ಬಂದು ಹೋಗಿದ್ದಾರೆ. ಇನ್ನು ಮುಂದೆ ಬರುವವರಿದ್ದಾರೆ. ಅವರೆಲ್ಲರಿಗೂ ಈತನೇ ಅಧಿಪತಿಯಾಗಿದ್ದಾನೆ. ಸರ್ವ ಆಭರಣಗಳಿಂದ ಅಲಂಕೃತ ನಾದವನು. ನಮಗೇನು ಕೊಡುತ್ತೀರಿ ಎಂದು ಹೂಗಳು ಕೇಳಿದವು. ಆಗ ಈ ಗೋಪಿಯರು "ನಿಮ್ಮನ್ನು ಕೃಷ್ಣನ ಪಾದಗಳಿಗೆ ಅರ್ಪಿಸಿ ಆಮೇಲೆ ನಾವೇ ನಿಮ್ಮನ್ನು ನಮ್ಮ ತಲೆಯಲ್ಲಿ ಹೊತ್ತುಕೊಂಡು ಅಡ್ಡಾಡುತ್ತೇವೆ" ಎಂದು ಹೇಳಿದರು.

ಹಿಂದಿನ ಶ್ಲೋಕದಲ್ಲಿ ದೇವರ ನಿರ್ಮಾಲ್ಯವನ್ನು ಬ್ರಹ್ಮಾದಿಗಳು ಧರಿಸುತ್ತಾರೆ ಎಂದು ತಿಳಿಯಿತು. ಇಲ್ಲಿ ಮಾನವರು ಧರಿಸಬೇಕು ಎಂದು ತಿಳಿಯುತ್ತದೆ. ದೇವರ ನಿರ್ಮಾಲ್ಯವನ್ನು ಇತರ ದೇವತೆಗಳಿಗೆ ಅರ್ಪಿಸಿ ಅನಂತರವೇ ಮಾನವರು ಧರಿಸಲು ಅರ್ಹರು ಎಂದು ಒಟ್ಟು ಅಭಿಪ್ರಾಯ.

**ಸಂದೇಶ** : ದೇವರಿಗೆ ಅರ್ಪಿಸದ ಯಾವುದನ್ನೂ ನಾವು ಸ್ವೀಕರಿಸಬಾರದು.

**ಗಚ್ಛಂತು ಪತ್ಯುರ್ಗತಿಮಾಸು ನೈತಾಃ**
**ವಕ್ಷ್ಯಂತಿ ಗಾಢಂ ಪರಿರಂಭಣೇ ನಃ ।**
**ಸ್ವಾಯಾಸಮಾಶಂಕ್ಯ ತದೀಯಗೇಯ**
**ಮಾಲಾಃ ಸಮಾಲಂಬ್ಯ ಕೃತಾಂಗಸಂಗಾಃ** ॥ ೧೨ ॥

ಗಚ್ಛಂತು=ಮುಂದೆ ಹೋಗಿರಿ; ಪತ್ಯುಃ=ಕೃಷ್ಣನ; ಗತಿಂ=ಗಮನವನ್ನು; ಆಸು=ಈ ಗೋಪಿಯರಲ್ಲಿ; ಏತಾಃ=ಈ ಪುಷ್ಪಗಳು; ನ ವಕ್ಷ್ಯಂತಿ=ಹೇಳುವುದಿಲ್ಲ; ಗಾಢಂ= ಗಟ್ಟಿಯಾಗಿ; ಪರಿರಂಭಣೇ=ಆಲಿಂಗನದ ಸಂದರ್ಭದಲ್ಲಿ; ನಃ=ನಮ್ಮ; ಸ್ವಾಯಾಸಂ=ತಮ್ಮ ಆಯಾಸವನ್ನು; ಆಶಂಕ್ಯ=ಸಂಶಯಿಸಿ; ತದೀಯ=ಕೃಷ್ಣನ ಕೊರಳಿನ; ಗೇಯ=ಚಂದದ; ಮಾಲಾಃ=ಪುಷ್ಪಗಳ ಮಾಲಿಕೆಗಳನ್ನು; ಸಮಾಲಂಬ್ಯ=ಆಶ್ರಯಿಸಿ; ಕೃತ=ಮಾಡಲ್ಪಟ್ಟ; ಅಂಗ=ದೇಹದ; ಸಂಗಾಃ=ಸಂಬಂಧವುಳ್ಳ.

ಈ ಪುಷ್ಪಗಳು ಮಾತನಾಡದಿರುವಾಗ ಒಬ್ಬಳು ಹೇಳುತ್ತಾಳೆ: ಮುಂದೆ ಹೋಗಿರಿ. ಈ ಪುಷ್ಪಗಳು ನಮಗೆ ದೇವರನ್ನು ತಿಳಿಸುವುದಿಲ್ಲ. ಯಾಕೆಂದರೆ ಇವುಗಳು ತಿಳಿಸಿದರೆ ನಾವು ಕೃಷ್ಣನನ್ನು ಪತ್ತೆಹಚ್ಚುತ್ತೇವೆ. ಪ್ರೀತಿಯಿಂದ ಆತನನ್ನು ಆಲಿಂಗಿಸುತ್ತೇವೆ. ಆತನ ಕೊರಳಲ್ಲಿ ಚಂದದ ಈ ಪುಷ್ಪಗಳ ಮಾಲಿಕೆ ಇರುತ್ತದೆ. ಆಲಿಂಗನದ ರಭಸದಲ್ಲಿ ಅವುಗಳು ಪುಡಿಯಾಗುತ್ತವೆ. ಈ ಭಯ ಈ ಪುಷ್ಪಗಳಿಗೆ. ಈ ಪುಷ್ಪಗಳು ಅಧಮ ವರ್ಗದವುಗಳು. ತಮಗೆ ಅಪಕಾರವಾಗಬಹುದು ಎನ್ನುವ ಭಯದಿಂದ ಇನ್ನೊಬ್ಬರಿಗೆ ಉಪಕಾರವನ್ನು ಮಾಡುವುದಿಲ್ಲ.

**<u>ಸಂದೇಶ</u>** : ದೇವರನ್ನು ನಾವು ಎಲ್ಲದ್ದಕ್ಕಿಂತ ಹೆಚ್ಚಾಗಿ ಪ್ರೀತಿಸಬೇಕು.

**ಅನ್ಯಾಂಚನಾತ್ ಮುಕುಲಿತಂ ಸರಸೀರುಹಾಸ್ಯಂ**
**ಅನ್ವೇತಿ ಮಂದಮರುತಾ ಚಲಿತಂ ದ್ವಿರೇಫಃ ।**
**ಸನ್ನಾಥ ಪಶ್ಯ ಸದಯಾಗ್ರಗ ಸಾಧುವಶ್ಯ**
**ಕಿಂ ನಃ ಪರಿತ್ಯಜಸಿ ಖಿನ್ನಹೃದಃ ತ್ವದರ್ಥೇ** ॥ ೧೩ ॥

ಅನ್ಯ=ಇನ್ನೊಂದೆಡೆ; ಅಂಚನಾತ್=ಗಮನದಿಂದ; ಮುಕುಲಿತಂ=ಮುದುಡಿದ; ಸರಸೀರುಹ=ಕಮಲದ; ಆಸ್ಯಂ=ಮುಖವನ್ನು; ಅನ್ವೇತಿ=ಅನುಸರಿಸುತ್ತದೆ; ಮಂದಮರುತಾ=ನಿಧಾನವಾದ ಗಾಳಿಯಿಂದ; ಚಲಿತಂ=ಅಲುಗಾಡುವ; ದ್ವಿರೇಫಃ= ದುಂಬಿಯು; ಸನ್ನಾಥ=ಸಜ್ಜನರಿಗೆ ಒಡೆಯನೆ; ಪಶ್ಯ=ನೋಡು; ಸದಯಾಗ್ರಗ= ದಯೆವುಳ್ಳವರಲ್ಲಿ ಮೊದಲಿಗನೇ; ಸಾಧು=ಸಜ್ಜನರಿಗೆ; ವಶ್ಯ=ಅಧೀನನೇ; ಕಿಂ=ಯಾಕೆ; ನಃ=ನಮ್ಮನ್ನು; ಪರಿತ್ಯಜಸಿ=ಬಿಡುತ್ತಿ; ಖಿನ್ನ=ದುಃಖಿತವಾದ; ಹೃದಃ=ಮನಸ್ಸುಳ್ಳ; ತ್ವದರ್ಥೇ=ನಿನಗಾಗಿ.

ಕೊಳದಲ್ಲಿ ಇರುವ ತಾವರೆಯ ಮೇಲೆ ಇರುವ ದುಂಬಿಯನ್ನು ಕಂಡು ಆ ಎರಡನ್ನೂ ಪತಿ–ಪತ್ನಿಯರು ಎಂಬ ಭಾವನೆಯಿಂದ ಈ ಗೋಪಿಯರು ಕೃಷ್ಣನಲ್ಲಿ ಪರೋಕ್ಷವಾಗಿ ಈ ರೀತಿ ಹೇಳುತ್ತಾರೆ: ದುಂಬಿಯು ಬಳ್ಳಿಯೆಂಬ ಹುಡುಗಿಯನ್ನು ಪ್ರೀತಿಸಿ ಈಗ ಕಮಲದೆಡೆ ಬರುತ್ತಿದೆ. ಇದರಿಂದಾಗಿ ಕಮಲವು ಸಿಟ್ಟಾಗಿದೆ. ಸಾಯಂಕಾಲ ವಾದ್ದರಿಂದ ಕಮಲವು ಮುದುಡಿದೆ. ಮುದುಡುವಿಕೆಯು ಸಿಟ್ಟಿನ ಸಂಕೇತ. ನಿಧಾನವಾದ ಗಾಳಿಯಿಂದ ಕಮಲವು ಚಲಿಸುತ್ತಿದೆ. ಇದು ಪತಿಯಾದ ದುಂಬಿಗೆ ತಾನು ಒಪ್ಪಿಗೆ ಕೊಡುವುದಿಲ್ಲ ಎಂದು ಅರ್ಥ. ನಿಧಾನವಾದ ಗಾಳಿಯಿಂದ ಎಂಬುದು ದುಂಬಿಯ ಅಪರಾಧಿತನದ ಸಂಕೇತ. ಈ ದುಂಬಿಯು ಧ್ವನಿಗೈಯುತ್ತಿದೆ ಅಂದರೆ ಕಮಲವನ್ನು ಹೊಗಳುತ್ತಿದೆ ಎಂದು ಅರ್ಥ. ಇದರಿಂದ ಕಮಲವು ತುಷ್ಟವಾಗಿದೆ. ಇದನ್ನು ಸರಸೀರುಹ ನೀರಲ್ಲಿ ಬೆಳೆದ ಎಂಬ ಶಬ್ದವು ತಿಳಿಸುತ್ತದೆ.

ಕೃಷ್ಣ ನೀನು ಒಳ್ಳೆಯವರಿಗೆ ಒಡೆಯ. ಅವರು ಹೇಳಿದಂತೆ ಕೇಳುವವ; ಕರುಣಾಸಾಗರ. ದುಂಬಿಗಳು ತಪ್ಪು ಮಾಡಿದ್ದಾವೆ. ಆದ್ದರಿಂದ ಕಮಲಗಳು ಸಿಟ್ಟಾಗಿವೆ. ಆಗ ದುಂಬಿಯು ತಾನಾಗಿಯೇ ಅವುಗಳನ್ನು ತೃಪ್ತಿಪಡಿಸಲು ಪ್ರಯತ್ನಿಸುತ್ತಿದೆ. ನಾವು ಹಾಗಲ್ಲ. ನೀನು ಲಕ್ಷ್ಮಿಯಲ್ಲಿ ಆಸಕ್ತನಾಗಿದ್ದರೂ ನಾವು ನಿನ್ನಲ್ಲಿ ಸಿಟ್ಟಾಗಿಲ್ಲ. ನಿನಗಾಗಿ ಬಹಳ ತಪಿಸುತ್ತಿದ್ದೇವೆ. ಹೀಗಿರುವಾಗ ನಮ್ಮನ್ನು ಯಾಕೆ ತ್ಯಜಿಸುತ್ತಿ?

**<u>ಸಂದೇಶ</u>** : ದೇವರು ನಮಗೆ ಎಷ್ಟು ಕ್ಲೇಶಗಳನ್ನು ಕೊಟ್ಟರೂ ನಾವು ದೇವರಲ್ಲಿ ಸಿಟ್ಟಾಗಬಾರದು.

**ಹೇ ಪದ್ಮಿನಿ ಪ್ರಿಯಮುದೀರಯ ಪೀವರಾಂಸಂ**
**ನಾರಾಯಣಃ ಸ ತು ತವಾಸ್ತ್ಯುದರೇ ನಿಗೂಢಃ ।**
**ತ್ವಂ ಹಿ ಸ್ವಭಾವಮಧುರೇತಿ ಬತಾರ್ಥ್ಯಸೇಂಬ**
**ನೋ ಚೇತ್ ದೃಗಂಬುನಿಕರೈಃ ಕಲುಷಾಃ ಖಲು ಸ್ಯಾಃ ॥ ೧೪ ॥**

**ಹೇ ಪದ್ಮಿನಿ=ಕಮಲಗಳ ಕೊಳವೇ; ಪ್ರಿಯಂ=ಇಷ್ಟನಾದ ಕೃಷ್ಣನನ್ನು; ಉದೀರಯ=ಹೇಳು; ಪೀವರ=ಪುಷ್ಟವಾದ; ಅಂಸಂ=ಹೆಗಲುಳ್ಳ; ನಾರಾಯಣಃ =ನಾರಾಯಣನು; ಸತು=ಆತನಾದರೂ; ತವ=ನಿನ್ನ; ಅಸ್ತಿ=ಇದ್ದಾನೆ; ಉದರೇ=ಹೊಟ್ಟೆಯಲ್ಲಿ; ನಿಗೂಢಃ=ಅಡಗಿದವನಾಗಿ; ತ್ವಂಹಿ=ನೀನಾದರೂ; ಸ್ವಭಾವ=ಸಹಜವಾಗಿ; ಮಧುರಾ=ಸಿಹಿಯು; ಇತಿ=ಎಂದು; ಬತ=ಕಷ್ಟವು; ಅರ್ಥ್ಯಸೇ=ಪ್ರಾರ್ಥಿಸಲ್ಪಡುತ್ತಿ; ಅಂಬ=ತಾಯಿಯೇ; ನೋ ಚೇತ್=ಇಲ್ಲದಿದ್ದರೆ; ದೃಕ್=ಕಣ್ಣಿನ; ಅಂಬು=ನೀರುಗಳ; ನಿಕರೈಃ=ಸಮೂಹಗಳಿಂದ; ಕಲುಷಾ=ಕಲುಷಿತಳು; ಸ್ಯಾಃ=ಆಗುತ್ತಿ.**

ಕಮಲಗಳ ಕೊಳದಲ್ಲಿ ಈ ಗೋಪಿಯರು ಕೃಷ್ಣನನ್ನು ವಿಚಾರಿಸುತ್ತಾರೆ. ಕಮಲಗಳು ರಮೆಯ ವಾಸಸ್ಥಳ. ರಮೆಯು ಇರುವಲ್ಲಿ ರಮಾಪತಿ ಇರುತ್ತಾನೆ. ಆ ದೃಷ್ಟಿಯಿಂದ ಕೇವಲ ಕೊಳದಲ್ಲಿ ಪ್ರಶ್ನಿಸದೆ ಕಮಲದ ಕೊಳದಲ್ಲಿ ವಿಚಾರಿಸಿದರು –ಕೃಷ್ಣನಿಗೆ ನಾರಾಯಣ ಎಂಬ ಹೆಸರಿದೆ. ನಾರಾಯಣ ಎಂದರೆ ನೀರಿನಲ್ಲಿ ಇರುವವನು ಎಂದರ್ಥ. ಆದ್ದರಿಂದ ಕೊಳವೇ ನಿನ್ನಲ್ಲಿರುವ ಕೃಷ್ಣನನ್ನು ತೋರಿಸು. ಆತನು ದಷ್ಟವಾದ ಹೆಗಲುಳ್ಳವನು. ನಿನ್ನಲ್ಲಿ ಯಾಕೆ ಕೇಳುವುದು ಎಂದರೆ –ನೀನು ಸ್ವಾಭಾವಿಕವಾಗಿ ಮಾಧುರ್ಯವುಳ್ಳವನು. ಆದ್ದರಿಂದ ಇನ್ನೊಬ್ಬರ ದುಃಖಗಳಿಗೆ ನೀನು ಸ್ಪಂದಿಸುತ್ತಿ. ನೀನು ಕೃಷ್ಣನನ್ನು ತೋರಿಸದಿದ್ದರೆ ನಾವು ನಿನ್ನ ಬಳಿಯಲ್ಲಿ ಕುಳಿತು ಅಳುತ್ತೇವೆ. ನಮ್ಮ ಬಿಸಿಯಾದ ಕಣ್ಣೀರಿನಿಂದ ನಿನ್ನ ನೀರನ್ನು ಬಿಸಿಮಾಡುತ್ತೇವೆ. ಆಗ ನಿನ್ನ ಮಾಧುರ್ಯ ಹೋಗುತ್ತದೆ. ಇಲ್ಲಿ ಗೋಪಿಯರು ನೀರಿನ ಮಾಧುರ್ಯವನ್ನು ಸರಿಯಾಗಿ ಉಪಯೋಗಿಸಿಕೊಂಡದ್ದನ್ನು ರಾಜರು ತಿಳಿಸುತ್ತಾರೆ.

**ಸಂದೇಶ** : ದೇವರ ಬಗ್ಗೆ ತಿಳಿಸಿಕೊಡುವ ಗುರುಗಳು ಸಾತ್ವಿಕರೇ ಆಗಿರಬೇಕು. ಜ್ಞಾನತೃಷಾ ಇದೆ ಎಂದು ಸಿಕ್ಕಿದವರನ್ನೆಲ್ಲಾ ಗುರುಗಳನ್ನಾಗಿ ಸ್ವೀಕರಿಸುವುದು ಸರಿಯಲ್ಲ. ಗುರುಗಳನ್ನೂ ಪರೀಕ್ಷಿಸಿಯೇ ತೆಗೆದುಕೊಳ್ಳಬೇಕು.

**ಪತ್ಯಾ ಸಮಂ ತವ ಜಲೇ ವಿಮಲೇ ವಿಹೃತ್ಯ**
**ಕುರ್ಮಃ ಕುಚೌಘಕೃತಕುಂಕುಮರಂಜಿತಾಂ ತ್ವಾಮ್ ।**
**ಮುಗ್ಧಪ್ರಸನ್ನಮುಖಸಾರಸಶೋಭಮಾನಾಂ**
**ಸ್ವರ್ಮುಕ್ತಪುಷ್ಪನಿಕರೈಃ ಪರಿತಃ ಸುಪೂರ್ಣಾಮ್ ॥ ೧೫ ॥**

ಪತ್ಯಾ=ಪತಿಯಾದ ಕೃಷ್ಣನಿಂದ; ಸಮಂ=ಕೂಡಿಕೊಂಡು; ತವ=ನಿನ್ನ ಜಲೇ= ನೀರಿನಲ್ಲಿ; ವಿಮಲೇ=ನಿರ್ಮಲವಾದ; ವಿಹೃತ್ಯ=ಆಡಿ; ಕುರ್ಮಃ=ಮಾಡುವೆವು; ಕುಚ= ಸ್ತನಗಳ; ಓಘ=ಸಮೂಹಗಳಲ್ಲಿ; ಕೃತ=ಇರುವ; ಕುಂಕುಮ=ಕೇಸರಿಯಿಂದ; ರಂಜಿತಾಂ= ಅಲಂಕೃತಳನ್ನಾಗಿ; ತ್ವಾಂ=ನಿನ್ನನ್ನು; ಮುಗ್ಧ=ಚಂದದ; ಪ್ರಸನ್ನ=ತಿಳಿಯಾದ; ಮುಖ= ಮುಖಗಳೆಂಬ; ಸಾರಸ=ಕಮಲಗಳಿಂದ; ಶೋಭಮಾನಾಂ=ಅಲಂಕೃತಳನ್ನಾಗಿ; ಸ್ವಃ= ಸ್ವರ್ಗದಿಂದ; ಮುಕ್ತ=ಹಾಕಲ್ಪಟ್ಟ; ಪುಷ್ಪ=ಹೂಗಳ; ನಿಕರೈಃ=ಗುಂಪುಗಳಿಂದ; ಪರಿತಃ= ಸುತ್ತಲೂ; ಸುಪೂರ್ಣಾಂ=ಕೂಡಿದ್ದನ್ನಾಗಿ.

ಈ ಕೊಳಗಳು ದೇವರನ್ನು ತೋರಿಸಿದರೆ ಗೋಪಿಯರು ಇವನಿಂದ ಕೂಡಿ ಈ ಕೊಳಗಳಲ್ಲಿ ವಿಹರಿಸುತ್ತಾರೆ. ಈ ಗೋಪಿಯರು ತಮ್ಮ ಮೈತುಂಬಾ ಕುಂಕುಮಕೇಸರಿಯನ್ನು ಹಚ್ಚಿಕೊಂಡಿರುತ್ತಾರೆ. ಅದೆಲ್ಲಾ ಈ ಕೊಳದಲ್ಲಿ ಸೇರುತ್ತದೆ. ಆಗ ನೀರು ಪರಿಮಳಿತವಾಗುತ್ತದೆ. ಈ ಗೋಪಿಯರು ಬಹಳ ಚೆಲುವೆಯರು. ಇವರು ಕಂಠಲಗ್ನಜಲದಲ್ಲಿ ವಿಹರಿಸುತ್ತಾರೆ. ಆಗ ಇವರ ಮುಖಕಮಲದಿಂದ ಈ ಕೊಳವು ಶೋಭಿಸುತ್ತದೆ. ವಿಹಾರದ ಸಮಯದಲ್ಲಿ ದೇವತೆಗಳು ಮೇಲಿಂದ ಹೂಮಳೆಗೈಯುತ್ತಾರೆ. ಸ್ವರ್ಗದ ಹೂಗಳಿಂದ ಕೊಳವು ತುಂಬಿರುತ್ತದೆ.

**ಸಂದೇಶ** : ದೇವರನ್ನು ಕಾಣುವವರಿಗೂ ಕಾಣಿಸಿಕೊಡುವವರಿಗೂ ಫಲವು ಇದೆ. ಫಲವಾದರೂ ಈ ಜನ್ಮದಲ್ಲಿಯೇ ಸಿಗುತ್ತದೆ. ಜನ್ಮಾಂತರಕ್ಕೆ ಕಾಯಬೇಕಾಗಿಲ್ಲ.

**ನೈಷಾ ನವಾಂಬುದತನುಂ ಕಥಯೇತ್ ನಿಜಂ ನಃ**
**ಸ್ವೀಯಪ್ರವಾಹಭರಧಿಕ್ಕೃತಲೋಕವಾರ್ತಾ ।**
**ಸಾ ಚುಂಬಿತಾಖಿಲಸರೋರುಹಕೋಮಲಾಸ್ಯಾ**
**ಭೃಂಗಾವಲೀಭಿರಿತರಾರ್ತಿಮಜಾನತೀ ಯಾ** ॥ ೧೬ ॥

ಏಷಾ=ಈ ಕೊಳವು; ನವ=ಹೊಸದಾದ; ಅಂಬುದ=ಮೋಡದಂತೆ; ತನುಂ= ದೇಹವುಳ್ಳ; ನ ಕಥಯೇತ್=ಹೇಳುವುದಿಲ್ಲ; ನಿಜಂ=ಕೃಷ್ಣನನ್ನು; ನಃ=ನಮಗೆ; ಸ್ವೀಯ= ತನ್ನ; ಪ್ರವಾಹ=ಪ್ರವಾಹದ; ಭರ=ರಭಸದಿಂದ; ಧಿಕ್ಕೃತ=ತಿರಸ್ಕರಿಸಿದ; ಲೋಕವಾರ್ತಾ= ಲೋಕದ ವಾರ್ತೆಯುಳ್ಳ; ಸಾ=ಆ; ಚುಂಬಿತ=ಮುದ್ದಿಸಲ್ಪಟ್ಟ; ಅಖಿಲ=ಎಲ್ಲಾ; ಸರೋರುಹ= ಕಮಲಗಳೆಂಬ; ಕೋಮಲ=ಚಂದದ; ಆಸ್ಯಾ=ಮುಖವುಳ್ಳ; ಭೃಂಗ=ದುಂಬಿಗಳ; ಆವಲೀಭಿಃ= ಸಮೂಹಗಳಿಂದ; ಇತರ=ಬೇರೆಯವರ; ಆರ್ತಿಂ=ದುಃಖವನ್ನು ; ಅಜಾನತೀ= ತಿಳಿಯದಿರುವ; ಯಾ=ಯಾವ.

ನೀಲಮೇಘಶ್ಯಾಮನಾದ ಕೃಷ್ಣನನ್ನು ಈ ಕೊಳವು ತಿಳಿಸುವುದಿಲ್ಲ. ತನ್ನ ಪ್ರವಾಹದ ಗಲಾಟೆಯಲ್ಲಿ ನಮ್ಮ ಮಾತನ್ನು ಕೇಳಿಸಿಕೊಳ್ಳುವುದೂ ಇಲ್ಲ. ಈ ಕೊಳದಲ್ಲಿ ಅನೇಕ

ಕಮಲಗಳಿವೆ. ಇವು ಅರಳಿದ ಮುಖಗಳಂತೆ ತೋರುತ್ತವೆ. ಈ ಮುಖಗಳನ್ನು ದುಂಬಿಗಳು ಮುದ್ದಿಡುತ್ತವೆ. ಇದರಿಂದ ಕೊಬ್ಬಿದ ಈ ಕೊಳಗಳು ಇನ್ನೊಬ್ಬರ ದುಃಖವನ್ನು ಕೇಳುವಷ್ಟು ತಾಳ್ಮೆಯನ್ನೂ ಹೊಂದಿಲ್ಲ. ಉತ್ತರವನ್ನು ಕೊಡುವುದಿಲ್ಲ ಎಂದು ಏನು ಹೇಳುವುದು?

**ಸಂದೇಶ** : ಎಂತಹ ಮಾಧುರ್ಯ ಇದ್ದರೂ ಅಹಂಕಾರ ಇತ್ತೆಂದರೆ ಎಲ್ಲರ ಅವಕೃಪೆಗೆ ಪಾತ್ರರಾಗಬೇಕಾಗುತ್ತದೆ.

**ಪದ್ಮಾನಿ ಶಂಸತ ಪಯೋಬ್ಧಿಸುತಾಕಲತ್ರಂ**
**ಯುಷ್ಮದ್ವನೇಷು ವಸತೀತಿ ವದಂತಿ ಸಂತಃ ।**
**ಕುಕ್ಷಿಸ್ಥಿತಾಯ ವಿಧಯೇಽಪರಥಾ ಲಲಾಟ–**
**ಲೇಖಾಂ ಸ್ಮ ಜೀವನಕೃತೇ ರಚಿತಾಂ ವಿಮಾರ್ಷ್ಟುಮ್ ॥ ೧೭ ॥**

ಪದ್ಮಾನಿ=ಕಮಲಗಳೇ; ಶಂಸತ=ಹೇಳಿರಿ; ಪಯೋಬ್ಧಿ=ಕ್ಷೀರಸಮುದ್ರದ; ಸುತಾ=ಮಗಳಾದ ರಮೆಯ; ಕಲತ್ರಂ=ಪತಿಯನ್ನು; ಯುಷ್ಮತ್=ನಿಮ್ಮ; ವನೇಷು=ಕಾಡುಗಳಲ್ಲಿ; ವಸತಿ=ಇರುತ್ತಾನೆ; ಇತಿ=ಎಂದು; ವದಂತಿ=ಹೇಳುತ್ತಾರೆ; ಸಂತಃ=ಸಜ್ಜನರು; ಕುಕ್ಷಿ=ಉದರದಲ್ಲಿ; ಸ್ಥಿತಾಯ=ಇರುವ; ವಿಧಯೇ= ಚತುರ್ಮುಖನಿಗೆ; ಅಪರಥಾ=ಇಲ್ಲದಿದ್ದರೆ; ಲಲಾಟ=ಹಣೆಯ; ರೇಖಾಂ=ಬರಹವನ್ನು; ಜೀವನಕೃತೇ= ಬದುಕಲು; ರಚಿತಾಂ=ಬರೆದಿರುವ; ವಿಮಾರ್ಷ್ಟುಂ=ಅಳಿಸಲು.

ತುಲಸೀ ಕಾನನಂ ಯತ್ರ ಯತ್ರ ಪದ್ಮವನಾನಿ ಚ । ವಸಂತಿ ವೈಷ್ಣವಾಃ ಯತ್ರ ತತ್ರ ಸನ್ನಿಹಿತೋ ಹರಿಃ ॥ ತುಳಸೀ ಗಿಡಗಳು, ಕಮಲಗಳು, ವೈಷ್ಣವರು ಇರುವಲ್ಲಿ ದೇವರು ಇರುವನು ಎಂದು ಸ್ಮೃತಿ ಹೇಳುತ್ತಿದೆ. ಇದನ್ನು ತಿಳಿದ ಗೋಪಿಯರು ಕಮಲಗಳಲ್ಲಿ ಕೃಷ್ಣನನ್ನು ಬೇಡುತ್ತಾರೆ. ಎಲೋ ಕಮಲಗಳೇ, ಕೃಷ್ಣನು ನಿಮ್ಮಲ್ಲಿರುವನೆಂದು ತಿಳಿದವರು ಹೇಳುತ್ತಾರೆ. ಆತ ರಮಾಪತಿ. ರಮೆಯು ನಿಮ್ಮಲ್ಲಿ ಇರುವಳು. ಅವಳಿಗೆ 'ಪದ್ಮಾಲಯಾ' ಕಮಲವನ್ನೇ ಮನೆಯನ್ನಾಗಿ ಮಾಡಿಕೊಂಡವಳು ಎಂದು ಹೆಸರಿದೆ. ರಮೆಯು ಇರುವಲ್ಲಿ ರಮಾಪತಿಯು ಇರುವುದು ಸಹಜ. ಆತನನ್ನು ನಮಗೆ ತಿಳಿಸಿರಿ.

ಕೃಷ್ಣನನ್ನು ತಿಳಿಸದಿದ್ದರೆ ಇನ್ನೊಂದು ಕೆಲಸಮಾಡಿ –ದೇವರದರ್ಶನ ಇಲ್ಲದ ಜೀವನ ಹಾಳು. ಇಷ್ಟು ವರ್ಷ ಬದುಕಬೇಕೆಂದು ಹಣೆಯಲ್ಲಿ ಬರೆದವನು ಬ್ರಹ್ಮನು. ಆತನೂ ನಿಮ್ಮಲ್ಲಿಯೇ ಇರುವನು. ಆತನಿಗೆ 'ಪದ್ಮಾಸನ' ಕಮಲವನ್ನೇ ಆಸನವನ್ನಾಗಿ ಮಾಡಿಕೊಂಡವನು ಎಂಬ ಹೆಸರಿದೆ. ಆತನಿಗೆ ತಿಳಿಸಿರಿ –ನಮ್ಮ ಹಣೆಯಬರಹವನ್ನು ಅಳಿಸಲು.

**ಸಂದೇಶ** : ಪವಿತ್ರ ವಸ್ತುಗಳು ಇರುವಲ್ಲಿ ದೇವರು ಇರುವನು. ಆದ್ದರಿಂದ ಮನೆಯಲ್ಲಿ

ನಾವು ಮಾತ್ರ ಇದ್ದರೆ ಸಾಲದು. ತುಳಸ್ಯಾದಿಗಳು ಇರಬೇಕು. ವೈಷ್ಣವರು ಬಂದು ಹೋಗುತ್ತಿರಬೇಕು. ದೇವರದರ್ಶನ ಇಲ್ಲದ ಜೀವನ ಹಾಳು. ದೇವರ ವಿಸ್ಮರಣೆ ಯಿರುವುದಾದರೆ ಅನಂತರ ಒಂದು ಕ್ಷಣವೂ ಬದುಕಬಾರದು.

ಇಮಾನಿ ಲಕ್ಷ್ಮ್ಯಾಃ ಕಿಲ ನಃ ಸಪತ್ನ್ಯಾಃ
ಸಮಾನನಾಮಾನಿ ಸದಾ ಗೃಹಾಣಿ ।
ಅಸ್ತ್ರಾಣಿ ಚಾಸ್ಮಾನ್ ದ್ವಿಷತಸ್ತದೀಯ–
ಪುತ್ರಸ್ಯ ತದ್ಗಚ್ಛತ ದೇಶಮನ್ಯಮ್ ॥ ೧೮ ॥

ಇಮಾನಿ=ಈ ತಾವರೆಗಳು; ಲಕ್ಷ್ಮ್ಯಾಃ=ಲಕ್ಷ್ಮಿಯ; ನಃ=ನಮ್ಮ; ಸಪತ್ನ್ಯಾಃ= ಸಪತ್ನಿಯಾದ; ಸಮಾನನಾಮಾನಿ=ಒಂದೇ ರೀತಿಯ ಹೆಸರುಗಳುಳ್ಳವುಗಳು; ಸದಾ= ಯಾವಾಗಲೂ; ಗೃಹಾಣಿ=ಮನೆಗಳೂ ಕೂಡಾ; ಅಸ್ತ್ರಾಣಿ ಚ=ಬಾಣಗಳು; ಅಸ್ಮಾನ್= ನಮ್ಮನ್ನು; ದ್ವಿಷತಃ=ದ್ವೇಷಿಸುವ; ತದೀಯ=ರಮಾ ಸಂಬಂಧಿಯಾದ; ಪುತ್ರಸ್ಯ=ಕಾಮನ; ತತ್=ಆದ್ದರಿಂದ; ಗಚ್ಛತ=ನಡೆಯಿರಿ; ದೇಶಂ=ಜಾಗವನ್ನು; ಅನ್ಯಂ=ಇನ್ನೊಂದು.

ಈ ಹೂಗಳಿಗೆ ಕಮಲ ಎಂದು ಹೆಸರು. ಲಕ್ಷ್ಮಿಗೂ ಕಮಲ ಎಂದು ಹೆಸರು. ಲಕ್ಷ್ಮಿಯು ನಮಗೆ ಸವತಿಯು. ಸವತಿಮತ್ಸರವು ಸಹಜ. ಅಂತಹ ಲಕ್ಷ್ಮಿಯ ಹೆಸರೇ ಇವುಗಳಿಗೂ ಇರುವುದರಿಂದ, ಇವುಗಳು ಲಕ್ಷ್ಮೀಪಕ್ಷಪಾತಿಗಳು. ಹಾಗೆಯೇ ರಮೆಗೆ ಆಶ್ರಯವನ್ನೂ ಕೊಡುವವುಗಳು ಕೂಡಾ. ಲಕ್ಷ್ಮಿಯ ಮಗನು ಕಾಮನು. ತಾಯಿಯಂತೆ ಮಗನೂ ನಮ್ಮನ್ನು ದ್ವೇಷಿಸುತ್ತಾನೆ. ಮಗನ ಬಾಣಗಳು ಈ ಕಮಲಗಳು. ಆದ್ದರಿಂದ ಇವುಗಳಿಗೂ ನಮ್ಮಲ್ಲಿ ದ್ವೇಷ ಇದೆ. ಇಂತಹ ಸನ್ನಿವೇಶದಲ್ಲಿ ಈ ಹೂವುಗಳು ಖಂಡಿತವಾಗಿಯೂ ನಮಗೆ ಕೃಷ್ಣನನ್ನು ತೋರಿಸುವುದಿಲ್ಲ. ಆದ್ದರಿಂದ ಇಲ್ಲಿಂದ ಮುಂದೆ ಹೋಗೋಣ ಎಂದು ಗೋಪಿಯರು ಪರಸ್ಪರ ಮಾತನಾಡಿಕೊಂಡರು.

<u>ಸಂದೇಶ</u> : ದೇವರಿಗೆ ಅನೇಕ ಭಕ್ತರಿರುತ್ತಾರೆ. ಇವರಲ್ಲಿ ಉತ್ತಮ ಭಕ್ತರ ಪಕ್ಷವನ್ನು ಸಾತ್ವಿಕರು ವಹಿಸುತ್ತಾರೆ. ಲಕ್ಷ್ಮೀ ಹಾಗೂ ಗೋಪಿಯರು ದೇವರ ಭಕ್ತರು. ಕಮಲಗಳ ಅಭಿಮಾನಿದೇವತೆಗಳು ಲಕ್ಷ್ಮಿಯ ಪಕ್ಷಪಾತಿಗಳು. ಕೃಷ್ಣನನ್ನು ಪತಿಯನ್ನಾಗಿ ಆಶಿಸುವುದು ಅಂದರೆ ರಮೆಯ ಸ್ಥಾನಮಾನವನ್ನು ಇಚ್ಛಿಸುವುದು ಎಂದು ಅರ್ಥ. ಇದಕ್ಕೆ ಈ ಗೋಪಿಯರು ಅನರ್ಹರು. ಅಯೋಗ್ಯವಾದದ್ದನ್ನು ಆಶಿಸಿದರೆ ಸಾತ್ವಿಕರೂ ನಮಗೆ ಅಸ್ತ್ರಗಳಾಗುತ್ತಾರೆ.

ಹೇ ಚೂತ ಕೃಷ್ಣಪದವೀಂ ವದ ನಃ ಕೃಶಾನಾಂ
ಹೇ ನಾರಿಕೇಲ ಪನಸಾಮ್ಲ ಪರಾನ್ ಹಿ ಯೂಯಮ್ ।
ಪುಷ್ಣೀಥ ಪುಷ್ಪಫಲವಲ್ಕಲಮೂಲಪತ್ರ–
ಚ್ಛಾಯಾಸಮುಲ್ಲಸಿತಪಲ್ಲವಕೋಟರಾದ್ಯೈಃ ॥ ೧೯ ॥

**ಹೇ ಚೂತ**=ಎಲೋ ಮಾವಿನಮರವೇ; **ಕೃಷ್ಣಪದವೀಂ**=ಕೃಷ್ಣನ ದಾರಿಯನ್ನು, **ವದ**=ಹೇಳು; **ನಃ**=ನಮಗೆ; **ಕೃಶಾನಾಂ**=ನಾರಿಯರಿಗೆ; **ಹೇ ನಾರಿಕೇಲ**=ಎಲೋ ತೆಂಗಿನ ಮರವೇ; **ಹೇ ಪನಸ**=ಎಲೋ ಹಲಸಿನಮರವೇ; **ಆಮ್ಲ**=ಹುಣಸೇಮರವೇ; **ಪರಾನ್**= ಬೇರೆಯವರನ್ನು; **ಹಿ**=ಪ್ರಸಿದ್ಧ; **ಯೂಯಂ**=ನೀವು; **ಪುಷ್ಣೀಥ**=ಬೆಳೆಸುತ್ತೀರಿ; **ಪುಷ್ಪ**= ಹೂಗಳಿಂದ; **ಫಲ**=ಹಣ್ಣುಗಳಿಂದ' **ವಲ್ಕಲ**=ತೊಗಟೆಗಳಿಂದ; **ಮೂಲ**= ಬೇರುಗಳಿಂದ; **ಪತ್ರ**=ಎಲೆಗಳಿಂದ; **ಛಾಯಾ**=ನೆರಳಿನಿಂದ; **ಸಮುಲ್ಲಸಿತ**=ಶೋಭಿಸುವ; **ಪಲ್ಲವ**= ಚಿಗುರುಗಳಿಂದ; **ಕೋಟರ**=ಪೊಟರೆಗಳಿಂದ; **ಆದ್ಯೈಃ**=ಮೊದಲಾದ್ದರಿಂದ.

ಎಲೋ ಹಣ್ಣಿನ ಮರಗಳೇ, ನೀವು ಸರ್ವ ರೀತಿಯಿಂದಲೂ ನಿಮ್ಮನ್ನು ತ್ಯಾಗಮಾಡುವ ಮೂಲಕ ಎಲ್ಲರನ್ನು ಸಲಹುತ್ತೀರಿ. ಶತ್ರು, ಮಿತ್ರ ಎಂದು ಪಕ್ಷಪಾತ ಮಾಡುವುದಿಲ್ಲ. ಹೀಗಿರುವಾಗ ನಮಗೂ ನೀವು ಮಾತಿನ ಮೂಲಕ ಉಪಕಾರ ಮಾಡಿರಿ. ನಮಗೆ ದೇವರ ಇರುವಿಕೆಯನ್ನು ತಿಳಿಸಿರಿ. ನಿಮ್ಮನ್ನು ನಮಗಾಗಿ ತ್ಯಜಿಸಬೇಕಾಗಿಲ್ಲ.

**ಸಂದೇಶ** : ಈ ಫಲಗಳು ವ್ಯಕ್ತಿಯ ಬಾಹ್ಯ ಬೆಳವಣಿಗೆಗೆ ಕಾರಣಗಳು. ಕೇವಲ ದೇಹದ ಬೆಳವಣಿಗೆಗೆ ಕಾರಣಗಳಾದರೆ ಪ್ರಯೋಜನವಿಲ್ಲ. ಆಧ್ಯಾತ್ಮಿಕ ಬೆಳವಣಿಗೆಗೆ ಇವುಗಳನ್ನು ಉಪಯೋಗಿಸಿಕೊಳ್ಳಬೇಕು. ಅಂದರೆ ಈ ಫಲಗಳನ್ನು ಸವಿಯುವಾಗ ಇವುಗಳ ಅಭಿಮಾನಿದೇವತೆಗಳಲ್ಲಿ, ನೀವು ನನ್ನ ಮನಸ್ಸನ್ನು ದೇವರಲ್ಲಿ ನೆಲೆಗೊಳಿಸಿರಿ ಎಂದು ಪ್ರಾರ್ಥಿಸಬೇಕು.

**ತಿಂತ್ರಿಣ್ಯಾಸ್ವ ಯತಃ ಫಲಾನ್ಯಪಿ ಸದಾ ವಕ್ರಾಣಿ ತೇ ಪ್ರಾಣಿನಾಂ**
**ಸಾ ತ್ವಂ ತಾಡನಕರ್ಮಸೂಪಕುರುಷೇ ಕಿಂ ನಾರಿಕೇಲೇನ ನಃ ।**
**ಮಸ್ತೇ ಯಃ ಫಲಮಭ್ರಚುಂಬಿನಿ ನರಾಲಭ್ಯೇ ತ್ವಚಾ ಪಕ್ಷಿಣಾ–**
**ಪ್ಯಗ್ರಾಹ್ಯಂ ದಧದಧ್ವನೀನಮೃತಿದಂ ಶಸ್ತ್ರೇಣ ಸಾಧ್ಯಂ ಬಲಾತ್ ॥ ೨೦ ॥**

ತಿಂತ್ರಿಣಿ=ಹುಣಸೇ ಮರವೇ; ಆಸ್ವ=ಸುಮ್ಮನಿರು; ಯತಃ=ಯಾವ ಕಾರಣದಿಂದ; ಫಲಾನಿ ಅಪಿ=ಫಲಗಳೂ ಕೂಡಾ; ಸದಾ=ಯಾವಾಗಲೂ; ವಕ್ರಾಣಿ=ಡೊಂಕು; ತೇ=ನಿನ್ನ; ಪ್ರಾಣಿನಾಂ=ಪ್ರಾಣಿಗಳ; ಸಾ=ಅಂತಹ; ತ್ವಂ=ನೀನು; ತಾಡನಕರ್ಮಸು=ಹೊಡೆಯುವ ಕೆಲಸದಲ್ಲಿ; ಉಪಕುರುಷೇ=ಸಹಾಯಮಾಡುತ್ತಿ; ಕಿಂ=ಏನು; ನಾರಿಕೇಲೇನ=ತೆಂಗಿನ ಮರದಿಂದ' ನಃ=ನಮಗೆ; ಮಸ್ತೇ=ತುದಿಯಲ್ಲಿ; ಯಃ=ಯಾರು; ಫಲಂ=ಕಾಯಿಯನ್ನು; ಅಭ್ರ=ಗಗನವನ್ನು; ಚುಂಬಿನಿ=ಮುಟ್ಟುವ; ನರ=ಜನರಿಂದ; ಅಲಭ್ಯೇ=ಹೊಂದಲ ಸಾಧ್ಯವಾದ; ಪಕ್ಷಿಣಾಪಿ=ಹಕ್ಕಿಯಿಂದಲೂ; ಅಗ್ರಾಹ್ಯಂ=ಪಡೆಯಲು ಸಾಧ್ಯವಿಲ್ಲದ; ದಧತ್=ಧರಿಸಿರುವ; ಅಧ್ವನೀನ=ದಾರಿಯಲ್ಲಿ ಹೋಗುವವರಿಗೆ; ಮೃತಿದಂ=ಮರಣವನ್ನು ಕೊಡುವ; ಶಸ್ತ್ರೇಣ=ಕತ್ತಿಯಿಂದ; ಸಾಧ್ಯಂ=ಪಡೆಯಲು ಯೋಗ್ಯವು; ಬಲಾತ್=ಬಹು ಕ್ಲೇಶದಿಂದ.

ಎಲೋ ಹುಣಸೇಮರವೇ, ನಿನ್ನಿಂದ ಯಾವ ಉಪಕಾರವೂ ಇಲ್ಲ. ನಿನ್ನಲ್ಲಿ ಡೊಂಕುತನ ಇದೆ. ಕೆಲವು ಮರಗಳು ಡೊಂಕಾದರೂ ಫಲವು ನೇರವಾಗಿ ಇರುತ್ತದೆ. ಆದರೆ ಹುಣಸೇಮರದಲ್ಲಿ ಫಲವೂ ವಕ್ರ, ಆದ್ದರಿಂದ ಎಲ್ಲಾ ರೀತಿಯಿಂದಲೂ ವಕ್ರವಾದ ಈ ಮರವು ದೇವರನ್ನು ತೋರಿಸುವುದು ಬಹಳ ದೂರ.

ತೆಂಗಿನಮರವೂ ಹಾಗೆಯೇ –ಇದರ ಫಲವು ಬಹಳ ಎತ್ತರದಲ್ಲಿ ಇರುವುದು. ಮರವೂ ಬಹಳ ಉದ್ದಕ್ಕೆ ಬೆಳೆಯುತ್ತದೆ. ಮಾನವರಿಗೆ ಸುಲಭಸಾಧ್ಯವಲ್ಲ ಇದರ ಫಲವು. ಪಕ್ಷಿಗಳು ಆಕಾಶದಲ್ಲೇ ಹಾರುತ್ತವೆ. ಆದರೂ ಅವುಗಳಿಗೆ ಫಲದ ಪ್ರಾಪ್ತಿ ಇಲ್ಲ. ಯಾಕೆಂದರೆ ಈ ಮರದ ಫಲದ ಚರ್ಮವು ಅಷ್ಟು ದಪ್ಪ. ದಾರಿಹೋಕರು ನೆರಳಿಗಾಗಿ ಇದರ ಅಡಿಯಲ್ಲಿ ನಿಂತರೆ ಈ ಮರವು ತನ್ನ ಫಲವನ್ನು ಇವರ ತಲೆಮೇಲೆ ಬೀಳುವಂತೆ ಮಾಡುತ್ತದೆ. ಅನಂತರ ಸಾಯಿಸುತ್ತದೆ. ಈ ಫಲದ ಸಾರ ಇರುವುದು ಬಹಳ ಒಳಗೆ. ಆಯುಧ ಇಲ್ಲದೆ ಕೇವಲ ಕೈಯಿಂದ ಈ ಸಾರವನ್ನು ಪಡೆಯಲು ಸಾಧ್ಯವಿಲ್ಲ. ಆದ್ದರಿಂದ ಇದರ ತಂಟೆಯೇ ಬೇಡ.

<u>**ಸಂದೇಶ**</u> : ದೇವರ ಬಗ್ಗೆ ನಾವು ಚೆನ್ನಾಗಿ ತಿಳಿದಿರಬಹುದು. ಅಷ್ಟುಮಾತ್ರ ಸಾಲದು ಇತರರಿಗೂ ತಿಳಿಸಬೇಕು. ತಿಳಿಸುವ ಕ್ರಮವನ್ನು ಸುಲಭೀಕರಿಸಬೇಕು. ಇನ್ನೊಬ್ಬರಿಗೆ ಅರ್ಥವಾಗುವ ಪದಗಳನ್ನು ಬಳಸಬೇಕು. ಕಠಿಣಪದಗಳನ್ನೇ ಬಳಸಿದರೆ ಇನ್ನೊಬ್ಬರ ಅವಹೇಳನಕ್ಕೆ ಗುರಿಯಾಗಬೇಕಾಗುತ್ತದೆ.

**ಯಃ ಪಕ್ವಂ ಫಲಸಮ್ಮಿತಂ ಭುವಿ ಗತ್ಯೈಃ ಅಜ್ಞೇಯಮಾವೇಷ್ಟಿತಂ**
**ಧತ್ತೇ ದುರ್ಜರಕಂಟಕೈಃ ಸ ಪನಸಃ ಪ್ರಾಕ್ಕಾಕಭೋಗ್ಯೋ ಧ್ರುವಮ್ ।**
**ಚೂತೋಽಯಂ ಫಲಪುಷ್ಪತೋಷಿತಖಗಃ ಸ್ವೋಪಾಂತಗಾನಾಂ ನೃಣಾಂ**
**ಪಕ್ವಾನಿ ಪ್ರದಿಶನ್ ಸ ಚಾಪಿ ಮನಸಸ್ತೋಷಾಯ ನಃ ಸ್ಯಾತ್ ಸಖಿ ॥ ೨೧ ॥**

ಯಃ=ಯಾವ ಮರವು; ಪಕ್ವಂ=ಹಣ್ಣಾಗಿದ್ದರೂ; ಫಲಸಮ್ಮಿತಂ=ಹಣ್ಣಾದಂತೆ ಕಾಣದಿರುವ; ಭುವಿ=ನೆಲದಲ್ಲಿ; ಗತ್ಯೈಃ=ಇರುವವರಿಂದ; ಅಜ್ಞೇಯಂ=ತಿಳಿಯಲಸಾಧ್ಯವಾದ; ಆವೇಷ್ಟಿತಂ=ಆವೃತವಾದ; ಧತ್ತೇ=ಧರಿಸುತ್ತದೆ; ದುರ್ಜರ=ತೀಕ್ಷ್ಣವಾದ; ಕಂಟಕೈಃ= ಮುಳ್ಳುಗಳಿಂದ; ಸಃ=ಅಂತಹ; ಪನಸಃ=ಹಲಸಿನ ಮರವು; ಪ್ರಾಕ್=ಜನರಿಗಿಂತ ಮೊದಲು; ಕಾಕ=ಕಾಗೆಗಳಿಂದ; ಭೋಗ್ಯಃ=ತಿನ್ನಲು ಯೋಗ್ಯವಾದದ್ದು; ಧ್ರುವಂ=ನಿಶ್ಚಯ; ಚೂತಃ= ಮಾವಿನಮರವು; ಅಯಂ=ಈ; ಫಲ=ಹಣ್ಣುಗಳಿಂದ; ಪುಷ್ಪ=ಹೂಗಳಿಂದ; ತೋಷಿತ= ಸಂತೋಷಗೊಳಿಸಲ್ಪಟ್ಟ; ಖಗಃ=ಪಕ್ಷಿಗಳುಳ್ಳದ್ದಾಗಿ; ಸ್ವ=ತನ್ನ; ಉಪಾಂತ= ಸಮೀಪಕ್ಕೆ; ಗಾನಾಂ=ಬರತಕ್ಕ; ನೃಣಾಂ=ಜನರಿಗೆ; ಪಕ್ವಾನಿ=ಹಣ್ಣುಗಳನ್ನು' ಪ್ರದಿಶನ್ನಪಿ= ಕೊಟ್ಟರೂ; ನಚ=ಈ ಮರವಾದರೂ; ಮನಸಃ=ಮನಸ್ಸಿನ; ತೋಷಾಯ= ಸಂತೋಷ ಕ್ಕೋಸ್ಕರ; ನಸ್ಯಾತ್=ಆಗಲಿಕ್ಕಿಲ್ಲ; ಸಖಿ=ಗೆಳತಿಯೇ.

ಈ ಹಲಸಿನ ಮರವು ಒಂದು ವಿಚಿತ್ರ ಇದರ ಫಲವು ಹಣ್ಣಾಗಿದ್ದರೂ ಹಣ್ಣಾಗದಿದ್ದರೂ ಒಂದೇ ರೀತಿ. ಕೇವಲ ದರ್ಶನದಿಂದ ಏನೂ ಗೊತ್ತಾಗುವುದಿಲ್ಲ. ಸಾಲದ್ದಕ್ಕೆ ಈ ಫಲಕ್ಕೆ ಸುತ್ತಮುತ್ತ ಬಹಳ ಮುಳ್ಳುಗಳು. ಈ ಫಲವು ತನ್ನ ಜೋಪಾನವನ್ನೇ ಉದ್ದೇಶ ದಲ್ಲಿಟ್ಟುಕೊಂಡಿದೆ. ತುಂಬಾ ಸ್ವಾರ್ಥಿ. ಆದುದರಿಂದ ಈ ಫಲವನ್ನು ಮೊದಲು ನಿಕೃಷ್ಟ ಪ್ರಾಣಿಗಳೇ ಉಪಯೋಗಿಸಲಿ.

ಮಾವಿನ ವಿಚಾರವೇ ಬೇರೆ. ಇದು ತನ್ನ ಸಂಪತ್ತಿನಿಂದ ಎಲ್ಲರನ್ನೂ ತೋಷಿಸುತ್ತದೆ. ದಾರಿಹೋಕರಿಗೆ ಫಲವನ್ನು ಕೊಡುತ್ತದೆ. ಆದರೆ ದೇವರ ವಿಷಯದಲ್ಲಿ ಈ ಮರವು ನಮ್ಮ ಮುಂದೆ ಕೈಚೆಲ್ಲಿದೆ. ಆದ್ದರಿಂದ ಈ ಮರದಿಂದ ನಮಗೆ ಲಾಭವಿಲ್ಲ.

<u>**ಸಂದೇಶ**</u> : ಈ ಹಲಸಿನ ಮರಕ್ಕೆ ದೇವರು ಫಲವನ್ನು ಕೊಟ್ಟಿದ್ದಾನೆ. ಆದರೆ ಆ ಮರವು ತನ್ನ ಫಲವು ಪಕ್ವವಾಗಿದೆಯೆಂದು ತೋರಿಸಿಕೊಡುವುದಿಲ್ಲ. ಪಕ್ವವಾಗಿ ದೆಯೆಂದು ತೋರಿಸಿಕೊಟ್ಟು ಇನ್ನೊಬ್ಬರಿಗೆ ಸಹಾಯಮಾಡುವುದಿಲ್ಲ. ಆದ್ದರಿಂದ ಅದರ ಫಲವು ಅಯೋಗ್ಯರ ಪಾಲಾಯಿತು. ಹಾಗೆಯೇ ದೇವರು ಸಂಪತ್ತನ್ನು ಕೊಡುತ್ತಾನೆ. ಆದರೆ ಕೆಲವರು ದಾನಧರ್ಮಾದಿಗಳನ್ನು ಮಾಡುವುದಿಲ್ಲ. ಬಡವರಂತೆ ಇರುತ್ತಾರೆ. ಸಾಲದ್ದಕ್ಕೆ ತನಗೆ ತುಂಬಾ ಸಮಸ್ಯೆಗಳನ್ನು ಸುಮ್ಮನೆ ತಂದುಕೊಳ್ಳುತ್ತಾರೆ. ಹಲಸಿನಕಾಯಿಗೆ ಮುಳ್ಳುಗಳಂತೆ. ಅಂತಹವರ ಸಂಪತ್ತು ಅಯೋಗ್ಯರ ಪಾಲಾಗುತ್ತದೆ.

ಇನ್ನು ಕೆಲವರು ಮಾವಿನ ಫಲದಂತೆ ದಾನಮಾಡುತ್ತಾರೆ. ಆದರೆ ಯಾರಿಗೆ ಯಾವುದು ಬೇಕೋ ಅದನ್ನು ಕೊಡುವುದಿಲ್ಲ –ಈ ನಾರಿಯರಿಗೆ ಮಾವಿನ ಮರವು ದೇವರನ್ನು ಕೊಡದಂತೆ.

**ಕಂದರ್ಪಮಂತ್ರಿಣಿ ಸಮೀಯುಷಿ ಯಃ ಸರಾಗಃ**
**ತತ್ಪಕ್ಷಪಾತಿಪಿಕಗಾಯಕಹರ್ಷಹೇತುಃ ।**
**ತದ್ಬಂದಿನಃ ಶುಕಚಯಸ್ಯ ಸಖಾ ತದೀಯ–**
**ಬಾಣೌಘಜನ್ಮಧರಣೀ ಸ ಹಿ ಚೂತ ಏವ ॥ ೨೨ ॥**

ಕಂದರ್ಪ=ಕಾಮನ; ಮಂತ್ರಿಣಿ=ಮಂತ್ರಿಯು; ಸಮೀಯುಷಿ=ಬರುತ್ತಿರಲು; ಯಃ= ಯಾರು; ಸರಾಗಃ=ರಾಗದಿಂದ ಕೂಡಿದರೋ; ತತ್=ಆ ಮಾವಿನ ಮರದ; ಪಕ್ಷ=ಪಕ್ಷದಲ್ಲಿ; ಪಾತೀ=ಇರುವ; ಪಿಕ=ಕೋಗಿಲೆ ಎಂಬ; ಗಾಯಕ=ಹಾಡುಗಾರನ; ಹರ್ಷ= ನೆಮ್ಮದಿಗೆ; ಹೇತುಃ=ಕಾರಣವಾದ; ತತ್=ಕಾಮನ; ಬಂದಿನಃ=ಸ್ತುತಿಪಾಠಕರಾದ; ಶುಕ=ಗಿಳಿಗಳ; ಚಯಸ್ಯ=ಸಮೂಹಕ್ಕೆ; ಸಖಾ=ಮಿತ್ರನಾದ; ತದೀಯ=ಕಾಮನ; ಬಾಣ= ಬಾಣಗಳ; ಓಘ= ಸಮೂಹಕ್ಕೆ; ಜನ್ಮಧರಣೀ=ಉತ್ಪತ್ತಿ ಸ್ಥಾನವಾದ; ಸ ಏವ ಚೂತಃ ಹಿ=ಅದೇ ಮಾವಿನ ಮರವು.

ಈ ಮಾವಿನ ಮರವು ತೆಂಗಿನ ಮರದಂತೆ ಅಲ್ಲ. ತನಗೆ ಸಂಬಂಧಪಡದವರಿಗೂ ಫಲವನ್ನು ಕೊಡುತ್ತದೆ. ಆದರೆ ನಮಗೆ ಕೃಷ್ಣನನ್ನು ಕೊಡಲಿಕ್ಕಿಲ್ಲ ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ– ವಸಂತಮಾಸ ಬಂತೆಂದರೆ ಈ ಮರವು ಚಿಗುರುತ್ತದೆ. ಚಿಗುರುಗಳು ಕೆಂಪುಬಣ್ಣದಿಂದ ಕೂಡಿರುತ್ತವೆ. ಅಂದರೆ ರಾಗದಿಂದ ಕೂಡಿದೆ ಎಂದರ್ಥ. ವಸಂತವು ಕಾಮನ ಮಂತ್ರಿಯು. ಈ ಮರವು ಕಾಮನ ಮಂತ್ರಿಯಲ್ಲಿ ಪ್ರೀತಿ ಉಳ್ಳದ್ದು ಎಂದಾಯಿತು. ಈ ಮರವು ಚಿಗುರಿದಾಗ ಕೋಗಿಲೆಗಳು ಹಾಡುತ್ತವೆ ನೆಮ್ಮದಿಯಲ್ಲಿ ಇರುತ್ತದೆ. ಕೋಗಿಲೆಗಳು ಕಾಮನಿಗೆ ಹಿತವನ್ನು ಮಾಡುವವುಗಳು. ಗಿಳಿಗಳು ಕಾಮನನ್ನು ತಮ್ಮ ಮೃದುವಾದ ಮಾತಿನಿಂದ ಹೊಗಳುತ್ತವೆ. ಅಂತಹ ಗಿಳಿಗಳಿಗೆ ಈ ಮರವು ಗೆಳೆಯ. ಹಾಗೆಯೇ ಕಾಮನ ಐದು ಬಾಣಗಳಲ್ಲಿ ಒಂದು ಮಾವಿನಮರದ ಚಿಗುರು. ಈ ರೀತಿ ಕಾಮನ ಬಾಣಕ್ಕೆ ಜನ್ಮವನ್ನು ಕೊಡತಕ್ಕದ್ದು ಈ ಮರ. ಕಾಮನಂತೂ ನಮಗೆ ಶತ್ರು. ತನ್ನ ಬಾಣಗಳಿಂದ ನಮ್ಮ ಮನಸ್ಸನ್ನು ಹೊಡೆಯುತ್ತಾನೆ; ದುಃಖವನ್ನೂ ಕೊಡುತ್ತಾನೆ. ಶತ್ರುವಿನ ಪಕ್ಷದವರಿಗೆ ಸಹಾಯಮಾಡುವ ಈ ಮರವು ನಮಗೆ ನಿಶ್ಚಯವಾಗಿಯೂ ಸಹಾಯ ಮಾಡುವುದಿಲ್ಲ. ಆದ್ದರಿಂದ ಮುಂದೆ ಹೋಗೋಣ ಎಂದು.

**ಸಂದೇಶ** : ಶತ್ರುಗಳ ಪಕ್ಷದಿಂದ ನಾವು ಏನನ್ನೂ ನಿರೀಕ್ಷಿಸಬಾರದು.

**ಹೇ ಮಾಧವಿ ಪ್ರಾಂತನಿಗೂಢವಲ್ಲಿ**
**ಶ್ರೀಮಾನಿನೀಮಾನದಮಾದಿಶೇಹ ।**
**ದೇಹಿ ತ್ವದೀಯಾಂ ಸ್ಥಿತಿಮೇವ ನೋ ಚೇತ್**
**ನಾಮ್ನಾಽಪಿ ಯತ್ರಾಸ್ತಿ ಹಿ ಮಾಧವೀತ್ವಮ್** ॥ ೨೩ ॥

ಹೇ ಮಾಧವಿ=ಎಲೋ ಮಾಧವಿ ಎಂಬ ಬಳ್ಳಿಯೇ; ಪ್ರಾಂತ=ಸಮೀಪದಲ್ಲಿ; ನಿಗೂಢ= ಹುಟ್ಟಿದ; ವಲ್ಲಿ=ಬಳ್ಳಿ ಉಳ್ಳವಳೇ; ಶ್ರೀಮಾನಿನೀ=ರಮೆಗೆ; ಮಾನಂ= ಉಚ್ಚಸ್ಥಾನವನ್ನು; ದಂ=ಕೊಟ್ಟಿರುವ ಈಶನನ್ನು; ಆದಿಶ=ಕೊಡು; ಇಹ=ಇಲ್ಲಿ; ದೇಹಿ=ಕೊಡು; ತ್ವದೀಯಾಂ= ನಿನ್ನ; ಸ್ಥಿತಿಂ=ಅವಸ್ಥೆಯನ್ನು; ನೋಚೇತ್=ಇಲ್ಲದಿದ್ದರೆ; ನಾಮ್ನಾಽಪಿ=ಹೆಸರಿನಿಂದಲಾದರೂ; ಯತ್ರ=ಯಾವ ಬಳ್ಳಿಯಲ್ಲಿ; ಅಸ್ತಿ=ಇದೆ; ಮಾಧವೀತ್ವಂ=ಮಾಧವನ ಸಂಬಂಧಿತ್ವವು.

ಮಾಧವೀ ಎಂಬ ಬಳ್ಳಿಯನ್ನು ವಿಚಾರಿಸುತ್ತಾರೆ –ಎಲೋ ಮಾಧವಿಯೇ, ಕೃಷ್ಣನನ್ನು ತೋರಿಸು. ಆತನು ತಮಗೂ ಉನ್ನತ ಮಟ್ಟವನ್ನು ಒದಗಿಸಿದವನು. ರಮೆಗೆ ಸದಾ ಬೇಕಾದವನು. ನಾವಿಲ್ಲದಿದ್ದರೂ ರಮೆಯಿಂದ ಸದಾ ನೆಮ್ಮದಿಪಡುವವನು. ನಮ್ಮ ಅಪೇಕ್ಷೆ ಆತನಿಗೆ ಇರಲಿಕ್ಕಿಲ್ಲ. ಆದರೆ ನಮಗೆ ಆತನೇ ಬೇಕು. ನೀನು ಅನೇಕ ಬಳ್ಳಿಗಳ ಜೊತೆಗೆ ಇರುವವಳು. ನಾವು ಕೃಷ್ಣನ ಜೊತೆ ಇರುವಂತೆ ಮಾಡು.

ನಮ್ಮ ಪ್ರಾರ್ಥನೆಗೆ ನೀನು ಸ್ಪಂದಿಸುವುದಿಲ್ಲವಾದರೆ ಒಂದು ಕೆಲಸ ಮಾಡು. ನಿನ್ನ

ಮಾಧವಿ ಎಂಬ ಹೆಸರನ್ನಾದರೂ ನಮಗೆ ಕೊಡು. ಯಾಕೆಂದರೆ ಮಾಧವಿ ಎಂಬ ಹೆಸರನ್ನು ಬಿಡಿಸುವಾಗ ಮಾಧವನ ಸಂಬಂಧಿ ಎಂಬ ಅರ್ಥ ಬರುತ್ತದೆ. ನಮಗೆ ಸಾಕ್ಷಾತ್ತಾಗಿ ಮಾಧವನ ಜೊತೆಗಿರಲು ಸಾಧ್ಯವಾಗುತ್ತಿಲ್ಲ. ಹೆಸರಿನಿಂದಾದರೂ ಮಾಧವನ ಜೊತೆಗಿರುತ್ತೇವೆ.

**ಸಂದೇಶ** : ಮಾನವನಿಗೆ ಮಾಡುವ ೧೬ ಸಂಸ್ಕಾರಗಳಲ್ಲಿ ನಾಮಕರಣವೂ ಒಂದು. ದೇವರ ಹೆಸರನ್ನು ಮಗುವಿಗೆ ಇಡುವುದು. ಆ ಹೆಸರಿನ ಅರ್ಥದ ಅನುಸಂಧಾನವನ್ನು ನಿತ್ಯ ತನ್ನ ಮನಸ್ಸಿನಲ್ಲಿ ಮಾಡುತ್ತಿರಬೇಕು. ಒಂದು ದಿನ ದೇವರು ಆ ವ್ಯಕ್ತಿಯಲ್ಲಿ ಕಾಣುತ್ತಾನೆ.

**ಅಶೋಕ ಏಷೋಽಪರವೇದನಾಜ್ಞಃ**
**ಪದಾಹತೇರೇವ ಪರೋಪಕರ್ತಾ ।**
**ನ ಕಾರ್ಯಕಾರೀ ಶಿಥಿಲಾತ್ಮನಾಂ ನಃ**
**ತತೋಽಪರತ್ರ ಪ್ರತಿಯಾಮ ಸಖ್ಯಃ** ॥ ೨೪ ॥

ಅಶೋಕ=ಅಶೋಕಮರವು; ಏಷಃ=ಇದು; ಅಪರ=ಇನ್ನೊಬ್ಬರ; ವೇದನಾ=ದುಃಖವನ್ನು; ಅಜ್ಞಃ=ತಿಳಿಯುವುದಿಲ್ಲ; ಪದ=ಕಾಲಿನ; ಆಹತೇರೇವ= ಹೊಡೆತದಿಂದಲೇ; ಪರ=ಬೇರೆಯವರಿಗೆ; ಉಪಕರ್ತಾ=ಉಪಕಾರ ಮಾಡುತ್ತದೆ; ನ ಕಾರ್ಯಕಾರೀ= ಕೆಲಸವನ್ನು ಮಾಡುವುದಿಲ್ಲ; ಶಿಥಿಲ=ದುರ್ಬಲವಾದ; ಆತ್ಮನಾಂ=ದೇಹವುಳ್ಳ; ನಃ=ನಮ್ಮ; ತತಃ=ಆದ್ದರಿಂದ; ಅಪರತ್ರ=ಬೇರೆಡೆಗೆ; ಪ್ರತಿಯಾಮ=ಹೋಗೋಣ; ಸಖ್ಯಃ=ಗೆಳತಿಯರೇ.

ಈ ಮರದ ಹೆಸರು ಅಶೋಕ ಎಂದು. ತಾನು ದುಃಖ ಇಲ್ಲದ್ದು ಎಂದು ಅರ್ಥ. ಹೀಗಿರುವಾಗ ಬೇರೆಯವರ ದುಃಖವು ಇದಕ್ಕೆ ಹೇಗೆ ಅರ್ಥ ಆಗುತ್ತದೆ. ಈ ಮರವು ಇನ್ನೊಬ್ಬರಿಗೆ ಉಪಕಾರ ಮಾಡಬೇಕಾದರೆ ಇದರ ಬುಡಕ್ಕೆ ನಾರಿಯರು ಕಾಲಿನಿಂದ ಒದೆಯಬೇಕು. ನಾವು ಈಗ ಕೃಷ್ಣನ ವಿರಹದಿಂದ ಬಲಹೀನರಾಗಿದ್ದೇವೆ. ನಡೆಯಲೂ ಶಕ್ತಿಯಿಲ್ಲ. ಈ ಮರವನ್ನು ಪಾದದಿಂದ ಒದೆಯಲು ಹೇಗೆ ಸಾಧ್ಯ? ಆದ್ದರಿಂದ ಈ ಮರದಿಂದ ಉಪಕಾರವನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಮುಂದೆ ಹೋಗುವ ಎಂದು ಮಾತನಾಡಿಕೊಂಡರು.

**ಸಂದೇಶ** : ಅಶೋಕ ಮರವು ಪರೋಪಕಾರ ಮಾಡುವುದು ಎಂದರೆ ಹೂ ಬಿಡುವುದು ಎಂದರ್ಥ. ಹೂಬಿಡಬೇಕಾದರೆ ಸ್ತ್ರೀಯರು ಈ ಮರವನ್ನು ಪಾದದಿಂದ ಒದೆಯಬೇಕು ಎಂದೂ ಇದೆ. ಇನ್ನೊಬ್ಬರ ದುಃಖವನ್ನು ಅರಿಯದವರು ಹೇಗೆ ತಾನೇ ಉಪಕರಿಸುತ್ತಾರೆ. ಬಹಳ ಗರ್ವದಿಂದ ಇರುತ್ತಾರೆ. ತನ್ನ ಜೀವನದಲ್ಲಿ ದೊಡ್ಡ ಹೊಡೆತ ಬಿದ್ದಾಗ ಉಪಕರಿಸುತ್ತಾರೆ. ಮಾನವನು ದೇವರ ಕಡೆಗೆ ಮುಖಮಾಡುವುದು ಹೊಡೆತ ಬಿದ್ದಾಗಲೇ. 'ಸಂಕಟ ಬಂದಾಗ ವೇಂಕಟರಮಣ'.

**ಹೇ ಪಾರಿಜಾತ ಸುರಸಂಸದಿ ಗೀತ ದಾತಃ**
**ಶ್ರೀ ನಂದನಂದನಮುದೀರಯ ಸಿದ್ಧಗಮ್ಯಮ್ ।**
**ರತ್ನಾನಿ ರಾಸ್ಯುರುವಿಧಾನಿ ಕಿಲಾಶ್ರಿತಾನಾಂ**
**ಅಸ್ಮಭ್ಯಮಚ್ಯುತಹರಿನ್ಮಣಿಮೇವ ದೇಹಿ ॥ ೨೫ ॥**

ಹೇ ಪಾರಿಜಾತ=ಎಲೋ ಪಾರಿಜಾತವೇ; ಸುರ=ದೇವತೆಗಳ; ಸಂಸದಿ=ಸಭೆಯಲ್ಲಿ; ಗೀತ=ಹೊಗಳಲ್ಪಡುವವಳೇ; ದಾತಃ=ಇಷ್ಟವಾದದ್ದನ್ನು ಕೊಡುವವಳೇ; ಶ್ರೀನಂದ= ನಂದಗೋಪನ; ನಂದನಂ=ಮಗನನ್ನು; ಉದೀರಯ=ತಿಳಿಸು; ಸಿದ್ಧ= ಋಷಿಗಳಿಂದ; ಗಮ್ಯಂ=ಹೊಂದಲು ಯೋಗ್ಯನಾದ; ರತ್ನಾನಿ=ರತ್ನಗಳನ್ನು; ರಾಸಿ= ಕೊಡುತ್ತಿ; ಉರು= ಶ್ರೇಷ್ಠವಾದ; ವಿಧಾನಿ=ನಾನಾ ರೀತಿಯ; ಆಶ್ರಿತಾನಾಂ= ಬೇಡಿದವರಿಗೆ; ಅಸ್ಮಭ್ಯಂ=ನಮಗೆ; ಅಚ್ಯುತ=ಕೃಷ್ಣನೆಂಬ; ಹರಿನ್ಮಣಿಂ= ಇಂದ್ರನೀಲಮಣಿಯನ್ನು; ದೇಹಿ ಏವ=ಕೊಡಲೇಬೇಕು.

ಪಾರಿಜಾತವು ಕ್ಷೀರಸಮುದ್ರದಲ್ಲಿ ಹುಟ್ಟಿದ್ದು. ಇದು ಕಲ್ಪವೃಕ್ಷ. ದೇವಲೋಕಕ್ಕೆ ಸೇರಿದ್ದು. ಯಾರು ಏನು ಬೇಡುತ್ತಾರೋ ಅದನ್ನು ಒದಗಿಸುತ್ತದೆ. ಆದ್ದರಿಂದಲೇ ಎಲ್ಲರೂ ಇದನ್ನು ಗೌರವಿಸುತ್ತಾರೆ. ಎಲೋ ಪಾರಿಜಾತವೇ, ನಮಗೆ ಕೃಷ್ಣನೆಂಬ ಇಂದ್ರನೀಲಮಣಿಯನ್ನು ಕೊಡು. ನೀನು ಬೇಡಿದವರಿಗೆ ನವರತ್ನಗಳನ್ನೂ ಕೊಡುತ್ತಿ. ನಮಗೆ ಕೃಷ್ಣನ ಹೊರತು ಬೇರೇನೂ ಬೇಡ. ಕೊನೇಪಕ್ಷ ನಂದಗೋಪನ ಮಗನಾದ ಕೃಷ್ಣನು ಎಲ್ಲಿದ್ದಾನೆಂದಾದರೂ ತಿಳಿಸು. ಯದ್ಯಪಿ ಆತನು –ಸಾಧನೆಯ ಕೊನೆಯ ಮಜಲನ್ನು ತಲುಪಿದವರಿಗೆ ಮಾತ್ರ ಸಿಗುವವನು.

**<u>ಸಂದೇಶ</u>** : ದೇವರೆಂಬ ಒಂದು ಚಿಂತಾಮಣಿ ಇದ್ದರೆ ಬೇರೆ ಎಲ್ಲಾ ವಿಧದ ಮಣಿಗಳೂ ಅದರ ಹಿಂದಿನಿಂದ ಬರುತ್ತವೆ. ಅವುಗಳನ್ನು ಪ್ರತ್ಯೇಕವಾಗಿ ಬೇಡಬೇಕಾಗಿಲ್ಲ.

**ತದಂಘ್ರಿಲಾಭೇನ ನಿಜಾವಮಾನ–**
**ವಿಶಂಕಿಚೇತಾ ನ ದಿಶೇತ್ ನಿಜಂ ನಃ ।**
**ಸಹೋದರೋಽಯಂ ನನು ಸಿಂಧುಪುತ್ರ್ಯಾಃ**
**ಸಹಸ್ರನೇತ್ರಾರ್ಹಣದೃಪ್ತವೃತ್ತಿಃ ॥ ೨೬ ॥**

ತತ್=ಕೃಷ್ಣನ; ಅಂಘ್ರಿ=ಪಾದಗಳ; ಲಾಭೇನ=ಪ್ರಾಪ್ತಿಯಿಂದ; ನಿಜ=ತನ್ನ; ಅವಮಾನ= ಅಪಮಾನದ ಬಗ್ಗೆ; ವಿಶಂಕಿ=ಸಂಶಯಿತವಾದ; ಚೇತಾಃ=ಮನಸ್ಸುಳ್ಳ; ನದಿಶೇತ್= ಕೊಡಲಿಕ್ಕಿಲ್ಲ; ನಿಜಂ=ಕೃಷ್ಣನನ್ನು; ನಃ=ನಮಗೆ; ಸಹೋದರಃ=ತಮ್ಮನು; ಅಯಂ=ಇವನು; ಸಿಂಧು=ಸಮುದ್ರದ; ಪುತ್ರ್ಯಾಃ=ಮಗಳಾದ ರಮೆಯ; ಸಹಸ್ರನೇತ್ರ=ಸಾವಿರ ಕಣ್ಣುಳ್ಳ ಇಂದ್ರನ; ಅರ್ಹಣ=ಪೂಜೆಯಿಂದ; ದೃಪ್ತ=ಕೊಬ್ಬಿದ; ವೃತ್ತಿಃ=ಚಟುವಟಿಕೆಯುಳ್ಳ.

ಗೋಪಿಯರ ವಿಚಾರವು ಈ ರೀತಿ ಸಾಗಿದೆ –ಈ ಪಾರಿಜಾತವು ನಮಗೆ ದೇವರನ್ನು ತೋರಿಸುವುದಿಲ್ಲ. ಯಾಕೆಂದರೆ ದೇವರು ಸಿಕ್ಕಿದರೆ ನಾವು ದೇವರನ್ನು ಭಜಿಸುತ್ತೇವೆ. ಇವರನ್ನು ತಿರಸ್ಕರಿಸುತ್ತೇವೆ ಎಂಬ ಭಯ ಇವರಿಗಿದೆ. ಕಾಮಧೇನು ಇರುವಾಗ ಊರಿನ ದನವನ್ನು ಯಾರು ಅಪೇಕ್ಷಿಸುತ್ತಾರೆ? ಇಷ್ಟೇ ಅಲ್ಲದೆ ಈ ಪಾರಿಜಾತವು ರಮೆಯ ಸಹೋದರ. ಇಬ್ಬರೂ ಸಮುದ್ರಮಥನ ಕಾಲದಲ್ಲಿ ಸಮುದ್ರದಿಂದ ಹುಟ್ಟಿದವರು. ರಮೆಯು ನಮಗೆ ಸವತಿಯು. ಹೀಗಿರುವಾಗ ಈತನು ರಮೆಯ ತಮ್ಮನಾಗಿ ನಮಗೆ ಯಾಕೆ ಸಹಾಯ ಮಾಡುತ್ತಾನೆ. ಸಾಲದ್ದಕ್ಕೆ ಈತನು ಅಹಂಕಾರಿಯೂ ಹೌದು. ಇಂದ್ರನು ಈ ಮರವನ್ನು ಸದಾ ಪ್ರೀತಿಸುವುದೇ ಅಹಂಕಾರಕ್ಕೆ ಕಾರಣ. ಮೂರು ಲೋಕದಲ್ಲಿ ಎಲ್ಲಿಯೂ ಇಲ್ಲದ ಈ ಮರವು ತನ್ನಲ್ಲಿದೆ ಎನ್ನುವುದು ಇಂದ್ರನು ಇದನ್ನು ಪ್ರೀತಿಸಲು ಕಾರಣ. ಆದ್ದರಿಂದ ಈ ಮರದಿಂದ ನಮಗೇನೂ ಲಾಭವಿಲ್ಲ.

**ಸಂದೇಶ** : ತಾಯಿಯ ತವಕದಲ್ಲಿದ್ದ ಮಗುವಿಗೆ ಅಮ್ಮ ಸಿಕ್ಕಿದಾಗ ಇತರ ಎಲ್ಲಾ ಆಟಿಕೆಗಳೂ ಗೌಣವಾಗುತ್ತವೋ ಹಾಗೆಯೇ ದೇವರ ಮುಂದೆ ಇವುಗಳೆಲ್ಲಾ ನಗಣ್ಯಗಳು. ಸಾಮಾನ್ಯರನ್ನು ಉತ್ತಮರು ಆದರಿಸಿದರೆ ಕೆಲವರು ಅಹಂಕಾರಿಗಳಾಗುತ್ತಾರೆ. ಅನಂತರ ಅನ್ಯರ ತುಚ್ಛೀಕಾರಕ್ಕೆ ಗುರಿಯಾಗುತ್ತಾರೆ.

ಗೀತೇನ ತೇ ಗೀಷ್ಪತಿಶರ್ವಪೂರ್ವ–
ಗೀರ್ವಾಣವರ್ಯಾಃ ಕಿಲ ನಮ್ರಭಾವಮ್ ।
ನೀತಾಃ ತದಸ್ಮಾನ್ಸ್ವವಶೇ ವಿಧಾತುಂ
ಏತಾವತಾ ಕಿಂ ಕಮನೀಯಮೂರ್ತೇ ॥ ೨೭ ॥

*ಗೀತೇನ=ಹಾಡಿನಿಂದ; ತೇ=ನಿನ್ನ; ಗೀಃ=ಸರಸ್ವತಿಯ; ಪತಿ=ಪತಿಯಾದ ಬ್ರಹ್ಮನು; ಶರ್ವ=ರುದ್ರನು; ಪೂರ್ವ=ಮೊದಲಾದ; ಗೀರ್ವಾಣ=ದೇವತೆಗಳಲ್ಲಿ; ವರ್ಯಾಃ=ಶ್ರೇಷ್ಠರು; ನಮ್ರಭಾವಂ=ಶರಣಾಗುವಿಕೆಯನ್ನು; ನೀತಾಃ=ಹೊಂದಿದರು; ತತ್=ಆದ್ದರಿಂದ; ಅಸ್ಮಾನ್=ನಮ್ಮನ್ನು; ಸ್ವವಶೇ=ತನ್ನ ಹಿಡಿತದಲ್ಲಿ; ವಿಧಾತುಂ=ಮಾಡಲು; ಏತಾವತಾ= ಇಷ್ಟರಿಂದ; ಕಿಂ=ಏನು?; ಕಮನೀಯ=ಚಂದದ; ಮೂರ್ತೇ= ಸ್ವರೂಪವುಳ್ಳವನೇ.*

ಹೇ ಕೃಷ್ಣ, ನೀನು ಸಹಜವಾಗಿ ಚಂದ. ನಿನ್ನ ದರ್ಶನದಿಂದಲೇ ಎಲ್ಲರೂ ನಿನ್ನ ಅಧೀನರಾಗುತ್ತಾರೆ. ಇನ್ನು ನೀನು ಹಾಡಿದರೆ ಏನು ಹೇಳುವುದು? ಎಲ್ಲಾ ವಿದ್ಯೆಗಳಿಗೂ ಅಧಿಪತಿಯು ಸರಸ್ವತಿಯು. ಅವಳ ಪತಿಯಾದ ಬ್ರಹ್ಮನೂ ಹಾಗೆಯೇ ಮನೋನಿಯಾಮಕನಾದ ರುದ್ರನೂ ಇವನೇ ಮೊದಲಾದವರೂ ಕೂಡಾ ನಿನ್ನ ಹಿಡಿತಕ್ಕೆ ಬರುತ್ತಾರೆ. ಹೀಗಿರುವಾಗ ಅಲ್ಪರಾದ ನಾವು ನಿನ್ನ ಹಿಡಿತಕ್ಕೆ ಬರುವೆವೆಂದು ಏನು ಹೇಳುವುದು. ಹೀಗಿದ್ದರೂ ನಮ್ಮನ್ನು ನಿನ್ನ ಹಿಡಿತಕ್ಕೆ ತರಲು ಈ ರೀತಿ ಅದೃಶ್ಯನಾಗುವುದು ಹೇಗೆ? ನಮ್ಮನ್ನು ಮಾನಸಿಕವಾಗಿ ದೈಹಿಕವಾಗಿ ಯಾಕೆ ಪೀಡಿಸುತ್ತೀ?

<u>ಸಂದೇಶ</u> : ರಮೆಗೆ ದೇವರ ದರ್ಶನ, ಶ್ರವಣ ಎರಡೂ ಇದೆ. ಬ್ರಹ್ಮಾದಿಗಳಿಗೆ ಕೇವಲ ಶ್ರವಣ. ಮಾನವರಿಗೆ ಎರಡೂ ಇಲ್ಲ. ಇದಕ್ಕನುಗುಣವಾಗಿ ಸಾಧನೆಯೂ ಆಗಬೇಕು.

**ಮುರಲಿ ಮುರರಿಪುಂ ತಂ ಮೋಹನಂ ಶಂಸ ಹಂಸಾ–**
**ಭ್ಯುದಯಮುದಯದಿಂದುಶ್ರೀಮುಖಂ ವೀತಶೋಕಮ್ ।**
**ವಿರಹದಹನಭಾಸಾ ನಿರ್ದಹಾಮೋಽತ್ರ ನೋ ಚೇತ್**
**ತರುಣಿ ಕುಲಮಿದಂ ತೇ ಹಂತ ವೃಂದಾವನಾಂತೇ ॥ ೨೮ ॥**

ಮುರಲಿ=ಕೊಳಲೇ; ಮುರರಿಪುಂ=ಮುರಾಸುರನಿಗೆ ಶತ್ರುವಾದ; ತಂ=ಕೃಷ್ಣನನ್ನು; ಮೋಹನಂ=ಚಂದದ; ಶಂಸ=ತಿಳಿಸು; ಹಂಸ=ಸನ್ಯಾಸಿಗಳ; ಅಭ್ಯುದಯಂ=ಏಳಿಗೆಗೆ ಕಾರಣನಾದ; ಉದಯತ್=ಉದಿಸುವ; ಇಂದು=ಚಂದ್ರನಂತೆ; ಶ್ರೀಮುಖಂ=ಮುಖಕಾಂತಿಯುಳ್ಳ; ವೀತ=ದೂರವಾದ; ಶೋಕಂ=ದುಃಖವುಳ್ಳ; ವಿರಹ=ಅಗಲುವಿಕೆ ಎಂಬ; ದಹನ=ಬೆಂಕಿಯ; ಭಾಸಾ=ತೇಜಸ್ಸಿನಿಂದ; ನಿರ್ದಹಾಮಃ=ಸುಡುವೆವು; ಅತ್ರ=ಇಲ್ಲಿ; ನೋಚೇತ್=ಇಲ್ಲದಿದ್ದರೆ; ತರುಣಿ=ಎಲೋ ಎಳೇ ಕೊಳಲೇ; ಕುಲಂ=ವಂಶವನ್ನು; ಇದಂ=ಈ; ತೇ=ನಿನ್ನ; ಹಂತ=ದುಃಖವು; ವೃಂದಾವನ=ವೃಂದಾವನದ; ಅಂತೇ= ಕೊನೆಯಲ್ಲಿರುವ.

ಎಲೋ ಎಳೆಯ ಬಿದಿರೇ, ಆ ಕೃಷ್ಣನನ್ನು ನಮಗೆ ತಿಳಿಸು. ಆತನು ದುಷ್ಟ ಶಿಕ್ಷಕ. ಬಹಳ ಸುಂದರ. ಆತನು ಸನ್ಯಾಸಿಗಳ ಶ್ರೇಯಸ್ಸಿಗೆ ಶ್ರಮಿಸುವವನು. ಸನ್ಯಾಸಿಗಳು ಕಾಡಲ್ಲಿ ಇರುವವರು. ನೀವೂ ಕಾಡಲ್ಲೇ ಇರುವವರು. ಆದ್ದರಿಂದ ನಿಮಗೆ ಸಿಗುವನು. ಎಷ್ಟು ಶ್ರಮಿಸಿದರೂ ಮುಖದ ಕಾಂತಿಯಲ್ಲಿ ಯಾವ ಬದಲಾವಣೆಯೂ ಇರುವುದಿಲ್ಲ. ಮುನಿಗಳ ರಕ್ಷಣೆಯ ವಿಷಯದಲ್ಲಿ ಸ್ವಲ್ಪವೂ ಬೇಸರ ಇಲ್ಲ. ಇಂತಹ ಕೃಷ್ಣನನ್ನು ತೋರಿಸು. ನಾವೂ ಕೂಡಾ ಒಂದು ರೀತಿಯ ಮುನಿಗಳಂತೆ ದೇವರಿಗಾಗಿ ಅಲೆಯುತ್ತಿದ್ದೇವೆ.

ಕೃಷ್ಣನನ್ನು ತೋರಿಸದಿದ್ದರೆ ನಿಮ್ಮನ್ನು ಸುಡುತ್ತೇವೆ. ಇದಕ್ಕೆ ಬೇಕಾದ ಅಗ್ನಿ ನಮ್ಮಲ್ಲಿದೆ. ಆ ಅಗ್ನಿಯ ಹೆಸರು ಕೃಷ್ಣನ ಅಗಲುವಿಕೆ ಎಂದು. ಲೋಕದ ಅಗ್ನಿಯು ಕ್ರಮೇಣ ತಣ್ಣಗಾಗುತ್ತದೆ. ಆದರೆ ಈ ವಿರಹಾಗ್ನಿಯು ಕ್ರಮೇಣ ತೀಕ್ಷ್ಣವಾಗುವುದು. ಇದು ಒಂದೊಂದು ಬಿದಿರನ್ನು ಸುಡುವುದಿಲ್ಲ. ಬಿದಿರಿನ ವಂಶವನ್ನೇ ಸುಡುತ್ತದೆ. ಈ ಬಿದಿರಿನ ಹಿಂಡಿಲು ವೃಂದಾವನದಲ್ಲಿದೆ. ಈ ಹಿಂಡಿಲಿಗೆ ಆಶ್ರಯಕೊಟ್ಟ ವೃಂದಾವನವನ್ನೂ ಸಹ.

<u>ಸಂದೇಶ</u> : ಲೌಕಿಕವಾದ ಆಸೆ ಈಡೇರದಾಗ ಶಪಿಸಿದರೆ ಅದು ಬಹಳ ಫಲಕಾರಿಯಾಗುವುದಿಲ್ಲ. ಆದರೆ ದೈವಿಕವಾದದ್ದು ಸಿಗದಾಗ ಶಪಿಸಿದರೆ ಅದು ಮೂಲ ಸಹಿತವಾಗಿ ಸುಡುತ್ತದೆ.

**ಹೇ ವೃಂದಾವನ ಕೃಷ್ಣವರ್ತ್ಮ ವದ ನೋ ನೋ ಚೇತ್ ಪುಮಾಂಸಂ ಹಿ ತಂ**
**ದಾಸ್ಯಾಮಃ ಪ್ರಿಯವಿಪ್ರಯೋಗಜನಿತಂ ತೇನ ತ್ವದೀಯೋದಯ್ಯೈಃ ।**
**ಸಾಕಂ ಪ್ರಜ್ವಲಿತೇಽಂಗ ಗೋಪಲಲನಾಭಾಸ್ವಚ್ಚಕೋರೀಚಯೇ**
**ಲೋಕೇ ನಾಮ ನಿರರ್ಥಕಂ ತವ ಪುನಃ ಕೋ ವಾ ಕವಿಃ ಕೀರ್ತಯೇತ್ ॥ ೨೯ ॥**

ಹೇ ವೃಂದಾವನ=ಎಲೋ ವನವೇ; ಕೃಷ್ಣವರ್ತ್ಮ=ಕೃಷ್ಣನ ದಾರಿಯನ್ನು; ವದ=ಹೇಳು; ನಃ=ನಮಗೆ; ನೋ ಚೇತ್=ಇಲ್ಲದಿದ್ದರೆ; ಪುಮಾಂಸಂ=ಪುಲ್ಲಿಂಗವಾದ; ತಂ= ಆಕೃಷ್ಣವರ್ತ್ಮವನ್ನು; ದಾಸ್ಯಾಮಃ=ಕೊಡುವೆವು; ಪ್ರಿಯ=ಕೃಷ್ಣನ; ವಿಪ್ರಯೋಗ= ವಿಯೋಗದಿಂದ; ಜನಿತಂ=ಉಂಟಾದ; ತೇನ=ಆಕೃಷ್ಣವರ್ತ್ಮದಿಂದ; ತ್ವದೀಯ=ನಿನ್ನಲ್ಲಿ; ಉದಯ್ಯೈಃ=ಹುಟ್ಟಿದವುಗಳಿಂದ; ಸಾಕಂ=ಕೂಡಿ; ಪ್ರಜ್ವಲಿತೇ= ಉರಿಯುತ್ತಿರಲು; ಅಂಗ= ಎಲೋ ವನವೇ; ಗೋಪ=ಗೊಲ್ಲರ; ಲಲನಾ=ನಾರಿಯರೆಂಬ; ಭಾಸ್ವತ್=ಶೋಭಿಸುವ; ಚಕೋರೀ=ಚಕೋರ ಎಂಬ ಪಕ್ಷಿಗಳ; ಚಯೇ=ಸಮೂಹವು; ಲೋಕೇ=ಜಗತ್ತಿನಲ್ಲಿ; ನಾಮ=ಹೆಸರನ್ನು; ನಿರರ್ಥಕಂ=ವ್ಯರ್ಥವಾದ; ತವ=ನಿನ್ನ; ಪುನಃ=ಮತ್ತು; ಕೋವಾ= ಯಾವ; ಕವಿಃ=ತಿಳಿದವನು; ಕೀರ್ತಯೇತ್=ಹೇಳುತ್ತಾನೆ.

ಗೋಪಿಯರು ವೃಂದಾವನವನ್ನು ಪ್ರಶ್ನಿಸುತ್ತಾರೆ –ಎಲೋ ವನವೇ, ನಮಗೆ ಕೃಷ್ಣವರ್ತ್ಮವನ್ನು ತೋರಿಸು. ಅಂದರೆ ಕೃಷ್ಣನು ಯಾವ ದಾರಿಯಲ್ಲಿ ಹೋಗಿದ್ದಾನೆ? ನಿನಗೇನಾದರೂ ಗೊತ್ತಿದ್ದರೆ ತಿಳಿಸು. ವರ್ತ್ಮ ಎಂಬ ಶಬ್ದಕ್ಕೆ ದಾರಿ ಎಂಬ ಅರ್ಥ ಇದೆ. ಈ ಅರ್ಥವನ್ನು ಇಟ್ಟುಕೊಂಡು ನಾರಿಯರು ಕೇಳಿದ್ದು. ವನವು ಮಾತನಾಡಲಿಲ್ಲ. ನಾರಿಯರು ಸಿಟ್ಟಿನಿಂದ, ನಮಗೆ ನೀನು ಕೃಷ್ಣವರ್ತ್ಮವನ್ನು ತೋರಿಸದಿದ್ದರೆ ನಿನಗೆ ನಾವು ಪುಲ್ಲಿಂಗದ ಕೃಷ್ಣವರ್ತ್ಮವನ್ನು ಕೊಡುತ್ತೇವೆ. ಸಂಸ್ಕೃತದಲ್ಲಿ ಶಬ್ದಗಳಿಗೆ ಲಿಂಗಗಳಿವೆ. ಲಿಂಗಗಳಿಗೆ ಅನುಸಾರವಾಗಿ ಅರ್ಥವ್ಯತ್ಯಾಸವೂ ಇದೆ.

ವರ್ತ್ಮ ಎಂಬ ಶಬ್ದಕ್ಕೆ ನಪುಂಸಕಲಿಂಗದಲ್ಲಿ ದಾರಿ ಎಂಬ ಅರ್ಥ. ಪುಲ್ಲಿಂಗದಲ್ಲಿ ಕೃಷ್ಣವರ್ತ್ಮ ಎಂಬ ಶಬ್ದಕ್ಕೆ ಅಗ್ನಿ ಎಂಬ ಅರ್ಥ ಇದೆ. ಕೃಷ್ಣ ಅಂದರೆ ಹೊಗೆ. ಬೆಂಕಿ ಎಲ್ಲಿ ಇದೆ ಎಂದು ತಿಳಿಯಲು ಹೊಗೆಯೇ ದಾರಿ. ವನವು ನಾರಿಯರಿಗೆ ಕೃಷ್ಣನ ವರ್ತ್ಮವನ್ನು (ದಾರಿಯನ್ನು) ತೋರಿಸಲಿಲ್ಲ. ಇದರಿಂದ ಸಿಟ್ಟಾದ ನಾರಿಯರು ವನಕ್ಕೆ ಪುಲ್ಲಿಂಗದ ಕೃಷ್ಣವರ್ತ್ಮವನ್ನು ಅಂದರೆ ಬೆಂಕಿಯನ್ನು ಕೊಡುತ್ತೇವೆ ಎಂದು ಹೇಳಿದರು. ಅಂದರೆ ಈ ವನಕ್ಕೆ ಬೆಂಕಿ ಬೀಳಲಿ ಎಂದು ಶಪಿಸಿದರು ಎಂದರ್ಥ. ಆ ಬೆಂಕಿಯನ್ನು ಬೇರೆ ಎಲ್ಲಿಂದಲೋ ತರುವುದಲ್ಲ. ಈಶನ ವಿಯೋಗದಿಂದ ಈ ನಾರಿಯರಲ್ಲಿ ಉಂಟಾದ ಬೆಂಕಿ. ಆದ್ದರಿಂದ ಬಹಳ ತೀಕ್ಷ್ಣವಾದದ್ದು. ಈ ಬೆಂಕಿಯಿಂದ ಆ ವನದಲ್ಲಿರುವ ಎಲ್ಲವೂ ಸುಟ್ಟು ಹೋಗುತ್ತದೆ. ಈ ಗೋಪಿಯರೂ ಕಾಡಲ್ಲಿ ಇದ್ದಾರೆ. ವನವು ಉರಿಯುವಾಗ ಇವರು ಸುಟ್ಟುಹೋಗುತ್ತಾರೆ. 'ಆಗಲಿ' ಎಂದು ಹೇಳುವಂತಿಲ್ಲ.

ಯಾಕೆಂದರೆ ಈ ವನಕ್ಕೆ ವೃಂದಾವನ ಎಂದು ಹೆಸರು. ವೃಂದ ಅಂದರೆ ಗುಂಪು. ಅವನ ಅಂದರೆ ರಕ್ಷಣೆ. ಎಲ್ಲವೂ ಸುಟ್ಟುಹೋದರೆ ಈ ಕಾಡಿಗೆ ಈ ಹೆಸರು ವ್ಯರ್ಥವಾಗುತ್ತದೆ. ಅರ್ಥರಹಿತವಾದ ಹೆಸರನ್ನು ಜ್ಞಾನಿಗಳು ಉಲ್ಲೇಖಿಸುವುದಿಲ್ಲ. ಜ್ಞಾನಿಗಳ ಬಾಯಲ್ಲಿ ಈ ಹೆಸರು ಬರಬೇಕಾದರೆ ಈ ಕಾಡು ನಾರಿಯರಿಗೆ ಕೃಷ್ಣವರ್ತ್ಮವನ್ನು (ಕೃಷ್ಣನ ದಾರಿಯನ್ನು) ತಿಳಿಸಬೇಕು.

<u>**ಸಂದೇಶ**</u> : ನಮಗೆ ತಿಳದ ದೇವರನ್ನು ಇನ್ನೊಬ್ಬರಿಗೆ ತಿಳಸಬೇಕು. ಇಲ್ಲದಿದ್ದರೆ ನಾವು ಅವರ ಮನಸ್ತಾಪಕ್ಕೆ ತುತ್ತಾಗುತ್ತೇವೆ. ಫಲಿತಾಂಶ ನಮ್ಮ ಸರ್ವಸ್ವನಾಶ. ತಿಳಸಿದರೆ ಋಷಿಗಳು ನಮ್ಮ ನಾಮವನ್ನು ಕೀರ್ತಿಸುತ್ತಾರೆ. ಇದರಿಂದ ನಮಗೆ ಶ್ರೇಯಸ್ಸು. ದೊಡ್ಡವರಾದ ನಮ್ಮ ತಂದೆ ತಾಯಿಗಳು ನಮಗೆ ಇಟ್ಟ ಹೆಸರೂ ಸಾರ್ಥಕವಾಗುತ್ತದೆ.

**ಸಖಿ ತರುರಯಮಜ್ಞಃ ನೈವ ಜಾನಾತಿ ಕೃಷ್ಣಂ**
**ಕಿಮಿತಿ ವಿಧಿನಿದೇಶಾತ್ ಜ್ಞಾನಶೂನ್ಯೋ ಹಿ ವೃಕ್ಷಃ ।**
**ಯದುತಿಲಕವಿಯೋಗಾತ್ ಅಸ್ತು ಮೇ ಜ್ಞಾನಹಾನಿಃ**
**ಗತವಿರಹಭಯಸ್ಯ ಜ್ಞಾನಹಾನಿಃ ಕುತೋಽಸ್ಯ** ॥ ೩೦ ॥

ಸಖಿ=ಗೆಳತಿಯೇ; ತರುಃ=ಮರವು; ಅಯಂ=ಈ; ಅಜ್ಞಃ=ತಿಳುವಳಿಕೆ ಇಲ್ಲದ್ದು; ನೈವ ಜಾನಾತಿ=ತಿಳಯುವುದಿಲ್ಲ; ಕೃಷ್ಣಂ=ದೇವರನ್ನು; ಕಿಂ ಇತಿ=ಯಾಕೆ; ವಿಧಿ=ಬ್ರಹ್ಮನ; ನಿದೇಶನಾತ್=ಅಪ್ಪಣೆಯಿಂದ; ಜ್ಞಾನ=ತಿಳುವಳಿಕೆಯಿಂದ; ಶೂನ್ಯಃ=ರಹಿತವು; ಹಿ=ಪ್ರಸಿದ್ಧ; ವೃಕ್ಷಃ=ಮರವು; ಯದು=ಯದುವಂಶಕ್ಕೆ; ತಿಲಕ=ತಿಲಕದಂತಿರುವ ಕೃಷ್ಣನ; ವಿಯೋಗಾತ್=ವಿರಹದಿಂದ; ಅಸ್ತು=ಇರಲಿ; ಮೇ=ನನಗೆ; ಜ್ಞಾನ=ತಿಳುವಳಿಕೆಯ; ಹಾನಿಃ= ನಾಶವು; ಗತ=ಹೋದ; ವಿರಹ=ಅಗಲುವಿಕೆಯ; ಭಯಸ್ಯ=ಹೆದರಿಕೆಯುಳ್ಳ; ಜ್ಞಾನ= ಜ್ಞಾನದ; ಹಾನಿಃ=ನಾಶವು; ಕುತಃ=ಯಾಕೆ? ಅಸ್ಯ=ಈ ಮರಕ್ಕೆ.

ಎಲೋ ಗೆಳತಿಯೇ, ಈ ಕಾಡು ಬುದ್ಧಿ ಇಲ್ಲದ್ದು. ಕೃಷ್ಣನ ಬಗ್ಗೆ ಈ ಕಾಡಲ್ಲಿ ಕೇಳಿದರೆ ಏನೂ ಪ್ರಯೋಜನವಿಲ್ಲ. ಈ ಮರಗಳಿಗೆ ಬುದ್ಧಿ ಯಾಕಿಲ್ಲ ಅಂದರೆ ಅದು ಬ್ರಹ್ಮನ ಅಪ್ಪಣೆ. ಆತನು ಈ ಮರಗಳನ್ನು ಸೃಷ್ಟಿಮಾಡಿದನು. ಅನಂತರ ಹೇಳಿದನು – ನಿಮಗೆ ದೇವರ ಬಗ್ಗೆ ತಿಳುವಳಿಕೆಯೇ ಇಲ್ಲದೆ ಹೋಗಲಿ ಎಂದು. ಇದನ್ನು ಕೇಳಿಸಿಕೊಂಡ ಇನ್ನೊಬ್ಬಳು ಹೇಳಿದಳು. ಬ್ರಹ್ಮನು ಮರಗಳಿಗೆ ಯಾಕೆ ದೇವರ ತಿಳುವಳಿಕೆಯನ್ನು ಕೊಡಲಿಲ್ಲ. ತಿಳುವಳಿಕೆ ಇಲ್ಲದಿರುವುದು ಯಾವಾಗ ಅಂದರೆ ಮನಸ್ಸು ಭಯಗೊಂಡಾಗ ಅಥವಾ ವ್ಯಗ್ರವಾದಾಗ. ಭಯಗೊಳ್ಳಬೇಕಾದರೆ ನಮಗೆ ಬಹಳ ಪ್ರಿಯರಾದವರು ನಮ್ಮಿಂದ ದೂರವಾಗಬೇಕು. ಅಂತಹ ಪ್ರಸಂಗ ಈ ಮರಗಳಿಗೆ ಇಲ್ಲ. ಮರಗಳಿಗೆ ಬೇಕಾದವರು, ಬೇಡವಾದವರು ಎಂದು ಇಲ್ಲ. ನಾವಾದರೂ ವಿವೇಕಿಗಳು. ಬೇಕು

ಬೇಡಗಳ ವ್ಯವಸ್ಥೆ ನಮಗಿದೆ. ಕೃಷ್ಣನು ನಮಗೆ ಬಹಳ ಪ್ರಿಯನಾದವನು. ಅಂತಹವನ ವಿರಹ ನಮಗಾಗಿದೆ. ಆದ್ದರಿಂದ ನಮಗೆ ಭಯವೂ ಸಹಜ. ಆದ್ದರಿಂದ ದೇವರ ತಿಳುವಳಿಕೆ ನಮಗೆ ಈಗ ಇಲ್ಲ ಎನ್ನುವುದು ಒಪ್ಪುವ ಮಾತು.

<u>**ಸಂದೇಶ**</u> : ದೇವರು ಒಳ್ಳೆಯ ಇಂದ್ರಿಯಾದಿಗಳನ್ನು ಕೊಟ್ಟು ಮಾನವನನ್ನು ಸೃಷ್ಟಿಮಾಡುತ್ತಾನೆ. ಹಾಗಿದ್ದರೂ ದೇವರನ್ನು ತಿಳಿಯಲು ಪ್ರಯತ್ನ ಮಾಡುವುದಿಲ್ಲ. ಅಂತಹವನನ್ನು ದೇವರು ಅವಿವೇಕಿಯನ್ನಾಗಿ ಮಾಡುತ್ತಾನೆ.

**ಸಖಿ ಕಥಯ ಸ ಕೋಽಯಂ ತನ್ವಿ ಪೀಯೂಷರಶ್ಮಿಃ**
**ದಿಶತಿ ಕಥಮುದಗ್ರಂ ತರ್ಹಿ ಮೇ ಕಾಲಕೂಟಮ್ ।**
**ಹರಿರಿವ ಪದಮಾತ್ರಶ್ಲಾಘ್ಯಧರ್ಮಾಃ ಸ ನೂನಂ**
**ವಹತಿ ಗರಮಗೌರಂ ಹ್ರಾಸಭಾಗೇಷ ಚಂದ್ರಃ** ॥ ೩೧ ॥

ಸಖಿ=ಗೆಳತಿಯೇ; ಕಥಯ=ಹೇಳು; ಸಃ=ಅವನು; ಕಃ=ಯಾರು; ಅಯಂ=ಇವನು; ತನ್ವಿ=ಕೃಶಾಂಗಿಯೇ; ಪೀಯೂಷ=ಅಮೃತದಂತಿರುವ; ರಶ್ಮಿಃ=ಕಿರಣವುಳ್ಳ ಚಂದ್ರನು; ದಿಶತಿ=ಕೊಡುತ್ತಾನೆ; ಕಥಂ=ಹೇಗೆ? ಉದಗ್ರಂ=ತೀಕ್ಷ್ಣವಾದ; ತರ್ಹಿ=ಹಾಗಾದರೆ; ಮೇ=ನನಗೆ; ಕಾಲಕೂಟಂ=ಕಾಲಕೂಟವೆಂಬ ವಿಷವನ್ನು; ಹರಿಃ ಇವ=ಕೃಷ್ಣನಂತೆ; ಪದಮಾತ್ರ=ಕೇವಲ ಹೆಸರಿನಿಂದ; ಶ್ಲಾಘ್ಯ=ಸ್ತುತ್ಯವಾದ; ಧರ್ಮಾಃ=ಧರ್ಮವುಳ್ಳ; ಸಃ=ಅವನು; ನೂನಂ=ನಿಶ್ಚಯವಾಗಿ; ವಹತಿ=ಧರಿಸಿದ್ದಾನೆ; ಗರಂ=ವಿಷವನ್ನು; ಅಗೌರಂ=ಕಪ್ಪಾದ; ಹ್ರಾಸ=ಕ್ಷೀಣತೆಯನ್ನು; ಭಾಕ್=ಹೊಂದಿದನು; ಏಷಃ=ಈ; ಚಂದ್ರಃ=ಚಂದ್ರನು.

ಗಗನದಲ್ಲಿ ಕಾಣುವ ಚಂದ್ರನನ್ನು ಕಂಡು ಆತನು ಯಾರೆಂದು ತನ್ನ ಗೆಳತಿಯಲ್ಲಿ ಒಬ್ಬಳು ಕೇಳಿದಳು. ಆತನು ಚಂದ್ರನು. ಅಮೃತಮಯವಾದ ಅಂದರೆ ಜನರಿಗೆ ತಂಪನ್ನು ಎರೆಯುವ ಕಿರಣಗಳುಳ್ಳವನು ಎಂದು ಉತ್ತರಿಸಿದಳು. ಈತನ ಹೆಸರು ಪೀಯೂಷರಶ್ಮಿ ಎಂದು ಹೇಳುತ್ತಿ. ಆದರೆ ಈತನು ನನಗೆ ಬಹಳ ತಾಪವನ್ನು ಕೊಡುತ್ತಿದ್ದಾನೆ. ಕಾಲಕೂಟದ ಬಿಸಿಯು ಎಷ್ಟಿರುತ್ತದೋ ಅಷ್ಟೇ ಮಾನಸಿಕ ತಾಪವು ಈ ಚಂದ್ರನನ್ನು ನೋಡಿದಾಗ ಆಗುತ್ತದೆ. ಕೃಷ್ಣನಂತೆ ಈತನು ಚಂದದ ಹೆಸರು ಮಾತ್ರ ಉಳ್ಳವನು. ಆದರೆ ಮಾಡುವ ಕೆಲಸ ಹೆಸರಿಗೆ ವಿರುದ್ಧವಾದದ್ದು. ಕೃಷ್ಣನಿಗೆ ಹರಿ ಎಂದು ಹೆಸರು. ಅಂದರೆ ಎಲ್ಲರ ತಾಪಗಳನ್ನು ಅಪಹರಿಸುವವನು ಎಂದು. ಆದರೆ ಆತನು ಈಗ ನನಗೆ ತಾಪವನ್ನೇ ಕೊಡುತ್ತಿದ್ದಾನೆ. ಅದರಂತೆ ಈತನು ಅಮೃತಕಿರಣನು ಎಂಬ ಹೆಸರುಳ್ಳವನಾದರೂ ತನ್ನಲ್ಲಿ ಕಪ್ಪಾದ ವಿಷಯವನ್ನೇ ಧರಿಸಿದ್ದಾನೆ. ಇದಕ್ಕೆ ಗಮಕ ಆತನಲ್ಲಿರುವ ಕಪ್ಪು ಕಲೆಯು. ಈ ಕಲೆಯು ವಿಷ ಎಂದು ಹೇಗೆ ಹೇಳುವುದು ಅಂದರೆ ವಿಷಪಾನಮಾಡಿದವರು ದಿನದಿಂದ ದಿನಕ್ಕೆ ಕ್ಷೀಣಿಸುತ್ತಾರೆ. ಅದರಂತೆ ಈತನು ಕೃಷ್ಣಪಕ್ಷದಲ್ಲಿ ಕ್ಷೀಣಿಸುತ್ತಾನೆ. ಇಷ್ಟು ಮಾತನ್ನು ಗೋಪಿಯು ಕೃಷ್ಣವಿರಹವನ್ನು ತಾಳಲಾರದೆ ಸಿಟ್ಟಿನಿಂದ ಹೇಳಿದಳು.

**ಸಂದೇಶ** : ಸಹಜವಾಗಿ ದೇವರಲ್ಲಿ ಶ್ರದ್ಧೆಯುಳ್ಳವರಿಗೆ ಪ್ರಪಂಚದ ಎಲ್ಲಾ ವಸ್ತುಗಳೂ ದೋಷಪೂರಿತವಾಗಿಯೇ ತೋರುತ್ತವೆ. ಅವುಗಳು ಎಷ್ಟೇ ಸುಂದರವಾಗಿದ್ದರೂ ಕೂಡಾ.

**ಧನ್ಯೇ ಯಾಮಿನಿ ಕಾಮಿನೀವ ಶಶಿನಂ ಸಾನಂದಮಾಚುಂಬ್ಯ ಯಾ**
**ಮಾನ್ಯೈಃ ತಸ್ಯ ಕರೈಃ ಸುಧಾರಸಧರೈಃ ಆಲಿಂಗಿತಾಂಗೀ ಸದಾ ।**
**ವಿಶ್ಲೇಷಾಚ್ಚಕಿತಾನುಯಾಸಿ ಬತ ತಂ ದೇಶಾಂತರೇ ಪ್ರಸ್ಥಿತಂ**
**ಕೃಷ್ಣಾಯಾಧ್ವನಿ ಶಂಸ ಕಂಜನಯನಾಯಾಸ್ಮನ್ಮನೋ ವೇದಾನಾಮ್ ॥ ೩೨ ॥**

ಧನ್ಯೇ=ಕೃತಾರ್ಥಳೇ; ಯಾಮಿನಿ=ರಾತ್ರಿಯೇ; ಕಾಮಿನೀ ಇವ=ಕಾಮವುಳ್ಳ ಹುಡುಗಿ ಯಂತೆ; ಶಶಿನಂ=ಚಂದ್ರನನ್ನು; ಸಾನಂದಂ=ಆನಂದದಿಂದ ಕೂಡಿ; ಆಚುಂಬ್ಯ=ಮುದ್ದಿಸಿ; ಯಾ=ಯಾರು; ಮಾನ್ಯೈಃ=ಉತ್ತಮಗಳಾದ; ತಸ್ಯ=ಆ ಚಂದ್ರನ; ಕರೈಃ=ಕೈಗಳಿಂದ; ಸುಧಾ=ಅಮೃತದ; ರಸ=ರಸವನ್ನು; ಧರೈಃ=ಧರಿಸಿರುವ; ಆಲಿಂಗಿತ=ಆಲಿಂಗಿಸಲ್ಪಟ್ಟ; ಅಂಗೀ=ಶರೀರವುಳ್ಳವಳಾಗಿ; ಸದಾ=ಯಾವಾಗಲೂ; ವಿಶ್ಲೇಷಾತ್=ವಿಯೋಗದಿಂದ; ಚಕಿತಾ=ದುಃಖಿತಳಾಗಿ; ಅನುಯಾಸಿ=ಅನುಸರಿಸುತ್ತಿ; ಬತ=ಆನಂದವು; ತಂ= ಚಂದ್ರನನ್ನು; ದೇಶಾಂತರೇ=ಇನ್ನೊಂದು ಪ್ರದೇಶಕ್ಕೆ; ಪ್ರಸ್ಥಿತಂ=ಹೊರಟಿರುವ; ಕೃಷ್ಣಾಯ= ಕೃಷ್ಣನಿಗೆ; ಅಧ್ವನಿ=ದಾರಿಯಲ್ಲಿ; ಶಂಸ=ಹೇಳು; ಕಂಜ=ಕಮಲದಂತೆ; ನಯನಾಯ= ಕಣ್ಣುಗಳುಳ್ಳ; ಅಸ್ಮತ್=ನಮ್ಮ; ಮನೋ=ಮನಸ್ಸಿನ; ವೇದಾನಾಂ=ದುಃಖವನ್ನು.

ಸೂರ್ಯನಿಗೂ ಹಗಲಿಗೂ ಸಂಬಂಧ ಇರುವಂತೆ ಚಂದ್ರನಿಗೂ ರಾತ್ರಿಗೂ ಸಂಬಂಧ ಇದೆ. ದಿವಸಪತಿ ಸೂರ್ಯ. ರಾತ್ರಿಪತಿ ಚಂದ್ರ, ರಾತ್ರಿಯು ಒಂದು ಹೆಣ್ಣಿನಂತೆ. ರಾತ್ರಿಯು ಭೂಮಿಯಲ್ಲಿ ವ್ಯಾಪಿಸಿ ಇರುತ್ತದೆ. ಆ ಸಮಯದಲ್ಲಿ ಚಂದ್ರನು ಮೇಲೆ ಆಕಾಶದಲ್ಲಿ ಉದಿಸಿರುತ್ತಾನೆ. ಆತನ ಕಿರಣಗಳೇ ಕೈಗಳು. ಈ ಕಿರಣಗಳು ರಾತ್ರಿ ಇರುವ ಎಲ್ಲಾ ಜಾಗವನ್ನು ವ್ಯಾಪಿಸುತ್ತವೆ. ಇದರಿಂದ ಚಂದ್ರನು ಆಕೆಯನ್ನು ಆಲಿಂಗಿಸಿ ಚುಂಬಿಸುವಂತೆ ತೋರುತ್ತದೆ. ರಾತ್ರಿಯ ಕೊನೆಯ ಭಾಗದಲ್ಲಿ ಚಂದ್ರನು ಮೇರುವಿನ ಇನ್ನೊಂದು ಬದಿಗೆ ಹೋಗುತ್ತಾನೆ. ಆಗ ರಾತ್ರಿಯೂ ಅಲ್ಲಿಗೇ ಹೋಗುತ್ತದೆ ಎಂದು ಕವಿಗಳ ಕಲ್ಪನೆ.

ಇದನ್ನೆಲ್ಲಾ ತನ್ನ ಮನಸ್ಸಿಗೆ ತಂದುಕೊಂಡ ಒಬ್ಬಳು ರಾತ್ರಿಯ ಜೊತೆ ಈ ರೀತಿ ಪ್ರಲಪಿಸುತ್ತಾಳೆ –ಎಲೋ ರಾತ್ರಿಯೇ, ನಿನ್ನ ಪತಿಯಾದ ಚಂದ್ರನು ನಿನ್ನನ್ನು ಎಂದೂ ಬಿಡುವುದಿಲ್ಲ. ನಿನ್ನನ್ನು ಯಾವಾಗಲೂ ತನ್ನ ಕೈಗಳಿಂದ ಆಲಿಂಗಿಸುತ್ತಾನೆ. ತಾನು ಹೋದಲ್ಲೆಲ್ಲಾ ಕರೆದುಕೊಂಡು ಹೋಗುತ್ತಾನೆ. ಆದ್ದರಿಂದ ನೀನೇ ಧನ್ಯಳು. ಕೃಷ್ಣನಾದರೂ ನಮ್ಮನ್ನು ಹುರಿದುಂಬಿಸುತ್ತಾನೆ. ನಮ್ಮಲ್ಲಿರುವ ಕಾಮನನ್ನು ಎಬ್ಬಿಸುತ್ತಾನೆ. ಕೂಡಲೇ ಕೃಷ್ಣನು ನಮ್ಮನ್ನೆಲ್ಲಾ ಬಿಟ್ಟು ಹೋಗುತ್ತಾನೆ. ಇದರಿಂದಾಗಿ ನಮಗೆ ಮನಸ್ಸಿಗೆ ತುಂಬಾ

ನೋವಾಗುತ್ತದೆ. ಈಗ ಚಂದ್ರನು ತಾನು ಬೇರೆಡೆಗೆ ಹೊರಟಿದ್ದಾನೆ. ನೀನೂ ಆತನ ಜೊತೆ ಹೋಗುತ್ತಿ. ದಾರಿಯಲ್ಲಿ ನಿನಗೆ ಕೃಷ್ಣನ ಭೇಟಿಯಾದರೆ ನನ್ನ ದುಃಖವನ್ನು ಆತನಿಗೆ ತಿಳಿಸು. ಕೂಡಲೇ ಇಲ್ಲಿಗೆ ಬರುವಂತೆ ಹೇಳು.

<u>ಸಂದೇಶ</u> : ಕೃಷ್ಣನು ಈ ರಾತ್ರಿಗೆ ಸಿಗುವುದಿಲ್ಲ ಎಂದು ತಿಳಸಲು 'ಕಂಜನಯನ' ಕಮಲದಂತೆ ಕಣ್ಣುಳ್ಳ ಎಂಬ ವಿಶೇಷಣದಿಂದ ಕೃಷ್ಣನನ್ನು ರಾಜರು ತಿಳಸಿದ್ದಾರೆ. ಚಂದ್ರನಿಗೂ ನೈದಿಲೆ ಪುಷ್ಪಗಳಿಗೂ ಸಖ್ಯ. ಸೂರ್ಯನಿಗೂ ಕಮಲಗಳಿಗೂ ಸಖ್ಯ. ಚಂದ್ರ ಉದಿಸಿದಾಗ ಕಮಲಗಳು ಬಾಡುತ್ತವೆ. ಆದರೆ ಭಗವದ್ಭಕ್ತರು ಈ ವಿವೇಕದಿಂದ ರಹಿತರಾಗಿ ಹುಚ್ಚರಂತೆ ಇರುತ್ತಾರೆ. ದೇವರು ಎಂದೂ ರಾತ್ರಿಗೆ ಅಂದರೆ ಅಜ್ಞಾನಿಗಳಿಗೆ ಸಿಗುವವನು ಅಲ್ಲ. 'ನಾನ್ಯಃ ಪಂಥಾಃ ಅಯನಾಯ ವಿದ್ಯತೇ' ದೇವರನ್ನು ತಲುಪಲು ಜ್ಞಾನದ ಹೊರತು ಬೇರೆ ದಾರಿ ಇಲ್ಲ. ಜ್ಞಾನ ಅಂದರೆ ಹಗಲು.

ನಿಶಾಚರಾಃ ಪ್ರಾಣಹರಾಶ್ಚ ಚೋರಾಃ
ಚರಂತಿ ಯಸ್ಯಾಂ ನ ಬುಧಾಃ ಸುಬೋಧಾಃ ।
ಸ್ವಯಂ ಚ ಕೃಷ್ಣಾಪ್ರಿಯಸೌಭಗಾ ಯಾ
ಕಿಮಸ್ಮದಾನಂದಕರೀಯಮಾರ್ಯಾಃ ॥ ೩೩ ॥

ನಿಶಾಚರಾಃ=ರಾಕ್ಷಸರು; ಪ್ರಾಣಹರಾಃ=ಕೊಲೆಮಾಡುವ; ಚೋರಾಃ=ಕಳ್ಳರು; ಚರಂತಿ=ತಿರುಗಾಡುತ್ತಾರೆ; ಯಸ್ಯಾಂ=ಯಾವ ರಾತ್ರಿಯಲ್ಲಿ; ನ ಬುಧಾಃ=ಜ್ಞಾನಿಗಳಲ್ಲ; ಸುಬೋಧಾಃ=ಒಳ್ಳೆಯ ತಿಳುವಳಿಕೆಯುಳ್ಳ; ಸ್ವಯಂ ಚ=ತಾನಾದರೂ; ಕೃಷ್ಣ=ಕೃಷ್ಣದಲ್ಲಿ; ಅಪ್ರಿಯ=ಅನಿಷ್ಟವಾದ; ಸೌಭಗಾ=ಭಾಗ್ಯವುಳ್ಳ; ಯಾ=ಯಾರು; ಕಿಂ=ಏನು; ಅಸ್ಮತ್= ನಮಗೆ; ಆನಂದ=ಸಂತೋಷವನ್ನು; ಕರೀ=ಮಾಡುವವಳು; ಇಯಂ=ಇವಳು; ಆರ್ಯಾಃ=ಪೂಜ್ಯರೇ.

ರಾತ್ರಿ ಎಂಬ ಕಾಲವು ಜಡ. ಆದ್ದರಿಂದ ಇವಳ ಮಾತನ್ನು ಗಮನಿಸಲಿಲ್ಲ. ಆದರೆ ಇದನ್ನು ಗಣನೆಗೆ ತೆಗೆದುಕೊಳ್ಳದ ಗೋಪಿಯರು ಈ ರಾತ್ರಿಯು ಅಹಂಕಾರದಿಂದ ನಮ್ಮ ಮಾತಿಗೆ ಬೆಲೆ ಕೊಡಲಿಲ್ಲ ಎಂದು ತಿಳಿದು ಈ ರೀತಿ ಹೇಳುತ್ತಾರೆ –ಈ ರಾತ್ರಿಯು ನಮ್ಮಲ್ಲಿ ಮಾತನಾಡುವುದಿಲ್ಲ. ದುಷ್ಟರಾದ ರಾಕ್ಷಸರು, ಕಳ್ಳರು ಇವರ ಸಹವಾಸ ಉಳ್ಳವಳು ಈ ರಾತ್ರಿಯು. ದುಷ್ಟರ ಸಂಚಾರ ರಾತ್ರಿಯಲ್ಲಿ ಎಂದು ಅಭಿಪ್ರಾಯ. ಜ್ಞಾನಿಗಳು ಎಂದೂ ರಾತ್ರಿಯ ಒಡನಾಟದಲ್ಲಿ ಇರುವುದಿಲ್ಲ. ಸಹವಾಸದೋಷದಿಂದ ಈ ರಾತ್ರಿಯು ಅಹಂಕಾರಿಯಾಗಿದ್ದಾಳೆ.

ಕೃಷ್ಣಪಕ್ಷದ ರಾತ್ರಿಯಲ್ಲಿ ಚಂದ್ರನ ಪ್ರಕಾಶ ಇರುವುದಿಲ್ಲ. ಆದ್ದರಿಂದ ಜನರು ಈ ರಾತ್ರಿಗಳನ್ನು ಅಪೇಕ್ಷಿಸುವುದಿಲ್ಲ. ತಥಾ ಚ ರಾತ್ರಿಯು ಕೃಷ್ಣಪಕ್ಷದಲ್ಲಿ (ಕೃಷ್ಣನ ಪಕ್ಷದಲ್ಲಿ)

ಅಪ್ರಿಯವನ್ನು ಮಾಡುವವಳು. ನಾವು ಕೃಷ್ಣನ ಪಕ್ಷದವರು. ಆತನ ಭಕ್ತರು. ಆದ್ದರಿಂದ ಈ ರಾತ್ರಿಯು ನಮಗೆ ಇಷ್ಟವನ್ನು ಮಾಡುವುದಿಲ್ಲ ಎಂದಳು.

**ಸಂದೇಶ** : ದೇವರಿಗೆ ಅಪ್ರಿಯರಾದವರು ಎಂದೂ ದೇವರನ್ನು ತಿಳಿಸಲು ಸಮರ್ಥರಾಗುವು ದಿಲ್ಲ. ಶಿಷ್ಟರಿಂದಲೇ ನಾವು ದೇವರನ್ನು ತಿಳಿಯಬೇಕು.

**ಕಾಲಿಂದಿ ತಂ ಕಥಯ ಕಂಜದಲಾಯತಾಕ್ಷಂ**
**ನಾಮ್ನಾ ಗುಣೇನ ಸದೃಶೀ ನನು ನಂದಸೂನೋಃ ।**
**ಬ್ರಹ್ಮಣ್ಯದೇವಮೃಷಯಃ ಸಖಿ ಶಾಂತಗಮ್ಯಂ**
**ಬ್ರಹ್ಮಹೃದೇ ಕೃತಗೃಹಂ ಬ್ರುವತೇ ಭವತ್ಯಾಃ** ॥ ೩೪ ॥

ಕಾಲಿಂದಿ=ಹೇ ಯಮುನೆಯೇ; ತಂ=ಅವನನ್ನು; ಕಥಯ=ಹೇಳು; ಕಂಜ=ಕಮಲದ; ದಲ=ದಳದಂತೆ; ಆಯತ=ವಿಶಾಲವಾದ; ಅಕ್ಷಂ=ಕಣ್ಣುಳ್ಳ; ನಾಮ್ನಾ=ಹೆಸರಿನಿಂದ; ಗುಣೇನ=ಬಣ್ಣದಿಂದ' ಸದೃಶೀನನು=ಸಮಾನಳು; ನಂದಸೂನೋಃ=ಕೃಷ್ಣನಿಗೆ; ಬ್ರಹ್ಮಣ್ಯ= ಬ್ರಾಹ್ಮಣರ; ದೇವಂ=ಸ್ವಾಮಿಯಾದ; ಋಷಯಃ=ಋಷಿಗಳು; ಸಖಿ=ಗೆಳತಿಯೇ; ಶಾಂತ=ಸಾಧುಗಳಿಂದ; ಗಮ್ಯಂ=ಲಭ್ಯನಾದ; ಬ್ರಹ್ಮಹೃದೇ=ಬ್ರಹ್ಮಹೃದದಲ್ಲಿ; ಕೃತ= ಮಾಡಲ್ಪಟ್ಟ; ಗೃಹಂ=ಮನೆವುಳ್ಳ; ಬ್ರುವತೇ=ಹೇಳುತ್ತಾರೆ; ಭವತ್ಯಾಃ=ನಿನ್ನ.

ಯಮುನೆಯೇ ನಿನಗೂ ಕೃಷ್ಣನಿಗೂ ಅನೇಕ ರೀತಿಯಿಂದ ಹೋಲಿಕೆ ಇದೆ. ನಿಮ್ಮಿಬ್ಬರ ಹೆಸರು ಕೃಷ್ಣ ಎಂದು. ಯಮುನೆಯನ್ನು ಕೃಷ್ಣಾ ಎಂಬ ಹೆಸರಿನಿಂದಲೂ ಕರೆಯುತ್ತಾರೆ. ನಿಮ್ಮ ಮೈಬಣ್ಣವೂ ಕಪ್ಪು. ಯಮುನೆಯ ನೀರು ಕಪ್ಪು. ಆದ್ದರಿಂದ ನಿಮ್ಮಿಬ್ಬರಿಗೆ ಒಳ್ಳೆಯ ಗೆಳೆತನ ಇದೆ. ಆತ ನಮ್ಮಿಂದ ಕಣ್ಮರೆಯಾದಾಗ ನಿನ್ನಲ್ಲಿ ಹೇಳಿ ಹೋಗಿರಬಹುದು. ನಿನ್ನಲ್ಲಿ ಒಂದು ಮಡು ಇದೆ. ಅದರಲ್ಲಿ ದೇವರಮನೆ ಇದೆ. ಆ ಮನೆಯಲ್ಲಿ ದೇವರು ಇರುತ್ತಾನೆ. ಆ ಮಡುವಿನ ಹೆಸರು ಬ್ರಹ್ಮಹೃದ ಎಂದು. ಆದ್ದರಿಂದ ದೇವರು ಅಲ್ಲಿ ಇರಲೇಬೇಕು. ನೀನು ಆ ಮಡುವಿನಲ್ಲಿ ಶಾಂತಳಾಗಿ ಇರುತ್ತಿ. ಯಾಕೆಂದರೆ ಆ ಮಡು ಬಹಳ ಆಳ ಇದೆ. ಆಳದ ಸ್ಥಳದಲ್ಲಿ ನೀರು ಯಾವ ಶಬ್ದವನ್ನೂ ಮಾಡುವುದಿಲ್ಲ. ಶಾಂತಿ ಉಳ್ಳವರಿಗೆ ದೇವರು ಲಭ್ಯ. ಆತ ಜ್ಞಾನಿಗಳಿಗೆ ಲಭ್ಯ ಎಂದು ಋಷಿಗಳು ಹೇಳುತ್ತಾರೆ. ಆದ್ದರಿಂದ ನಿನ್ನಲ್ಲಿರುವ ದೇವರಿಗೆ ನಮ್ಮ ದುಃಖವನ್ನು ತಿಳಿಸು ಎಂದು ಗೋಪಿಯರು ಯಮುನೆಯಲ್ಲಿ ತಮ್ಮ ಅಳಲನ್ನು ತೋಡಿಕೊಂಡರು.

**ಸಂದೇಶ** : ದೇವರು ಬೇಕು ಎಂದು ಬಹಳ ಅಪೇಕ್ಷೆ ಉಳ್ಳವರು ಮನದಲ್ಲಿ ಯಾವ ಸಂಕೋಚವನ್ನೂ ಪಡುವುದಿಲ್ಲ. ನಾವು ದೊಡ್ಡವರು, ಇವರಲ್ಲಿ ದೇವರ ವಿಷಯವನ್ನು ಹೇಗೆ ಕೇಳುವುದು –ಎಂದು. ಎಲ್ಲಾ ದುರಭಿಮಾನವನ್ನೂ ನಾಚಿಕೆಯನ್ನೂ ಬದಿಗಿಟ್ಟು

ನೇರವಾಗಿ ದೇವರನ್ನು ಅವರಲ್ಲಿ ಕೇಳುತ್ತಾರೆ. ಇಷ್ಟು ವಿಶೇಷ –ಯಾರಲ್ಲಿ ದೇವರನ್ನು ಕೇಳುತ್ತಾರೋ, ಅವರಲ್ಲಿ ದೇವರು ಇದ್ದಾನೆ ಎಂದು ಮೊದಲು ನಿಶ್ಚಯವಾಗಿರಬೇಕು.

**ಕಾಲಿಂದಿ ತ್ವಮಘಾನ್ವಿತಾನಪಿ ಸತಃ ಕೃತ್ವಾ ಪವಿತ್ರಾತ್ಮನೋ**
**ಗಂತುಂ ನೈವ ಕದಾಪಿ ಮುಂಚಸಿ ತವ ಭ್ರಾತುರ್ನಿಕೇತಂ ಪ್ರತಿ ।**
**ಕಿಂತು ಕ್ಷೀರಪಯೋಬ್ಧಿವಾಸನಿರತಾನ್ ಪ್ರೀತಾ ಕರೋಷ್ಯಾಶ್ರಿತಾನ್**
**ಸ್ನಿಗ್ಧೇ ಭರ್ತರಿ ಕಾಮಿನೀ ಜನರುಚಃ ತತ್ಪಕ್ಷ ಏವ ಹ್ಯಲಮ್ ॥ ೩೫ ॥**

ಕಾಲಿಂದಿ=ಯಮುನೆಯೇ; ತ್ವಂ=ನೀನು; ಅಘ=ಪಾಪದಿಂದ; ಅನ್ವಿತಾನ್ ಅಪಿ= ಕೂಡಿದವರಾಗಿದ್ದರೂ; ಸತಃ=ಸಾತ್ವಿಕರನ್ನು; ಕೃತ್ವಾ=ಮಾಡಿ; ಪವಿತ್ರ=ಸ್ವಚ್ಛವಾದ; ಆತ್ಮನಃ=ಮನಸ್ಸುಳ್ಳವರನ್ನಾಗಿ; ಗಂತುಂ=ಹೋಗಲು; ನ ಏವ ಮುಂಚಸಿ=ಬಿಡುವುದಿಲ್ಲ; ಕದಾಪಿ=ಎಂದೂ; ತವ=ನಿನ್ನ; ಭ್ರಾತುಃ=ತಮ್ಮನಾದ ಯಮನ; ನಿಕೇತಂ ಪ್ರತಿ=ಮನೆಯನ್ನು ಕುರಿತು; ಕಿಂತು=ಮತ್ತೆ; ಕ್ಷೀರ=ಹಾಲಿನ; ಪಯೋಬ್ಧಿ=ಸಮುದ್ರದಲ್ಲಿ; ವಾಸ=ವಸತಿಯಲ್ಲಿ; ನಿರತಾನ್=ಆಸಕ್ತರನ್ನಾಗಿ; ಪ್ರೀತಾ=ಸಂತುಷ್ಟಳಾಗಿ; ಕರೋಷಿ=ಮಾಡುತ್ತಿ; ಆಶ್ರಿತಾನ್= ಆಶ್ರಯಿಸಿದವರನ್ನು; ಸ್ನಿಗ್ಧೇ=ಪ್ರೀತಿಸುತ್ತಿರಲು; ಭರ್ತರಿ=ಪತಿಯು; ಕಾಮಿನೀ ಜನ= ಸ್ತ್ರೀಜನರ; ರುಚಃ=ಅಭಿಲಾಷೆಯು; ತತ್ ಪಕ್ಷೇ ಏವ=ಪತಿಯ ಕಡೆಯಲ್ಲಿಯೇ; ಅಲಂ=ಚೆನ್ನಾಗಿ.

ಗೋಪಿಯರು ಯಮುನಾನದಿಯ ಅಭಿಮಾನಿದೇವತಾಸ್ತ್ರೀಯಲ್ಲಿ ಈ ರೀತಿ ಹೇಳುತ್ತಾರೆ –ಯಮನು ನಿನ್ನ ಸಹೋದರನು. ಸಾಮಾನ್ಯವಾಗಿ ಸಾಯುವವರು ಯಮಲೋಕವನ್ನು ಸೇರುತ್ತಾರೆ. ಕೆಲವೊಂದು ಸಂದರ್ಭದಲ್ಲಿ ಸಾತ್ವಿಕರೂ ಪಾಪವನ್ನು ಮಾಡುತ್ತಾರೆ. ಅನಂತರ ಪಾಪದ ಪರಿಹಾರಕ್ಕಾಗಿ ನಿನ್ನಲ್ಲಿ ಸ್ನಾನ ಮಾಡುತ್ತಾರೆ. ನೀನು ಅವರ ಪಾಪವನ್ನು ಕಳೆಯುತ್ತಿ. ಅವರನ್ನು ಸತ್ತ ಅನಂತರ ನಿನ್ನ ತಮ್ಮನ ಮನೆಗೆ ಕಳಿಸುವುದಿಲ್ಲ. ಸಮುದ್ರಕ್ಕೆ ಕಳಿಸುತ್ತಿ. ಸಮುದ್ರ ನಿನ್ನ ಗಂಡನ ಮನೆ. ಸಮುದ್ರದಲ್ಲಿ ದೇವರು ಇರುತ್ತಾನೆ. ಅಂದರೆ ದೇವರ ಬಳಿಗೆ ಕಳಿಸುವಿ. ಇದು ಲೋಕದಲ್ಲಿಯೂ ಇದೆ. ಪತಿಯು ಪತ್ನಿಯನ್ನು ಚೆನ್ನಾಗಿ ಪ್ರೀತಿಸುತ್ತಿದ್ದರೆ ಪತ್ನಿಯು ತನ್ನ ತವರುಮನೆಗಿಂತ ಹೆಚ್ಚಾಗಿ ಗಂಡನ ಮನೆಯನ್ನು ಪ್ರೀತಿಸುತ್ತಾಳೆ. ನಾವು ಸಾತ್ವಿಕರಿದ್ದೇವೆ. ಕೃಷ್ಣನ ವಿರಹ ನಮಗಾಗಿದೆ. ಇದರಿಂದ ನಾವು ಪಾಪ ಮಾಡಿದ್ದೇವೆ ಎಂದರ್ಥ. ನಾವು ನಿನ್ನಲ್ಲಿ ಸ್ನಾನಮಾಡುತ್ತೇವೆ. ಅನಂತರ ಸಾಯುತ್ತೇವೆ. ಇಂತಹ ನಮ್ಮನ್ನು ನೀನು ಸಮುದ್ರಕ್ಕೆ ನಿನ್ನ ಪತಿಯ ಮನೆಗೆ ಕರೆದುಕೊಂಡು ಹೋಗು. ನಮಗೆ ಕೃಷ್ಣನನ್ನು ತೋರಿಸು ಎಂದು.

**<u>ಸಂದೇಶ</u>** : ಸಾತ್ವಿಕರಾದ ಜೀವರನ್ನು ಕರ್ಮಾಚರಣೆಯ ಮೂಲಕ ಸ್ವಚ್ಛಗೊಳಿಸಿ ಅವರನ್ನು ದೇವರ ಬಳಿಗೆ ಒಯ್ಯುವುದು ದೇವತೆಗಳಿಗೆ ದೇವರು ಒಪ್ಪಿಸಿದ ಕೆಲಸ.

ರಂಗತ್ತರಂಗಚಯಸಂಗತವಾಯುನಾ ತ್ವಂ
ಮಾಂಗಲ್ಯದಾ ಕಿಲ ಸಮೀಪಕೃತಾಲಯಾನಾಮ್ ।
ಭೃಂಗೀರಿವಾಂತಿಕವನೇ ತವ ಸಂಚರಂತೀಃ
ಸಂಗೀತಕೃಷ್ಣಚರಿತಾಃ ಕಿಮುಪೇಕ್ಷಸೇ ನಃ ॥ ೩೬ ॥

ರಂಗತ್=ಚಂಚಲವಾದ; ತರಂಗ=ಅಲೆಗಳ; ಚಯ=ಸಮೂಹದಿಂದ; ಸಂಗತ=ಕೂಡಿದ; ವಾಯುನಾ=ಗಾಳಿಯಿಂದ; ತ್ವಂ=ನೀನು; ಮಾಂಗಲ್ಯ=ಒಳ್ಳೆಯದನ್ನು; ದಾ ಕಿಲ=ಕೊಡುವವಳು ತಾನೆ; ಭೃಂಗೀಃ ಇವ=ಭ್ರಮರಗಳಂತೆ; ಅಂತಿಕ=ಸಮೀಪದ; ವನೇ=ಕಾಡಲ್ಲಿ; ತವ=ನಿನ್ನ; ಸಂಚರಂತೀಃ=ಸಂಚರಿಸುವ; ಸಂಗೀತ=ಚೆನ್ನಾಗಿ ಹೇಳಲ್ಪಟ್ಟ; ಕೃಷ್ಣ=ಕೃಷ್ಣನ; ಚರಿತಾಃ=ಚರಿತ್ರೆಯುಳ್ಳ; ಕಿಂ=ಯಾಕೆ? ಉಪೇಕ್ಷಸೇ=ಕಡೆಗಣಿಸುತ್ತಿ; ನಃ=ನಮ್ಮನ್ನು.

ಎಲೋ ಯಮುನೆಯೇ, ನಿನ್ನ ದಡದಲ್ಲಿ ಎರಡೂ ಕಡೆ ಬಹಳ ಜನರು ವಾಸವಾಗಿರುತ್ತಾರೆ. ನಿನ್ನ ನೀರಿನ ತೆರೆಗಳ ಮೇಲಿಂದ ಗಾಳಿಯು ಬೀಸುತ್ತದೆ. ಆದ್ದರಿಂದ ಅದು ಪವಿತ್ರವಾದ ಗಾಳಿ. ಈ ಗಾಳಿಯಿಂದ ನೀನು ಜನರನ್ನು ಪವಿತ್ರರನ್ನಾಗಿ ಮಾಡುತ್ತಿ. ಅವರು ನಿನ್ನನ್ನಾಗಲೀ, ಕೃಷ್ಣನನ್ನಾಗಲೀ ಹೊಗಳುತ್ತಿಲ್ಲ. ನಾವು ಸದಾ ಕಾಲ ಭ್ರಮರಗಳಂತೆ ಕೃಷ್ಣನ ಗುಣಗಾನವನ್ನು ಮಾಡುತ್ತಾ ಇದ್ದೇವೆ. ಆದರೂ ನಮ್ಮನ್ನು ಯಾಕೆ ತಿರಸ್ಕರಿಸುತ್ತಿ?

**ಸಂದೇಶ** : ಎಲ್ಲಾ ದೇವತೆಗಳೂ ವಾಯುದೇವರ ಮೂಲಕವೇ ನಮಗೆ ಸ್ಪಂದಿಸುತ್ತಾರೆ. ದೇವರು ನಮಗೆ ವಿಮುಖನಾದರೆ ವಾಯುದೇವರೂ ತಟಸ್ಥರಾಗುತ್ತಾರೆ.

ಹೇ ಮಂದಮಾರುತ ಮುಕುಂದಪದಾಬ್ಜಗಂಧ–
ಶ್ರೀಮಾನನೀಯ ತಮಿಹಾನಯ ಮಾನ್ಯಗಮ್ಯಮ್ ।
ನೋ ಚೇತ್ ಬಹಿರ್ನಯ ತವಾಂಗಸಮಾನಜಾತಿಂ
ಪ್ರಾಣಂ ಹೃದಿಸ್ಥಿತಮಥಾರ್ಪಯ ಕೃಷ್ಣಪಾದೇ ॥ ೩೭ ॥

ಹೇ=ಎಲೋ; ಮಂದ=ನಿಧಾನವಾದ; ಮಾರುತ=ಗಾಳಿಯೇ; ಮುಕುಂದ=ಕೃಷ್ಣನ; ಪದ=ಚರಣವೆಂಬ; ಅಬ್ಜ=ಕಮಲದ; ಗಂಧ=ಪರಿಮಳವೆಂಬ; ಶ್ರೀ=ಸಂಪತ್ತಿನಿಂದ; ಮಾನನೀಯ=ಪೂಜ್ಯನೇ; ತಂ=ಕೃಷ್ಣನನ್ನು; ಇಹ=ಇಲ್ಲಿಗೆ; ಆನಯ=ತಾ; ಮಾನ್ಯ=ಶ್ರೇಷ್ಠರಿಂದ; ಗಮ್ಯಂ=ಹೊಂದಲ್ಪಡುವ; ನೋ ಚೇತ್=ಇಲ್ಲದಿದ್ದರೆ; ಬಹಿಃ=ಹೊರಗೆ; ನಯ=ತಾ; ತವ=ನಿನ್ನ; ಅಂಗ=ಪ್ರಿಯನೇ; ಸಮಾನಜಾತಿಂ=ನಿನ್ನಂತಿರುವ; ಪ್ರಾಣಂ= ಗಾಳಿಯನ್ನು; ಹೃದಿ=ದೇಹದಲ್ಲಿ; ಸ್ಥಿತಂ=ಇರುವ; ಅಥ=ನಂತರ; ಅರ್ಪಯ=ಒಪ್ಪಿಸು; ಕೃಷ್ಣಪಾದೇ=ಕೃಷ್ಣನ ಚರಣಗಳಲ್ಲಿ.

ಎಲೋ ಗಾಳಿಯೇ ನಿನಗೆ ಬಹಳ ಶಕ್ತಿ ಇದೆ. ಯಾವುದನ್ನು ಬೇಕಾದರೂ ತೆಗೆಯುತ್ತಿ. ಹಾಗೆಯೇ ಇಡುತ್ತಿ. ನಿನ್ನನ್ನು ನಾವು ಬಹಳ ಗೌರವಿಸುತ್ತೇವೆ. ನೀನು ದೇವರ ಪಾದಸ್ಪರ್ಶವನ್ನು ಮಾಡುತ್ತಿ. ಆತನ ಪಾದದ ಚಂದನದ ಪರಿಮಳ ಸಂಪತ್ತನ್ನು ಹಿಡಿದುಕೊಂಡು ಚಲಿಸುತ್ತಿ. ನಿನ್ನ ಸ್ಪರ್ಶ ನಮಗೆ ಆದಾಗ ಚಂದನದ ಪರಿಮಳವು ಮೂಗಿಗೆ ಬಡಿಯುತ್ತದೆ. ಕೃಷ್ಣನ ನೆನಪನ್ನು ಇಮ್ಮಡಿಗೊಳಿಸುತ್ತದೆ. ಪೂಜ್ಯನಾದ ಆ ಕೃಷ್ಣನ ಸಂಪರ್ಕ ನಿನಗಾಗಿದೆ. ಆತನ ಚಂದನದ ಪರಿಮಳವನ್ನು ತರುವುದಕ್ಕಿಂತ ನೀನು ಆತನನ್ನೇ ತಾ. ತಾರದಿದ್ದರೆ ನಿನಗೂ ನಮಗೂ ಸಂಬಂಧವಿಲ್ಲ. ಸದ್ಯ ಈಗ ನಿನ್ನ ಜಾತಿಯವನು ನಮ್ಮಲ್ಲಿ ಒಳಗೆ ಇದ್ದಾನೆ. ಆತನನ್ನೂ ನೀನು ಕರೆದುಕೊಂಡು ಹೋಗು. ಕರೆದುಕೊಂಡು ಹೋಗಿ ಎಲ್ಲೆಲ್ಲೋ ಬಿಡಬೇಡ. ಕೃಷ್ಣನ ಪಾದದಲ್ಲಿ ಹಾಕು. ಬದುಕಿರುವಾಗ ಕೃಷ್ಣನ ಸಂಪರ್ಕ ಆಗದಿದ್ದರೂ ಸತ್ತಮೇಲೆ ಆಗಲೇಬೇಕು. ಯಾಕೆಂದರೆ ಸಾಯುವುದಕ್ಕೆ 'ದೇವರ ಪಾದವನ್ನು ಸೇರಿದರು' ಎಂದು ವ್ಯವಹರಿಸುವುದಿದೆ. ಈ ರೀತಿ ಗೋಪಿಯರು ತಮ್ಮ ಮರಣವನ್ನು ಈ ರೀತಿ ಚಮತ್ಕಾರದಿಂದ ವರ್ಣಿಸುತ್ತಾರೆ.

**ಸಂದೇಶ** : 'ಅಪ್ಯರ್ಚಿತೋ ಗುರುದ್ವಾರಾ ಪ್ರಸಾದಕೃತ್ ಅಹಂ' ಎಂದು ದೇವರ ಮಾತು. ನೇರವಾಗಿ ಅನುಗ್ರಹಿಸುವ ಶಕ್ತಿ ದೇವರಿಗಿದ್ದರೂ ಗುರುಗಳ ಮೂಲಕವೇ ಅನುಗ್ರಹಿಸುತ್ತಾನೆ ಎಂದು ಇದರ ಅರ್ಥ. ನಮಗೆಲ್ಲಾ ಗುರುಗಳು ವಾಯುದೇವರು. ಈ ವಾಯುದೇವರ ಮೂಲಕವೇ ನಮಗೆ ದೇವರ ದರ್ಶನ ಆಗಬೇಕು. ನಾವು ದೇವರನ್ನು ಸೇರಬೇಕು.

**ಅತೀಂದ್ರಿಯಸ್ಯಾಮಿತವಿಕ್ರಮಸ್ಯ**
**ಪ್ರದರ್ಶಯಸ್ಯಂಗ ಪದಾಬ್ಜಗಂಧಮ್ ।**
**ಅಪೇಕ್ಷಸೇ ಕಿಂ ಪರಮಸ್ಯ ಸಾಮ್ಯಂ**
**ಅದೃಶ್ಯ ದೃಶ್ಯಾತ್ಮವಿಶೇಷಧರ್ಮನ್** ॥ ೩೮ ॥

ಅತೀಂದ್ರಿಯಸ್ಯ=ಇಂದ್ರಿಯಗಳಿಗೆ ಅಗೋಚರನಾದ; ಅಮಿತ=ಬಹಳವಾದ; ವಿಕ್ರಮಸ್ಯ=ಶಕ್ತಿಯುಳ್ಳ ಕೃಷ್ಣನ; ಪ್ರದರ್ಶಯಸಿ=ತೋರಿಸುತ್ತಿ; ಅಂಗ=ಪೂಜ್ಯನೇ; ಪದ=ಚರಣವೆಂಬ; ಅಬ್ಜ=ಕಮಲದ; ಗಂಧಂ=ಪರಿಮಳವನ್ನು; ಅಪೇಕ್ಷಸೇ=ಅಪೇಕ್ಷಿಸುತ್ತಿ; ಕಿಂ=ಏನು? ಪರಮಸ್ಯ=ಶ್ರೇಷ್ಠನಾದ ಕೃಷ್ಣನ; ಸಾಮ್ಯಂ=ಹೋಲಿಕೆಯನ್ನು; ಅದೃಶ್ಯ= ಕಾಣಿಸದವನೆ; ದೃಶ್ಯ=ಗೋಚರಿಸುವ; ಆತ್ಮ=ತನ್ನ; ವಿಶೇಷ=ವಿಲಕ್ಷಣವಾದ; ಧರ್ಮನ್= ಧರ್ಮವುಳ್ಳವನೇ.

ಕೃಷ್ಣನು ಇಂದ್ರಿಯಗಳಿಗೆ ಅಗೋಚರನು. ತನ್ನ ಶಕ್ತಿಯನ್ನು ತೋರಿಸುತ್ತಾನೆ. ಆತನ ಶಕ್ತಿಯು ನಮ್ಮ ಮನೋ ಇಂದ್ರಿಯಕ್ಕೆ ಗೋಚರಿಸುತ್ತದೆ. ಈ ಗಾಳಿಯು ತಾನು ದೇವರನ್ನು ತೋರಿಸುವುದಿಲ್ಲ. ದೇವರ ಚರಣದ ಗಂಧವನ್ನು ಮೂಗಿಗೆ ತೋರಿಸುವ

ಮೂಲಕ ದೇವರ ಅಸ್ತಿತ್ವವನ್ನು ತಿಳಿಸುತ್ತದೆ. ಈ ಗಾಳಿಯೂ ದೇವರಂತೆ ತಾನು ಕಣ್ಣಿಗೆ ಕಾಣುವುದಿಲ್ಲ. ಆದರೂ ತನ್ನ ಧರ್ಮವನ್ನು ತೋರಿಸಿಕೊಡುತ್ತದೆ. ನೀರಿನಲ್ಲಿ ತಣ್ಣಗಿನ ಸ್ಪರ್ಶ. ಬೆಂಕಿಯು ಬಿಸಿಯಾದ ಸ್ಪರ್ಶವುಳ್ಳದ್ದು. ಗಾಳಿಯು ಬಿಸಿಯೂ ಅಲ್ಲದ ತಣ್ಣಗೆಯೂ ಅಲ್ಲದ ಸ್ಪರ್ಶವುಳ್ಳದ್ದು. ಈ ಧರ್ಮದ ಅನುಭವವು ಚರ್ಮದಿಂದ ಬರುತ್ತದೆ. ಗೋಪಿಯರು ಹೇಳುತ್ತಾರೆ: ಎಲೋ ಗಾಳಿಯೇ, ನಮಗೆ ಕೃಷ್ಣನನ್ನು ತೋರಿಸು ಎಂದು ನಿನ್ನಲ್ಲಿ ಬೇಡಿದರೆ ನೀನು ಆತನನ್ನು ತೋರಿಸದೆ ಆತನ ದೇಹದ ಧರ್ಮವಾದ ಪರಿಮಳವನ್ನು ತೋರಿಸುತ್ತಿ. ನೀನೂ ಹಾಗೆಯೇ, ನಿನ್ನನ್ನು ತೋರಿಸಿಕೊಡದೆ ನಿನ್ನ ಧರ್ಮವಾದ ಸ್ಪರ್ಶವನ್ನು ತೋರಿಸಿಕೊಡುತ್ತಿ. ಎಲೋ ಗಾಳಿಯೆ, ನೀನೂ ಕೃಷ್ಣನಂತೆ ಆಗಬೇಕೆಂದು ಅಪೇಕ್ಷಿಸಿದ್ದಿಯೇನು?

**<u>ಸಂದೇಶ</u>** : ವಾಯುದೇವರು ಜೀವೋತ್ತಮರು. ಬಹಳ ಶಕ್ತರು. ಆದರೂ 'ಪರಮಂ ಸಾಮ್ಯಂ ಉಪೈತಿ' ಎಂಬ ಶ್ರುತಿಪ್ರಕಾರ ದೇವರ ಸಾಮ್ಯವನ್ನು ಕೆಲವು ಅಂಶದಲ್ಲಿ ಹೊಂದುತ್ತಾರೆ, ಹೊರತು ಐಕ್ಯವನ್ನಲ್ಲ.

**ಹೇ ಪಕ್ಷಿಣಃ ಕೃಷ್ಣಮುದೀರಯಧ್ವಂ**
**ಪಾಪಾಪಹಂ ಪಾವನಪಾವನಂ ತಮ್ ।**
**ನೋ ಚೇತ್ ಭವತ್‌ಕಂಠವಿಶೋಷಣೈರ್ನಃ**
**ಶ್ರೋತ್ರಸ್ಯ ಶಲ್ಯೋಪಮಿತೈಃ ಕಿಮೇತೈಃ** ॥ ೩೯ ॥

ಹೇ ಪಕ್ಷಿಣಃ=ಎಲೋ ಹಕ್ಕಿಗಳೇ; ಕೃಷ್ಣಂ=ಕೃಷ್ಣನನ್ನು; ಉದೀರಯಧ್ವಂ=ತಿಳಿಸಿರಿ; ಪಾಪ=ಪಾಪಗಳನ್ನು; ಅಪಹಂ=ಪರಿಹರಿಸುವ; ಪಾವನ=ಪವಿತ್ರಗಳಿಗೂ; ಪಾವನಂ= ಪವಿತ್ರನಾದ; ತಂ=ಆ; ನೋ ಚೇತ್=ಇಲ್ಲದಿದ್ದರೆ; ಭವತ್=ನಿಮ್ಮ; ಕಂಠ=ಕುತ್ತಿಗೆಯ; ವಿಶೋಷಣೈಃ=ಒಣಗುವುದರಿಂದ; ನಃ=ನಮ್ಮ; ಶ್ರೋತ್ರಸ್ಯ=ಕಿವಿಗಳಿಗೆ; ಶಲ್ಯ=ಬಾಣಗಳಿಗೆ; ಉಪಮಿತೈಃ=ಸಮಾನಗಳಾದ; ಕಿಂ=ಏನು ಲಾಭ?; ಏತೈಃ=ಈ ಧ್ವನಿಗಳಿಂದ.

ಎಲೋ ಹಕ್ಕಿಗಳೇ, ನೀವು ಇಂಪಾಗಿ ಹಾಡುತ್ತೀರಿ. ಆ ಹಾಡಲ್ಲಿ ನಿಮ್ಮದೇ ಆದ ಒಂದು ಧಾಟಿ ಇದೆ. ಹಾಡುಗಳಿಗೆ ದೇವರು ಒಲಿಯುತ್ತಾನೆ. ನಿಮ್ಮ ಮನಸ್ಸೂ ಶುದ್ಧವಾಗಿದೆ. ಹಾಡುವುದರಿಂದ ಪಾಪ ಪರಿಹಾರವಾಗುತ್ತದೆ. ಹೃದಯ ಪವಿತ್ರವಾಗುತ್ತದೆ. ಆಗ ದೇವರು ಸಿಗುತ್ತಾನೆ. ನೀವು ಹಾಡುವ ಮೂಲಕ ದೇವರನ್ನು ಒಲಿಸಿಕೊಂಡು ನಮಗೂ ತೋರಿಸಿರಿ. ನಿಮಗೂ ದೇವರು ಒಲಿಯಲಿಲ್ಲವೋ, ಹಾಗಾದರೆ ನೀವು ಹಾಡಿ ಏನು ಪ್ರಯೋಜನ. ಕೇವಲ ಕಂಠಶೋಷಣೆ. ನಮಗೆ ನಿಮ್ಮ ಧ್ವನಿಯಿಂದ ಕೃಷ್ಣನ ನೆನಪು ಹೆಚ್ಚಾಗಿ ಮತ್ತಷ್ಟು ತಾಪವಾಗುತ್ತದೆ. ನಮ್ಮ ಕಿವಿಗೆ ಅಂಕುಶ ಹಾಕಿ ತಿವಿದಂತೆ ಆಗುತ್ತಿದೆ. ಆದ್ದರಿಂದ ಸುಮ್ಮನಿರಿ.

**ಸಂದೇಶ** : ನಮ್ಮ ಹಾಡಾಗಲೀ, ಉಪನ್ಯಾಸವಾಗಲೀ ದೇವರಂಜನೆಗಾಗಿ ಇರಬೇಕು, ಹೊರತು ಸಭಾರಂಜನೆಗಾಗಿ ಅಲ್ಲ. ಸಭಾರಂಜನೆಗಾಗಿ ಹಾಡಿದರೆ ಹಾಡುಗಳನ್ನು ದುರುಪಯೋಗಪಡಿಸಿದಂತೆ ಆಗುತ್ತದೆ. ಇದರಿಂದ ಭಾವುಕರು ತುಂಬಾ ನೊಂದುಕೊಳ್ಳುತ್ತಾರೆ.

ಸ್ವರೇಣ ಸ್ಮಾರಯನ್ ಶೌರಿಂ ಪ್ರಯಚ್ಛತಿ ನ ನಃ ಸಖಿ ।
ಪರಪುಷ್ಟಃ ಸ ವಿಸ್ಪಷ್ಟಂ ಪೋಷ್ಟುರ್ವೈ ವಿಪ್ರಲಂಭಕಃ ॥ ೪೦ ॥

ಸ್ವರೇಣ=ಧ್ವನಿಯಿಂದ; ಸ್ಮಾರಯನ್=ಸ್ಮರಣೆಗೆ ತಂದುಕೊಡುವ; ಶೌರಿಂ=ಕೃಷ್ಣನನ್ನು; ನ ಪ್ರಯಚ್ಛತಿ=ಕೊಡುವುದಿಲ್ಲ; ನಃ=ನಮಗೆ; ಸಖಿ=ಗೆಳತಿಯೇ; ಪರಪುಷ್ಟಃ= ಇನ್ನೊಬ್ಬರಿಂದ ಬೆಳೆಯುವ; ಸಃ=ಕೋಗಿಲೆಯು; ವಿಸ್ಪಷ್ಟಂ=ಚೆನ್ನಾಗಿ; ಪೋಷ್ಟುಃ=ಬೆಳೆಸುವವನಿಗೆ; ವೈ=ನಿಶ್ಚಯ; ವಿಪ್ರಲಂಭಕಃ=ಮೋಸಗಾರನು.

ಕೋಗಿಲೆಯು ಪರಪುಷ್ಟ ಎಂಬ ಹೆಸರುಳ್ಳದ್ದು. ಅದು ಕಾಗೆಯ ಗೂಡಿನಲ್ಲಿ ಮೊಟ್ಟೆ ಇಡುತ್ತದೆ. ತಾನು ಸ್ವಂತ ಗೂಡು ಕಟ್ಟುವುದಿಲ್ಲ. ಕಾಗೆಗೆ ಇದು ತಿಳಿಯದು. ಅದು ತನ್ನ ಮೊಟ್ಟೆಗಳಿಗೆ ಕಾವು ಕೊಡುವಾಗ ಈ ಮೊಟ್ಟೆಗಳಿಗೂ ಕೊಡುತ್ತದೆ. ಮೊಟ್ಟೆ ಒಡೆದು ಹೊರಬಂದ ಮರಿಗಳು ರೆಕ್ಕೆ ಬಲಿತಾಗ ಓಡಿ ಹೋಗುತ್ತವೆ. ಈ ರೀತಿ ತನ್ನನ್ನು ಸಾಕಿದ ವ್ಯಕ್ತಿಗೇ ಮೋಸಮಾಡುತ್ತವೆ. ಇನ್ನೊಬ್ಬರಿಂದ ಬದುಕುವವನು ಲೋಭಿಯಾಗಿರುತ್ತಾನೆ. ಆತನು ತನ್ನಲ್ಲಿ ಇರುವುದನ್ನು ಇನ್ನೊಬ್ಬರಿಗೆ ಕೊಡುವುದಿಲ್ಲ.

ಈ ಹಿನ್ನೆಲೆಯಿಂದ ಒಬ್ಬಳು ತನ್ನ ಗೆಳತಿಯಲ್ಲಿ ಈ ರೀತಿ ಹೇಳುತ್ತಾಳೆ –ಎಲೋ ಗೆಳತಿಯೇ, ಈ ಕೋಗಿಲೆಯು ಕೂಗಿದಾಗ ಕೃಷ್ಣನ ನೆನಪಾಗುತ್ತದೆ. ನಮಗೆ ಕೃಷ್ಣನ ನೆನಪಾಗಲೆಂದೇ ಅದು ಪ್ರಾಯಶಃ ಕೂಗುತ್ತದೆ. ಆದರೆ ನಮಗೆ ಕೃಷ್ಣನನ್ನು ತೋರಿಸುವುದಿಲ್ಲ. ತೋರಿದರೆ ನಾವು ಆತನನ್ನು ಕರೆದುಕೊಂಡು ಹೋಗುತ್ತೇವೆ. ಹೋದರೆ ಅದಕ್ಕೆ ಕೃಷ್ಣದರ್ಶನ ತಪ್ಪುತ್ತೆ. ತಪ್ಪಿದರೆ ಆತನಂತೆ ಹಾಡಲು ಆಗುವುದಿಲ್ಲ. ಜನರಿಂದ ಹೊಗಳಿಸಿಕೊಳ್ಳಲು ಆಗುವುದಿಲ್ಲ ಎಂದು ಭಯ ಇದ್ದರಿಬೇಕು. ಅಥವಾ ತಾನು ಕೃಷ್ಣನನ್ನು ನೋಡದಿದ್ದರೂ ಇಂಪಾಗಿ ಹಾಡುವ ಮೂಲಕ ತಾನು ಕೃಷ್ಣನನ್ನು ನೋಡಿದವನೆಂದು ನಮಗೆ ಮೋಸಮಾಡುತ್ತಿರಬಹುದು. ತನ್ನನ್ನು ಸಾಕಿ ಬೆಳೆಸಿದ ವ್ಯಕ್ತಿಗೇ ಮೋಸಮಾಡುವ ಈ ಪಕ್ಷಿಯು ನಮಗೆ ಮೋಸಮಾಡುವುದರಲ್ಲಿ ಆಶ್ಚರ್ಯವಿಲ್ಲ.

**ಸಂದೇಶ** : ವಂಚಿಸುವವರೂ ದೇವರ ಮಕ್ಕಳೇ. ಆದ್ದರಿಂದ ಅವರಲ್ಲಿಯೂ ದೇವರು ತನ್ನ ಯಾವುದಾದರೊಂದು ಧರ್ಮವನ್ನು ಇಟ್ಟಿರುತ್ತಾನೆ.

ಹೇ ಕೃಷ್ಣಸಾರ ಕೃತಕೌತುಕಮಾತ್ಮದೃಷ್ಟೇಃ
ಶ್ರೀಕೃಷ್ಣವರ್ಷ್ಮ ಕಿಮಲಕ್ಷಿ ಭರಂ ಬಿಭರ್ಷಿ ।

ನೇತ್ರೋದಯಸ್ಯ ಮುರಲೀರವರಂಜಿತಸ್ಯ ರವ
ಶ್ರೋತ್ರಸ್ಯ ಚೋನ್ನತಿರಿಯಂ ಭವತಶ್ಚಕಾಸ್ತಿ ॥ ೪೧ ॥

ಹೇ=ಎಲೋ; ಕೃಷ್ಣಸಾರ=ಕೃಷ್ಣಮೃಗವೇ; ಕೃತ=ಮಾಡಲ್ಪಟ್ಟ; ಕೌತುಕಂ= ಆಶ್ಚರ್ಯವುಳ್ಳ; ಆತ್ಮ=ತನ್ನ; ದೃಷ್ಟೇಃ=ದರ್ಶನದಿಂದ; ಶ್ರೀಕೃಷ್ಣ=ಕೃಷ್ಣನ; ವರ್ಷ್ಮ=ಶರೀರವು; ಕಿಂ ಅಲಕ್ಷಿ=ಕಾಣಲ್ಪಟ್ಟಿತೋ?; ಭರಂ=ಅತಿಶಯವನ್ನು; ಬಿಭರ್ಷಿ=ಧರಿಸಿದ್ದಿ; ನೇತ್ರ=ಕಣ್ಣಿನ; ಉದಯಸ್ಯ=ಉತ್ಸವದ; ಮುರಲೀ=ಕೊಳಲಿನ; ರವ=ಧ್ವನಿಯಿಂದ; ರಂಜಿತಸ್ಯ= ಆನಂದಿತವಾದ; ಶ್ರೋತ್ರಸ್ಯ=ಕಿವಿಯ; ಉನ್ನತಿಃ=ಔನ್ನತ್ಯವು; ಇಯಂ=ಈ; ಭವತಃ=ನಿನ್ನ; ಚಕಾಸ್ತಿ=ಶೋಭಿಸುತ್ತದೆ.

ಮುಂಭಾಗದಲ್ಲಿ ಕಂಡ ಜಿಂಕೆಯೊಂದನ್ನು ಕುರಿತು ಈ ಮಾತನ್ನು ಹೇಳುತ್ತಾರೆ – ಕೃಷ್ಣಮೃಗವೇ, ನಿನ್ನ ಕಣ್ಣುಗಳನ್ನು ಕಂಡಾಗ ನಿನಗೆ ಶ್ರೀಕೃಷ್ಣನ ದರ್ಶನವಾಗಿದೆ ಎಂದು ತೋರುತ್ತದೆ. ಯಾಕೆಂದರೆ ನಿನ್ನ ಕಣ್ಣುಗಳಲ್ಲಿ ಬಹಳ ಉತ್ಸಾಹವು, ಲವಲವಿಕೆಯು ಪುಟಿಯುತ್ತಿದೆ. ಕೃಷ್ಣನ ಶರೀರಕ್ಕೆ ಆ ರೀತಿಯ ಶಕ್ತಿ ಇದೆ. ಎಷ್ಟು ಜಾಡ್ಯದಿಂದ ಕೂಡಿದ ಕಣ್ಣುಗಳಾದರೂ ಕೃಷ್ಣನನ್ನು ಕಂಡಾಗ ಒಮ್ಮೆ ಚುರುಕಾಗುತ್ತವೆ. ಬಹಳ ಅರಳುತ್ತವೆ. ನಿನ್ನ ಕಿವಿಗಳೂ ನೆಟ್ಟಗಿವೆ. ಆತನ ಕೊಳಲಿನ ಧ್ವನಿಗೆ. ಯಾವ ಕಿವಿಗಳಾದರೂ ಒಮ್ಮೆ ಚಳಿ ಬಿಟ್ಟು ನೆಟ್ಟಗಾಗುತ್ತವೆ. ಆದ್ದರಿಂದ ನೀನು ನೋಡಿದ ಕೇಳಿದ ಕೃಷ್ಣನನ್ನು ನಮಗೂ ನೋಡಿಸು. ಕೇಳಿಸು.

**ಸಂದೇಶ** : ದೇವರನ್ನು ಕೇಳದ ಕಿವಿಗಳು ಪರ್ವತದ ೨ ಗುಹೆಗಳು. ಅದರಂತೆ ನಮ್ಮ ದೇಹವೂ ಪರ್ವತದಂತೆ ಬೆಳೆದಿರುತ್ತದೆ. ಅದರ ೨ ಕಿವಿಗಳು ವ್ಯರ್ಥಗಳಾಗುತ್ತವೆ. ಅದೇ ರೀತಿ ಆತನನ್ನು ಕಾಣದ ಕಣ್ಣುಗಳು ನವಿಲಗರಿಯ ಕಣ್ಣುಗಳು. ಆ ಕಣ್ಣುಗಳಿಂದ ನೋಡಲು ಆಗುವುದಿಲ್ಲ. ಈ ಕಣ್ಣುಗಳೂ ಸಾರ್ಥಕವಾದ್ದನ್ನು ನೋಡದೆ ವ್ಯರ್ಥವಾದ್ದನ್ನು ನೋಡಿದರೆ ನೋಡದ ಪ್ರಾಯವೇ.

ಯದಿ ನಿಗಮವಿದೂರಸ್ತ್ವಂ ನೃಣಾಂ ದೂರದೂರಃ
ಹೃದಯಕಮಲತಃ ಕಿಂ ನಾಥ ನಾಪೈಷಿ ತರ್ಹಿ ।
ತರುಣಿ ತನುವಿಯೋಗಃ ಕಿಂ ಮತಸ್ತೇ ಮನೋಜ್ಞೇ
ಪ್ರಿಯಪುರುಷವಿಯೋಗಾದ್ದುಸ್ಸಹಂ ತಂ ನ ಮನ್ಯೇ ॥ ೪೨ ॥

ಯದಿ=ಒಂದುವೇಳೆ; ನಿಗಮ=ವೇದಗಳಿಗೆ; ವಿದೂರ=ದೂರನಾದ; ತ್ವಂ=ನೀನು; ನೃಣಾಂ=ಜನರಿಗೆ; ದೂರದೂರಃ=ಬಹಳ ದೂರನು; ಹೃದಯಕಮಲತಃ= ಹೃದಯಕಮಲದಿಂದ; ಕಿಂ=ಯಾಕೆ?; ನಾಥ=ಒಡೆಯನೇ; ನ ಅಪೈಷಿ=ಹೋಗುವುದಿಲ್ಲ; ತರ್ಹಿ=ಆ ಪಕ್ಷದಲ್ಲಿ; ತರುಣಿ=ಯುವತಿಯೇ; ತನು=ಶರೀರದ; ವಿಯೋಗಃ=

ಅಗಲುವಿಕೆಯು; ಕಿಂ=ಏನು; ಮತಃ=ಇಷ್ಟವೋ; ತೇ=ನಿನಗೆ; ಮನೋಜ್ಞೇ=ಮನಸ್ಸನ್ನು ತಿಳಿದವಳೇ; ಪ್ರಿಯ=ಇಷ್ಟನಾದ; ಪುರುಷ=ವ್ಯಕ್ತಿಯ; ವಿಯೋಗಾತ್=ಅಗಲುವಿಕೆಯಿಂದ; ದುಸ್ಸಹಂ=ಅಸಾಧ್ಯವಾದದ್ದನ್ನಾಗಿ; ನಮನ್ಯೇ=ತಿಳಿಯುವುದಿಲ್ಲ; ತಂ=ಅದನ್ನು.

ಎಲೋ ಕೃಷ್ಣನೇ, ನೀನು ಶ್ರುತಿಗೂ ಸಿಲುಕದ ಅಪ್ರತಿಮ ಮಹಿಮನು. 'ಯತೋ ವಾಚೋ ನಿವರ್ತಂತೇ' ವೇದಗಳು ದೇವರನ್ನು ವರ್ಣಿಸಲು ತೊಡಗಿದವು. ಕೊನೆಗೆ ಸಮಗ್ರವಾಗಿ ವರ್ಣಿಸಲು ಆಗದೆ ಹಿಂದಿರುಗಿದವು ಎಂದು ವೇದಗಳೇ ಹೇಳುತ್ತವೆ. ಅಷ್ಟು ಮಹಿಮೆ ಉಳ್ಳವನು ನೀನು. ಈ ರೀತಿ ದೇವತೆಗಳಿಗೇ ದೂರ. ಮಾನವರಿಗೆ ದೂರದೂರ. ಅಂದರೆ ಬಹಳ ದೂರ. ಹೀಗಿರುವಾಗ ನನ್ನ ಹೃದಯದಲ್ಲಿ ಯಾಕೆ ಇದ್ದಿ? ಇಲ್ಲಿ ಇದ್ದರೆ ನನಗೆ ಸಮೀಪದಲ್ಲಿ ಇದ್ದಂತೆ ಆಗುತ್ತದೆ. ಇಲ್ಲಿಂದಲೂ ಹೊರಡು ಎಂದು ದೇವರ ಅಗಲುವಿಕೆಯಿಂದ ತಪಿಸಿದ ಒಬ್ಬಳು ಈ ರೀತಿ ಹೇಳುತ್ತಿದ್ದಳು. ಇದನ್ನು ಕೇಳಿಸಿಕೊಂಡ ಇನ್ನೊಬ್ಬಳು ಗಾಬರಿಯಿಂದ ಕೇಳುತ್ತಾಳೆ– ಎಲೋ ತರುಣಿಯೇ, ಏನು ಸಾಯಬೇಕೆಂದು ಅಪೇಕ್ಷಿಸುತ್ತಿಯಾ? ಇನ್ನೂ ನಿನಗೆ ಜೀವನ ಬಹಳ ಇದೆ. ತಾರುಣ್ಯಾವಸ್ಥೆಯಲ್ಲಿಯೇ ಇದ್ದಿ. ನಮ್ಮ ದೇಹದಿಂದ ದೇವರನ್ನು ದೂರ ಕಳಿಸುವುದು ಅಂದರೆ ಮರಣ ಎಂದರ್ಥ. 'ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ ಬುಧೈಃ' – ದೇವರು ಯಾವ ದೇಹವನ್ನು ಬಿಡುತ್ತಾನೋ ಆ ದೇಹವನ್ನು ಹೆಣ ಎಂದು ಶಾಸ್ತ್ರವು ಕರೆಯುತ್ತದೆ. ಆದ್ದರಿಂದ ಹಾಗೆಲ್ಲಾ ಪ್ರಲಪಿಸಬೇಡ ಎಂದು. ಇದಕ್ಕೆ ಉತ್ತರವಾಗಿ ಮೊದಲಿನ ಗೋಪಿಯು ಹೇಳುತ್ತಾಳೆ: ಕೃಷ್ಣನನ್ನು ನಾನು ಬಹಳ ಹಚ್ಚಿಕೊಂಡಿದ್ದೇನೆ. ಅವನ ವಿರಹದ ದುಃಖ ನನಗೆ ಆಗುತ್ತಿದೆ. ಇದನ್ನು ಸಹಿಸಲು ನನ್ನಿಂದ ಆಗುವುದಿಲ್ಲ. ಆದ್ದರಿಂದ ಸಾಯಲು ಇಚ್ಛಿಸುತ್ತೇನೆ. ವಿರಹದ ದುಃಖ, ಮರಣದ ದುಃಖ –ಈ ಎರಡರಲ್ಲಿ ನಾನು ಮರಣದ ದುಃಖವನ್ನು ಸಹಿಸಬಲ್ಲೆ ಎಂದು.

**ಸಂದೇಶ** : ಲೋಕದ ವಿಷಯಗಳಿಗಾಗಿ ಪ್ರಾಣವನ್ನು ಕೊಡುವವರು ಲೋಕದಲ್ಲಿ ಇದ್ದಾರೆ. ಇದು ತಪ್ಪು. ದೇವರ ವಿಷಯಕ್ಕಾಗಿ ಪ್ರಾಣವನ್ನು ಕೊಡುವ ಹಂತಕ್ಕೆ ನಾವು ತಲುಪಬೇಕು. 'ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್' –ನಮ್ಮ ಪ್ರಾಣಸಹಿತ ಎಲ್ಲವನ್ನು ದೇವರಿಗಾಗಿ ಮೀಸಲಿಡಬೇಕು.

ತ್ವಯಿ ನ ವಹತಿ ಮಾನಂ ನ ಪ್ರಗಲ್ಭೇತಿ ಕೃಷ್ಣಃ
ಯದಜನಿ ತನುಕಾರ್ಶ್ಯಂ ದೈನ್ಯಮಂತಃ ಕ್ಷಣೇನ ।
ನ ಹಿ ಸಖಿ ಮಮ ದೈನ್ಯಂ ದೀನನಾಥಪ್ರಯುಕ್ತಂ
ಕೃಶತರನಿಖಿಲಾಂಗ್ಯಾಃ ಕಿಂತು ವಿಶ್ಲೇಷವಹ್ನೇಃ ॥ ೪೩ ॥

ತ್ವಯಿ=ನಿನ್ನಲ್ಲಿ; ನ ವಹತಿ=ಮಾಡುವುದಿಲ್ಲ; ಮಾನಂ=ಗೌರವವನ್ನು; ನ ಪ್ರಗಲ್ಭಾ=

ಹದಿಹರೆಯದವಳು ಅಲ್ಲ; ಇತಿ=ಎಂದು; ಕೃಷ್ಣಃ=ಕೃಷ್ಣನು; ಯತ್=ಯಾವ ಕಾರಣದಿಂದ; ಅಜನಿ=ಉಂಟಾಯಿತು; ತನು=ಶರೀರಕ್ಕೆ; ಕಾರ್ಶ್ಯಂ=ಕೃಶತ್ವವು; ದೈನ್ಯಂ=ದೀನತ್ವವು; ಅಂತಃ=ಮನಸ್ಸಿನಲ್ಲಿ; ಕ್ಷಣೇನ=ಕೂಡಲೇ; ನಹಿ=ಅಲ್ಲ; ಸಖಿ=ಗೆಳತಿಯೇ; ಮಮ=ನನ್ನ; ದೈನ್ಯಂ=ದೈನ್ಯವು; ದೀನ=ದುಃಖಿತರ; ನಾಥ=ಒಡೆಯನಾದ ಕೃಷ್ಣನ; ಪ್ರಯುಕ್ತಂ= ನಿಮಿತ್ತವು; ಕೃಶತರ=ಕೃಶವಾದ; ನಿಖಿಲ=ಎಲ್ಲಾ; ಅಂಗ್ಯಾಃ=ಅವಯವವುಳ್ಳ; ಕಿಂತು=ಮತ್ತೆ; ವಿಶ್ಲೇಷ=ವಿಯೋಗವೆಂಬ; ವಹ್ನೇಃ=ಬೆಂಕಿಯ.

'ಎಲೋ ಗೆಳತಿಯೇ, ಕೃಷ್ಣ ನಿನ್ನನ್ನು ಯಾಕೆ ಬಿಟ್ಟುಹೋದ ಅಂದರೆ ನೀನು ಪ್ರಗಲ್ಭೆ ಅಲ್ಲ ಎಂದು. ಪ್ರಗಲ್ಭೆ ಅಂದರೆ ದುಃಖ ಬಂದರೂ ಅದನ್ನು ತಡೆದುಹಿಡಿಯುವವರು. ನಿನ್ನಲ್ಲಿ ಆ ಶಕ್ತಿ ಇಲ್ಲ. ಅದು ಹೇಗೆ ತಿಳಿಯುತ್ತದೆ ಅಂದರೆ ನಿನ್ನ ಶರೀರ ಬಹಳ ಕೃಶವಾಗಿದೆ. ಒಳಗೊಳಗೇ ದುಃಖಿಸುವವರ ಶರೀರವು ಪುಷ್ಟವಾಗಿರುವುದಿಲ್ಲ'. ಇದರಿಂದ ಹೆಣ್ಮಕ್ಕಳ ಲಕ್ಷಣವಾದ ಕೃಶಾಂಗಿತ್ವವು ವ್ಯಕ್ತವಾಗುತ್ತದೆ. ಇದಕ್ಕೆ ಪ್ರತಿಯಾಗಿ ಆಕೆ ಉತ್ತರಿಸುತ್ತಾಳೆ– ನನ್ನ ದೇಹ ಕೃಶವಾಗಿದೆ. ಆದ್ದರಿಂದ ಮಾನಸಿಕವಾಗಿ ದುಃಖಿಯಾಗಿದ್ದೇನೆ ಎಂದು ನೀನು ಹೇಳುತ್ತಿ. ಇದು ಸತ್ಯ. ಆದರೆ ಇದು ಕೃಷ್ಣನ ಪ್ರಯುಕ್ತ ಅಲ್ಲ. ಆತನ ಅಗಲುವಿಕೆ ಎಂಬ ಬೆಂಕಿಯ ಪ್ರಯುಕ್ತ ಎಂದು ಉತ್ತರಿಸಿದಳು.

ಇದರಿಂದ ಆಕೆಯ ಧೀರತ್ವಕ್ಕೂ ತೊಂದರೆ ಬರಲಿಲ್ಲ. ಕೃಷ್ಣನನ್ನು ಬಿಟ್ಟಂತೆಯೂ ಆಗಲಿಲ್ಲ. ಕೃಷ್ಣನಿಂದಾಗಿ ದುಃಖ ಅಲ್ಲ ಎಂದು ಹೇಳಿದ್ದಾಳೆ. ಈ ರೀತಿ ಕೃಷ್ಣನನ್ನು ಧಿಕ್ಕರಿಸಿದಳು. ಕೃಷ್ಣನಿಲ್ಲದಿದ್ದರೂ ನಾನು ಇರಬಲ್ಲೆ ಎಂದು ಮಾತಿನ ಮೂಲಕ ತೋರಿಸಿದಳು. ಇದೇ ಧೀರತ್ವ ಅಂದರೆ. ಇನ್ನು ಕೃಷ್ಣನ ವಿರಹಾಗ್ನಿಯಿಂದ ದುಃಖ ಎಂದು ಹೇಳುವ ಮೂಲಕ ಕೃಷ್ಣನನ್ನು ಸ್ವೀಕರಿಸಿದ್ದಾಳೆ. ಇದನ್ನು ತಿಳಿಸಲು ರಾಜರು 'ದೀನನಾಥ' ಶಬ್ದವನ್ನು ಪ್ರಯೋಗಿಸಿದ್ದಾರೆ. ಇವಳು ದುಃಖಿತಳು. ಕೃಷ್ಣನು ದುಃಖಿತರ ಒಡೆಯ. ಒಡೆತನ ದುಃಖವನ್ನು ಪರಿಹಾರಮಾಡುವ ಮೂಲಕ. ಆದ್ದರಿಂದ ಕೃಷ್ಣನನ್ನು ಧಿಕ್ಕರಿಸುವ ಎದೆಗಾರಿಕೆ ಈಕೆಗೆ ಇಲ್ಲ. ಇದು ಒಂದು ರೀತಿ ನಿಂದಾಸ್ತುತಿ ಇದ್ದಂತೆ. 'ನೀನ್ಯಾಕೋ ನಿನ್ನ ಹಂಗ್ಯಾಕೋ...' ಎಂಬ ಹಾಡಿನಂತೆ.

**ಸಂದೇಶ** : ದೇವರನ್ನು ಒಲಿಸಲು ನಿಂದಾಸ್ತುತಿಯೂ ಒಂದು ಸಾಧನೆ.

**ಅನೃತಲಪಿನಮೇನಂ ನಾರ್ಥಯಧ್ವಂ ತಥಾ ತ–**
**ದ್ವಿದಧತಿ ಬತ ಚೇತಃ ಪ್ರಾರ್ಥನಾಶೀಲಮೇತೇ ॥**
**ಪರಭೃತಶುಕಭೃಂಗಾ ಗೀತವಾಕ್ಯಾಲಕಾಭಾಃ**
**ಪಥಿ ಪಥಿ ಪರಮಸ್ಯ ಶ್ರೀಮುಖಶ್ರೀಶ್ಚ ಚಂದ್ರಃ ॥ ೪೪ ॥**

ಅನೃತ=ಸುಳ್ಳನ್ನು; ಲಪಿನಂ=ಹೇಳುವ; ಏನಂ=ಇವನನ್ನು; ನ ಅರ್ಥಯಧ್ವಂ= ಪ್ರಾರ್ಥಿಸಬೇಡಿ; ತಥಾ=ಹಾಗೆಯೇ; ತತ್=ಅದನ್ನು, ವಿದಧತಿ=ಮಾಡುತ್ತವೆ; ಬತ=ಕಷ್ಟವು; ಚೇತಃ=ಮನಸ್ಸನ್ನು; ಪ್ರಾರ್ಥನಾಶೀಲಂ= ಅಪೇಕ್ಷಿಸುವ ಛಲವುಳ್ಳದ್ದನ್ನಾಗಿ; ಏತೇ=ಈ; ಪರಭೃತ=ಕೋಗಿಲೆಯು; ಶುಕ=ಗಿಳಿಯು; ಭೃಂಗಾಃ=ದುಂಬಿಗಳು; ಗೀತ=ಹಾಡಿನ; ವಾಕ್ಯ=ಮಾತಿನ; ಅಲಕ=ಮುಂಗುರುಳುಗಳ; ಆಭಾಃ=ಕಾಂತಿವುಳ್ಳ; ಪಥಿ ಪಥಿ=ಪ್ರತಿ ದಾರಿಯಲ್ಲಿಯೂ; ಪರಮಸ್ಯ=ಕೃಷ್ಣನ; ಶ್ರೀಮುಖ=ಒಳ್ಳೆಯ ಮುಖದ; ಶ್ರೀಃ=ಕಾಂತಿಯುಳ್ಳ; ಚಂದ್ರಃ=ಚಂದನು.

ಎಲೋ ಗೆಳತಿಯರೇ, ಕೃಷ್ಣನನ್ನು ನಂಬಬೇಡಿರಿ. ಆತನು ಸುಳ್ಳು ಹೇಳುತ್ತಾನೆ. ನಿಮ್ಮ ವ್ರತಕ್ಕೆ ಮೆಚ್ಚಿದ್ದೇನೆ. ನಿಮ್ಮನ್ನು ಲಗ್ನವಾಗಿ ರಮಿಸುತ್ತೇನೆ ಎಂದು ಹೇಳಿದ್ದನು. ಆದರೆ ಈಗ ಎಲ್ಲಿಯೂ ಆತ ಕಾಣಿಸುತ್ತಿಲ್ಲ. ಆದ್ದರಿಂದ ಆತನ ದರ್ಶನಕ್ಕಾಗಿ ಅಂಗಲಾಚಬೇಡಿರಿ. ಆತನನ್ನು ಮರೆತುಬಿಡಿರಿ ಎಂದು ಒಬ್ಬಳು ತನ್ನ ಗೆಳತಿಯರಿಗೆ ಹೇಳಿದಳು. ಆಗ ಆ ಗೆಳತಿಯರು, ನೀನು ಹೇಳುವುದು ಸರಿ. ಆದರೆ ಈ ಪ್ರಕೃತಿಯು ಆತನ ಸ್ಮರಣೆಯನ್ನು ಮೇಲಿಂದ ಮೇಲೆ ತಂದುಕೊಡುತ್ತದೆ. ಕೋಗಿಲೆಯು ಕೂಗುವಾಗ ಆತನು ಹಾಡುವುದು, ಗಿಳಿಯು ಶಬ್ದಮಾಡುವಾಗ ಆತನ ಮಾತುಗಳು, ದುಂಬಿಗಳು ಎದುರು ಬಂದಾಗ ಆತನ ಹಣೆಯ ಮೇಲಿರುವ ಕೂದಲು, ಚಂದ್ರನನ್ನು ಕಂಡಾಗ ಆತನ ಮುಖ ಕಣ್ಣೆದುರಿಗೆ ಬಂದು ನಿಲ್ಲುತ್ತದೆ. ಆಗ ವ್ಯಗ್ರವಾದ ಮನಸ್ಸು ಆತನನ್ನು ಹಂಬಲಿಸುತ್ತದೆ ಎಂದು ಉತ್ತರಿಸಿದರು.

**ಸಂದೇಶ** : ಜಗತ್ತನ್ನು ಕಂಡಾಗ ದೇವರ ಚಿಂತನೆ ಬರಬೇಕು. ಇದನ್ನು ವ್ಯಾಸರು 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳಿದ್ದಾರೆ.

**ರಮಣಿ ರುಚಿರರೂಪಃ ಕಿಂ ನು ದೂರೇ ತವಾಸೀ–**
**ನ್ನಹಿ ನಹಿ ಮಮ ಪುಣ್ಯಂ ತನ್ವಿ ದೂರೇ ಪ್ರಯಾತಮ್ ।**
**ಬತ ಯದುಕುಲನಾಥಃ ಸ ತ್ವಯಾ ಮೃಗ್ಯತೇ ಕಿಂ**
**ನಹಿ ಸಖಿ ಸಹ ನೀತಂ ಚಿತ್ತಮನ್ವೇಷಯಾಮಿ ॥ ೪೫ ॥**

ರಮಣಿ=ಚಂದದವಳೇ; ರುಚಿರ=ಚಂದದ; ರೂಪಃ=ಶರೀರವುಳ್ಳ; ಕಿಂನು=ಏನು?; ದೂರೇ=ದೂರದಲ್ಲಿ; ತವ=ನಿನಗೆ; ಆಸೀತ್=ಆದನು; ನಹಿ ನಹಿ=ಇಲ್ಲ ಇಲ್ಲ; ಮಮ=ನನ್ನ; ಪುಣ್ಯಂ=ಪುಣ್ಯವು; ತನ್ವಿ=ಹುಡುಗಿಯೇ; ದೂರೇ=ದೂರದಲ್ಲಿ; ಪ್ರಯಾತಂ=ಹೋಗಿದೆ; ಬತ= ಕಷ್ಟ; ಯದುಕುಲನಾಥಃ=ಯದು ವಂಶಕ್ಕೆ ಒಡೆಯನು; ಸಃ=ಅವನು; ತ್ವಯಾ=ನಿನ್ನಿಂದ; ಮೃಗ್ಯತೇ ಕಿಂ=ಹುಡುಕಲ್ಪಡುತ್ತಾನೋ; ನಹಿ=ಇಲ್ಲ; ಸಖಿ=ಗೆಳತಿಯೇ; ಸಹ=ಒಟ್ಟಿಗೆ; ನೀತಂ=ಒಯ್ಯಲ್ಪಟ್ಟ, ಚಿತ್ತಂ=ಮನಸ್ಸನ್ನು; ಅನ್ವೇಷಯಾಮಿ=ಹುಡುಕುತ್ತೇನೆ.

ಕೃಷ್ಣನು ಗೋಪಿಯರ ಮಧ್ಯದಿಂದ ಒಬ್ಬಳನ್ನು ಅಪಹರಿಸಿದ್ದ. ಆಗ ಉಳಿದವರಿಗೆ ಒಂದು ರೀತಿ ಮತ್ಸರ ಆಗಿತ್ತು. ಆದರೆ ಕೃಷ್ಣನು ಅವಳನ್ನೂ ತ್ಯಜಿಸಿದ. ಆಕೆ ಈ ಗುಂಪಲ್ಲಿ ಸೇರಿಕೊಂಡಳು. ಆಗ ಉಳಿದವರು ಅವಳಿಗೆ ತಮಾಷೆ ಮಾಡುತ್ತಾರೆ. ಏನಮ್ಮಾ, ಕೃಷ್ಣ ನಿನ್ನಿಂದಲೂ ದೂರ ಹೋದನೋ. ನಿನ್ನನ್ನು ಬೇಡ ಎಂದು ತ್ಯಜಿಸಿದನಾ? ನೀನು ಆತನನ್ನು ಹುಡುಕುತ್ತಿದ್ದೀಯಾ? ಕೃಷ್ಣ ನಿನ್ನನ್ನು ಕರೆದುಕೊಂಡು ಹೋದ. ಆಗ ನೀನು ಕೃಷ್ಣನಿಗೆ ನೀನೇ ಎಲ್ಲರಿಗಿಂತ ಪ್ರಿಯಳು ಎಂದು ಅಹಂಕಾರ ಪಟ್ಟಿದ್ದಿ ಎಂದು. ಈ ಮಾತಿಗೆ ಆಕೆಯು ತನ್ನ ಅಹಂಕಾರವನ್ನು ಬಿಟ್ಟುಕೊಡದೆ ಉತ್ತರಿಸುತ್ತಾಳೆ. ಅವರ ಮಾತಿಗೆ ಸಕಾರಾತ್ಮಕವಾಗಿ ಉತ್ತರಿಸಿದರೆ ತಾನು ಅವರಿಗೆ ತಲೆ ತಗ್ಗಿಸಿದಂತಾಗುತ್ತದೆ. ಹಾಗಾಗಬಾರದು. ಆದರೆ ಉತ್ತರ 'ಹೌದು' ಎಂಬ ರೀತಿಯಲ್ಲೇ ಇರಬೇಕು. ಇದನ್ನು ರಾಜರು ವಿವರಿಸುತ್ತಾರೆ. 'ಇಲ್ಲ ಇಲ್ಲ' ಕೃಷ್ಣ ನನ್ನಿಂದ ದೂರ ಹೋಗಿಲ್ಲ. ಈ ತನಕ ನನ್ನ ಬಳಿ ಒಂದು ಪುಣ್ಯ ಇತ್ತು. ಅದು ನನ್ನಿಂದ ದೂರ ಹೋಗಿದೆ. ನಾನು ಕೃಷ್ಣನನ್ನು ಹುಡುಕುತ್ತಿಲ್ಲ. ನಾನೇಕೆ ಆತನನ್ನು ಹುಡುಕಲಿ? ಆತ ನನ್ನಿಂದ ದೂರ ಹೋಗುವಾಗ ನನ್ನ ಮನಸ್ಸನ್ನು ಒಯ್ದಿದ್ದಾನೆ. ನನ್ನ ಮನಸ್ಸು ನನಗೆ ಬೇಕು. ಅದನ್ನು ಹುಡುಕುತ್ತಿದ್ದೇನೆ ಎಂದು.

ಪುಣ್ಯ ಇಲ್ಲದವರಿಂದ ದೂರ ಸರಿಯುತ್ತಾನೆ. ದೇವರು ಎಂದು ಶಾಸ್ತ್ರದ ಮಾತು. ಪುಣ್ಯವು ಇವಳಿಂದ ದೂರ ಹೋಗಿದೆ ಎಂದರೆ ದೇವರು ಇವಳಿಂದ ದೂರ ಹೋಗಿದ್ದಾನೆ ಎಂದರ್ಥ. ಮನಸ್ಸನ್ನು ಕೃಷ್ಣ ಒಯ್ದಿದ್ದಾನೆ. ಅದನ್ನು ಹುಡುಕುತ್ತಿದ್ದೇನೆ ಎಂದರೆ ಮಾನಸಿಕವಾಗಿ ಕೃಷ್ಣನನ್ನು ಹುಡುಕುವುದು ಎಂದೇ ಅರ್ಥ.

<u>**ಸಂದೇಶ**</u> : ದೇವರನ್ನು ಪಡೆಯಲು ಮನಸ್ಸೊಂದಿದ್ದರೆ ಸಾಲದು. ಪುಣ್ಯಕರ್ಮಗಳೂ ಬೇಕು.

**ವಿತನುತ ಬತ ಸಖ್ಯಃ ಸುಸ್ಥಿರಂ ಚಿತ್ತಮಸ್ಮನ್–**
**ಮೃದುಲಹೃದವಲೋಕ್ಯ ಸ್ಥೈರ್ಯಮಾಲಂಬಯತ್ ಸಃ ।**
**ಅನುವನಮಯಿ ಕಾಂತಂ ಸಂಚರಂತಂ ಸಮಂತಾ–**
**ದನುಸರದನುರಕ್ತಂ ಕಾರಯೇತ್ ಕಃ ಸ್ಥಿರಂ ತತ್ ॥ ೪೬ ॥**

ವಿತನುತ=ಮಾಡಿರಿ; ಬತ=ಸಂತೋಷ; ಸಖ್ಯಃ=ಗೆಳತಿಯರೇ; ಸುಸ್ಥಿರಂ=ದೃಢವಾಗಿ; ಚಿತ್ತಂ=ಮನಸ್ಸನ್ನು; ಅಸ್ಮತ್=ನಮ್ಮ; ಮೃದುಲ=ಮೆತ್ತಗಾದ; ಹೃತ್=ಮನಸ್ಸನ್ನು; ಅವಲೋಕ್ಯ=ನೋಡಿ; ಸ್ಥೈರ್ಯಂ=ದೃಢತೆಯನ್ನು; ಆಲಂಬಯತ್=ಹೊಂದಿಯಾನು; ಸಃ=ಕೃಷ್ಣನು; ಅನುವನಂ=ಪ್ರತಿ ಕಾಡನ್ನು; ಅಯಿ=–ಎಲೋ; ಕಾಂತಂ=ಪತಿಯನ್ನು; ಸಂಚರಂತಂ=ತಿರುಗುವ; ಸಮಂತಾತ್=ಸುತ್ತಲೂ; ಅನುಸರತ್=ಅನುಸರಿಸುವ;

ಅನೃತ=ಸುಳ್ಳನ್ನು; ಲಪಿನಂ=ಹೇಳುವ; ಏನಂ=ಇವನನ್ನು; ನ ಅರ್ಥಯಧ್ವಂ= ಪ್ರಾರ್ಥಿಸಬೇಡಿ; ತಥಾ=ಹಾಗೆಯೇ; ತತ್=ಅದನ್ನು, ವಿದಧತಿ=ಮಾಡುತ್ತವೆ; ಬತ=ಕಷ್ಟವು; ಚೇತಃ=ಮನಸ್ಸನ್ನು; ಪ್ರಾರ್ಥನಾಶೀಲಂ= ಅಪೇಕ್ಷಿಸುವ ಛಲವುಳ್ಳದ್ದನ್ನಾಗಿ; ಏತೇ=ಈ; ಪರಭೃತ=ಕೋಗಿಲೆಯು; ಶುಕ=ಗಿಳಿಯು; ಭೃಂಗಾಃ=ದುಂಬಿಗಳು; ಗೀತ=ಹಾಡಿನ; ವಾಕ್ಯ=ಮಾತಿನ; ಅಲಕ=ಮುಂಗುರುಳುಗಳ; ಆಭಾಃ=ಕಾಂತಿವುಳ್ಳ; ಪಥಿ ಪಥಿ=ಪ್ರತಿ ದಾರಿಯಲ್ಲಿಯೂ; ಪರಮಸ್ಯ=ಕೃಷ್ಣನ; ಶ್ರೀಮುಖ=ಒಳ್ಳೆಯ ಮುಖದ; ಶ್ರೀಃ=ಕಾಂತಿಯುಳ್ಳ; ಚಂದ್ರಃ=ಚಂದನು.

ಎಲೋ ಗೆಳತಿಯರೇ, ಕೃಷ್ಣನನ್ನು ನಂಬಬೇಡಿರಿ. ಆತನು ಸುಳ್ಳು ಹೇಳುತ್ತಾನೆ. ನಿಮ್ಮ ವ್ರತಕ್ಕೆ ಮೆಚ್ಚಿದ್ದೇನೆ. ನಿಮ್ಮನ್ನು ಲಗ್ನವಾಗಿ ರಮಿಸುತ್ತೇನೆ ಎಂದು ಹೇಳಿದ್ದನು. ಆದರೆ ಈಗ ಎಲ್ಲಿಯೂ ಆತ ಕಾಣಿಸುತ್ತಿಲ್ಲ. ಆದ್ದರಿಂದ ಆತನ ದರ್ಶನಕ್ಕಾಗಿ ಅಂಗಲಾಚಬೇಡಿರಿ. ಆತನನ್ನು ಮರೆತುಬಿಡಿರಿ ಎಂದು ಒಬ್ಬಳು ತನ್ನ ಗೆಳತಿಯರಿಗೆ ಹೇಳಿದಳು. ಆಗ ಆ ಗೆಳತಿಯರು, ನೀನು ಹೇಳುವುದು ಸರಿ. ಆದರೆ ಈ ಪ್ರಕೃತಿಯು ಆತನ ಸ್ಮರಣೆಯನ್ನು ಮೇಲಿಂದ ಮೇಲೆ ತಂದುಕೊಡುತ್ತದೆ. ಕೋಗಿಲೆಯು ಕೂಗುವಾಗ ಆತನು ಹಾಡುವುದು, ಗಿಳಿಯು ಶಬ್ದಮಾಡುವಾಗ ಆತನ ಮಾತುಗಳು, ದುಂಬಿಗಳು ಎದುರು ಬಂದಾಗ ಆತನ ಹಣೆಯ ಮೇಲಿರುವ ಕೂದಲು, ಚಂದ್ರನನ್ನು ಕಂಡಾಗ ಆತನ ಮುಖ ಕಣ್ಣೆದುರಿಗೆ ಬಂದು ನಿಲ್ಲುತ್ತದೆ. ಆಗ ವ್ಯಗ್ರವಾದ ಮನಸ್ಸು ಆತನನ್ನು ಹಂಬಲಿಸುತ್ತದೆ ಎಂದು ಉತ್ತರಿಸಿದರು.

**ಸಂದೇಶ** : ಜಗತ್ತನ್ನು ಕಂಡಾಗ ದೇವರ ಚಿಂತನೆ ಬರಬೇಕು. ಇದನ್ನು ವ್ಯಾಸರು 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳಿದ್ದಾರೆ.

**ರಮಣಿ ರುಚಿರರೂಪಃ ಕಿಂ ನು ದೂರೇ ತವಾಸೀ-**
**ನ್ನಹಿ ನಹಿ ಮಮ ಪುಣ್ಯಂ ತನ್ವಿ ದೂರೇ ಪ್ರಯಾತಮ್ ।**
**ಬತ ಯದುಕುಲನಾಥಃ ಸ ತ್ವಯಾ ಮೃಗ್ಯತೇ ಕಿಂ**
**ನಹಿ ಸಖಿ ಸಹ ನೀತಂ ಚಿತ್ತಮನ್ವೇಷಯಾಮಿ ॥ ೪೫ ॥**

ರಮಣಿ=ಚಂದದವಳೇ; ರುಚಿರ=ಚಂದದ; ರೂಪಃ=ಶರೀರವುಳ್ಳ; ಕಿಂನು=ಏನು?; ದೂರೇ=ದೂರದಲ್ಲಿ; ತವ=ನಿನಗೆ; ಆಸೀತ್=ಆದನು; ನಹಿ ನಹಿ=ಇಲ್ಲ ಇಲ್ಲ; ಮಮ=ನನ್ನ; ಪುಣ್ಯಂ=ಪುಣ್ಯವು; ತನ್ವಿ=ಹುಡುಗಿಯೇ; ದೂರೇ=ದೂರದಲ್ಲಿ; ಪ್ರಯಾತಂ=ಹೋಗಿದೆ; ಬತ= ಕಷ್ಟ; ಯದುಕುಲನಾಥಃ=ಯದು ವಂಶಕ್ಕೆ ಒಡೆಯನು; ಸಃ=ಅವನು; ತ್ವಯಾ=ನಿನ್ನಿಂದ; ಮೃಗ್ಯತೇ ಕಿಂ=ಹುಡುಕಲ್ಪಡುತ್ತಾನೋ; ನಹಿ=ಇಲ್ಲ; ಸಖಿ=ಗೆಳತಿಯೇ; ಸಹ=ಒಟ್ಟಿಗೆ; ನೀತಂ=ಒಯ್ಯಲ್ಪಟ್ಟ, ಚಿತ್ತಂ=ಮನಸ್ಸನ್ನು; ಅನ್ವೇಷಯಾಮಿ=ಹುಡುಕುತ್ತೇನೆ.

ಕೃಷ್ಣನು ಗೋಪಿಯರ ಮಧ್ಯದಿಂದ ಒಬ್ಬಳನ್ನು ಅಪಹರಿಸಿದ್ದ. ಆಗ ಉಳಿದವರಿಗೆ ಒಂದು ರೀತಿ ಮತ್ಸರ ಆಗಿತ್ತು. ಆದರೆ ಕೃಷ್ಣನು ಅವಳನ್ನೂ ತ್ಯಜಿಸಿದ. ಆಕೆ ಈ ಗುಂಪಲ್ಲಿ ಸೇರಿಕೊಂಡಳು. ಆಗ ಉಳಿದವರು ಅವಳಿಗೆ ತಮಾಷೆ ಮಾಡುತ್ತಾರೆ. ಏನಮ್ಮಾ, ಕೃಷ್ಣ ನಿನ್ನಿಂದಲೂ ದೂರ ಹೋದನೋ. ನಿನ್ನನ್ನು ಬೇಡ ಎಂದು ತ್ಯಜಿಸಿದನಾ? ನೀನು ಆತನನ್ನು ಹುಡುಕುತ್ತಿದ್ದೀಯಾ? ಕೃಷ್ಣ ನಿನ್ನನ್ನು ಕರೆದುಕೊಂಡು ಹೋದ. ಆಗ ನೀನು ಕೃಷ್ಣನಿಗೆ ನೀನೇ ಎಲ್ಲರಿಗಿಂತ ಪ್ರಿಯಳು ಎಂದು ಅಹಂಕಾರ ಪಟ್ಟಿದ್ದಿ ಎಂದು. ಈ ಮಾತಿಗೆ ಆಕೆಯು ತನ್ನ ಅಹಂಕಾರವನ್ನು ಬಿಟ್ಟುಕೊಡದೆ ಉತ್ತರಿಸುತ್ತಾಳೆ. ಅವರ ಮಾತಿಗೆ ಸಕಾರಾತ್ಮಕವಾಗಿ ಉತ್ತರಿಸಿದರೆ ತಾನು ಅವರಿಗೆ ತಲೆ ತಗ್ಗಿಸಿದಂತಾಗುತ್ತದೆ. ಹಾಗಾಗಬಾರದು. ಆದರೆ ಉತ್ತರ 'ಹೌದು' ಎಂಬ ರೀತಿಯಲ್ಲೇ ಇರಬೇಕು. ಇದನ್ನು ರಾಜರು ವಿವರಿಸುತ್ತಾರೆ. 'ಇಲ್ಲ ಇಲ್ಲ' ಕೃಷ್ಣ ನನ್ನಿಂದ ದೂರ ಹೋಗಿಲ್ಲ. ಈ ತನಕ ನನ್ನ ಬಳಿ ಒಂದು ಪುಣ್ಯ ಇತ್ತು. ಅದು ನನ್ನಿಂದ ದೂರ ಹೋಗಿದೆ. ನಾನು ಕೃಷ್ಣನನ್ನು ಹುಡುಕುತ್ತಿಲ್ಲ. ನಾನೇಕೆ ಆತನನ್ನು ಹುಡುಕಲಿ? ಆತ ನನ್ನಿಂದ ದೂರ ಹೋಗುವಾಗ ನನ್ನ ಮನಸ್ಸನ್ನು ಒಯ್ದಿದ್ದಾನೆ. ನನ್ನ ಮನಸ್ಸು ನನಗೆ ಬೇಕು. ಅದನ್ನು ಹುಡುಕುತ್ತಿದ್ದೇನೆ ಎಂದು.

ಪುಣ್ಯ ಇಲ್ಲದವರಿಂದ ದೂರ ಸರಿಯುತ್ತಾನೆ. ದೇವರು ಎಂದು ಶಾಸ್ತ್ರದ ಮಾತು. ಪುಣ್ಯವು ಇವಳಿಂದ ದೂರ ಹೋಗಿದೆ ಎಂದರೆ ದೇವರು ಇವಳಿಂದ ದೂರ ಹೋಗಿದ್ದಾನೆ ಎಂದರ್ಥ. ಮನಸ್ಸನ್ನು ಕೃಷ್ಣ ಒಯ್ದಿದ್ದಾನೆ. ಅದನ್ನು ಹುಡುಕುತ್ತಿದ್ದೇನೆ ಎಂದರೆ ಮಾನಸಿಕ ವಾಗಿ ಕೃಷ್ಣನನ್ನು ಹುಡುಕುವುದು ಎಂದೇ ಅರ್ಥ.

**ಸಂದೇಶ** : ದೇವರನ್ನು ಪಡೆಯಲು ಮನಸ್ಸೊಂದಿದ್ದರೆ ಸಾಲದು. ಪುಣ್ಯಕರ್ಮಗಳೂ ಬೇಕು.

**ವಿತನುತ ಬತ ಸಖ್ಯಃ ಸುಸ್ಥಿರಂ ಚಿತ್ತಮಸ್ಮನ್–**
**ಮೃದುಲಹೃದವಲೋಕ್ಯ ಸ್ಥೈರ್ಯಮಾಲಂಬಯತ್ ಸಃ ।**
**ಅನುವನಮಯಿ ಕಾಂತಂ ಸಂಚರಂತಂ ಸಮಂತಾ–**
**ದನುಸರದನುರಕ್ತಂ ಕಾರಯೇತ್ ಕಃ ಸ್ಥಿರಂ ತತ್ ॥ ೪೬ ॥**

ವಿತನುತ=ಮಾಡಿರಿ; ಬತ=ಸಂತೋಷ; ಸಖ್ಯಃ=ಗೆಳತಿಯರೇ; ಸುಸ್ಥಿರಂ=ದೃಢವಾಗಿ; ಚಿತ್ತಂ=ಮನಸ್ಸನ್ನು; ಅಸ್ಮತ್=ನಮ್ಮ; ಮೃದುಲ=ಮೆತ್ತಗಾದ; ಹೃತ್=ಮನಸ್ಸನ್ನು; ಅವಲೋಕ್ಯ=ನೋಡಿ; ಸ್ಥೈರ್ಯಂ=ದೃಢತೆಯನ್ನು; ಆಲಂಬಯತ್=ಹೊಂದಿಯಾನು; ಸಃ=ಕೃಷ್ಣನು; ಅನುವನಂ=ಪ್ರತಿ ಕಾಡನ್ನು; ಅಯಿ=-ಎಲೋ; ಕಾಂತಂ=ಪತಿಯನ್ನು; ಸಂಚರಂತಂ=ತಿರುಗುವ; ಸಮಂತಾತ್=ಸುತ್ತಲೂ; ಅನುಸರತ್=ಅನುಸರಿಸುವ;

ಅನುರಕ್ತಂ=ಪ್ರೀತಿಯಿಂದ ಕೂಡಿದ; ಕಾರಯೇತ್=ಮಾಡುತ್ತಾನೆ; ಕಃ=ಯಾರು?; ಸ್ಥಿರಂ=ದೃಢವಾಗಿ; ತತ್=ಅದನ್ನು.

ಎಲೋ ಗೆಳತಿಯರೇ ದೇವರು ಕಾಣಬೇಕಾದರೆ ಮನಕ್ಕೆ ಏಕಾಗ್ರತೆ ಬೇಕು. ಹೃದಯ ಮೆತ್ತಗಾಗಬೇಕು. ನೀವು ಮೃದುಸ್ವಭಾವವನ್ನು ಅಳವಡಿಸಿರಿ. ಇದ್ದ ಮರಗಿಡಗಳನ್ನೆಲ್ಲಾ ಬೈಯಬೇಡಿರಿ. ತಾನು ಕಾಣಿಸಬಾರದು ಎಂದು ಆತನು ಇಚ್ಛಿಸಿರಬಹುದು. ಆದರೆ ನಿಮ್ಮ ಏಕಾಗ್ರತೆಗೆ ಮಾರುಹೋಗಿ ತನ್ನನ್ನು ಕಾಣಿಸಿಕೊಳ್ಳಬೇಕು ಎಂದು ತನ್ನ ಮನಸ್ಸನ್ನು ಬದಲಾಯಿಸಬಹುದು. ಆದ್ದರಿಂದ ಮನಸ್ಸನ್ನು ಗಟ್ಟಿಮಾಡಿಕೊಳ್ಳಿರಿ ಎಂದು ಒಬ್ಬಳು ಹೇಳಿದಳು. ಇದಕ್ಕೆ ಇತರರಿಂದ ಉತ್ತರ –ಎಲೋ ಹೆಣ್ಣೆ, ಕೃಷ್ಣನಾದರೂ ಕಾಡು ಕಾಡು ಅಲೆಯುತ್ತಾನೆ. ನಮ್ಮ ಮನಸ್ಸು ಆತನ ಜೊತೆಗೇ ಅಡ್ಡಾಡುತ್ತಿದೆ. ಆತನಲ್ಲೇ ಸಕ್ತವಾಗಿದೆ. ಇಂತಹ ಮನವನ್ನು ಏಕತ್ರ ಹಿಡಿದು ನಿಲ್ಲಿಸುವುದಾದರೂ ಹೇಗೆ? ಎಂದರು.

<u>**ಸಂದೇಶ**</u> : ಚಂಚಲವಾದ ಮನಸಿಗೆ ದೇವರು ಸಿಗೋದಿಲ್ಲ. ಮನಸ್ಸಿನ ಏಕಾಗ್ರತೆ ಅಂದರೆ ಸುಮ್ಮನೆ ಹಿಡಿದಿಡುವುದು ಅಲ್ಲ. ದೇವರ ಜೊತೆಗೇ ಇರುವುದು. ಕೆಲವರು ಏಕಾಗ್ರತೆ ಅಂದರೆ ಮನಸ್ಸು ಅಲುಗಾಡದಂತೆ ಮಾಡುವುದು ಎಂದರ್ಥ ಎನ್ನುತ್ತಾರೆ. ಇದು ತಪ್ಪು. ಏಕಾಗ್ರತೆ ಅಂದರೆ ಒಂದು ವಸ್ತುವನ್ನು ಮನವು ಚಿಂತಿಸುತ್ತಿದ್ದರೆ ಅದು ಹೋದಲ್ಲೆಲ್ಲಾ ಅದರ ಜೊತೆಗೇ ಇರುವುದು ಎಂದರ್ಥ.

**ಸ ವಿಧಿರಪಿ ನಿದೇಶಂ ತಸ್ಯ ನೂನಂ ವಿಧತ್ತೇ**
**ವಿರಹದಹನಶಾಂತಿಂ ಯನ್ನ ಮೂರ್ಛಾಂ ದದಾತಿ ।**
**ಅಪಿ ನಿಶಿ ಹೃದಯಾಂತಃ ಕೃಷ್ಣಸಂಶ್ಲೇಷಶಂಕೀ**
**ನ ದಿಶತಿ ಚ ಸುಷುಪ್ತಿಂ ಹಾ ಹತಾಃ ಕಿಂ ವಿಧೇಯಮ್** ॥ ೪೭ ॥

ಸಃ=ಆ; ವಿಧಿರಪಿ=ಬ್ರಹ್ಮನೂ; ನಿದೇಶಂ=ಆಜ್ಞೆಯನ್ನು; ತಸ್ಯ=ಕೃಷ್ಣನ; ವಿಧತ್ತೇ= ನಡೆಸುತ್ತಾನೆ; ವಿರಹ=ಅಗಲುವಿಕೆ ಎಂಬ; ದಹನ=ಬೆಂಕಿಗೆ; ಶಾಂತಿಂ=ನಾಶವನ್ನು ಕೊಡುವ; ಯತ್=ಯಾವ ಕಾರಣದಿಂದ; ನ=ಇಲ್ಲ; ಮೂರ್ಛಾಂ=ಮೂರ್ಛೆಯನ್ನು; ದದಾತಿ=ಕೊಡುವುದು; ಅಪಿ=ಕೂಡಾ; ನಿಶಿ=ರಾತ್ರಿಯಲ್ಲಿ; ಹೃದಯಾಂತಃ=ಮನಸ್ಸಿನೊಳಗೆ; ಕೃಷ್ಣ=ಕೃಷ್ಣನ; ಸಂಶ್ಲೇಷ=ಆಲಿಂಗನದ; ಶಂಕೀ=ಸಂಶಯವುಳ್ಳ; ನ ದಿಶತಿ=ಕೊಡುವುದಿಲ್ಲ; ಚ=ಮತ್ತು; ಸುಷುಪ್ತಿಂ=ನಿದ್ದೆಯನ್ನು; ಹಾ=ಕಷ್ಟವು; ಹತಾಃ=ಸತ್ತೆವು; ಕಿಂ ವಿಧೇಯಂ=ಏನು ಮಾಡೋಣ?

ಕೃಷ್ಣ ವಿರಹದಿಂದ ನಮಗೆ ಬಹಳ ದುಃಖವಾಗಿದೆ. ಈ ವಿರಹ ಎಂಬ ಬೆಂಕಿಯು ನಮ್ಮನ್ನು ಸುಡುತ್ತಿದೆ. ನಮಗೆ ಮೂರ್ಛೆ ಬಂದಿದ್ದರೆ ಈ ದುಃಖ ನಮ್ಮನ್ನು ಪೀಡಿಸುವುದಿಲ್ಲ.

ಆದರೆ ಬ್ರಹ್ಮ ನಮಗೆ ಮೂರ್ಛೆ ಬಾರದಂತೆ ಮಾಡಿದ್ದಾನೆ. ಯಾಕೆಂದರೆ ಕೃಷ್ಣ ಬ್ರಹ್ಮನಿಗೆ ಆಜ್ಞೆ ಮಾಡಿದ್ದಿರಬಹುದು –ಈ ಹೆಮ್ಮಕ್ಕಳಿಗೆ ಮೂರ್ಛೆಯನ್ನು ಕೊಡಬೇಡ. ಮೂರ್ಛಿತರಾದರೆ ಈ ದುಃಖ ಇರುವುದಿಲ್ಲ. ನನ್ನನ್ನು ಹೊಗಳೊಲ್ಲ ಎಂದು. ಹಾಗೆಯೇ ನಿದ್ದೆಯನ್ನೂ ಕೊಡಬೇಡ –ನಿದ್ದೆ ಮಾಡಿದರೆ ಸ್ವಪ್ನದಲ್ಲಿ ಕೃಷ್ಣನನ್ನು ನೋಡುವ, ಮಾತಾಡುವ, ಆಲಿಂಗಿಸುವ ದೃಶ್ಯವನ್ನು ಕಾಣಬಹುದು. ಅದನ್ನೂ ಈ ಗೋಪಿಯರು ಅನುಭವಿಸಬಾರದು ಎಂದು. ಈ ರೀತಿಯಾಗಿ ದೇವರ ಅಪ್ಪಣೆಯನ್ನು ಬ್ರಹ್ಮನು ಶಿರಸಾ ಪಾಲಿಸುತ್ತಿದ್ದಾನೆ. ನಮಗೆ ಬಹಳ ಕಷ್ಟವಾಗುತ್ತಿದೆ. ನಿದ್ರೆಯೂ ಬರುತ್ತಿಲ್ಲ. ಎಚ್ಚರದಲ್ಲಿದ್ದರೂ ಸುಖ ಇಲ್ಲ ಎಂದು ಗೋಪಿಯರು ತಪಿಸುತ್ತಾರೆ.

**ಸಂದೇಶ** : ದೇವರಲ್ಲಿ ಗಾಢವಾದ ಪ್ರೀತಿ ಇದ್ದವರಿಗೆ ಸಾತ್ವಿಕ ಅವಸ್ಥೆಯಾದ ಎಚ್ಚರಿಕೆ ಅಲ್ಲದೆ ಬೇರೆ ಯಾವ ರಾಜಸ, ತಾಮಸ ಅವಸ್ಥೆಗಳಾದ ಮೂರ್ಛೆಯೋ ನಿದ್ರೆಯೋ ಬರುವುದಿಲ್ಲ. ದೇವರ ಅಧೀನನಾದ ಬ್ರಹ್ಮನು ನಮಗೆ ಈ ಅವಸ್ಥೆಗಳನ್ನು ಕೊಡುವವನು. ನಮಗೆ ಬೇಕಾದ ಅವಸ್ಥೆಗಳಗೆ ಬ್ರಹ್ಮನನ್ನು ಪ್ರಾರ್ಥಿಸಬೇಕು. ಬ್ರಹ್ಮನಿಗೆ ಅವತಾರವಿಲ್ಲ. ಆದ್ದರಿಂದ ಭಾವಿ ಬ್ರಹ್ಮರಾದ ಶ್ರೀ ಮಧ್ವರನ್ನು ಪ್ರಾರ್ಥಿಸಬೇಕು.

ಯದಿ ಮಧುರಮಪಾಯಿ ಸ್ವೀಯಗಾಥಾಮೃತಂ ಪ್ರಾಕ್
ಸ್ಫುರದಧರಸುಧಾಂ ಸ್ವಾಂ ತರ್ಹಿ ಯಚ್ಛೇತ್ ಮುಕುಂದಃ ।
ಕ್ವಚಿದಪಿ ನಿಜಧಾಮ ಸ್ಥಾವರಂ ಜಂಗಮಂ ವಾ
ಯದಿ ವಿಮಲಮದರ್ಶಿ ಸ್ವಂ ತದಾ ದರ್ಶಯೇನ್ನಃ ॥ ೪೮ ॥

ಯದಿ=ಒಂದುವೇಳೆ; ಮಧುರಂ=ಇಂಪಾದ; ಅಪಾಯಿ=ಕುಡಿಯಲ್ಪಟ್ಟಿದೆ; ಸ್ವೀಯ=ತನ್ನ; ಗಾಥಾ=ಚರಿತ್ರೆ ಎಂಬ; ಅಮೃತಂ=ಅಮೃತವು; ಪ್ರಾಕ್=ಮೊದಲು; ಸ್ಫುರತ್=ಚಂದದ; ಅಧರ=ತುಟಿಯ; ಸುಧಾಂ=ರಸವನ್ನು; ಸ್ವಾಂ=ತನ್ನ; ತರ್ಹಿ=ಆ ಪಕ್ಷದಲ್ಲಿ; ಯಚ್ಛೇತ್=ಕೊಡಲಿ; ಮುಕುಂದ=ದೇವರು; ಕ್ವಚಿತ್ ಅಪಿ=ಎಂದಾದರೂ; ಸ್ಥಾವರಂ=ಜಡವಾದ; ಜಂಗಮಂ=ಚೇತನವಾದ; ವಾ=ಅಥವಾ; ಯದಿ=ಒಂದುವೇಳೆ; ವಿಮಲಂ=ನಿರ್ಮಲವಾದ; ಅದರ್ಶಿ=ನೋಡಲ್ಪಟ್ಟಿದೆ; ಸ್ವಂ=ತನ್ನನ್ನು; ತದಾ=ಆಗ; ದರ್ಶಯೇತ್=ತೋರಿಸಲಿ; ನಃ=ನಮಗೆ.

ನಾವು ಈ ಹಿಂದೆ ನಿನ್ನ ಚರಿತಾಮೃತವನ್ನು ಶ್ರದ್ಧೆಯಿಂದ ಕಿವಿಯಿಂದ ಕುಡಿದಿದ್ದೇವೆ. ಅಂದರೆ ಕೇಳಿದ್ದೇವೆ. ಆ ಪುಣ್ಯದ ಪ್ರಭಾವದಿಂದ ಈಗ ನಮಗೆ ನೀನು ನಿನ್ನ ತುಟಿಯ ರಸವನ್ನು ಉಣಿಸಬೇಕು. ಈ ಅಧರದ ಅಮೃತವು ನಮಗೆ ಹೊಸತಲ್ಲ. ಹೊಸ ಆಹಾರ ಒಮ್ಮೆಲೇ ರುಚಿಸಲಿಕ್ಕಿಲ್ಲ. ನಾವು ಕಥಾ ಎಂಬ ಅಮೃತವನ್ನು ಕುಡಿದವರು. ಆದ್ದರಿಂದ ಅಮೃತ ಕುಡಿದು ಅಭ್ಯಾಸವಿದೆ. ಈ ಅಮೃತವು ಇವರಿಗೆ ಹೊಸದು. ಹೇಗೆ

ಉಣ್ಣಿಸಲಿ ಎಂದು ಚಿಂತಿಸಬೇಡ. ಅದಕ್ಕಾಗಿ ಬಾರದಿರಬೇಡ. ಈ ಜಗತ್ತು ನಿನ್ನ ಪ್ರತಿಮೆ. ಈ ಪ್ರತಿಮೆಯಲ್ಲಿ ನಿನ್ನನ್ನು ಆರಾಧಿಸಿದ್ದೇವೆ. ಶುದ್ಧವಾದ ಮನಸ್ಸಿನಿಂದ, ಆ ಪುಣ್ಯದ ಪ್ರಭಾವದಿಂದಲಾದರೂ ನೀನು ನಮಗೆ ದರ್ಶನ ಕೊಡಬೇಕು.

**<u>ಸಂದೇಶ</u>** : ಉಪನಿಷತ್ತು 'ಶ್ರೋತವ್ಯೋ ಮಂತವ್ಯೋ ನಿಧಿಧ್ಯಾಸಿತವ್ಯಃ' ದೇವರ ದರ್ಶನವಾಗಬೇಕಾದರೆ ಶ್ರವಣಾದಿಗಳು ಅಗತ್ಯ. ಪ್ರತಿಮಾಪೂಜೆ ಎಂಬ ಕರ್ಮಾಚರಣೆಯೂ ಅಗತ್ಯ ಎಂದು ಹೇಳುತ್ತದೆ. ಅದಿಲ್ಲದಿದ್ದರೆ ದೇವರ ದರ್ಶನ ದೂರ.

**ಕರರುಹಪದಭಾಸ್ವದ್ಗಾತ್ರವಿಶ್ಲೇಷಭೀತ್ಯಾ**
**ನ ಮೃತಿರನುಮತಾ ನಃ ಕೃಷ್ಣ ತೇಽದರ್ಶನಾಚ್ಚ ।**
**ಅಸುಭೃತಿರಪಿ ತಸ್ಮಾತ್ಸೌಮ್ಯ ಸೌಂದರ್ಯಧಾಮನ್**
**ಅಧಿಗಹನಮುಭಾಭ್ಯಾಂ ಬದ್ಧಕಂಠಾ ಇವ ಸ್ಮಃ ॥ ೪೯ ॥**

ಕರ=ಕೈಯಲ್ಲಿ; ರುಹ=ಹುಟ್ಟಿದ ಉಗುರಿನ; ಪದ=ಗುರುತಿನಿಂದ; ಭಾಸ್ವತ್= ಶೋಭಿಸುವ; ಗಾತ್ರ=ಶರೀರದ; ವಿಶ್ಲೇಷ=ವಿಯೋಗದ; ಭೀತ್ಯಾ=ಭಯದಿಂದ; ಮೃತಿಃ= ಮರಣವು; ನ ಅನುಮತಾ=ಸಮ್ಮತವಲ್ಲ; ನಃ=ನಮಗೆ; ಕೃಷ್ಣ=ಕೃಷ್ಣನೇ; ತೇ=ನಿನ್ನ; ಅದರ್ಶನಾತ್=ಕಾಣದೆ ಇರುವಿಕೆಯಿಂದ; ಅಸು=ಪ್ರಾಣಗಳ; ಭೃತಿಃ ಅಪಿ=ಧಾರಣೆಯೂ ಕೂಡಾ; ತಸ್ಮಾತ್=ಆದ್ದರಿಂದ; ಸೌಮ್ಯ=ಶಾಂತನೇ; ಸೌಂದರ್ಯ=ಸೌಂದರ್ಯಕ್ಕೆ; ಧಾಮನ್=ಆಶ್ರಯನೇ; ಅಧಿಗಹನಂ=ಕಾಡಿನ ಮಧ್ಯದಲ್ಲಿ; ಉಭಾಭ್ಯಾಂ=ಇಬ್ಬರಿಂದ; ಬದ್ಧ=ಕಟ್ಟಲ್ಪಟ್ಟ; ಕಂಠಾ ಇವ=ಕುತ್ತಿಗೆ ಉಳ್ಳವರಂತೆ; ಸ್ಮಃ=ಇದ್ದೇವೆ.

ಹೇ ಕೃಷ್ಣ, ನೀನು ನಮ್ಮನ್ನು ಮುಟ್ಟುತ್ತಿದ್ದಿ. ಆಲಿಂಗಿಸುತ್ತಿದ್ದಿ. ಆಗ ನಿನ್ನ ಬೆರಳಿನ ಉಗುರುಗಳಿಂದ ನಮ್ಮ ದೇಹದಲ್ಲಿ ಚಿಕ್ಕಪುಟ್ಟ ಗಾಯಗಳಾಗಿದ್ದವು. ಅವುಗಳು ಇನ್ನೂ ಮಾಸಿಲ್ಲ. ನಿನ್ನ ದರ್ಶನ ಇಲ್ಲದೆ ಬಹಳ ದುಃಖಿಗಳಾಗಿದ್ದೇವೆ. ಸಾಯೋಣ ಅಂದರೆ ನಿನ್ನ ಉಗುರಿನ ಗುರುತುಳ್ಳ ಶರೀರವನ್ನು ಬಿಡಬೇಕಾಗುತ್ತಲ್ಲಾ ಎಂದು ಬೇಸರ. ಆದ್ದರಿಂದ ಸಾಯಲು ಮನಸ್ಸಿಲ್ಲ. ಬದುಕೋಣ ಎಂದರೆ ನಿನ್ನ ದರ್ಶನ ಇಲ್ಲದ ಬದುಕು ವ್ಯರ್ಥ. ಆದ್ದರಿಂದ ಬದುಕಲೂ ಮನಸ್ಸಿಲ್ಲ. ನಮ್ಮ ಅವಸ್ಥೆ ಏನಾಗಿದೆ ಅಂದರೆ ಒಬ್ಬನ ಕುತ್ತಿಗೆಗೆ ಹಗ್ಗ ಹಾಕಿ ಅದರ ಎರಡು ಕುಣಿಕೆಗಳನ್ನು ಹಿಡಿದುಕೊಂಡು ಆಚೆ ಒಬ್ಬ ಈಚೆ ಒಬ್ಬ ಎಳೆದರೆ ಏನಾಗುತ್ತೋ ಹಾಗಾಗಿದೆ ನಮ್ಮ ಪರಿಸ್ಥಿತಿ ಎಂದು ಉದ್ಗರಿಸಿದರು ಗೋಪಿಯರು.

**<u>ಸಂದೇಶ</u>** : ದೇವರನ್ನು ನಂಬದ ವ್ಯಕ್ತಿಗಳ ಜೀವನ ಸದಾ ಡೋಲಾಯಮಾನ.

**ನಯನಗನಲಿನೇಷುಂ ಕಾಂತವಕ್ತ್ರೇಂದುಕಾಂತ್ಯಾ**
**ನವಪದರವಿಭಾಸಾ ನಃ ಕುಚಸ್ಥೋತ್ಪಲೇಷುಮ್ ।**

**ಶಮಯ ಸದಯ ಗಾಢಾಲಿಂಗನೇನಾರ್ಧಗಾತ್ರೀ-**
**ರ್ವಿರಚಯ ತವ ದಾಸೀಸ್ತೇನ ಕಂದರ್ಪದರ್ಪಮ್ ॥ ೫೦ ॥**

ನಯನ=ಕಣ್ಣಲ್ಲಿ; ಗ=ಇರುವ; ನಲಿನ=ಕಮಲವೆಂಬ; ಇಷುಂ=ಬಾಣವನ್ನು; ಕಾಂತ= ಮನೋಹರನೇ; ವಕ್ತ್ರ=ಮುಖವೆಂಬ; ಇಂದು=ಚಂದ್ರನ; ಕಾಂತ್ಯಾ= ಕಾಂತಿಯಿಂದ; ನವ=ಚಂದದ; ಪದ=ಚರಣವೆಂಬ; ರವಿ=ಸೂರ್ಯನ; ಭಾಸಾ= ಬೆಳಕಿನಿಂದ; ನಃ=ನಮ್ಮ; ಕುಚ=ಸ್ತನಗಳಲ್ಲಿ; ಸ್ಥ=ಇರುವ; ಉತ್ಪಲ=ನೈದಿಲೆ ಎಂಬ; ಇಷುಂ=ಬಾಣವನ್ನು; ಶಮಯ= ಶಾಂತವಮಾಡು; ಸದಯ=ದಯೆಯಿಂದ ಕೂಡಿದವನೇ; ಗಾಢ=ದೃಢವಾದ; ಆಲಿಂಗನೇನ=ಅಪ್ಪುವಿಕೆಯಿಂದ; ಅರ್ಧಗಾತ್ರೀಃ=ಅರ್ಧ ಶರೀರವುಳ್ಳವರನ್ನು; ವಿರಚಯ= ಮಾಡು; ತವ=ನಿನ್ನ; ದಾಸೀಃ=ಸೇವಕಿಯರಾದ; ತೇನ=ಅದರಿಂದ; ಕಂದರ್ಪ=ಮನ್ಮಥನ; ದರ್ಪಂ=ಅಹಂಕಾರವನ್ನು.

ಕಾಮನಿಗೆ ಪಂಚಪುಷ್ಪಗಳೇ ಬಾಣಗಳು. ಆ ಪಂಚಪುಷ್ಪಗಳಲ್ಲಿ ಅರವಿಂದ ಹಾಗೂ ನೈದಿಲೆಗಳು ಸೇರಿವೆ. ಅರ್ಧನಾರೀಶ್ವರನು ಆತನನ್ನು ಸುಟ್ಟು ದರ್ಪವನ್ನು ಅಡಗಿಸಿದವನು. ಈ ಹಿನ್ನೆಲೆಯಲ್ಲಿ ಗೋಪಿಯರು ಕೃಷ್ಣನನ್ನು ಸ್ತುತಿಸುತ್ತಾರೆ.

ಹೇ ಕೃಷ್ಣ, ಮನ್ಮಥನು ತನ್ನ ಅರವಿಂದ ಎಂಬ ಬಾಣವನ್ನು ನಮ್ಮ ಕಣ್ಣಿಗೆ ಹೊಡೆದಿದ್ದಾನೆ. ಆ ಬಾಣವು ಬಹಳ ಚುಚ್ಚುತ್ತಿದೆ. ನಿನ್ನ ಮುಖವೆಂಬ ಚಂದ್ರನನ್ನು ನಾವು ಈ ಕಣ್ಣುಗಳಿಂದ ನೋಡುತ್ತೇವೆ. ಆಗ ಕಮಲ ಎಂಬ ಬಾಣದ ಚುಚ್ಚುವಿಕೆ ಕಮ್ಮಿಯಾಗುತ್ತದೆ. ಯಾಕೆಂದರೆ ಚಂದ್ರನಿಗೂ ಕಮಲಕ್ಕೂ ದ್ವೇಷ ಇದೆ. ಚಂದ್ರೋದಯವಾಗುವಾಗ ಕಮಲಗಳು ಬಾಡುತ್ತವೆ. ಇದರ ಅಭಿಪ್ರಾಯ ಹೀಗಿದೆ – ಈ ಗೋಪಿಯರ ಕಣ್ಣುಗಳು ಕಮಲಗಳಂತೆ ಸಹಜವಾಗಿ ಅರಳಿವೆ. ಆ ಕಣ್ಣುಗಳಲ್ಲಿ ಕೃಷ್ಣದರ್ಶನದ ಕಾಮನೆಯು ತುಂಬಿದೆ. ಯಾವ ವಸ್ತುವನ್ನು ನೋಡುವ ಉತ್ಕಟ ಇಚ್ಛೆಯು ಕಣ್ಣುಗಳಲ್ಲಿ ಇರುತ್ತವೋ, ಆ ವಸ್ತುವಿನ ದರ್ಶನಾನಂತರದಲ್ಲಿ ಇಚ್ಛೆಯು ಕಮ್ಮಿಯಾಗುತ್ತದೆ ಎಂದು.

ಹೇ ಕೃಷ್ಣ, ಕಾಮನು ನಮ್ಮ ಎದೆಗೆ ತನ್ನ ನೈದಿಲೆ ಎಂಬ ಬಾಣವನ್ನು ಪ್ರಯೋಗಿಸಿದ್ದಾನೆ. ನಮ್ಮ ಹೃದಯದಲ್ಲಿ ಆ ಬಾಣ ತುಂಬಾ ನೋವನ್ನು ಮಾಡುತ್ತಿದೆ. ನಿನ್ನ ಪಾದವು ಸೂರ್ಯನಂತೆ ಬಹಳ ಪ್ರಕಾಶವುಳ್ಳದ್ದು. ಆ ಪಾದದ ದರ್ಶನ, ಸ್ಪರ್ಶನ ನಮ್ಮ ಎದೆಗೆ ಆದರೆ ಈ ಬಾಣವು ತನ್ನ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತದೆ. ಲೋಕದಲ್ಲಿ ಸೂರ್ಯೋದಯಕ್ಕೆ ನೈದಿಲೆಗಳು ಮುದುಡುತ್ತವೆ.

ಈ ಮಾತಿನ ಅಭಿಪ್ರಾಯ ಈ ರೀತಿ –ಈ ಗೋಪಿಯರಿಗೆ ಹೃದಯದಲ್ಲಿಯೂ ಕಾಮನೆ ಇತ್ತು. ಇದು ಕಾಮನ ನೈದಿಲೆ ಎಂಬ ಬಾಣದ ಪ್ರಯೋಗದಿಂದ ಉಂಟಾದದ್ದು.

ನೈದಿಲೆಯು ನೀಲಬಣ್ಣ ಉಳ್ಳದ್ದು. ಈ ನಾರಿಯರ ಎದೆಯಲ್ಲಿರುವ ಸ್ತನಗಳ ತುದಿಯು ಸಹಜವಾಗಿ ನೀಲವಾಗಿದೆ. ರಾಜರು ಈ ರೀತಿ ಉತ್ಪ್ರೇಕ್ಷಿಸುತ್ತಾರೆ –ಸ್ತನದ ತುದಿಯು ನೀಲವಾದದ್ದು ಕಾಮನ ನೈದಿಲೆ ಬಾಣದ ಪ್ರಯೋಗದಿಂದ ಎಂದು. ದೇವರ ಪಾದದ ದರ್ಶನವಾದ ಅನಂತರ ಹೃದಯದ ಕಾಮನೆ ತಣ್ಣಗಾಗುತ್ತದೆ ಎಂದು.

ಕೃಷ್ಣ ನಮ್ಮನ್ನು ಗಾಢವಾಗಿ ಆಲಿಂಗಿಸು. ಆಲಿಂಗನ ಎಷ್ಟು ಗಾಢವಾಗಿ ಇರಬೇಕೆಂದರೆ –ನೋಡುವವರಿಗೆ ಇದು ಒಂದೇ ದೇಹ. ಅದರಲ್ಲಿ ಅರ್ಧನಾರೀ, ಅರ್ಧನರ ಎಂಬ ಭಾವನೆ ಬರಬೇಕು. ಹಾಗೆಯೇ ಅರ್ಧನಾರೀಶ್ವರನ ನೆನಪು ಆಗಬೇಕು. ಆಗ ಕಾಮನು ಹೆದರಿ ಓಡುತ್ತಾನೆ. ಯಾಕೆಂದರೆ ರುದ್ರನು ಕಾಮನನ್ನು ಕೊಂದವ. ನಾವು ಪರಸ್ಪರ ಆಲಿಂಗಿಸಿಕೊಂಡಿರುವಾಗ ಕಾಮನು ಇದು ಅರ್ಧನಾರೀಶ್ವರನಾದ ರುದ್ರನು ಎಂದು ತಿಳಿಯುತ್ತಾನೆ. ಶಾಂತನಾಗುತ್ತಾನೆ. ಇಲ್ಲದಿದ್ದರೆ ನಮ್ಮನ್ನು ದುಃಖಗೊಳಿಸಿ ತಾನು ಪರಿಹಾಸ ಮಾಡುತ್ತಾನೆ.

ಇದರ ಅಭಿಪ್ರಾಯ ಹೀಗಿದೆ –ಈ ಗೋಪಿಯರ ಮನಸ್ಸಿನಲ್ಲಿ ಕೃಷ್ಣನ ಬಗ್ಗೆ ವಿಪರೀತ ಕಾಮನೆ ಇದೆ. ಕೃಷ್ಣನನ್ನು ಬಿಗಿದಪ್ಪುವ ತನಕ ಈ ಕಾಮನೆ ತಣ್ಣಗಾಗುವುದಿಲ್ಲ. ಆದ್ದರಿಂದ ಇವರೆಲ್ಲರೂ ನಾಚಿಕೆಯನ್ನು ಬಿಟ್ಟು ಕೃಷ್ಣ ತಮ್ಮನ್ನು ಆಲಿಂಗಿಸಬೇಕು ಎಂದು ಅಪೇಕ್ಷಿಸಿದರು.

ಈ ಶ್ಲೋಕದಲ್ಲಿ ರಾಜರು ತನ್ನ ಚಮತ್ಕಾರವನ್ನು ಬಹಳವಾಗಿ ಮೆರೆದಿದ್ದಾರೆ.

**ಸಂದೇಶ** : ನಮಗೆ ಅನಪೇಕ್ಷಿತವಾದದ್ದು ಬಹಳ ಇರುತ್ತದೆ. ಆದರೆ ನಮ್ಮ ಪ್ರಾರಬ್ಧಕ್ಕನುಗುಣ ವಾಗಿ ಅವುಗಳು ನಮ್ಮಲ್ಲಿ ಸೇರಿರುತ್ತವೆ. ಅವುಗಳನ್ನು ನಮ್ಮಿಂದ ಹೋಗಲಾಡಿಸಲು ಅದಕ್ಕೆ ವಿರುದ್ಧ ಗತಿಯಲ್ಲಿ ದೇವರನ್ನು ಚಿಂತಿಸಬೇಕು. ಉದಾ: ವಾಚಾಲತನವನ್ನು ದೂರವಿಡಲು ದೇವರನ್ನು ಮುನಿಯನ್ನಾಗಿ ಚಿಂತಿಸಬೇಕು. ಮಾನಸಿಕ ತಾಪವಿರುವಾಗ ದೇವರನ್ನು ಚಂದ್ರನಂತೆ ತಂಪೆರೆಯುವವನು ಎಂದು ತಿಳಯಬೇಕು. ದಿಕ್ಕೇ ತೋಚ ದಾಗ ಸೂರ್ಯನಂತೆ ಬೆಳಕನ್ನು ಕೊಟ್ಟು ದಾರಿ ತೋರಿಸುವವನು ಎಂದು ಉಪಾಸಿಸಬೇಕು.

**ಅಯಿ ರಮಣ ಮುರಾರೇ ಸುಂದರೀಕಾಂತ ಶೌರೇ**
**ನರಕಮಥನ ಕೃಷ್ಣ ಪ್ರೌಢ ವಾರಾಶಿಧಿಷ್ಣ್ಯ ।**
**ಕರಧೃತಸುರವೃಕ್ಷಾಹಂಕೃತಾತ್ಮೀಯಶಿಕ್ಷ**
**ಸ್ವಕವಿಜಯಸಹಾಯ ಧ್ವಸ್ತಧರ್ಮಾಂತರಾಯ ॥ ೫೧ ॥**

ಅಯಿರಮಣ=ಎಲೋ ಪತಿಯೇ: ಮುರಾರೇ=ಮುರಶತ್ರುವೇ: ಸುಂದರೀ=

ಗೋಪಿಯರ; ಕಾಂತ=ಮನೋಹರನೇ; ಶೌರೇ=ಶೂರನ ವಂಶದವನೇ; ನರಕ= ನರಕಾಸುರನನ್ನು; ಮಥನ=ಕೊಂದವನೇ; ಕೃಷ್ಣ=ಕೃಷ್ಣನೇ; ಪ್ರೌಢ=ತರುಣನೇ; ವಾ= ನೀರುಗಳ; ರಾಶಿ=ಸಮೂಹದಲ್ಲಿ; ಧಿಷ್ಣ್ಯ=ಮನೆ ಉಳ್ಳವನೇ; ಕರ=ಕೈಯಿಂದ; ಧೃತ= ಧರಿಸಲ್ಪಟ್ಟ; ಸುರ=ದೇವತೆಗಳ; ವೃಕ್ಷ=ಮರವುಳ್ಳವನೇ; ಅಹಂಕೃತ= ಅಹಂಕಾರಗೊಂಡ; ಆತ್ಮೀಯ=ತನ್ನವರಿಗೆ; ಶಿಕ್ಷ=ಶಿಕ್ಷೆಯನ್ನು ಕೊಡುವವನೇ; ಸ್ವಕ= ತನ್ನವರಿಗೆ; ವಿಜಯ= ವಿಜಯಕ್ಕೆ; ಸಹಾಯ=ಸಹಾಯಕನೇ; ಧ್ವಸ್ತ=ನಷ್ಟವಾದ; ಧರ್ಮ= ಪುಣ್ಯದ; ಅಂತರಾಯ= ವಿಘ್ನವುಳ್ಳವನೇ.

ಕೃಷ್ಣ ನಿನ್ನ ಹೆಸರು 'ರಮಣ' –ಅಂದರೆ ಸಂತೋಷಪಡಿಸುವವನು ಎಂದು. ಆದ್ದರಿಂದ ನಮ್ಮನ್ನು ಈ ರೀತಿ ದುಃಖಪಡಿಸುವುದು ಸರಿಯಲ್ಲ. ನಮ್ಮನ್ನು ದುಃಖಪಡಿಸುವ ಆ ಕಾಮನನ್ನು ದಮನಿಸಲು ಬಾ ಎಂದು ಗೋಪಿಯರು ಪ್ರತಿಯೊಂದು ವಿಶೇಷಣದಿಂದಲೂ ದೇವರನ್ನು ಕರೆಯುತ್ತಾರೆ.

ನೀನು ಮುರಾರಿ=ಮುರ ಎಂಬ ರಾಕ್ಷಸನನ್ನು ಕೊಂದವ. ಕಂಸನು ತನ್ನಲ್ಲಿರುವ ಅನೇಕ ದೈತ್ಯರನ್ನು ನಮ್ಮಲ್ಲಿಗೆ ಕಳಿಸುತ್ತಿದ್ದಾನೆ. ಅವರನ್ನು ನಾಶಮಾಡಿ ನಿನ್ನ ಭಕ್ತರಾದ ನಮ್ಮನ್ನು ಸಲಹಲು ಬಾ. ನಾವು ಚಂದ ಇಲ್ಲ ಆದ್ದರಿಂದ ಬರುವುದಿಲ್ಲ ಎಂದೆನಬೇಡ. ನಮ್ಮ ಹೆಸರೇ ಸುಂದರಿಯರೆಂದು. ನೀನು ಚಂದ ಇಲ್ಲ ಎಂದು ಬಾರದಿರಬೇಡ. ನೀನು ಕಾಂತ. ಆದ್ದರಿಂದ ಸುಂದರೀಕಾಂತನಾದ ನೀನು ಬಾ. ಕಾಣಿಸಿಕೊಳ್ಳಲು ಬೇಕಾದ ಶೌರ್ಯ ನಿನ್ನಲ್ಲಿದೆ. ಆದ್ದರಿಂದಲೇ ನಿನ್ನ ಹೆಸರು ಶೌರಿ ಎಂದು. ದುಷ್ಟರ ಉಪಟಳವನ್ನು ಪರಿಹರಿಸಿ ನಮ್ಮನ್ನು ಸುಖಿಗಳನ್ನಾಗಿ ಮಾಡಲು ಬೇಕಾದ ತಾಕತ್ತು ನಿನಗಿದೆ. ಆದ್ದರಿಂದ ಶೌರಿಯಾಗಿ ಬಾ.

ಮುಂದೆ ಒಂದು ದಿನ ನರಕಾಸುರನನ್ನು ಸಂಹರಿಸಿ ಅವನ ಬಳಿಯಿರುವ ಬಹಳ ಹೆಮ್ಮಕ್ಕಳ ಬಂಧನವನ್ನು ಬಿಡಿಸುವಿ. ನಿನ್ನ ವಿರಹದಿಂದಾಗಿ ನಾವು ಈಗ ನರಕಸದೃಶವಾದ ಜೀವನದಲ್ಲಿ ಇದ್ದೇವೆ. ಆ ನರಕನಿಂದ ಸ್ತ್ರೀಯರನ್ನು ಬಿಡಿಸಲು ಅಭ್ಯಾಸ ಮಾಡುವ ಸಲುವಾಗಿ ಮೊದಲು ನಮ್ಮನ್ನು ಈ ನರಕದಿಂದ ಬಿಡಿಸು. ಅದಕ್ಕಾಗಿ ನರಕಮಥನನಾಗಿ ಬಾ. ಈ ವಿಷಯದಲ್ಲಿ ನಿನಗೆ ಒಳ್ಳೆಯ ಪ್ರೌಢಿಮೆ, ಕೌಶಲ್ಯ ಇದೆ. ನೀರು ಎನ್ನುವುದು ಶುದ್ಧಿಯ ಸಂಕೇತ. ನೀರು ಇಲ್ಲದಿದ್ದರೆ ಯಾವ ಶುದ್ಧಿಯೂ ಇಲ್ಲ. ನೀರಿನ ಮಧ್ಯದಲ್ಲಿ ನೀನು ಇರುವವನು. ಶುದ್ಧಿಸಾಧನಗಳ ಮಧ್ಯೆ ಇರುವವನು ಎಂದರ್ಥ. ನಿನ್ನನ್ನು ಕಳೆದುಕೊಂಡಿದ್ದೇವೆ. ಆದ್ದರಿಂದ ನಾವು ದೈಹಿಕವಾಗಿ ಮಾನಸಿಕವಾಗಿ ಅಶುದ್ಧರು. ಇಂತಹ ನಮ್ಮನ್ನು ಪವಿತ್ರೀಕರಿಸಲು ನೀನು ಬಾ ಎಂದು "ವಾರಾಶಿಧಿಷ್ಣ್ಯ" ಎಂಬ ವಿಶೇಷಣದಿಂದ ಸ್ತುತಿಸುತ್ತಾರೆ.

ದೇವತೆಗಳ ವೃಕ್ಷಗಳಾದ ಪಾರಿಜಾತವೇ ಮೊದಲಾದ್ದು ನಾವು ಅಪೇಕ್ಷಿಸಿದ್ದನ್ನು

ಕೊಡುತ್ತವೆ. ಆದರೆ ನಿನ್ನ ದಾನಿಹಸ್ತಗಳ ಮುಂದೆ ಅವುಗಳು ನಗಣ್ಯಗಳು. ನೀನು ಕೊಡುವಷ್ಟು ಅವುಗಳು ಕೊಡಲು ಶಕ್ತಗಳಲ್ಲ. ಅವುಗಳು ಕೊಡುವುದರಿಂದ ಅರ್ಥವೋ ಅನರ್ಥವೋ ಗೊತ್ತಿಲ್ಲ. ಆದರೆ ನಿನ್ನಿಂದ ಬಂದರೆ ಅನರ್ಥ ಇಲ್ಲವೇ ಇಲ್ಲ. ಯೋಗ್ಯತಾನುಸಾರ ಅರ್ಥವೇ. ಇಂತಹ ನಿನ್ನ ಪಾಣಿಯ ಗ್ರಹಣವನ್ನು ಎಮಗೆ ಮಾಡಿಸು. ನೀನು 'ಕರಧೃತಸುರವೃಕ್ಷ'.

ನಾವು ನಿನಗೆ ಬೇಕು. ನಮ್ಮಿಂದಾಗಿ ನಿನಗೆ ಸುಖ ಇದೆ. ಅದಕ್ಕಾಗಿ ನೀನು ವೇಣುನಾದದ ಮೂಲಕ ನಮ್ಮನ್ನು ಕರೆದದ್ದು ಎಂಬ ಅಹಂಕಾರ ನಮ್ಮ ತಲೆಗೆ ಏರಿತ್ತು. ಮುಂದೆ ನೀನು ಪಾರಿಜಾತಾಪಹಾರಕನಾಗಿ ದೇವತೆಗಳ ಅಹಂಕಾರಕ್ಕೆ ತಕ್ಕ ಶಿಕ್ಷೆಯನ್ನು ಕೊಡುವವನು. ಅದಕ್ಕಿಂತ ಮೊದಲು ನಮ್ಮನ್ನು ಶಿಕ್ಷಿಸು. ದೇವತೆಗಳನ್ನು ಶಿಕ್ಷಿಸಿ ಅವರಿಗೆ ದರ್ಶನ ಕೊಡುತ್ತಿ. ಹಾಗೆಯೇ ನಮಗೂ ದರ್ಶನ ಕೊಡು.

ನಿನ್ನವರನ್ನು ನೀನೆಂದೂ ತ್ಯಜಿಸುವವನಲ್ಲ. ಅದಕ್ಕಾಗಿ ಯಾವ ತ್ಯಾಗಕ್ಕೂ ನೀನು ಸಿದ್ಧ. ಸಂಧಾನದ ವಿಷಯದಲ್ಲಿ ದೂತನಾಗುವಿ. ಯುದ್ಧದ ಸಂದರ್ಭದಲ್ಲಿ ಸಾರಥಿಯಾಗುವಿ. ಈ ರೀತಿಯಾಗಿ ತನ್ನವರ ವಿಜಯಕ್ಕೆ ಕಟಿಬದ್ಧನಾಗಿ ಇರುವವನು. ನಾವೂ ನಿನ್ನವರೇ. ಆದ್ದರಿಂದ ನಮ್ಮ ರಕ್ಷಣೆಗೆ ಬಾ.

ನಮ್ಮಲ್ಲಿ ತುಂಬಾ ಪಾಪಗಳಿವೆ. ಆದ್ದರಿಂದ ನಮ್ಮ ರಕ್ಷಣೆ ನಿನ್ನಿಂದ ಅಸಾಧ್ಯ ಎನ್ನಬೇಡ. ನೀನು ಜ್ಞಾನರೂಪನು. ಜ್ಞಾನಾಗ್ನಿಯು, ಎಲ್ಲಾ ಪಾಪಕರ್ಮಗಳನ್ನೂ ಸುಡುತ್ತದೆ ಎಂಬ ಮಾತು ಇದೆ. ನೀನು ನಮ್ಮೀ ಪಾಪಗಳನ್ನು ಸುಟ್ಟು ನಮಗೆ ದರ್ಶನವನ್ನು ಕೊಡು. ಕಾಮನ ಬಾಧೆಯನ್ನು ಪರಿಹರಿಸು ಎಂದು.

**ಸಂದೇಶ** : ನಮಗೆ ಇಷ್ಟವಾದ್ದನ್ನು ಪಡೆಯಲು ದೇವರನ್ನು ಅದಕ್ಕನುಗುಣವಾಗಿ ಚಿಂತನೆ ಮಾಡಬೇಕು.

**ವೃಕ್ಷೇಷು ಪಕ್ಷಿಷು ಮೃಗೇಷು ವಿಚಾರಯಂತೀಃ**
**ಪ್ರೇಕ್ಷ್ಯ ಪ್ರಮುಗ್ಧಹೃದಯಾಃ ಶ್ರುತತತ್ವಕಾಂತೀಃ ।**
**ಆವಿರ್ಬುಭೂಷುರಪಿ ರಮ್ಯತದೀಯವಾಕ್ಯ-**
**ಭಾವಂ ಪುನರ್ವಿವಿದಿಷುಃ ಸ ತದಾ ತಿರೋऽಭೂತ್ ॥ ೫೨ ॥**

ವೃಕ್ಷೇಷು=ಮರಗಳಲ್ಲಿ; ಪಕ್ಷಿಷು=ಹಕ್ಕಿಗಳಲ್ಲಿ; ಮೃಗೇಷು=ಪ್ರಾಣಿಗಳಲ್ಲಿ; ವಿಚಾರಯಂತೀಃ=ವಿಚಾರಮಾಡುವ; ಪ್ರೇಕ್ಷ್ಯ=ನೋಡಿ; ಪ್ರಮುಗ್ಧ=ಶಾಂತವಾದ; ಹೃದಯಾಃ= ಮನಸ್ಸುಳ್ಳ; ಶ್ರುತ=ಶ್ರವಣಮಾಡಿದ; ತತ್ವ=ಶಾಸ್ತ್ರವುಳ್ಳವರ; ಕಾಂತಿಃ=ಪ್ರಕಾಶವುಳ್ಳ; ಆವಿರ್ಬುಭೂಷುಃ ಅಪಿ=ಕಾಣಿಸಿಕೊಳ್ಳುವ ಇಚ್ಛೆ ಉಳ್ಳವನಾದರೂ; ರಮ್ಯ=ಚಂದದ; ತದೀಯ=ಆ ಗೋಪಿಯರ; ವಾಕ್ಯ=ಮಾತಿನ; ಭಾವಂ=ಅರ್ಥವನ್ನು; ಪುನಃ=ಮತ್ತೊಮ್ಮೆ;

ವಿವಿದಿಷುಃ=ತಿಳಿಯುವ ಇಚ್ಛೆ ಉಳ್ಳವನಾಗಿ; ಸಃ=ಕೃಷ್ಣನು; ತದಾ=ಆಗ; ತಿರೋಭೂತ್= ಕಾಣದಾದನು.

ಈ ಗೋಪಿಯರು ಎಲ್ಲಾ ರೀತಿಯ ಸ್ಥಾವರಜಂಗಮಗಳಲ್ಲಿ ಕೃಷ್ಣನನ್ನು ವಿಚಾರಿಸಿದರು. ಇವರು ಕಶ್ಮಲರಹಿತ ಮನಸ್ಸಿನವರು. ದೇವರನ್ನು ಚೆನ್ನಾಗಿ ತಿಳಿದವರು. ಶಾಸ್ತ್ರವನ್ನು ಓದಿದವರಿಗೆ ಯಾವ ಅಂಶದಲ್ಲಿಯೂ ಕಡಿಮೆ ಇರಲಿಲ್ಲ. ದೇವರನ್ನು ತಿಳಿದುಕೊಂಡು ಉತ್ತಮವಾಗಿ ಸ್ತುತಿಸುತ್ತಿದ್ದಾರೆ. ಎಷ್ಟು ಉತ್ತಮವಾಗಿತ್ತೆಂದರೆ ದೇವರಿಗೆ ಕಾಣಿಸದೆ ಇರಲು ಸಾಧ್ಯವೇ ಆಗದಿರುವಷ್ಟು. ಹಾಗಾದರೆ ಕಾಣಿಸಲು ವಿಳಂಬ ಯಾಕೆ? ದೇವರು ಆಲೋಚಿಸಿದ –ನಾನು ಇವರಿಗೆ ಕಾಣಿಸಿಕೊಂಡರೆ ಇವರು ಸ್ತುತಿಸುವುದನ್ನು ನಿಲ್ಲಿಸುತ್ತಾರೆ. ನನಗೆ ಇವರು ಮಾಡುವ ಸ್ತುತಿಯನ್ನು ಇನ್ನೂ ಕೇಳಬೇಕೆಂಬಾಸೆ. ಆದ್ದರಿಂದ ಇನ್ನೂ ಸ್ವಲ್ಪ ತಡವಾಗಿ ದರ್ಶನ ಕೊಡೋಣ ಎಂದು.

**ಸಂದೇಶ** : ಭಕ್ತರು ತಿಳಿದು ಮಾಡುವ ಸ್ತುತಿಗಳಿಗೆ ದೇವರು ಬಹಳ ಮಾರುಹೋಗುತ್ತಾನೆ. ಧನಕನಕಾದಿ ಯಾವ ಆಮಿಷಕ್ಕೂ ದೇವರು ಅಧೀನನಾಗುವುದಿಲ್ಲ.

**ಕಾಮಿನೀತಿ ಜಿತಾಪದ್ಯಾಂ ನಿನಾಯ ಸುಖಯನ್ ಸುಖೀ ।**
**ಕಾಮಿನೀತಿಜಿತಾ ಪದ್ಯಾಂ ಕಾಂಚಿದಾಸಾದ್ಯ ಸೋಜ್ಝಿತಾ ॥ ೫೩ ॥**

ಕಾಮಿನೀ=ಕಾಮವುಳ್ಳವಳು; ಇತಿ=ಎಂದು; ಜಿತ=ಗೆದ್ದ; ಆಪತ್=ಅನಿಷ್ಟವುಳ್ಳ; ಯಾಂ=ಯಾರನ್ನು; ನಿನಾಯ=ಒಯ್ದನು; ಸುಖಯನ್=ಸುಖಿಸುವವನಾಗಿ; ಸುಖೀ= ಸುಖವುಳ್ಳ; ಕಾಮಿ=ಕಾಮುಕರ; ನೀತಿ=ಕ್ರಮಗಳನ್ನು; ಜಿತಾ=ಗೆದ್ದಿರುವ; ಪದ್ಯಾಂ= ದಾರಿಯಲ್ಲಿ; ಕಾಂಚಿತ್=ಒಂದು; ಆಸಾದ್ಯ=ಹೊಂದಿ; ಸಾ=ಅವಳು; ಉಜ್ಝಿತಾ=ಬಿಡಲ್ಪಟ್ಟಳು.

ಒಬ್ಬಳು ಗೋಪಿಯು ತುಂಬಾ ಕಾಮ ಉಳ್ಳವಳು ಆಗಿದ್ದಳು. ಅವಳನ್ನು ಸುಖಿಸುವ ಸಲುವಾಗಿ ಮೆಲ್ಲಗೆ ಅವಳನ್ನು ಕರೆದುಕೊಂಡು ಹೋದನು. ತನಗಾಗಿ ಅಲ್ಲ. ಅವಳಿಗಾಗಿ. ಯಾಕೆಂದರೆ ಕೃಷ್ಣನು ಪೂರ್ಣವಾದ ಆನಂದವುಳ್ಳವನು. ಆತನಿಗೆ ಆನಂದ ಬರುವ ಪ್ರಸಂಗವೇ ಇಲ್ಲ. ಆನಂದಪೂರ್ಣನಾದ್ದರಿಂದಲೇ ದುಃಖದ ಪ್ರಸಂಗವಿಲ್ಲ. ಆದ್ದರಿಂದ ಅದನ್ನು ಹೋಗಲಾಡಿಸುವ ಅಗತ್ಯವೂ ಇಲ್ಲ. ಕೃಷ್ಣನು ಕಾಮುಕನು ಅಲ್ಲ. ಕಾಮುಕರು ತಾನು ಪ್ರೀತಿಸಿದ ಹುಡುಗಿಯನ್ನು ದಾರಿಯಲ್ಲಿ ಬಿಡುವುದಿಲ್ಲ. ಈತನು ಇವಳನ್ನು ಕರೆದುಕೊಂಡು ಹೋಗಿ ಅನಂತರ ಮಧ್ಯದಾರಿಯಲ್ಲಿ ಬಿಟ್ಟನು. ತಾನು ಕಾಮುಕ ಅಲ್ಲ ಎಂದು ತೋರಿಸಿದನು.

**ಸಂದೇಶ** : ದೇವರಲ್ಲಿ ನಮಗೆ ಪ್ರೇಮವಿರಬೇಕು. ಕಾಮ ಅಲ್ಲ. ಲೋಕದ ವಸ್ತುವಿನಲ್ಲಿ, ಜನರಲ್ಲಿ ಕಾಮ. ಆದ್ದರಿಂದಲೇ ಅದಕ್ಕೆ ಅರ್ಧದಲ್ಲೇ ವಿಚ್ಛೇದ ಬರುತ್ತದೆ. ಅದನ್ನು

ತಿಳಿಸಲು ದೇವರು ಆಕೆಯನ್ನು ಅರ್ಧದಲ್ಲೇ ಬಿಟ್ಟ. ಪ್ರೇಮಿಸಿದವರನ್ನು ಕೊನೇತನಕ ಕರೆದುಕೊಂಡು ಹೋಗುತ್ತಾನೆ.

**ಸಾರಸಾಸಾರಸಂಸಾರೇ ಸಸಾರ ಸುರಸೂರಸಮ್ ।**
**ಸುಸಾರಸರಸಾರೋರಃಸರಸೀಸರಸಾರಸೀ ॥ ೫೪ ॥**

ಸಾ=ಆ; ಅರಸಾ=ರಾಗರಹಿತಳಾದ; ಅಸಾರ=ಸತ್ವ ಇಲ್ಲದ; ಸಂಸಾರೇ=ಸಂಸಾರದಲ್ಲಿ; ಸಸಾರ=ಅನುಸರಿಸಿದಳು; ಸುರ=ದೇವತೆಗಳನ್ನು; ಸೂಃ=ಹಡೆದಿರುವ ರಮೆಯು; ಉರಸಂ=ಎದೆಯಲ್ಲಿ ಉಳ್ಳ; ಸು=ಚೆನ್ನಾಗಿ; ಸಾರ=ಶ್ರೇಷ್ಠರಾದ; ಸರ=ಮುಕ್ತರೆಂಬ; ಸಾರ=ಜಲವುಳ್ಳ; ಉರಃ=ಎದೆಯೆಂಬ; ಸರಸೀ=ಕೊಳವನ್ನು; ಸರ=ಸೇರುವ; ಸಾರಸೀ= ಒಂದು ಜಾತಿಯ ಪಕ್ಷಿ.

ಕೃಷ್ಣನಿಂದ ಬಿಡಲ್ಪಟ್ಟ ಗೋಪಿಯು ಕೃಷ್ಣನನ್ನೇ ಅರಸುತ್ತಾ ಹೋದಳು. ಕೃಷ್ಣನು ಆಕೆಯನ್ನು ತನ್ನ ಎದೆಯಲ್ಲಿ ಹೊತ್ತುಕೊಂಡು ಹೋಗಿದ್ದ. ದೇವರೆದೆಯು ಶ್ರೇಷ್ಠರಾದ ಮುಕ್ತರಿಗೆ ಆಶ್ರಯ. ಅಂತಹ ಎದೆಯ ಸಂಪರ್ಕ ಇವಳಿಗೆ ಆಗಿದೆ. ಆದ್ದರಿಂದ ಸಂಸಾರದಲ್ಲಿ ಈಕೆಗೆ ವೈರಾಗ್ಯ ಬಂದಿದೆ. ಒಂದು ಜಾತಿಯ ಪಕ್ಷಿಯು ನೀರನ್ನೇ ಆಶ್ರಯಿಸಿರುತ್ತದೆ. ಅದಕ್ಕೆ ನೀರೇ ಬೇಕು. ಬೇರೆ ಏನು ಕೊಟ್ಟರೂ ಬೇಡ. ಅಂತಹ ಪಕ್ಷಿಯನ್ನು ನೀರಿನಿಂದ ಬೇರ್ಪಡಿಸಿ ದೂರದಲ್ಲಿ ಬಿಟ್ಟರೆ ಅದು ಪುನಃ ನೀರನ್ನು ಅರಸಿಕೊಂಡೇ ಹೋಗುತ್ತದೆ. ಅದೇ ರೀತಿ ಕೃಷ್ಣನೆಂಬ ಕೊಳದಲ್ಲೇ ಇದ್ದ ಈ ಗೋಪಿಯನ್ನು ಕೃಷ್ಣನು ತ್ಯಜಿಸಿದಾಗ ಪುನಃ ಆತನನ್ನೇ ಅರಸುತ್ತಾ ಆ ಪಕ್ಷಿಯಂತೆ ನಡೆದಳು.

ಇಲ್ಲಿ ರಾಜರು ಕೃಷ್ಣನನ್ನು 'ಸುರಸೂರಸಂ' ದೇವತೆಗಳನ್ನು ಹಡೆಯುವ ಲಕ್ಷ್ಮಿಯನ್ನು ಹೊತ್ತುಕೊಂಡಿರುವ ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ:

ಕೃಷ್ಣನಿಗೆ ಈ ಹೆಣ್ಣಿಂದ ಏನೂ ಉಪಯೋಗವಿಲ್ಲ. ಇವಳಿಗಿಂತ ಬಹಳ ಚಂದದ ರಮೆಯು ತನ್ನಲ್ಲಿದ್ದಾಳೆ ಎಂದು ತಿಳಿಸಲು.

**ಸಂದೇಶ** : ನಾವು ದೇವರನ್ನು ಅನುಸರಿಸಬೇಕಾದರೆ ನಮಗೆ ಲಕ್ಷ್ಮಿಯ ಸಂಬಂಧ ಆಗಬೇಕು. ಅಂದರೆ ವೇದಗಳ ಸಂಪರ್ಕ. ವೈದಿಕವಾಙ್ಮಯಕ್ಕೆ ಲಕ್ಷ್ಮಿಯು ಅಭಿಮಾನಿನಿ. 'ನ ಪ್ರತ್ಯಕ್ಷಂ । ನ ಅನುಮಾನಂ । ವೇದಾಃ ಹ್ಯೇವ ಏನಂ ವೇದಯಂತಿ ।' ಪ್ರತ್ಯಕ್ಷಕ್ಕೆ ಅನುಮಾನಗಳಿಗೆ ದೇವರು ಎಟಕುವವನಲ್ಲ. ವೇದಗಳಿಂದ ಮಾತ್ರ ತಿಳಿಯಲು ಸಾಧ್ಯ. ಇಂತಹ ವೇದಗಳಿಂದ ದೇವರ ತಿಳುವಳಿಕೆ ಬಂದಾಗ ನಾವು ದೇವರ ಹಿಂದೆಯೇ ಹೋಗುತ್ತೇವೆ.

**ಅಲಕ್ಷಯಂತೀ ಸ್ಮರತಾತಮೇನಂ**
**ಹೃದಾತ್ತಖೇದಾ ಸ್ಮರತಾ ತಮೇನಮ್ ।**

ಜಗಾದ ಸೌಮ್ಯಂ ನಯನಾತಿದೂರಂ
ವಿಧೇ ನ ಕುರ್ಯಾ ನಯನಾತಿದೂರಮ್ ॥ ೫೫ ॥

ಅಲಕ್ಷಯಂತೀ=ಕಾಣದಿರುವ; ಸ್ಮರ=ಮನ್ಮಥನ; ತಾತಂ=ತಂದೆಯಾದ; ಏನಂ=ಕೃಷ್ಣನನ್ನು; ಹೃದಾ=ಮನಸ್ಸಿನಿಂದ; ಆತ್ತ=ಹೊಂದಿದ; ಖೇದಾ=ದುಃಖವುಳ್ಳ; ಸ್ಮರತಾ=ಎಣಿಸುವ; ತಂ=ಆ; ಏನಂ=ಈ; ಜಗಾದ=ಹೇಳಿದಳು; ಸೌಮ್ಯಂ=ಚಂದದ; ನಯ ನ=ಒಯ್ಯಬೇಡ; ಅತಿದೂರಂ=ಬಹಳ ದೂರ; ವಿಧೇ=ಬ್ರಹ್ಮನೇ; ನ ಕುರ್ಯಾಃ= ಮಾಡಬೇಡ; ನಯನ=ಕಣ್ಣಿಗೆ; ಅತಿದೂರಂ=ದೂರದನ್ನಾಗಿ.

ಎಲೋ ಬ್ರಹ್ಮನೇ, ಕೃಷ್ಣನು ಕಾಮನ ತಂದೆ. ಆದ್ದರಿಂದ ಬಹಳ ಸುಂದರನು. ಇಂತಹ ಕೃಷ್ಣನು ನಮ್ಮ ಬಳಿಯಲ್ಲಿ ಇಲ್ಲ. ಆದ್ದರಿಂದ ಆತನ ಸ್ಮರಣೆ ಬರುವಾಗ ನಮಗೆ ಬಹಳ ದುಃಖವಾಗುತ್ತದೆ. ಆತನನ್ನು ನಮ್ಮಿಂದ ದೂರ ಒಯ್ಯಬೇಡ. ಒಂದು ರೂಪದಿಂದ ದೇವರು ನಮ್ಮ ಸಮೀಪದಲ್ಲೇ ಇದ್ದಾನೆ. ಆದರೆ ಇದು ಈ ಕಣ್ಣಿಗೆ ಕಾಣಿಸುವ ರೂಪ ಅಲ್ಲ. ಭೌತಿಕಕಣ್ಣಿಗೆ ಕಾಣಿಸುವ ಒಂದು ರೂಪ ನಮ್ಮ ಬಳಿ ಇತ್ತು. ಅದು ಈಗ ಅದೃಶ್ಯವಾಗಿದೆ. ಅದನ್ನು ಪುನಃ ನಮ್ಮ ಕಣ್ಣೆದುರಿಗೆ ನಿಲ್ಲಿಸು. ನಮಗೆ ಆ ರೂಪದ ಸ್ಪರ್ಶಾದಿಗಳು ಬೇಕು. ಸ್ಪರ್ಶಾದಿಗಳು ಆಗದ ವಿನಾ ನಮಗೆ ದುಃಖ ಕಮ್ಮಿಯಾಗುವುದಿಲ್ಲ.

<u>**ಸಂದೇಶ**</u> : ಮಾನವನ ಉದ್ಧಾರಕ್ಕೆ ಕೇವಲ ಬಿಂಬೋಪಾಸನೆ ಸಾಲದು. ರಾಮಕೃಷ್ಣಾದಿ ರೂಪಗಳ ಉಪಾಸನೆಯೂ ಅಗತ್ಯ. ಪಂಚಜ್ಞಾನೇಂದ್ರಿಯಗಳಿಂದಲೂ ಉಪಾಸನೆ ಮಾಡಬೇಕು. ಅದು ಬ್ರಹ್ಮನ, ಭಾವಿ ಬ್ರಹ್ಮ ಮಧ್ವರ ಅನುಗ್ರಹದಿಂದ ಆಗಬೇಕು.

ಕಾಂತೋಪಮಾನೇನ ದಿವಾಪಿ ಕುಟ್ಯಾಂ
ಅಂತರ್ಹಿತಂ ಕಾಲಭತೇಜಸಾ ಯಮ್ ।
ಸ್ವಾಂತೇ ಬಿಭರ್ಮೀಶ ವಿನೇಹ ತಂ ತ್ವಾಂ
ಅಂತರ್ಹಿತಂ ಕಾ ಲಭತೇಽಜ ಸಾಯಮ್ ॥ ೫೬ ॥

ಕಾಂತ=ಮನೋಹರನೇ; ಉಪಮಾನೇನ=ಹೋಲಿಕೆಯಿಂದ; ದಿವಾ ಅಪಿ=ಹಗಲಿಗೂ; ಕುಟ್ಯಾಂ=ಮನೆಯಲ್ಲಿ; ಅಂತರ್ಹಿತಂ=ಅಗಲುವಿಕೆಯು; ಕಾಲಭ=ಆನೆಮರಿಯ; ತೇಜಸಾ=ಕಾಂತಿಯಿಂದ; ಯಂ=ಯಾರನ್ನು; ಸ್ವಾಂತೇ= ಮನಸ್ಸಿನಲ್ಲಿ; ಬಿಭರ್ಮಿ=ಧರಿಸುತ್ತೇನೆ; ಈಶ=ಒಡೆಯನೇ; ವಿನಾ=ಹೊರತು; ಇಹ=ಇಲ್ಲಿ; ತಂ=ಅವನನ್ನು; ತ್ವಾಂ=ನಿನ್ನನ್ನು; ಅಂತರ್ಹಿತಂ=ಸುಖವನ್ನು; ಕಾ=ಯಾರು; ಲಭತೇ=ಹೊಂದುತ್ತಾರೆ; ಅಜ=ಉತ್ಪತ್ತಿರಹಿತನೇ; ಸಾಯಂ=ಸಾಯಂಕಾಲ.

ಕೃಷ್ಣ, ನೀನು ಚಂದದವ. ಎಲ್ಲರಿಗೂ ಒಡೆಯ. ನೀನು ಆನೆಯ ಮರಿಯಂತೆ ನಡಿಗೆ, ಬಣ್ಣ, ಪುಷ್ಟಿ ಉಳ್ಳವನು. ಹಗಲಿಗೆ ನಾವು ಮನೆಯಲ್ಲಿರುತ್ತೇವೆ. ಆಗಲೂ

ನಿನ್ನದೇ ಸ್ಮರಣೆ. ನೀನು ಇಲ್ಲ ಅಂದರೆ ನಿನ್ನ ದರ್ಶನ ಇಲ್ಲ ಅಂದರೆ ಬಹಳ ಭಯವಾಗುತ್ತದೆ. ಯದ್ಯಪಿ ಮನೆಯಲ್ಲಿ ಭಯಪಡುವ ಅಗತ್ಯ ಇಲ್ಲ. ಹೀಗಿರುವಾಗ ಈ ಕಾಡಲ್ಲಿ ಮನೆಮಂದಿ ಯಾರೂ ಇಲ್ಲ. ಹೊತ್ತುಕೂಡಾ ಸಾಯಂಕಾಲ. ಇಂತಹ ಸಮಯದಲ್ಲಿ, ಜಾಗದಲ್ಲಿ ನೀನು ಕಾಣದೆ ಮಾಯವಾದರೆ ನಮಗೆ ದುಃಖವಾಗುವುದು ಆಶ್ಚರ್ಯವಲ್ಲ. ನಮ್ಮ ಮನಸ್ಸಿನಲ್ಲಿ ನೀನಿದ್ದರೂ ಸಾಲದು, ಈ ಕಣ್ಣಿಗೆ ಕಾಣಿಸುವಂತೆ ಇರಬೇಕು.

**ಸಂದೇಶ** : ದೇವರ ಶಕ್ತಿಯ ಬಗ್ಗೆ ನಮಗೆ ಬಹಳ ತಿಳುವಳಿಕೆ ಇದೆ. ಸರ್ವತ್ರ ವ್ಯಾಪ್ತನಾದ ದೇವರು ನಮ್ಮ ಜೊತೆ ಸದಾ ಇದ್ದಾನೆ ಎಂದೂ ತಿಳಿದಿದೆ. ಆದರೂ ಭಯ ಇದ್ದೇ ಇರುತ್ತದೆ. ಕಾರಣ ಈ ಕಣ್ಣಿಗೆ ಕಾಣಿಸುವಂತೆ ಇಲ್ಲ. ಆದ್ದರಿಂದ ಹರಿದಾಸರಂತೆ ಈ ಕಣ್ಣಿಗೂ ಕಾಣಿಸುವಂತೆ ನಾವು ಸಾಧನೆ ಮಾಡಬೇಕು.

**ರಾಸಿ ಸಾರೋಽಸಿ ಸುರಸಂ ಏಹಿ ಹೇಮಹಿ ಮಾಮಿಹ ।**
**ದಾಸೀಂ ಸಸಾದಾಂ ಸದಸಿ ವೇದವಾದವಿದೋ ವದ ॥ ೫೭ ॥**

ರಾಸಿ=ಕೊಡುತ್ತಿ; ಸಾರಃ=ಶ್ರೇಷ್ಠನು; ಅಸಿ=ಆಗಿದ್ದಿ; ಸುರಸಂ=ಒಳ್ಳೆಯ ಸುಖವನ್ನು; ಏಹಿ=ಬಾ; ಹೇ ಮಹಿ=ಎಲೋ ಭೂಮಿಯೇ; ಮಾಂ=ನನ್ನನ್ನು; ಇಹ=ಇಲ್ಲಿ; ದಾಸೀಂ= ಸೇವಕಿಯಾದ; ಸಸಾದಾಂ=ದುಃಖಿಯಾದ; ಸದಸಿ=ಸಭೆಯಲ್ಲಿ; ವೇದ=ವೇದಗಳ; ವಾದ=ವಿಚಾರವನ್ನು; ವಿದಃ=ತಿಳಿದಿರುವ; ವದ=ಹೇಳು.

ಕೃಷ್ಣ, ನೀನು ಭೂಪತಿ. ಬಹಳ ದೊಡ್ಡವ. ಇನ್ನೊಬ್ಬರನ್ನು ಸುಖದಲ್ಲಿಡುವುದು ದೊಡ್ಡವರ ಲಕ್ಷಣ. ನಮಗೆ ನೆಮ್ಮದಿಯನ್ನು ಕೊಡಲು ಇಲ್ಲಿಗೆ ಬಾ. ನೀನು ನಮ್ಮ ದೃಷ್ಟಿಗೆ ಗೋಚರನಾಗುತ್ತಿಲ್ಲ. ಆದ್ದರಿಂದ ನಮ್ಮ ಮಾತು ನಿನಗೆ ಕೇಳಿಸುತ್ತೋ ಇಲ್ಲವೋ ತಿಳಿಯುತ್ತಿಲ್ಲ. ನಿನ್ನ ಪತ್ನಿಯಾದ ಭೂಮಿ ನಮಗೆ ಗೋಚರಿಸುತ್ತಿದ್ದಾಳೆ. ಅವಳಲ್ಲಿ ನಮ್ಮ ದುಃಖವನ್ನು ತೋಡಿಕೊಳ್ಳುವೆವು. ಅವಳು ನಿನಗೆ ತಿಳಿಸುವಳು. ಯಾವ ಚೇತನಕ್ಕೆ ಯಾವಾಗ ಏನು ಕೊಡಬೇಕು ಎಂದು ನೀನು ತಿಳಿದಿದ್ದಿ. ಈ ಎಲ್ಲಾ ವಿಚಾರಗಳು ವೇದದಲ್ಲಿವೆ. ವೇದ ಅಂದರೆ ನಿನ್ನ ಮಾತುಗಳೇ. ನಿನ್ನಲ್ಲಿ ಒಬ್ಬನಲ್ಲೇ ವಿಷಯವನ್ನು ಅರುಹಿಸಿದರೆ ನೀನು ಅದನ್ನು ಸಮಿತಿಯಲ್ಲಿಡುತ್ತಿ. ಸಮಿತಿಯ ಸದಸ್ಯರಾದ ಬ್ರಹ್ಮಾದಿಗಳ ಮಾತಿನಂತೆ ನೀನು ನಡೆದುಕೊಳ್ಳುತ್ತಿ. ಆದ್ದರಿಂದ ಭೂದೇವಿಯು ನಮ್ಮ ದುಃಖವನ್ನು ನಿನ್ನಲ್ಲಿ ಅರುಹುತ್ತಾಳೆ. ಅದಕ್ಕೆ ಪರಿಹಾರವನ್ನು ದಯಪಾಲಿಸು.

**ಸಂದೇಶ** : ನಾವು ನೇರವಾಗಿ ದೇವರಲ್ಲಿ ನಮ್ಮ ಕ್ಲೇಶಗಳನ್ನು ಅರುಹಬಾರದು. ಕೆಳಗಿನ ದೇವತೆಗಳನ್ನು ಆರಂಭಿಸಿ ತಾರತಮ್ಯಪ್ರಕಾರ ಹೋಗಬೇಕು.

**ಮಧುಪಾಲಿರೀಶ ಸರಸಾ ಸರಸಾ–**
**ಮುಪಕಂಠಮೇತ್ಯ ಮುದಿತಾಮುದಿತಾ ॥**

**ಅನುಯಾತಿ ಪಶ್ಯ ಸಭಯಾ ಸಭಯಾ–**
**ಮನುನೀಯ ಚಾಲಿ ಮಧುನಾ ಮಧುನಾ** ॥ ೫೮ ॥

ಮಧುಪ=ಭ್ರಮರಗಳ; ಆಲಿಃ=ಸಮೂಹವು; ಈಶ=ಒಡೆಯನೇ; ಸರಸಾ=ಪ್ರೀತಿಯಿಂದ ಕೂಡಿದ; ಸರಸಾಂ=ಸರೋವರಗಳ; ಉಪಕಂಠಂ=ಸಮೀಪವನ್ನು; ಏತ್ಯ=ಹೊಂದಿ; ಮುದಿತಾಂ=ಸಂತೋಷಗೊಂಡ; ಉದಿತಾ=ಮೇಲೆ ಹಾರಿದ್ದಾಗಿ; ಅನುಯಾತಿ= ಅನುಸರಿಸುತ್ತದೆ; ಪಶ್ಯ=ನೋಡು; ಸಭಯಾ=ಭಯದಿಂದ ಕೂಡಿದ; ಸಭಯಾಂ=ಭಯದಿಂದ ಕೂಡಿದ; ಅನುನೀಯ= ಸಮಾಧಾನ ಮಾಡಿ; ಆಲಿಂ=ಹೆಣ್ಣು ಭ್ರಮರವನ್ನು; ಅಧುನಾ=ಈಗ; ಮಧುನಾ= ಮಕರಂದದಿಂದ.

ಹೆಣ್ಣುದುಂಬಿಗಳು ಸರೋವರದ ಬಳಿಗೆ ಬರುತ್ತವೆ. ಅಲ್ಲಿರುವ ಹೂಗಳ ಮಕರಂದವನ್ನು ಹೀರಿ ಆನಂದಿಸುತ್ತವೆ. ಕೊಳದ ಬಳಿ ಇರುವ ವಿಪ್ರರಿಗೆ ತೊಂದರೆ ಆಗುತ್ತದೋ ಎಂಬ ಭಯವೂ ಇದೆ. ಆ ಸಮಯದಲ್ಲಿ ಗಂಡುದುಂಬಿಗಳು ಅಲ್ಲಿಗೆ ಬರುತ್ತವೆ. ಹೆಣ್ಣಿನಲ್ಲಿ ಅನುರಾಗವನ್ನು ಪ್ರದರ್ಶಿಸುತ್ತವೆ. ಹೆಣ್ಣು ಹಾರುವಲ್ಲಿ ಹಿಂದಿನಿಂದ ತಾನು ಹಾರಿಕೊಂಡು ಹೋಗುತ್ತದೆ. ಜೊತೆಗೆ ಕೊಳದ ಬಳಿ ಅನುಷ್ಠಾನದಲ್ಲಿರುವ ಋಷಿಗಳ ಭಯವು ಇವುಗಳಿಗೂ ಇದೆ. ಆದರೂ ತಾವು ಹೆಣ್ಣುದುಂಬಿಗಳ ಭಯವನ್ನು ಪರಿಹರಿಸುತ್ತವೆ. ಕೃಷ್ಣಾ, ಈ ರೀತಿಯಾಗಿ ಭೃಂಗವು ಭೃಂಗಿಯನ್ನು ಅನುಸರಿಸುವುದನ್ನು ನೋಡು. ಈ ರೀತಿ ಪ್ರಾಣಿಗಳಲ್ಲಿರುವ ಈ ಗುಣವು ನಿನ್ನಲ್ಲಿ ಇಲ್ಲವಾ? ಯದ್ಯಪಿ ಹುಡುಗನು ಹುಡುಗಿಯ ಹಿಂದೆ ಹೋಗುತ್ತಾನೆ. ಇಲ್ಲಿ ನಾವೇ ನಿನ್ನ ಹಿಂದೆ ಬರುತ್ತಿದ್ದೇವೆ. ಆದರೂ ನಮಗೆ ಯಾಕೆ ದುಃಖ ಕೊಡುತ್ತಿ? ದುಂಬಿಯನ್ನು ಮಧುಪ ಅಮಲು ಪದಾರ್ಥವನ್ನು ಸೇವಿಸಿದ ದುಂಬಿಯು ಎಂದು ಕರೆದಿದ್ದಾರೆ. ಇದರಿಂದ ಮತ್ತರೂ ತಮ್ಮ ಪತ್ನಿಯನ್ನು ಬಿಡುವುದಿಲ್ಲ. ವಿವೇಕಿಯಾದ ನೀನು ತ್ಯಜಿಸುವುದು ಸರಿಯೇ? ಎಂದು ಪ್ರಶ್ನಿಸುತ್ತಾರೆ.

**<u>ಸಂದೇಶ</u>** : ಪ್ರಪಂಚದಲ್ಲಿದ್ದ ಎಲ್ಲಾ ವಸ್ತುಗಳಲ್ಲಿ ಒಂದೊಂದು ಗುಣವನ್ನು ದೇವರು ಇಟ್ಟಿದ್ದಾನೆ. ಅವುಗಳನ್ನು ನಮ್ಮ ಜೀವನದಲ್ಲಿ ಅಳವಡಿಸಬೇಕು. ದೇವರನ್ನು ಕಾಣಲು ಪ್ರಯತ್ನಿಸಬೇಕು.

**ನಗಾಯತಾಕಾಶಮಿತಾಗಸಾನು**
**ಸಮೇತ್ಯ ಪುಂಸ್ಕೋಕಿಲಸುಸ್ವನೇನ ।**
**ನ ಗಾಯತಾ ಕಾ ಶಮಿತಾಗಸಾನು**
**ತ್ವಯಾ ಮೃಗಾಕ್ಷೀ ವಿಮದೀಕೃತಾಂಗ** ॥ ೫೯ ॥

ನಗ=ಮರಗಳಿಂದ; ಆಯತ=ವಿಶಾಲವಾದ; ಆಕಾಶ=ಆಕಾಶದ; ಮಿತ=ತನಕ

ಇರುವ; ಅಗ=ಪರ್ವತದ; ಸಾನು=ಶಿಖರವನ್ನು; ಸಮೇತ್ಯ=ಹೊಂದಿ; ಪುಂಸ್ಕೋಕಿಲ= ಗಂಡು ಕೋಗಿಲೆಯ; ಸುಸ್ವನೇನ=ಧ್ವನಿಯಿಂದ; ಗಾಯತಾ=ಹಾಡುವ; ಕಾ=ಯಾವ; ಶಮಿತ=ನಾಶಮಾಡಿದ; ಆಗಸಾ=ಪಾಪವುಳ್ಳ; ತ್ವಯಾ=ನಿನ್ನಿಂದ; ಮೃಗ=ಜಿಂಕೆಯಂತೆ; ಅಕ್ಷೀ=ಕಣ್ಣುಳ್ಳ ಹೆಣ್ಣು; ನ ವಿಮದೀಕೃತಾ=ಅಹಂಕಾರವನ್ನು ಕಳೆದುಕೊಂಡಿಲ್ಲ; ಅಂಗ= ಪ್ರಿಯನೇ.

ಕೃಷ್ಣ, ನೀನು ಗೋವರ್ಧನ ಬೆಟ್ಟದ ತುದಿಯಲ್ಲಿ ವೇಣುನಾದವನ್ನು ಮಾಡುತ್ತಿ. ಬೆಟ್ಟವಾದರೂ ಬಹಳ ಎತ್ತರ ಇದೆ. ದಟ್ಟವಾದ ಅರಣ್ಯದಿಂದಾಗಿ ವಿಶಾಲವಾಗಿದೆ. ಎತ್ತರದಲ್ಲಿ ಮಾಡಿದ ಕೊಳಲಿನ ನಾದವು ಬಹಳ ದೂರದವರೆಗೆ ಚೆನ್ನಾಗಿ ಕೇಳಿಸುತ್ತೆ. ನೀನು ಗಂಡುಕೋಗಿಲೆಯಂತೆ ಹಾಡುತ್ತಿ. ಆಗ ನಮ್ಮೆಲ್ಲರ ಮನಸ್ಸು ನಿನ್ನಲ್ಲಿ ಲಗ್ನವಾಗುತ್ತೆ. ಆಗ ನಮ್ಮ ಪಾಪಗಳು ನಾಶವಾಗುತ್ತೆ. ಅಹಂಕಾರದ ಬಲದಿಂದ ನಾವು ನಿನ್ನಲ್ಲಿ ಅಪರಾಧವನ್ನು ಮಾಡಿರಬಹುದು. ನೀನು ಮಾಡಿದ ಗಾನದ ಶ್ರವಣದಿಂದ ನಮ್ಮ ಪಾಪಗಳು ನಾಶವಾಗಿವೆ. ಹೀಗಿರುವಾಗ ನೀನು ಯಾಕೆ ದರ್ಶನ ಕೊಡುತ್ತಿಲ್ಲ?

<u>**ಸಂದೇಶ**</u> : ದೇವರ ದರ್ಶನವಾಗಬೇಕಾದರೆ ಪಾಪ ಕಳೆಯಬೇಕು. ಅದಕ್ಕಾಗಿ ಶ್ರವಣ ಮಾಡಬೇಕು. ನವವಿಧ ಭಕ್ತಿಗಳಲ್ಲಿ ಶ್ರವಣವೂ ಒಂದು.

**ಕಂದರ್ಪ ಸರ್ಪತಲ್ಪಸ್ಯ ನಂದನಾನಂದಕಾರಣ ।**
**ತಂ ದೇಶಂ ನಯ ಮಾಂ ಯತ್ರ ಬಂಧುರಾಸ್ತೇ ಸತಾಂ ಹರಿಃ ॥ ೬೦ ॥**

ಕಂದರ್ಪ=ಮನ್ಮಥನೇ; ಸರ್ಪ=ಶೇಷನು; ತಲ್ಪಸ್ಯ=ಹಾಸಿಗೆಯಾಗಿ ಉಳ್ಳವನ; ನಂದನ=ಮಗನೇ; ಆನಂದ=ನೆಮ್ಮದಿಗೆ; ಕಾರಣ=ಕಾರಣನೇ' ತಂ=ಆ; ದೇಶಂ= ಜಾಗವನ್ನು; ನಯ=ಕರೆದುಕೊಂಡು ಹೋಗು; ಮಾಂ=ನನ್ನನ್ನು; ಯತ್ರ=ಎಲ್ಲಿ; ಬಂಧುಃ= ಬಂಧುವು; ಆಸ್ತೇ=ಇದ್ದಾನೋ; ಸತಾಂ=ಸಜ್ಜನರಿಗೆ; ಹರಿಃ=ದೇವರು.

ಮನ್ಮಥನೇ, ನೀನು ಕೃಷ್ಣನ ಮಗ. ಕೃಷ್ಣನು ಶೇಷನಲ್ಲಿ ಪವಡಿಸುವವನು. ನಾವು ಕೃಷ್ಣನ ಸಂಬಂಧಿಗಳು. ಆದ್ದರಿಂದ ನಮಗೆ ನೀನು ಸಹಾಯಮಾಡುವ ಮೂಲಕ ನೆಮ್ಮದಿಯನ್ನು ಕೊಡಬೇಕು. ನಾವು ಎಷ್ಟು ಕೂಗಿದರೂ ಕೃಷ್ಣ ಬರಲಿಲ್ಲ. ಆದ್ದರಿಂದ ಆತ ಇರುವಲ್ಲಿಗಾದರೂ ನಮ್ಮನ್ನು ಕರೆದುಕೊಂಡು ಹೋಗು. ಮಗನಾದ ನಿನಗೆ ಆತ ಇರುವ ಜಾಗ ತಿಳಿದಿರಬೇಕು. ನಿನಗೆ ತಿಳಿದಿಲ್ಲವಾದರೆ ಆತನ ಹಾಸಿಗೆಯಾದ ಶೇಷನಲ್ಲಿ ಕೇಳು. ಸರ್ಪಗಳಿಗೆ ನಿಧಿ ಇರುವ ಜಾಗ ತಿಳಿದಿರುತ್ತದೆ.

<u>**ಸಂದೇಶ**</u> : ದೇವರ ದರ್ಶನದ ಕಾಳಜಿ ಇರುವವರು ಶತ್ರುಗಳನ್ನೂ ಮಿತ್ರರನ್ನಾಗಿ ಮಾಡಿಕೊಳ್ಳುತ್ತಾರೆ. ಮನ್ಮಥನು ತುಂಬಾ ಮಾನಸಿಕವಾಗಿ ದುಃಖಕೊಡುವವನು. ಆದ್ದರಿಂದ ಶತ್ರು. ಅರಿಷಡ್ವರ್ಗಗಳಲ್ಲಿ ಕಾಮವೂ ಒಂದು.

ರ ಮಾ ನಯಾಹಂಕೃತಿದೂರವೃತ್ತಿ
ರಮಾನಯಾಹಂಕೃತಿದೂರವೃತ್ತಿಃ ।
ರಮಾನಯಾಹಂಕೃತಿದೂರವೃತ್ತಿ
ರಮಾನಯಾಹಂಕೃತಿದೂರವೃತ್ತಿಃ ॥ ೬೧ ॥

ರ=ಮನ್ಮಥನೇ; ಮಾ=ನನ್ನನ್ನು; ನಯ=ಕರೆದುಕೊಂಡು ಹೋಗು; ಅಹಂ=ನಾನು; ಕೃತಿ=ಗಮನಾದಿಗಳಿಗೆ; ದೂರ=ದೂರವಾದ; ವೃತ್ತಿಃ=ವರ್ತನೆ ಉಳ್ಳವಳು; ಅಮಾನಯಾ=ಅಹಂಕಾರರಹಿತಳಿಂದ; ಅಹಂಕೃತಿ=ಅಹಂಕಾರದಿಂದ; ದೂರ=ದೂರವಾದ; ವೃತ್ತಿಃ=ವರ್ತನೆವುಳ್ಳವನು; ರಮಾ=ಲಕ್ಷ್ಮಿಯು; ನ=ಅಲ್ಲ; ಯಾ=ಯಾವ; ಅಹಂ=ನಾನು; ಕೃತಿ=ರಚನೆಯಿಂದ; ದೂರ=ದೂರವಾದ; ವೃತ್ತಿಃ=ವರ್ತನೆವುಳ್ಳವಳು; ಅಮಾ–ಅಜ್ಞಾನವು; ಅನಯ=ಅನ್ಯಾಯವು; ಅಹಂಕೃತಿ=ಅಹಂಕಾರ ಇವುಗಳಿಗೆ; ದೂರ=ದೂರವಾದ; ವೃತ್ತಿಃ=ಇರುವಿಕೆ ಉಳ್ಳವಳು.

ಎಲೋ ಕಾಮನೆ, ಕೃಷ್ಣನು ಅದೃಶ್ಯನಾದಾಗ ಆತನನ್ನು ನಾವೇ ಹುಡುಕುತ್ತೇವೆ. ನಿಶ್ಚಯವಾಗಿಯೂ ಸಿಗುತ್ತಾನೆ ಎಂದು ಅಹಂಕಾರ ಪಟ್ಟಿದ್ದೆವು. ಕಾಡೆಲ್ಲ ಅಲೆದಾಡಿದೆವು. ಕೃಷ್ಣ ಸಿಗಲಿಲ್ಲ. ಈಗ ನಮಗೆ ದಣಿವಾಗಿದೆ. ಒಂದು ಹೆಜ್ಜೆ ಮುಂದೆ ಇಡಲು ಚೈತನ್ಯ ಇಲ್ಲವಾಗಿದೆ. ನಮ್ಮ ಅಹಂಕಾರ ಪೂರಾ ಇಳಿದಿದೆ. ನಿನ್ನ ಸಹಾಯವನ್ನು ಯಾಚಿಸುತ್ತಿದ್ದೇವೆ. ಬಹಳ ದೀನರಾಗಿದ್ದೇವೆ. ಈಗ ನೀನು ಅಹಂಕಾರಪಡಬೇಡ. ಈ ಗೋಪಿಯರಿಗೆ ಈಗ ನನ್ನ ಸಹಾಯ ಬೇಕು ಎಂದು. ನಮ್ಮ ಮೇಲೆ ಕೃಪೆ ಮಾಡು. ನಮ್ಮನ್ನು ಕೃಷ್ಣನಲ್ಲಿಗೆ ಕರೆದುಕೊಂಡು ಹೋಗು. ಅಥವಾ ಸುಖರೂಪನಾದ ಕೃಷ್ಣನನ್ನು ನಮ್ಮಲ್ಲಿಗೆ ಕರೆದುಕೊಂಡು ಬಾ. (ಈ ಅರ್ಥದಲ್ಲಿ ರಂ ಆನಯ –ಎಂದು ಪದವಿಭಾಗ).

ಎಲೋ ಗೋಪಿಯರೇ, ನೀವು ಒಮ್ಮೆಯಾದರೂ ಅಹಂಕಾರ ಪಟ್ಟಿದ್ದೀರಿ. ಆದ್ದರಿಂದ ಕೃಷ್ಣದರ್ಶನ ಸಾಧ್ಯವಿಲ್ಲ ಎಂದು ಹೇಳಬೇಡ. ನಾವು ಮಾನವರು. ಗರ್ಭವಾಸಾದಿ ದುಃಖ ಉಳ್ಳವರು. ಪಾಂಚಭೌತಿಕ ಅನ್ನವನ್ನು ಉಣ್ಣುವವರು. ಆದ್ದರಿಂದ ಅಹಂಕಾರ ಬರುವುದು ಸಹಜ. ಅಹಂಕಾರ ಇಲ್ಲದ ಹೆಮ್ಮಗಳು ಅಂದರೆ ಲಕ್ಷ್ಮಿ ಮಾತ್ರ. ಅವಳಿಗೆ ಪಾಂಚಭೌತಿಕ ದೇಹ ಇಲ್ಲ. ಗರ್ಭವಾಸ ಇಲ್ಲ. ಯಾವುದೇ ರೀತಿಯ ಅನ್ಯಾಯಾದಿಗಳನ್ನು ಮಾಡುವುದಿಲ್ಲ. ಅವಳಿಗೆ ಅಕ್ಷರ ಎಂದು ಹೆಸರು. ನಾವು ಲಕ್ಷ್ಮೀ ಅಲ್ಲ. ಆದ್ದರಿಂದ ನಮ್ಮ ತಪ್ಪನ್ನು ಮನ್ನಿಸಿ ನಮ್ಮನ್ನು ಕೃಷ್ಣನಲ್ಲಿಗೆ ಕರೆದುಕೊಂಡು ಹೋಗು.

ರಮೆಗೆ ಅಹಂಕಾರ ಇಲ್ಲ. ಯಾಕೆಂದರೆ ಅವಳು 'ಅಹಂಕೃತಿ ದೂರವೃತ್ತಿ' ಉಳ್ಳವಳು. ಅಂದರೆ ಅಹಂಕಾರತತ್ವವನ್ನು ಮೆಟ್ಟಿನಿಂತವಳು. ಈ ತತ್ವದ ಅಭಿಮಾನಿಯಾದ ರುದ್ರದೇವರಿಗಿಂತ ಎತ್ತರದವಳು. ಇವಳ ವ್ಯಾಪ್ತಿಯು ಅಹಂಕಾರತತ್ವಕ್ಕಿಂತಲೂ ದೂರ

ಇದೆ. ಬ್ರಹ್ಮಾಂಡಕ್ಕೆ ನವ ಆವರಣಗಳು ಇವೆ. ಮೊದಲ ಆವರಣ ಜಲ. ಅನಂತರ ಅಗ್ನಿ..... ಹೀಗೆ. ಅನಂತರದ ಆವರಣ ಮೊದಲಿನ ಆವರಣಕ್ಕಿಂತ ಹತ್ತುಪಟ್ಟು ಹೆಚ್ಚು. ಐದನೆಯ ಆವರಣ ಅಹಂಕಾರತತ್ವ. ಏಳು, ಎಂಟು, ಒಂಭತ್ತನೇ ಆವರಣ ಪ್ರಕೃತ್ಯಾತ್ಮಕ. ಈ ಆವರಣವು ಅಹಂಕಾರಕ್ಕಿಂತ ದೂರತನಕ ಇರತಕ್ಕದ್ದು.

ಈ ಶ್ಲೋಕದಲ್ಲಿ ರಾಜರು ಅಕ್ಷರಗಳ, ಪದಗಳ ಜೋಡಣೆಯ ಕ್ರಮದಿಂದ ನಾನಾ ಅರ್ಥಗಳನ್ನು ಹೊರಡಿಸಿದ್ದಾರೆ. ತನ್ಮೂಲಕ ಅಕ್ಷಾರಾಭಿಮಾನಿನಿಯಾದ ಭಾರತಿಯ ಹಿಡಿತ ತನ್ನಲ್ಲಿದೆಯೆಂದು ತೋರಿಸಿದ್ದಾರೆ.

**ಸಂದೇಶ** : ಜೀವರು ಅಂದರೆ ದೋಷಿಗಳು. ಆಗಂತುಕ, ನೈಜ ಎಂದು ದೋಷಗಳು ಎರಡು ವಿಧ. ಆಗಂತುಕ ದೋಷಗಳನ್ನು ಪರಿಹರಿಸಿಕೊಳ್ಳದೆ ದೇವರು ಕಾಣಿಸಿಕೊಳ್ಳುವುದಿಲ್ಲ.

**ತತಾತತಾತೀತತತತ್ವತತಿತಾತೋಽತತೇ ತು ತತ್ ।**
**ತತ್ತಾ ತೌತಾತಿತೇತೀ ತೇಽತಾತಾತೀತೇ ತತೋಽತ್ತಿ ತಾಮ್ ॥ ೬೨ ॥**

ತತ=ವ್ಯಾಪ್ತವಾದ; ಅತತ=ಅವ್ಯಾಪ್ತವಾದ; ಅತೀತ=ಎಲ್ಲವನ್ನೂ ಮೀರಿ ಇರುವ; ತತ್ವ=ವಸ್ತುಗಳ; ತತಿ=ಸಮೂಹಕ್ಕೆ; ತಾತ=ತಂದೆಯಾದ ನೀನು; ಅತತೇ=ವ್ಯಾಪಿಸಿದ್ದಿ; ತು=ವಿಶೇಷವಾಗಿ; ತತ್=ಅದನ್ನು; ತತ್ತಾ=ಜಗದೈಕ್ಯವು. ತೌತಾತಿತಾ=ಮೀಮಾಂಸಕರ; ಈತೀ=ನಿರೀಶ್ವರತ್ವಬಾಧೆಯು; ತೇ=ನಿನಗೆ; ಅತಾತ=ತಂದೆ ಇಲ್ಲದವನೇ; ಅತೀತೇ= ಇಲ್ಲವಾಗಿದೆ; ತತಃ=ಅನಂತರ; ಅತ್ತಿ=ತಿನ್ನುತ್ತಿ; ತಾಂ=ಆ ತತ್ವಗಳನ್ನು.

ಕೃಷ್ಣ ನೀನು ಈ ಜಗತ್ತಿಗೆ ತಂದೆ. ಜಗತ್ತು ಅಂದರೆ ವ್ಯಾಪ್ತವಾದ ಆಕಾಶಕಾಯಗಳಿಂದ ಹಾಗೆಯೇ ಸರ್ವತ್ರ ಇಲ್ಲದಿರುವ ಪೃಥಿವ್ಯಾದಿಗಳಿಂದಲೂ ಕೂಡಿದ್ದು. ಇಂತಹ ಜಗತ್ತನ್ನು ಸೃಜಿಸಿ ಅವುಗಳ ಪಾಲನೆಗೋಸ್ಕರ ಅವುಗಳಲ್ಲಿ ವ್ಯಾಪಿಸಿದ್ದಿ. ಮುಕ್ತವರ್ಗವೂ ನಿನ್ನ ನಿಯಮನೆಗೆ ಒಳಪಟ್ಟದ್ದು. ನಿನಗೂ ಜಗತ್ತಿಗೂ ಜನ್ಯಜನಕವೆಂಬ ನಿಯಮ್ಯ ನಿಯಾಮಕ ವೆಂಬ ಸಂಬಂಧ ಇದೆ. ಒಂದು ದಿನ ನೀನೇ ಎಲ್ಲವನ್ನೂ ಸಂಹರಿಸುವಿ. ಹೀಗೆ ವಧ್ಯಘಾತುಕಭಾವ ಇದೆ. ಇವುಗಳೆಲ್ಲಾ ಭಿನ್ನ ಭಿನ್ನ ವಸ್ತುಗಳಲ್ಲಿ ಇರುವುದಾಗಿ ಲೋಕದಲ್ಲಿ ಕಂಡಿದೆ. ಹೀಗಿರುವಾಗ ಅದ್ವೈತಿಗಳು ಹೇಳುವ ಮಾತು ಎಷ್ಟು ಸರಿ? ಅದ್ವೈತಿಗಳು ಜಗತ್ತಿಗೂ ದೇವರಿಗೂ ಐಕ್ಯವನ್ನು ಹೇಳುತ್ತಾರೆ. ಜನ್ಯಜನಕಾದಿ ಭಾವ ಇರುವಲ್ಲಿ ಐಕ್ಯ ಇರಲು ಸಾಧ್ಯವಿಲ್ಲ. ಇದರಿಂದ ಸಾಂಖ್ಯರ ವಿಚಾರವನ್ನೂ ತಪ್ಪು ಎಂದು ಹೇಳಬಹುದು. ಅವರು ದೇವರೇ ಇಲ್ಲ ಎನ್ನುತ್ತಾರೆ. ನಮಗೆ ಅನಪೇಕ್ಷಿತವಾದ ದುಃಖಾದಿಗಳು ಬರುತ್ತವೆ. ಬಾರದಂತೆ ಮಾಡಲೂ ಬಂದದ್ದನ್ನು ಪರಿಹರಿಸಿಕೊಳ್ಳಲೂ ಸಾಧ್ಯವಾಗುವುದಿಲ್ಲ. ಆಗ ಒಂದು ಶಕ್ತಿಯು ನಮ್ಮ ಜೊತೆಗಿದೆ ಎಂಬ ತಿಳಿವಳಿಕೆ ಬರುವುದು. ಅದೇ ಈಶ್ವರ.

**ಸಂದೇಶ** : ನಾವು ಯಾರೂ ದೇವರನ್ನು ನೋಡಿದವರಲ್ಲ. ಆದರೂ ಕಾರ್ಯದಿಂದ ಕಾರಣವನ್ನು ತಿಳಿಯುವಂತೆ ಹೊಗೆಯನ್ನು ಕಂಡಾಗ ಕಾಣದ ಬೆಂಕಿಯ ಇರುವಿಕೆಯ ತಿಳುವಳಿಕೆಯಂತೆ ಮಡಕೆಯನ್ನು ಕಂಡಾಗ ಕುಂಬಾರನ ತಿಳುವಳಿಕೆಯಂತೆ ಜಗತ್ತನ್ನು ಕಂಡಾಗ ದೇವರ ಅಸ್ತಿತ್ವದ ತಿಳುವಳಿಕೆ ಬರುವುದು.

ಅಧರಾಮೃತಂ ಪ್ರದಿಶ ತೇ ದಿಶತೇ
ತನುಮರ್ಪಯೇ ವಿಹರತೇಹ ರತೇ ।
ವಿಹಿತೇ ಹತಿಂ ವಿರಚಯೇಽರಚಯೇ
ಸ್ಫುಟಮಿತ್ಯದಾಯಿ ಭವತಾ ಭವತಾ ॥ ೬೩ ॥

ಅಧರ=ತುಟಿಯ; ಅಮೃತಂ=ರಸವನ್ನು; ಪ್ರದಿಶ=ಕೊಡು; ತೇ=ನಿನ್ನ; ದಿಶತೇ= ಕೊಡುವ ನಿನಗೆ; ತನುಂ=ದೇಹವನ್ನು; ಅರ್ಪಯೇ=ಒಪ್ಪಿಸುತ್ತೇವೆ. ವಿಹರತಾ=ರಮಿಸುವ; ಇಹ=ಇಲ್ಲಿ; ರತೇ=ಕ್ರೀಡೆಯು; ವಿಹಿತೇ=ಮಾಡಲ್ಪಡುತ್ತಿರಲು; ಹತಿಂ=ನಾಶವನ್ನು; ವಿರಚಯೇ=ಮಾಡುವೆನು; ಅರ=ಪಾಪಗಳ; ಚಯೇ=ಸಮೂಹದಲ್ಲಿ; ಸ್ಫುಟಂ=ನಿಶ್ಚಯ; ಇತಿ=ಈ ರೀತಿಯಾಗಿ; ಅದಾಯಿ=ಕೊಡಲ್ಪಟ್ಟಿತು; ಭವತಾ=ನಿನ್ನಿಂದ; ಅಭವತಾ=ಮೋಕ್ಷವು.

ಕೃಷ್ಣ, ನಾವು ಕಾಮತೃಷಾ ಉಳ್ಳವರು. ನೀನು ಬಂದು ನಿನ್ನ ತುಟಿಯ ರಸವನ್ನು ನಮಗೆ ಕುಡಿಸು. ಇದಕ್ಕೆ ಪ್ರತಿಯಾಗಿ ನಾವು ನಮ್ಮನ್ನೇ ನಿನಗೆ ಅರ್ಪಿಸುತ್ತೇವೆ. ನಮ್ಮ ಜೊತೆಗೆ ಯಥೇಚ್ಛವಾಗಿ ವಿಹರಿಸು. ನಿನ್ನ ದೇಹದ ಸಂಪರ್ಕ ನಮಗಾದರೆ ನಮ್ಮ ಪಾಪಗಳೆಲ್ಲಾ ನಾಶವಾಗುತ್ತವೆ. ಸಮಸ್ತ ದುಃಖಗಳಿಗೂ ಪಾಪವೇ ಕಾರಣ. ಕಾರಣ ನಷ್ಟವಾದರೆ ಕಾರ್ಯ ನಾಶವಾಗುತ್ತದೆ. ನಮ್ಮನ್ನು ನೀನು ದುಃಖದಿಂದ ಬಿಡುಗಡೆ ಗೊಳಿಸಿದಂತೆ ಆಗುತ್ತದೆ. ಆದ್ದರಿಂದ ಬಾ.

**ಸಂದೇಶ** : ನವವಿಧ ಭಕ್ತಿಗಳಲ್ಲಿ ಆತ್ಮನಿವೇದನೆ ತನ್ನನ್ನೇ ದೇವರಿಗೆ ಅರ್ಪಿಸಿಕೊಳ್ಳುವುದು ಕೊನೆಯದ್ದು. ಆ ಭಕ್ತಿಯನ್ನು ಮಾಡಿದಾಗ ದುಃಖದಿಂದ ಮುಕ್ತಿ.

ಇತ್ಥಂ ಗಿರಾ ಕಾಪಿ ತಮರ್ಚಯಂತೀ
ಯಂ ತೀವ್ರಯೋಗೈಃ ಮುನಯೋಽಗುರಂತೇ ।
ರಂತೇತಿ ಮತ್ವಾ ಗಲಿತಾತ್ಮಹಾರಾ
ಹಾ ರಾಮಕೃಷ್ಣೇತ್ಯಪತಚ್ಚುಚಾರ್ತಾ ॥ ೬೪ ॥

ಇತ್ಥಂ=ಈ ರೀತಿಯಾಗಿ; ಗಿರಾ=ಮಾತಿನಿಂದ; ಕಾಪಿ=ಒಬ್ಬಳು; ತಂ=ಕೃಷ್ಣನನ್ನು; ಅರ್ಚಯಂತೀ=ಪೂಜಿಸುತ್ತಾ; ಯಂ=ಯಾರನ್ನು; ತೀವ್ರ=ಕಠಿಣವಾದ; ಯೋಗೈಃ=

ಉಪಾಯಗಳಿಂದ; ಮುನಯಃ=ಋಷಿಗಳು; ಅಗುಃ=ಹೊಂದಿದರು; ಅಂತೇ= ಕೊನೆಯಲ್ಲಿ, ರಂತಾ=ಕ್ರೀಡಿಸುವವನು; ಇತಿ=ಎಂದು; ಮತ್ವಾ=ತಿಳಿದು; ಗಲಿತ= ಬಿದ್ದಿರುವ; ಆತ್ಮ=ತನ್ನ; ಹಾರಾ=ಆಭರಣವುಳ್ಳ; ಹಾ ರಾಮ, ಕೃಷ್ಣ=ಎಲೋ ರಾಮಕೃಷ್ಣರೇ; ಇತಿ=ಎಂದು; ಅಪತತ್=ಬಿದ್ದಳು; ಶುಚಾ=ದುಃಖದಿಂದ; ಆರ್ತಾ=ಮೂರ್ಛಿತಳಾಗಿ.

ಋಷಿಗಳು ತಾವು ಬಹಳ ಶ್ರಮಪಟ್ಟು ದೇವರನ್ನು ಹೊಂದುತ್ತಾರೆ. ಅಂತಹ ದೇವರನ್ನು ಒಬ್ಬ ಗೋಪಿಯು ತನ್ನ ಈ ರೀತಿಯಾದ ಮಾತಿನಿಂದ ಬಹಳವಾಗಿ ಪೂಜಿಸಿದಳು. ನನ್ನ ಈ ಮಾತುಗಳಿಗೆ ಕೃಷ್ಣನು ನಿಶ್ಚಯವಾಗಿಯೂ ಮರುಳಾಗುವನು ಎಂದು ತಿಳಿದಳು. ಆದರೆ ಕೃಷ್ಣ ಬರಲಿಲ್ಲ. ಇದರಿಂದ ಬಹಳ ವ್ಯಗ್ರಳಾದಳು. ಮೈಮೇಲೆ ಪ್ರಜ್ಞೆಯೂ ಇರಲಿಲ್ಲ. ಇದರಿಂದ ಮೈ ಮೇಲಿನ ಆಭರಣಗಳೆಲ್ಲಾ ಅಸ್ತವ್ಯಸ್ತಗಳಾದವು. ಕೃಷ್ಣಬಲರಾಮರ ಹೆಸರನ್ನು ಉಚ್ಚರಿಸುತ್ತಾ ಕಾಮವನ್ನು ತಡೆದುಕೊಳ್ಳಲು ಸಾಧ್ಯವಾಗದೆ ಮೂರ್ಛೆಗೊಂಡು ಬಿದ್ದಳು.

**ಸಂದೇಶ** : ದೇವರ ಬಗ್ಗೆ ನಾವು ತಿಳಿದುಕೊಳ್ಳಬೇಕು. ತಿಳಿದದ್ದನ್ನು ಗಟ್ಟಿಯಾಗಿ ಹೇಳಬೇಕು. ಆಗ ಸಾಂಸಾರಿಕಪ್ರಜ್ಞೆಯು ತಪ್ಪುತ್ತದೆ. ಇದೇ ನಿಜವಾದ ಭಕ್ತಿ.

**ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋ ಮುದಾಂ ಸಪ್ತಮಃ ॥ ೬೫ ॥**

## ॥ ಸಪ್ತಮ ಸರ್ಗಃ ಸಮಾಪ್ತಃ ॥

## ॥ ಅಥ ಅಷ್ಟಮಃ ಸರ್ಗಃ ॥

ವಿರಹವಹ್ನಿಬಲಾ ಮಲಯಾನಿಲಾ
ಜಗದಿವಾಖಿಲಧಾಮ ಲಯಾನಿಲಾಃ ।
ಚಲತಿ ವೀಕ್ಷ್ಯ ಭಿಯಾಽಮಲ ಯಾನಿಲಾ
ಬತ ತುದಂತಿತರಾಮಲಯಾನಿಲಾಃ ॥ ೧ ॥

ವಿರಹ=ಅಗಲುವಿಕೆಯೆಂಬ; ವಹ್ನಿ=ಬೆಂಕಿಗೆ; ಬಲಾಃ=ಶಕ್ತಿಯನ್ನು ಕೊಡುವ; ಮಲಯ=ಮಲಯಪರ್ವತದ; ಅನಿಲಾಃ=ಗಾಳಿಯು; ಅಖಿಲ=ಎಲ್ಲದಕ್ಕೂ; ಧಾಮ= ಆಶ್ರಯವಾದ; ಜಗದಿವ=ಜಗತ್ತಿನಂತೆ; ಲಯ=ಪ್ರಳಯದ; ಅನಿಲಾಃ=ಗಾಳಿಯು; ಚಲತಿ=ಚಲಿಸುತ್ತದೆ; ವೀಕ್ಷ್ಯ=ನೋಡಿ; ಭಿಯಾ=ಭಯದಿಂದ; ಅಮಲ=ನಿರ್ಮಲನೇ; ಯಾನ್=ಯಾವುದನ್ನು; ಇಲಾ=ಭೂಮಿಯು; ಬತ=ದುಃಖವು; ತುದಂತಿತರಾಂ= ಪೀಡಿಸುತ್ತವೆ; ಅಲಯ=ನಾಶವಾಗದ; ಅನಿಲಾಃ=ಗಾಳಿಯುಳ್ಳ.

ಕೃಷ್ಣ, ನೀನು ಯಾವುದೇ ದೋಷವುಳ್ಳವನು ಅಲ್ಲ. ಮಲಯಪರ್ವತದಿಂದ ನಿಧಾನವಾಗಿ ಗಾಳಿ ಬೀಸುತ್ತಿದೆ. ಈ ಗಾಳಿಗೆ ಭೂಮಿಯೂ ನಡುಗುವಂತಿದೆ. (ಗಾಳಿ ಬಂದಾಗ ಧೂಳು ಹಾರುವುದರಿಂದ ಗೋಪಿಯರು ಈ ರೀತಿ ಉತ್ಪ್ರೇಕ್ಷಿಸುತ್ತಾರೆ.) ನಿನ್ನ ವಿಯೋಗ ಎಂಬ ಬೆಂಕಿಯು ನಮ್ಮಲ್ಲಿ ಉರಿಯುತ್ತಿದೆ. ಈ ಗಾಳಿಯು ಈ ಬೆಂಕಿ ಬೆಳೆಯಲು ಸಹಾಯಕವಾಗುತ್ತಿದೆ. ಯದ್ಯಪಿ ಇದು ಮಂದಮಾರುತ. ಆದರೆ ನಮಗೆ ಇದು ಪ್ರಳಯದ ಗಾಳಿಯಂತೆ ತೋರುತ್ತಿದೆ. ಪ್ರಳಯದ ಗಾಳಿಯು ಜಗತ್ತನ್ನೇ ನಾಶಮಾಡುತ್ತದೆ. ಈ ಗಾಳಿಯು ನಮ್ಮ ದೇಹವನ್ನು ನಾಶಮಾಡುತ್ತದೆ. ಗಾಳಿಯು ನಿಧಾನವಾಗಿ ಪರಿಮಳಿತವಾಗಿ ಬೀಸಿದಾಗ ಈ ಗೋಪಿಯರಿಗೆ ದೇವರ ನೆನಪು ಜಾಸ್ತಿಯಾಗಿ ಕಾಮವು ಜಾಗೃತವಾಗುತ್ತದೆ. ಕೃಷ್ಣನು ಸಮೀಪದಲ್ಲಿ ಬೇಕು ಎಂದು ತೋರುತ್ತದೆ. ಆದರೆ ಆತನಿಲ್ಲ. ಆದ್ದರಿಂದ ಬಹಳ ದುಃಖವಾಗುತ್ತದೆ ಎಂದು ಅಭಿಪ್ರಾಯ. ನಮ್ಮೊಳಗೂ ಒಂದಂಶದಲ್ಲಿ ಸೇರಿಕೊಂಡಿದೆ. ಅಂದರೆ ನಮ್ಮಲ್ಲಿ ಶ್ವಾಸ ಮಾತ್ರ ಇದೆ. ಬೇರೆ ಯಾವ ರೀತಿಯ ಚೈತನ್ಯವೂ ಇಲ್ಲ. ಬಹಳಷ್ಟು ಸುಟ್ಟಗಾಯಗಳಿಂದ ಕೂಡಿದ ವ್ಯಕ್ತಿಯು ಬದುಕಿಕೊಂಡಿದ್ದರೆ ಆತನ ಅವಸ್ಥೆ ಏನೋ ಅದೇ ಅವಸ್ಥೆ ನಮಗೂ ಆಗಿದೆ. ಆದ್ದರಿಂದ ಕಾಮಕ್ರೋಧಾದಿ ಯಾವುದೇ ದೋಷಗಳಿಗೆ ಎಡೆಕೊಡದ ನೀನು ನಮ್ಮನ್ನು ಈ ರೀತಿ ಪೀಡಿಸಬೇಡ.

**ಸಂದೇಶ** : ಗಾಳಿಯು ಪ್ರತಿಯೊಬ್ಬರಿಗೂ ಪ್ರಿಯವಾದ ವಸ್ತು. ಪ್ರಾಣ ಹೋಗುವ ಪ್ರಸಂಗ ಬಂದಾಗ ದುರ್ವಾಸನೆಯ ಗಾಳಿಯನ್ನೂ ಸೇವಿಸುತ್ತೇವೆ. ಹೀಗಿರುವಾಗ

ಗಾಳಿಯು ಪರಿಮಳತವಾದರೆ ಯಾರಿಗೆ ಬೇಡ? ಆದರೆ ದೇವರು ಇಲ್ಲದಿದ್ದರೆ ಎಂತಹ ಗಾಳಿಯಾದರೂ ಅನಪೇಕ್ಷಿತವೇ ಆಗುತ್ತದೆ.

**ದೇವೇಶ ದೇವೇಶನಿವರ್ಷಹೇತೌ**
**ಪಾತಾಸಿ ಪಾತಾಸಿತಘಾತಕಲ್ಪೇ ।**
**ದಾವೇಷ್ವದಾವೇಷ್ವಯತೀಹ ಯೋಽಭೂಃ**
**ಮಾ ನಃ ಸಮಾನಃ ಸ ನಿಜೇ ತ್ಯಜಾದ್ಯ** ॥ ೨ ॥

ದೇವೇಶ=ದೇವಶ್ರೇಷ್ಠನೇ; ದೇವೇ=ಇಂದ್ರನು; ಅಶನಿ=ಗುಡುಗಿನಿಂದ ಕೂಡಿದ; ವರ್ಷ=ಮಳೆಗೆ; ಹೇತೌ=ಕಾರಣನಾಗುತ್ತಿರಲು; ಪಾತಾ=ರಕ್ಷಕನು; ಅಸಿ=ಕತ್ತಿಯ; ಪಾತ=ಬೀಳುವಿಕೆಯಿಂದ; ಅಸಿತ=ಹೊಲಿಯದ; ಘಾತ=ಗಾಯಕ್ಕೆ; ಕಲ್ಪೇ=ಸಮಾನವಾದ; ದಾವೇ=ಬೆಂಕಿಯು; ಅಷ್ಟದ=ಎಂಟನ್ನು ಕೊಡುವವನೇ; ಆವೇಷ್ವಯತಿ= ಸುತ್ತುವರಿಯುತ್ತಿರಲು; ಇಹ=ಇಲ್ಲಿ; ಮಾ=ಬೇಡ; ನಃ=ನಮ್ಮನ್ನು; ಸಮಾನಃ=ಅಭಿಮಾನದಿಂದ ಕೂಡಿದ; ಸಃ=ಅವನು; ನಿಜೇ=ತನ್ನವರಲ್ಲಿ; ತ್ಯಜ=ಬಿಡು; ಅದ್ಯ=ಈಗ.

ಕೃಷ್ಣ, ಹಿಂದೆ ಒಂದು ಸಂದರ್ಭದಲ್ಲಿ ಇಂದ್ರನು ಬಹಳ ಮಳೆಗರೆದ. ಸಿಡಿಲು, ಮಿಂಚು ಬಹಳ ಇತ್ತು. ಹಾಗೆಯೇ ಇನ್ನೊಂದು ಸಂದರ್ಭದಲ್ಲಿ ಕಾಳ್ಗಿಚ್ಚು ನಮ್ಮನ್ನೆಲ್ಲಾ ಆವರಿಸಿತ್ತು. ಆ ಬೆಂಕಿಯ ಉರಿ, ಬಣ್ಣ ಹೇಗಿತ್ತೆಂದರೆ ಕತ್ತಿಯಿಂದ ನಮ್ಮ ಮೈಯಲ್ಲಿ ಗಾಯವಾದರೆ ಆ ಗಾಯಕ್ಕೆ ಹೊಲಿಗೆ ಹಾಕದಿದ್ದರೆ ಆಗ ಆ ಗಾಯದ ಬಣ್ಣ, ಉರಿ ಹೇಗಿರುತ್ತೋ ಹಾಗೆ ಇತ್ತು. ಈ ಎಲ್ಲಾ ಪ್ರಸಂಗಗಳಲ್ಲಿಯೂ ನೀನು ನಮ್ಮನ್ನು ರಕ್ಷಿಸಿದ್ದಿ. ನಾವು ನಿನ್ನ ಭಕ್ತರೆಂದು ನಿನಗೆ ನಮ್ಮ ಮೇಲೆ ತುಂಬಾ ಅಭಿಮಾನ ಇತ್ತು. ಈಗ ಆ ಅಭಿಮಾನ ಇಲ್ಲವೇನೋ? ಅಥವಾ ಈಗ ನಿನ್ನಲ್ಲಿ ಶಕ್ತಿ ಇಲ್ಲವೋ? ನಿನ್ನಲ್ಲಿ ಅಣಿಮಾದಿ ಐಶ್ವರ್ಯಗಳು ಯಾವಾಗಲೂ ಇವೆ. ಇನ್ನೊಬ್ಬರಿಗೆ ಕೊಡುತ್ತಿ ಕೂಡಾ. ನಾವು ಈಗಲೂ ನಿನ್ನ ಭಕ್ತರು. ಆದ್ದರಿಂದ ಈಗ ನಮ್ಮನ್ನು ಬಿಡಬೇಡ. ಈಗ ಬಿಟ್ಟರೆ ಹಿಂದೆ ರಕ್ಷಿಸಿದ್ದು ವ್ಯರ್ಥವಾದೀತು.

**ಸಂದೇಶ** : ದೇವರನ್ನು ಸ್ತುತಿಸುವಾಗ ವೇದಮಂತ್ರಗಳಿಂದ ಮಾತ್ರ ಅಲ್ಲದೆ ನಮ್ಮ ಜೀವನದ ಘಟನೆಗಳಿಂದಲೂ ಸ್ತುತಿಸಬೇಕು.

**ನಾನಾನನಾನನುನ್ನೂನಂ ನೈನೋಽನನ್ನೇಽನ್ನಿನಾಂ ನು ನೌಃ ।**
**ನಾನಾನ್ನನುನ್ನೇನಾನೇನ ನೋನೋ ನೇನ ನನೋ ನನು** ॥ ೩ ॥

ನಾನಾ=ಅನೇಕ; ಆನನ=ಮುಖವುಳ್ಳ ಬ್ರಹ್ಮಾದಿಗಳಿಗೆ; ಅನ=ಮುಖ್ಯಪ್ರಾಣನಿಗೆ; ನುತ್=ಪ್ರೇರಕನೇ; ನೂನಂ=ನಿಶ್ಚಯ; ನ=ಇಲ್ಲ; ಏನಃ=ಪಾಪವು; ಅನನ್ನೇ=ಅನ್ನ

ಉಣ್ಣದವನಲ್ಲಿ; ಅನ್ನಿನಾಂ=ಉಣ್ಣುವವರಿಗೆ; ನು=ನಿಶ್ಚಯ; ನೌಃ=ದೋಣಿಯು; ನಾನಾ=ವಿವಿಧ; ಅನ್ನ=ಅನ್ನದಿಂದ; ನುನ್ನೇನ=ಉಂಟಾದ; ಅನೇನ=ಪಾಪದಿಂದ; ನ=ಅಲ್ಲ; ಊನಃ= ರಹಿತನು; ನಾ=ಪುರುಷನು; ಇನ=ಸ್ವಾಮಿಯೇ; ನ=ಇಲ್ಲ; ನಃ=ನಮಗೆ; ನನು=ನಿಶ್ಚಯ.

ಅಪರಾಧಿಗಳನ್ನು ಹೇಗೆ ರಕ್ಷಿಸುವುದು? ಎಂಬ ಪ್ರಶ್ನೆಗೆ ಗೋಪಿಯರು ಉತ್ತರಿಸುತ್ತಾರೆ –ಅಪರಾಧಿಗಳು ಯಾರಲ್ಲ? ಕೃಷ್ಣ ಎಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಅಪರಾಧಿಗಳೇ. ಯಾರೆಲ್ಲಾ ಅನ್ನವನ್ನು ಉಣ್ಣುತ್ತಾರೋ ಅವರು ಅಪರಾಧವನ್ನು ಗೊತ್ತಿದ್ದೋ ಗೊತ್ತಿಲ್ಲದೆಯೋ ಮಾಡುತ್ತಾರೆ. ಇನ್ನು ದೇವಶ್ರೇಷ್ಠರಾದ ಚತುರ್ಮುಖ, ವಾಯುದೇವರು ಇದ್ದಾರೆ. ಇವರು ಯಾವ ತಪ್ಪನ್ನೂ ಮಾಡುವುದಿಲ್ಲ. ಇದಕ್ಕೆ ಕಾರಣ ಅವರ ವ್ಯಕ್ತಿತ್ವ ಅಲ್ಲ. ನಿನ್ನ ಅನುಗ್ರಹ. ನಿನ್ನ ಅನುಗ್ರಹ ಇರದಿದ್ದರೆ ಬ್ರಹ್ಮಾದಿಗಳು ಚಂಡಾಲನಿಗಿಂತಲೂ ನೀಚರಾಗುತ್ತಾರೆ ಎಂದು ಶಾಸ್ತ್ರದ ಮಾತು ಇದೆ. ಭೌತಿಕಾನ್ನದಲ್ಲಿ ದೋಷ ಇದೆ. ಆದ್ದರಿಂದ ಈ ಅನ್ನವನ್ನು ಉಣ್ಣುವವರು ದೋಷಿಗಳು ಆಗುತ್ತಾರೆ. ನಿರ್ದೋಷಿಗಳಾಗ ಬೇಕಾದರೆ ಈ ಅನ್ನವನ್ನು ಉಣ್ಣಬಾರದು. ಉಣ್ಣದವರೂ ದೋಷಿಗಳೇ ಆಗುವುದಾದರೆ ಉಂಡು ದೋಷಿಗಳಾದವರನ್ನು ಉದ್ಧರಿಸುವವರು ಯಾರು? ಅದಕ್ಕಾಗಿ ಉಣ್ಣದೇ ನಿನ್ನ ಅನುಗ್ರಹದಿಂದ ನಿರ್ದೋಷಿಯಾದ ಯೋಗಿಗಳ ಒಂದು ವರ್ಗವಿದೆ. ನಮ್ಮ ಗಂಡಂದಿರು ಬಹಳ ವೇದ ಓದಿದವರು. ಆದರೂ ಈ ಅನ್ನದ ಪ್ರಭಾವದಿಂದ ದೋಷಿಗಳೇ ಆಗಿದ್ದಾರೆ. ಹೀಗಿರುವಾಗ ವೇದ ಓದದ ನಾವು ದೋಷಿಗಳಾಗುವುದರಲ್ಲಿ ಆಶ್ಚರ್ಯ ಇಲ್ಲ. ಆದ್ದರಿಂದ ನಾವು ಅಪರಾಧಿಗಳು ಎಂಬ ಭಾವನೆಯನ್ನು ಬದಿಗಿಡು. ನಮಗೆ ಕಾಣಿಸು. ತಪ್ಪು ಮಾಡುವುದು ಜೀವರ ಸ್ವಭಾವ. ಕ್ಷಮಿಸುವುದು ದೇವರ ಸ್ವಭಾವ.

**ಸಂದೇಶ** : ದೇವರ ದರ್ಶನಕ್ಕೆ ಅನೇಕ ಸಾಧನಗಳು ಬೇಕು. ಅದರಲ್ಲಿ ಶುದ್ಧವಾದ ಆಹಾರದ ಸೇವನೆಯೂ ಒಂದು.

**ಮನಸಾಮಹಿತ ಸ್ವರಮಿತ್ರಹೃದಾ–**
**ಮನಸಾಮಹಿತಸ್ವರಮಿತ್ರ ಹೃದಾ ।**
**ಮನಸಾ ಮಹಿತ ಸ್ವರಮಿತ್ರಹೃದಾ–**
**ಮನಸಾಮಹಿತಸ್ವರಮಿತ್ರ ಹೃದಾ** ॥ ೪ ॥

ಮನಸಾಂ=ಮನಸ್ಸುಗಳಿಗೆ; ಅಹಿತ=ಅನಿಷ್ಟನೇ; ಸ್ವಃ=ಸ್ವರ್ಗಕ್ಕೆ; ಅಮಿತ್ರ=ದ್ವೇಷದ; ಹೃದಾಂ=ಅಭಿಪ್ರಾಯವುಳ್ಳ; ಅನ=ಮುಖ್ಯಪ್ರಾಣನ; ಸಾಮ=ಸಾಮವೇದಕ್ಕೆ; ಹಿತ= ಯೋಗ್ಯವಾದ; ಸ್ವರ=ಸ್ವರಗಳಿಗೆ; ಮಿತ್ರ=ಮಿತ್ರನೇ; ಹೃದಾ=ಮನಸ್ಸಿನಿಂದ; ಮನಸಾ= ಮನಸ್ಸಿನಿಂದ; ಮಹಿತ=ಪೂಜಿತನೇ; ಸ್ವರ=ಪ್ರಣವದಲ್ಲಿ; ಮಿತ್ರ=ಪ್ರೀತಿಯ; ಹೃದಾಂ= ಮನಸ್ಸುಳ್ಳ ಋಷಿಗಳ; ಅನಸಾ=ಬಂಡಿಯಿಂದ; ಅಮಹಿತ=ತಿರಸ್ಕೃತವಾದ; ಸ್ವರ= ಧ್ವನಿವುಳ್ಳವನೇ; ಮಿತ್ರ=ಸೂರ್ಯನ; ಹೃದಾ=ಎದೆಯಿಂದ.

ಕೃಷ್ಣ, ನೀನು ನಮಗೆ ದುಃಖ ಕೊಡುವುದು ಸರಿಯಲ್ಲ. ನಾವು ಯಾವಾಗಲೂ ಸ್ವರ್ಗವನ್ನು ಪಡೆಯಲು ಬೇಕಾದ ಒಳ್ಳೆಯ ಕೆಲಸವನ್ನೇ ಮಾಡುವವರು. ದೈತ್ಯರು ಸದಾ ಕೆಟ್ಟ ಕೆಲಸವನ್ನೇ ಮಾಡುತ್ತಾರೆ. ಆದ್ದರಿಂದ ಪರೋಕ್ಷವಾಗಿ ಸ್ವರ್ಗವನ್ನು ತಮ್ಮ ಮಿತ್ರನನ್ನಾಗಿ ಮಾಡಿಕೊಳ್ಳಲಿಲ್ಲ. ನರಕವೇ ಅವರ ಗೆಳೆಯ. ಆದ್ದರಿಂದ ದುಃಖ ಅವರಿಗೇ ಮೀಸಲು. ಒಳ್ಳೆಯ ಕೆಲಸ ಮಾಡುವವರಿಗೆ ಸುಖ ಕೊಡುವುದು ನಿನ್ನ ಧರ್ಮ.

ನಾವು ವೇದವನ್ನು ಚೆನ್ನಾಗಿ ಓದಿದರೆ ಸುಖ ಕೊಡುತ್ತೇನೆ ಎಂದು ನೀನು ಹೇಳ ಬಹುದು. ಆದರೆ ವೇದಾಧ್ಯಯನದ ಮೂಲಕ ನಿನ್ನನ್ನು ಓಲೈಸಲು ಮುಖ್ಯಪ್ರಾಣನೊಬ್ಬನೇ ಸಮರ್ಥನು. ಆತನು ಸಾಮವೇದವನ್ನು ಚೆನ್ನಾಗಿ ಹಾಡುತ್ತಾನೆ. ಸ್ವರಗಳಲ್ಲಿ ವ್ಯತ್ಯಾಸ ಮಾಡುವುದಿಲ್ಲ. ಅದನ್ನು ಕೇಳಲು ನೀನು ತವಕದಿಂದ ಬರುವಿ. ಅಷ್ಟು ಶಾಸ್ತ್ರೀಯವಾಗಿ ಹೇಳಲು ನಮ್ಮಿಂದ ಸಾಧ್ಯವಿಲ್ಲ. ಪ್ರಾಣನ ಚಿತ್ತಕ್ಕೆ ಏಕಾಗ್ರತೆ ಇರುವಷ್ಟು ನಮ್ಮ ಚಿತ್ತಕ್ಕೆ ಇಲ್ಲ. ನೀನು ಏಕಾಗ್ರತೆಯನ್ನು ಬಯಸುವವ.

ನೀನು ಪ್ರಣವ ಪ್ರತಿಪಾದ್ಯ. ಪ್ರಣವವನ್ನು ತಮ್ಮ ಗೆಳೆಯನನ್ನಾಗಿ ಮಾಡಿಕೊಂಡವರು ಪರಮಹಂಸರು. ಅವರು ತಮ್ಮ ಈ ಮಂತ್ರದ ಜಪದ ಮೂಲಕ ನಿನ್ನನ್ನು ಮಾನಸಿಕವಾಗಿ ಪೂಜಿಸುತ್ತಾರೆ. ನಾವು ಸ್ತ್ರೀಯರಾಗಿದ್ದರಿಂದ ಪ್ರಣವ ಜಪಕ್ಕೆ ಅಧಿಕಾರಿಗಳಲ್ಲ. ಶಕಟನು ಬಂಡಿಯ ರೂಪದಿಂದ ನಿನ್ನನ್ನು ಕೊಲ್ಲಲು ಬಂದನು. ಆಗ ನೀನು ಹಸಿಗೂಸು. ನೀನು ಕೂಸಿನಂತೆ ಅಳಲು ಆರಂಭಿಸಿದಿ. ಇದರಿಂದ ಆ ದೈತ್ಯನಿಗೆ ಕಸಿವಿಸಿಯಾಯಿತು. ಹೀಗಿರುವಾಗ ನಿನ್ನ ಧ್ವನಿಯನ್ನು ಕೇಳಿ ಹೇಗೆ ಬದುಕಿ ಉಳಿದಾರು. ನಿನ್ನ ಹೃದಯವು ಸೂರ್ಯನಂತೆ ಎಲ್ಲವನ್ನು ಅರಳಿಸುತ್ತದೆ. ಆದ್ದರಿಂದ ನಮ್ಮ ಮುಖವನ್ನೂ ಅರಳಿಸು.

**ಸಂದೇಶ** : ದೇವರ ಒಂದೊಂದು ಅವಯವವನ್ನು ಸರಿಯಾಗಿ ಚಿಂತಿಸಿದರೂ ನಮಗೆ ದೇವರ ದರ್ಶನ ಸಮೀಪವಾಗುತ್ತದೆ. ದೇವತೆಗಳು ಋಷಿಗಳು ದೇವರನ್ನು ಉಪಾಸಿಸುವ ಕ್ರಮವೂ ತಿಳಿಯುತ್ತದೆ ಈ ಶ್ಲೋಕದಿಂದ.

**ವರಯಾಸುರಮೋದಾರೇ ತರಸಾ ಕಿಂಕರೀರಿಮಾಃ ।**
**ವರ ಯಾಸು ರಮೋದಾರೇ ತ್ವಯಿ ನೇದಂ ಗುಣೋಚಿತಮ್ ॥ ೫ ॥**

ವರಯ=ಸ್ವೀಕರಿಸು: ಅಸುರ=ದೈತ್ಯರ: ಮೋದ=ನೆಮ್ಮದಿಗೆ: ಅರೇ=ಶತ್ರುವೇ: ತರಸಾ=ಕೂಡಲೇ; ಕಿಂಕರೀಃ=ಸೇವಕಿಯರಾದ; ಇಮಾಃ=ಈ; ವರ=ಶ್ರೇಷ್ಠನೇ; ಯಾಸು= ಯಾರಲ್ಲಿ; ರಮಾ=ಲಕ್ಷ್ಮಿಯು; ಉದಾರೇ=ಶ್ರೇಷ್ಠನಾದ; ತ್ವಯಿ=ನಿನ್ನಲ್ಲಿ; ನ=ಅಲ್ಲ; ಇದಂ= ಇದು; ಗುಣೋಚಿತಂ=ಗುಣಗಳಿಗೆ ಯೋಗ್ಯವು.

ಹೇ ಈಶ, ನಾವು ನಿನ್ನ ಭಕ್ತರು. ನಾವು ಈ ರೀತಿ ದುಃಖಿಸುವುದನ್ನು ನೋಡಿ

ನಿನ್ನ ವಿರೋಧಿಗಳು ಆನಂದಪಡುತ್ತಿದ್ದಾರೆ. ವಿರೋಧಿಗಳ ನೆಮ್ಮದಿಯನ್ನು ನೀನೆಂದೂ ಸಹಿಸುವುವವನಲ್ಲ. ಆದ್ದರಿಂದ ಬೇಗ ಬಂದು ನಮ್ಮನ್ನು ಆನಂದಿಸು. ನಾವು ಸೇವಕಿಯರು. ನಮ್ಮಲ್ಲಿ ರಮೆಯ ಸನ್ನಿಧಾನ ಇದೆ. ರಮೆಯ ಸನ್ನಿಧಾನಕ್ಕೆ ಸೂಚಕವಾದದ್ದು ನಮಗೆ ನಿನ್ನಲ್ಲಿರುವ ಕಾಮನೆ. ಇಂತಹ ನಮ್ಮನ್ನು ತ್ಯಜಿಸಿದರೆ ನೀನು ರಮೆಯನ್ನು ತ್ಯಜಿಸಿದಂತೆ ಆಗುತ್ತದೆ. ಇದು ಶಾಸ್ತ್ರವಿರುದ್ಧವಾಗುತ್ತದೆ. ರಮೆಗೆ 'ಸಮನಾ' ಎಂದು ಹೆಸರು. ಯಾವಾಗಲೂ ದೇವರ ಜೊತೆಗೇ ಇರುವವಳು ಎಂದು. ಈ ಹೆಸರಿನ ಸಾರ್ಥಕತೆಗಾಗಿ ನೀನು ನಮ್ಮಲ್ಲಿಗೆ ಬಾ. ನೀನು ಅನಂತಗುಣಗಳುಳ್ಳವ. ಅವುಗಳಲ್ಲಿ ಔದಾರ್ಯವೂ ಒಂದು. ಅಂದರೆ ಭಕ್ತರ ಅಭೀಷ್ಟವನ್ನು ಪೂರ್ಣಮಾಡುವಿಕೆ. ನೀನು ಈಗ ಬಾರದಿದ್ದರೆ ನಿನ್ನ ಆ ಗುಣಕ್ಕೆ ಚ್ಯುತಿ ಬರುತ್ತದೆ.

**ಸಂದೇಶ** : ದೇವರನ್ನು ಒಲಿಸಿಕೊಳ್ಳುವುದು ಲಕ್ಷ್ಮಿಯ ಮೂಲಕವೇ.

**ವೃಣೀತ ದಾಸೀರ್ಯದಿ ನೋ ವನೇ ನಃ**
**ಕವೀಶ ಗೌರೀಶ ಹೃತಾತ್ಮವೃತ್ತಾ ।**
**ಕವೀಶಗೌರೀಶಹೃತಾತ್ಮವೃತ್ತಾ-**
**ವೃಣೀ ತದಾಸೀರ್ಯದಿನೋಽವನೇ ನಃ** ॥ ೬ ॥

ವೃಣೀತ=ಸ್ವೀಕರಿಸುವುದು. ದಾಸೀಃ=ಸೇವಕಿಯರನ್ನು; ಯದಿ=ಒಂದು ವೇಳೆ; ನೋ=ಇಲ್ಲ; ವನೇ=ಕಾಡಲ್ಲಿ; ನಃ=ನಮ್ಮನ್ನು; ಕವಿ=ಜ್ಞಾನಿಗಳಿಗೆ; ಈಶ=ಒಡೆಯನೇ; ಗೌಃ=ಮಾತು; ಈಶ=ಸ್ವಾಮಿಯೇ; ಹೃತಾ=ವ್ಯರ್ಥವಾಯಿತು; ಆತ್ಮ=ತನ್ನಿಂದ; ವೃತ್ತಾ= ಹೊರಟಿರುವ; ಕ=ಬ್ರಹ್ಮನು; ವೀಶ=ಗರುಡನು; ಗೌರೀಶ=ರುದ್ರನು; ಹೃತ=ಅಪಹರಿಸಲ್ಪಟ್ಟ; ಆತ್ಮ=ತಮ್ಮ; ವೃತ್ತೌ=ಮನಸ್ಸಿನಲ್ಲಿ ; ಋಣೀ=ಸಾಲಗಾರನು; ತತ್=ಆಗ; ಆಸೀಃ=ಆಗುವಿ; ಯತ್=ಯಾವಾಗ; ಇನಃ=ದಕ್ಷನು; ಅವನೇ=ರಕ್ಷಣೆಯಲ್ಲಿ; ನಃ=ನಮ್ಮ.

ದೇವತಾಸ್ತ್ರೀಯರೇ, ನೀವೆಲ್ಲಾ ಭೂಮಿಯಲ್ಲಿ ಗೋಪಿಯರಾಗಿ ಅವತರಿಸಿರಿ. ಅಲ್ಲಿ ನಾನು ಕೃಷ್ಣರೂಪದಿಂದ ನಿಮ್ಮನ್ನು ಸ್ವೀಕರಿಸುತ್ತೇನೆ ಎಂದು ನೀನು ಹೇಳಿದ್ದಿ. ನಿನ್ನ ಮಾತಿನಂತೆ ನಾವು ಇಲ್ಲಿ ಅವತರಿಸಿದ್ದೇವೆ. ನೀನೀಗ ನಮ್ಮನ್ನ ಕೈಬಿಟ್ಟರೆ ನಿನ್ನ ಮಾತು ವ್ಯರ್ಥವಾಗುತ್ತದೆ. ನೀನು ಜ್ಞಾನಿಗಳಿಗೆ ಒಡೆಯ. ಆದ್ದರಿಂದ ನಿನ್ನ ಮಾತನ್ನು ನೀನು ಮರೆಯುವಂತಿಲ್ಲ. ಬ್ರಹ್ಮಾದಿಸಮಸ್ತದೇವತೆಗಳು ತಾವು ತಿಳಿದದ್ದನ್ನು ಮರೆಯದಿರುವುದು ಸದಾ ನಿನ್ನ ಧ್ಯಾನದಲ್ಲಿ ಇರುವುದರಿಂದ. ರಕ್ಷಣೆ ಮಾಡುತ್ತೇನೆಂದು ಮಾತು ಕೊಟ್ಟು, ರಕ್ಷಿಸಲು ಬೇಕಾದ ಶಕ್ತಿ ಇರುವಾಗ ರಕ್ಷಿಸದಿದ್ದರೆ ನಮ್ಮ ಋಣವನ್ನು ನೀನು ಇಟ್ಟುಕೊಂಡಂತಾಗುವುದು. ಆದ್ದರಿಂದ ಬೇಗ ಬಾ.

**ಸಂದೇಶ** : ನಮ್ಮನ್ನು ಹುಟ್ಟಿಸಿದ ದೇವರು ನಮ್ಮನ್ನು ನಿಶ್ಚಯವಾಗಿಯೂ

ರಕ್ಷಿಸುತ್ತಾನೆ. 'ರಕ್ಷತಿ ಇತ್ಯೇವ ವಿಶ್ವಾಸಃ' 'ತಲ್ಲಣಿಸದಿರು ಕಂಡ್ಯ ತಾಳು ಮನವೇ' ಎಂದು ಶ್ರುತಿಸ್ಮೃತಿಗಳು ಹೇಳುತ್ತವೆ. ಈ ಮಾತನ್ನು ದೇವರು ಎಂದೂ ಸುಳ್ಳು ಮಾಡುವುದಿಲ್ಲ.

**ಜಾನತೀರ್ನಸ್ತವಾಮಾನವೇಷು ಸ್ಥಿತಿಂ**
**ನ ತ್ಯಜೇಮಾಃ ಪ್ರಭೋ ಮಾ ನವೇಷು ಸ್ಥಿತಿಮ್ ।**
**ಕುರ್ವಸೌ ಕಿಂ ಪ್ರಿಯಾ ಮಾ ನವೇಷು ಸ್ಥಿತಿಂ**
**ನೇಹ ಕಿಂತು ಪ್ರಿಯೇಮಾ ನವೇಷು ಸ್ಥಿತಿಮ್** ॥ ೭ ॥

ಜಾನತೀಃ=ತಿಳಿದಿರುವ; ನಃ=ನಮ್ಮನ್ನು; ತವ=ನಿನ್ನ; ಅಮಾನವೇಷು=ದೇವತೆಗಳಲ್ಲಿ; ಸ್ಥಿತಿಂ=ಇರುವಿಕೆಯನ್ನು; ನ ತ್ಯಜ=ಬಿಡಬೇಡ; ಇಮಾಃ=ಈ; ಪ್ರಭೋ=ಒಡೆಯನೇ; ಮಾ=ಬೇಡ; ನವೇಷು=ಹೊಸದರಲ್ಲಿ; ಸ್ಥಿತಿಂ=ಇರುವಿಕೆಯನ್ನು; ಕುರು=ಮಾಡು; ಅಸೌ=ಈ; ಕಿಂ=ಏನು; ಪ್ರಿಯಾ=ಇಷ್ಟಳಾದ; ಮಾ=ರಮೆಯು; ನವಾ=ಹೊಸತು; ಈಷುಃ=ಇಚ್ಛಿಸಿದರು; ಸ್ಥಿತಿಂ=ಇರುವಿಕೆಯನ್ನು; ನ=ಇಲ್ಲ; ಇಹ=ಇಲ್ಲಿ; ಕಿಂತು=ಮತ್ತು; ಪ್ರಿಯ=ಇಷ್ಟನೇ; ಇಮಾಃ=ಇವರು; ನವ=ಹರಿತವಾದ; ಇಷು=ಬಾಣದಲ್ಲಿ; ಸ್ಥಿತಿಂ=ಇರುವಿಕೆಯನ್ನು.

ಕೃಷ್ಣ, ಬ್ರಹ್ಮಾಂಡದಲ್ಲಿ ನಿನ್ನ ಸ್ಥಾನಮಾನಗಳನ್ನು ನಾವು ತಿಳಿದಿದ್ದೇವೆ. ಜ್ಞಾನ ಇರುವಲ್ಲಿ ನೀನು ಇರುವಿ. ಆದ್ದರಿಂದ, ಈ ಗೋಪಿಯರು ಅಜ್ಞಾನಿಗಳು ಎಂಬ ಭಾವನೆಯಿಂದ ಬಾರದಿರಬೇಡ.

ಈ ಗೋಪಿಯರು ಹೊಸಬರಲ್ಲ. ಹಳಬರು ಎಂಬ ಕಾರಣದಿಂದಲೂ ನಮ್ಮನ್ನು ತಿರಸ್ಕರಿಸಬೇಡ. ನಿನ್ನ ಪತ್ನಿ ಲಕ್ಷ್ಮಿಯು ತರುಣಿಯೇ? ಅನಾದಿಕಾಲದಿಂದ ಆಕೆ ನಿನ್ನ ಪತ್ನಿಯಾಗಿದ್ದಾಳೆ. ಆಕೆಗೆ ಬಹಳ ವಯಸ್ಸಾಗಿರಬಹುದು. ಆದರೂ ನೀನು ಜೊತೆಯಲ್ಲಿ ಇರುವಿ. ನಮಗೆ ಆಕೆಯಷ್ಟು ವಯಸ್ಸಾಗಿಲ್ಲ. ನೀನು ಹೊಸ ಹೊಸ ಹುಡುಗಿಯರನ್ನು ಹುಡುಕಿಕೊಂಡು ಹೋಗಬೇಡ. ನೀನು ನಮ್ಮ ಬಳಿಗೆ ಬಾರದಿದ್ದರೆ ನಾವು ಈ ಭೂಮಿಯಲ್ಲಿ ಬದುಕಲು ಆಶಿಸುವುದಿಲ್ಲ. ಬಾಣಕ್ಕೆ ಗುರಿಯಾಗಿ ಸಾಯುತ್ತೇವೆ. ಹಳೇ ಬಾಣವಾದರೆ ನಮ್ಮನ್ನು ಕೊಲ್ಲಲು ಅದು ಅಸಮರ್ಥವಾಗುತ್ತದೆ. ಅದಕ್ಕಾಗಿ ಹೊಸ ಬಾಣವನ್ನೇ ಆಶ್ರಯಿಸುತ್ತೇವೆ.

**ಸಂದೇಶ** : ದೇವರು ಜ್ಞಾನಿಗಮ್ಯ. ಜ್ಞಾನಶೂನ್ಯರಾದವರು ಬದುಕಿರಬಾರದು.

**ವ್ರಜೇ ಮಹಂ ತೋಷಪಿತಂ ವಿಕುಂಠಂ**
**ಭಜೇಮ ಚಕ್ಷುರ್ವಿಷಯೇ ತ್ವಯೀಶ ।**
**ವ್ರಜೇಮ ಹಂತೋಷಪಿ ತಂ ವಿಕುಂಠಂ**
**ನ ಚೇತ್ ತ್ವದೀಕ್ಷೋತ್ಸವಭಂಗಹೀನಮ್** ॥ ೮ ॥

ವ್ರಜೇ=ಗೋಕುಲದಲ್ಲಿ; ಮಹಂ=ಉತ್ಸವವನ್ನು; ತೋಷ=ಆನಂದದಿಂದ; ಸಿತಂ= ಕೂಡಿದ; ವಿಕುಂಠಂ=ನಾಶವಿಲ್ಲದ; ಭಜೇಮ=ಹೊಂದುವೆವು; ಚಕ್ಷುಃ=ಕಣ್ಣಿಗೆ; ವಿಷಯೇ= ಕಾಣಿಸುತ್ತಿರಲು; ತ್ವಯಿ=ನೀನು; ಈಶ=ಸ್ವಾಮಿಯೇ; ವ್ರಜೇಮ=ಪಡೆಯುವೆವು; ಹಂತ= ಸಂತೋಷವು; ಉಷಸಿ=ಬೆಳಗಿನ ಜಾವ; ತಂ=ಆ; ವಿಕುಂಠಂ=ವೈಕುಂಠವನ್ನು; ನ ಚೇತ್= ಇಲ್ಲದಿದ್ದರೆ; ತ್ವತ್=ನಿನ್ನ; ಈಕ್ಷಾ=ದರ್ಶನವೆಂಬ; ಉತ್ಸವ=ಉತ್ಸವಕ್ಕೆ; ಭಂಗ= ನಾಶದಿಂದ; ಹೀನಂ=ರಹಿತವಾದ.

ಕೃಷ್ಣ ನೀನು ನಮ್ಮ ಕಣ್ಣಿಗೆ ಕಾಣಿಸು. ನೀನು ಕಾಣಿಸಿಕೊಂಡರೆ ನಾವು ವೃಂದಾವನದಲ್ಲಿ ನೆಮ್ಮದಿಯ ಬದುಕಿನಲ್ಲಿ ಇರುತ್ತೇವೆ. ಈ ಬದುಕು ನಿರಂತರವಾಗಿರಲು ನೀನು ಸದಾ ಕಾಣಿಸಿಕೊಂಡಿರಬೇಕು. ನೀನು ಕಾಣಿಸಿಕೊಳ್ಳದಿದ್ದರೆ ನಾವು ನಿನಗಾಗಿ ದೇಹತ್ಯಾಗ ಮಾಡುತ್ತೇವೆ. ಆಗ ನಮಗೆ ವೈಕುಂಠಪ್ರಾಪ್ತಿಯಾಗುತ್ತದೆ. ಅಲ್ಲಿ ನಿನ್ನ ದರ್ಶನ ಸದಾ ಆಗುತ್ತಿರುತ್ತದೆ. ಇದರಿಂದ ಸದಾ ನೆಮ್ಮದಿಯ ಜೀವನ. ಅಲ್ಲಿ ನಿನ್ನ ದರ್ಶನ ತಪ್ಪುವುದಿಲ್ಲ. ಆದ್ದರಿಂದ ಆನಂದಕ್ಕೂ ಚ್ಯುತಿ ಇಲ್ಲ.

**ಸಂದೇಶ** : ನೆಮ್ಮದಿಯ ಬದುಕಿಗೆ ದೇವರ ಚಿಂತನೆಯು ಮುಖ್ಯ ಕಾರಣ. 'ಇಲ್ಲೇ ವೈಕುಂಠ ಕಾಣಿರೋ' ಎಂಬ ದಾಸರ ಹಾಡು ಈ ಸಂಸಾರದಲ್ಲಿ ದೇವರನ್ನು ಚೆನ್ನಾಗಿ ತಿಳದುಕೊಂಡು ಬದುಕುವವರಿಗೆ ಚೆನ್ನಾಗಿ ಅನ್ವಯವಾಗುತ್ತದೆ.

**ವಿಯೋಗೇ ತವ ಗೋವಿಂದ ದಿವಸೋಽಪಿ ಭಯಂಕರಃ ।**
**ಇಯಂ ನಿಶಾ ದಿಶಾವ್ಯಾಪ್ತತಮಿಸ್ರಾ ಕಾಂತ ಕಿಂ ಪುನಃ ॥ ೯ ॥**

ವಿಯೋಗೇ=ಅಗಲುವಿಕೆಯು; ತವ=ನಿನ್ನ; ಗೋವಿಂದ=ಕೃಷ್ಣನೇ; ದಿವಸೋಽಪಿ= ಹಗಲೂ ಕೂಡಾ; ಭಯಂಕರಃ=ಭಯಜನಕವು; ಇಯಂ=ಈ; ನಿಶಾ=ರಾತ್ರಿಯು; ದಿಶಾ=ದಿಕ್ಕುಗಳಲ್ಲಿ; ವ್ಯಾಪ್ತ=ಹರಡಿದ; ತಮಿಸ್ರಾ=ಕತ್ತಲೆಯುಳ್ಳ; ಕಾಂತ=ಮನೋಹರನೇ; ಕಿಂಪುನಃ=ಏನು ಹೇಳುವುದು?

ಕೃಷ್ಣ, ಯದ್ಯಪಿ ಹಗಲಲ್ಲಿ ಭಯ ಇಲ್ಲ. ಜನರು ಒಬ್ಬೊಬ್ಬರೂ ಎಲ್ಲೆಲ್ಲೂ ತಿರುಗಾಡುತ್ತಾರೆ. ರಾತ್ರಿಯಲ್ಲಿ ಮನಬಂದಂತೆ ತಿರುಗಾಡಲು ಭಯವಾಗುತ್ತದೆ. ಆದರೆ ನಮಗೆ ನಿನ್ನ ದರ್ಶನ ಇಲ್ಲದ ಹಗಲೂ ಕೂಡಾ ಭಯಾನಕವೇ ಆಗಿದೆ. ಇನ್ನು ರಾತ್ರಿಯು ಭಯಾನಕ ಎಂದು ಏನು ಹೇಳುವುದು. ಅದೂ ಈ ಕಾಡಿನಲ್ಲಿ. ಇಲ್ಲಿ ನಾವು ಭಯದಿಂದಲೇ ಸಾಯುತ್ತೇವೆ. ಕೃಷ್ಣ, ನೀನು ಗೋವಿಂದ. ಬದುಕುವ ಆಶಾಕಿರಣವನ್ನು ಹೊಂದಿಸುವವ. ಆದ್ದರಿಂದ ನಮ್ಮನ್ನು ಬದುಕಿಸಲು, ಭಯರಹಿತ ಜೀವನ ನಡೆಸಲು ನೀನು ಬಾ.

**ಸಂದೇಶ** : ಬಾಂಧವರು ಹಾಗೂ ಹಗಲು ಇದೆಲ್ಲಾ ನಮ್ಮ ರಕ್ಷಣೆಗೆ ಬರತಕ್ಕದ್ದು

ಎಂಬ ಭ್ರಾಂತಿ ನಮಗಿದೆ. ದೇವರಿಲ್ಲದಿದ್ದರೆ ಇದೆಲ್ಲಾ ರಕ್ಷಕಗಳಲ್ಲ. ಭಕ್ಷಕಗಳು. ಇದನ್ನೇ ಭಾಗವತವು 'ದ್ವಿತೀಯಾತ್ ವೈ ಭಯಂ ಭವತಿ' ದೇವರ ಅಸ್ತಿತ್ವ ಇಲ್ಲದಿದ್ದರೆ ನಮ್ಮಕ್ಕಿಂತ ಎರಡನೆಯ ವಸ್ತುವಿನಿಂದ ನಮಗೆ ಭಯವೇ ಹೊರತು ಅಭಯ ಇಲ್ಲ.

**ಸಮಾಯತೇಯಂ ನ ಶರೈಃ ಸಮಾಯತೇ**
**ಸಮಾಯತೇ ಸ್ವೇಷು ಕಿಲಾಸಮಾಯತೇ ।**
**ಸಮಾಯ ತೇನಾಂಗ ನಮಃ ಸಮಾಯ ತೇ**
**ಸ ಮಾ ಯತೇರ್ವರ್ತ್ಮ ಭಜಾಸಮಾಯ ತೇ ॥ ೧೦ ॥**

ಸಮ್=ಚೆನ್ನಾಗಿ; ಆಯತಾ=ಉದ್ದವಾದ; ಇಯಂ=ಈ; ನ=ಇಲ್ಲ; ಶರೈಃ=ಬಾಣಗಳಿಂದ; ಸಮಾ=ಸಮಾನವಾಗಿ; ಅಯತೇ=ಹೋಗುತ್ತದೆ; ಸಮ=ಸಮಾನವಾಗಿ; ಅಯತೇ=ವ್ಯವಹರಿಸುತ್ತಿ; ಸ್ವೇಷು=ತನ್ನವರಲ್ಲಿ; ಕಿಲ=ಪ್ರಸಿದ್ಧ; ಅಸಮ=ಸಾಟಿ ಇಲ್ಲದ; ಆಯತೇ=ವ್ಯಾಪ್ತಿ ಉಳ್ಳವನೇ; ಸಮಾಯ=ಮಾಯೆಯಿಂದ ಕೂಡಿದವನೇ; ತೇನ=ಆದ್ದರಿಂದ; ಅಂಗ=ಪ್ರಿಯನೇ; ನಮಃ=ನಮಸ್ಕಾರವು; ಸಮಾಯ=ಲಕ್ಷ್ಮಿಯಿಂದ ಕೂಡಿದ; ತೇ=ನಿನಗೆ; ಸಃ=ಆ; ಮಾ=ಬೇಡ; ಯತೇಃ=ಸನ್ಯಾಸಿಯ; ವರ್ತ್ಮ=ದಾರಿಯು; ಭಜ=ಸೇವಿಸು; ಅಸಮ=ಸಾಟಿಇಲ್ಲದ; ಆಯ=ಲಾಭವುಳ್ಳವನೇ; ತೇ=ನಿನಗೆ.

ಕೃಷ್ಣ, ನೀನಿಲ್ಲದ ಸಮಯ ದುಃಖಮಯ. ದುಃಖದ ಸಮಯವು ಬೇಗ ಹೋಗುವುದಿಲ್ಲ. ನಮಗೆ ನೀನಿಲ್ಲದ ಈ ರಾತ್ರಿಯು ಬಹಳ ದೀರ್ಘವಾಗಿ ಕಾಣುತ್ತದೆ. ದೀರ್ಘ ಮಾತ್ರ ಆಗಿದ್ದರೆ ಅಡ್ಡಿ ಇಲ್ಲ. ಆದರೆ ಅದು ಬಾಣದಂತೆ ನಮ್ಮನ್ನು ಚುಚ್ಚುತ್ತಿದೆ. ನಿದ್ರೆಯೂ ಬರುತ್ತಿಲ್ಲ. ನೀನು ಎಲ್ಲಾ ಭಕ್ತರನ್ನೂ ಸಮಾನವಾಗಿ ಕಾಣುತ್ತಿ. ನಿನ್ನ ಯಾವ ಭಕ್ತರೂ ದುಃಖಪಡಬಾರದು. ಅದು ಬ್ರಹ್ಮನೇ ಆಗಲಿ. ತೃಣ ಜೀವವೇ ಆಗಲಿ. ನಾವೂ ನಿನ್ನ ಭಕ್ತರಾದ್ದರಿಂದ ನಮ್ಮ ದುಃಖವನ್ನು ಪರಿಹರಿಸಲು ಬಾ. ಬರಲು ಆಗುವುದಿಲ್ಲ ಎಂದೆನಬೇಡ. ನೀನು ಸರ್ವತ್ರ ಇರುವವ. ಅದರಲ್ಲಿಯೂ ನಿನಗೆ ಸ್ವಾತಂತ್ರ್ಯ ಇದೆ. ನೀನು ಬರಬೇಕಾದರೆ ಯಾರಲ್ಲಿಯೂ ಕೇಳಬೇಕಾಗಿಲ್ಲ.

ಇಷ್ಟೆಲ್ಲಾ ಅನುಕೂಲವಿದ್ದರೂ ನೀನು ಬರುತ್ತಿಲ್ಲ. ಕಾರಣ ಏನು ಎಂದು ತಿಳಿದಿಲ್ಲ. ನಿನ್ನ ಮಾಯೆಯೇ ನಮಗೆ ಅರ್ಥ ಆಗುತ್ತಿಲ್ಲ. ನೀನು ಸದಾ ಲಕ್ಷ್ಮಿಯ ಜೊತೆಗೇ ಇರುವವನು. ಅವಳು ನಿನ್ನನ್ನು ಎಂದೂ ಬಿಟ್ಟಿರುವುದಿಲ್ಲ. ಬಿಟ್ಟರೆ ಎಲ್ಲಿ ನೀನು ನಮ್ಮ ಬಳಿಗೆ ಬರುವಿಯೋ ಎಂದು ಅವಳಿಗೆ ಭಯ ಇರಬಹುದು. ಆದ್ದರಿಂದಲೇ ನಿನ್ನ ಮಾಯೆಯನ್ನು ಅರ್ಥಮಾಡಿಕೊಳ್ಳಲೇ ಆಗುವುದಿಲ್ಲ.

ನೀನು ಗೋಪಿಯರಾದ ನಮ್ಮನ್ನು ತ್ಯಜಿಸಿದ್ದಿ. ಸ್ತ್ರೀಯರ ತ್ಯಾಗ ಸನ್ಯಾಸಿಗಳಿಗೆ ಹೇಳಿದ್ದು. ನಿನಗಲ್ಲ. ನೀನು ಸನ್ಯಾಸಿಯರ ಮಾರ್ಗವನ್ನು ಅನುಸರಿಸಬೇಡ. ಅದರಿಂದ

ನಿನಗೇನೂ ಲಾಭವಿಲ್ಲ. ಪಡೆಯಬೇಕಾದ ಎಲ್ಲವನ್ನೂ ನೀನು ಎಂದೋ ಪಡೆದಿದ್ದಿ. ಸನ್ಯಾಸಿಗಳಾದರೂ ಮೋಕ್ಷವನ್ನು ಪಡೆಯುವ ಸಲುವಾಗಿ ಎಲ್ಲವನ್ನೂ ತ್ಯಾಗ ಮಾಡುತ್ತಾರೆ. ಆದ್ದರಿಂದ ಪಕ್ಷಪಾತರಹಿತನಾದ, ಭಕ್ತರ ದುಃಖವನ್ನು ಪರಿಹರಿಸುವ ಸಂಕಲ್ಪವುಳ್ಳ, ಸನ್ಯಾಸಿಯಾಗದ ನೀನು ನಮ್ಮಲ್ಲಿಗೆ ಬಾ.

**ಸಂದೇಶ** : ದೇವರು ಏನು ಮಾಡುವುದಿದ್ದರೂ ತನಗಾಗಿ ಅಲ್ಲ. ನಮಗಾಗಿ. ನಾವು ಏನು ಮಾಡುವುದಿದ್ದರೂ ಸ್ವಂತಕ್ಕಾಗಿ ಅಲ್ಲದೆ ದೇವರ ಪ್ರೀತಿಗಾಗಿ.

**ಕರೋಽತಿಕಾರ್ಯೋರ್ದಧಿಮಂಥಸಂಗ–**
**ಮಪಿ ಸ್ಮ ಕರ್ತುಂ ಯತತೇ ನ ತೇನ ।**
**ತ್ವದಂಘ್ರಿಜುಷ್ಟೇರಪರಂ ಮುರಾರೇ**
**ಕರೋತಿ ಕಾರ್ಯೋದಧಿಮಂಥಸಂಗ** ॥ ೧೧ ॥

ಕರಃ=ಕೈಯು; ಅತಿಕಾರ್ಯಃ=ಕೆಲಸವನ್ನು ಮಾಡುವ; ದಧಿ=ಮೊಸರಿನ; ಮಂಥ= ಕಡಗೋಲಿನ; ಸಂಗಮಪಿ=ಸಂಬಂಧವನ್ನೂ; ಕರ್ತುಂ=ಮಾಡಲು; ಯತತೇ ನ ಸ್ಮ= ಪ್ರಯತ್ನಿಸಲಿಲ್ಲ; ತೇನ=ಆ ಕಾರಣದಿಂದ; ತ್ವತ್=ನಿನ್ನ; ಅಂಘ್ರಿ=ಪಾದದ; ಜುಷ್ಟೇಃ= ಸೇವೆಗಿಂತ; ಅಪರಂ=ಬೇರೆಯನ್ನು; ಮುರಾರೇ=ಕೃಷ್ಣನೇ; ಕರೋತಿ= ಮಾಡುತ್ತಾಳೆ; ಕಾ=ಯಾರು?; ಆರ್ಯ=ಪೂಜ್ಯನೇ; ಉದಧಿ=ಸಮುದ್ರದ; ಮಂಥ= ಕಡೆಗೋಲಿನ; ಸಂಗ=ಸಂಬಂಧವುಳ್ಳವನೇ.

ಕೃಷ್ಣ, ನೀನು ಸಮುದ್ರಮಥನ ಕಾಲದಲ್ಲಿ ಕಡೆಗೋಲಾದ ಮಂದರವನ್ನು ನಿನ್ನ ಬೆನ್ನಲ್ಲಿ ಹೊತ್ತವನು. ಇಂತಹ ನಿನ್ನ ದರ್ಶನವನ್ನು ಮಾಡುತ್ತಿದ್ದ ನಾವೂ ಕೂಡಾ ನಿತ್ಯ ಬೆಳಿಗ್ಗೆ ದಧಿಮಥನ ಮಾಡುತ್ತಿದ್ದೆವು. ನೀನು ಯಾವಾಗ ಅದೃಶ್ಯನಾದಿಯೋ ಆಗಲೇ ನಾವು ಆ ಕೆಲಸವನ್ನು ಬಿಟ್ಟೆವು. ಇದರಿಂದ ನೀನು ತಿಳಿದುಕೋ –ನಮಗೆ ನಿನ್ನ ಚರಣದರ್ಶನ, ಸೇವೆಯೇ ಮುಖ್ಯ. ನಾವು ಬೇರೆ ಏನೋ ಮಾಡುತ್ತಿದ್ದೇವೆಂದು ನೀನು ಅದೃಶ್ಯನಾಗಿದ್ದರೆ ಆ ಭಾವನೆ ಬಿಟ್ಟುಬಿಡು. ನಾವೆಲ್ಲಾ ಸತ್‌ಕುಲದಲ್ಲಿ ಹುಟ್ಟಿದವರು. ನಿನ್ನ ಪಾದಸೇವೆಯನ್ನು ಹೊರತು ಬೇರೆ ಏನನ್ನೂ ಮಾಡುವವರಲ್ಲ.

**ಸಂದೇಶ** : ನಾವು ಏನು ಮಾಡಿದರೆ ದೇವರ ದರ್ಶನ ಆಗುವುದೋ ಅದು ನಮಗೆ ಕರ್ತವ್ಯ. ಏನು ಮಾಡಿದರೆ ದೇವರು ದೂರವಾಗುವನೋ ಅದು ಅಕರ್ತವ್ಯ.

**ದಯಾಂಗ ಯದ್ವ್ಯಾಸು ನ ದೀನಬಂಧೋ**
**ಪ್ರಿಯೇಯಮಾಪ್ಯಾ ಹಿ ನದೀನಬಂಧೋ ।**
**ಹೃತೋರಿರಸ್ಯಾ ಯದಸೌ ಭಗಸ್ಯ**
**ತವೌಜಸಾ ತೋಯದಸೌಭಗಸ್ಯ** ॥ ೧೨ ॥

ದಯಾ=ದಯೆಯು; ಅಂಗ=ಪ್ರಿಯನೇ; ಯದಿ=ಯದ್ಯಪಿ; ಆಸು=ನಮ್ಮಲ್ಲಿ; ನ=ಇಲ್ಲ; ದೀನ=ದುಃಖಿತರ; ಬಂಧೋ=ಪ್ರಿಯನೇ; ಪ್ರಿಯಾ=ಇಷ್ಟಳಾದ; ಇಯಂ=ಈ; ಆಪ್ಯಾ=ಹೊಂದಲು ಯೋಗ್ಯಳು; ಹಿ=ಪ್ರಸಿದ್ಧ; ನದೀ=ನದಿಯು; ಇನ=ಸೂರ್ಯನಿಗೆ; ಬಂಧೋ=ಬಂಧುವೇ; ಹೃತಃ=ಕಳಸಲ್ಪಟ್ಟನು; ಅರಿಃ=ವಿರೋಧಿಯು; ಅಸ್ಯಾಃ= ಯಮುನೆಯ; ಯತ್=ಯಾವ ಕಾರಣದಿಂದ; ಅಸೌ=ಇವನು; ಭಗಸ್ಯ=ಸೌಭಾಗ್ಯಕ್ಕೆ; ತವ=ನಿನ್ನ; ಓಜಸಾ=ಶಕ್ತಿಯಿಂದ; ತೋಯ=ನೀರನ್ನು; ದ=ಕೊಡುವ ಮೋಡದಂತೆ; ಸೌಭಗಸ್ಯ=ವೈಭವವುಳ್ಳ.

ಕೃಷ್ಣ, ನೀನು ದುಃಖಿಗಳ ಬಂಧುವಾಗಿದ್ದಿ. ನಾವು ದುಃಖಿಗಳಾಗಿದ್ದೇವೆ. ಆದರೂ ನಮ್ಮಲ್ಲಿ ದಯೆಯನ್ನು ನೀನು ತೋರುವುದಿಲ್ಲ. ನಾವು ಸ್ತ್ರೀಯರು. ಆದ್ದರಿಂದ ನಮ್ಮಲ್ಲಿ ದಯೆ ತೋರುವುದಿಲ್ಲ ಎಂದು ಹೇಳಲು ಆಗುವುದಿಲ್ಲ. ಯಮುನೆಯೂ ಒಬ್ಬಳು ಹೆಣ್ಣು. ಆ ನದಿಯಲ್ಲಿ ಸಿಹಿಯಾದ ನೀರಿತ್ತು. ಆ ನದಿಯಲ್ಲಿ ಕಾಳೀಯನು ಬಂದು ಸೇರಿದ್ದನು. ಆತನ ವಿಷವು ಆ ಜಲದಲ್ಲಿ ಸೇರಿತ್ತು. ಆದ್ದರಿಂದ ಆಕೆಯ ಸಿಹಿನೀರು ಜನರ ಉಪಯೋಗಕ್ಕೆ ಬರಲಿಲ್ಲ. ಇದರಿಂದ ಯಮುನೆಯು ತುಂಬಾ ದುಃಖಿಯಾದಳು. ಆಗ ನೀನು ಕಾಳಿಂಗನನ್ನು ಮರ್ದಿಸಿದಿ. ಅಲ್ಲಿಂದ ಹೊರಗೆ ಕಳಿಸಿದಿ. ಯಮುನೆಯ ದುಃಖವನ್ನು ಪರಿಹರಿಸಿದಿ. ಯಮುನೆಯು ಸೂರ್ಯನ ಮಗಳು. ನೀನು ನಾರಾಯಣ ರೂಪದಿಂದ ಸದಾ ಸೂರ್ಯನಲ್ಲಿ ಇರುವವನು. ಯಮುನೆಯ ಬಣ್ಣವೂ ನೀಲ. ನಿನ್ನ ಮೈಬಣ್ಣವೂ ಮೋಡದಂತೆ ನೀಲ. ಈ ರೀತಿಯಾಗಿ ನಿನಗೂ ಯಮುನೆಗೂ ಸಂಬಂಧ ಇರಬಹುದು. ನಾವೂ ನಿನ್ನ ಬಂಧುಗಳೇ. ಆದ್ದರಿಂದ ನಮ್ಮ ದುಃಖವನ್ನು ಪರಿಹರಿಸು. ನಮಗೆ ದರ್ಶನವನ್ನು ಕೊಡು.

**ಸಂದೇಶ** : ದೇವರ ದರ್ಶನಕ್ಕೆ ಕೇವಲ ದೇವರ ಸ್ತೋತ್ರಾದಿಗಳ ಪಠಣ ಸಾಲದು. ಸೂರ್ಯಸಂಬಂಧಿಯಾದ ಗಾಯತ್ರೀಜಪಾದಿಗಳನ್ನೂ ಮಾಡಬೇಕು.

**ಇಹಾಗತಾ ಹಂತ ಸುರಾನುದಾರಾನಮುಂ ಚ ರಾಮಾವರ ಸಿದ್ಧಭದ್ರಾಃ ।**
**ವಿಹಾಯ ಲೋಕಂ ತವ ಸಂಗಸಿದ್ಧ್ಯೈ ನ ಮುಂಚ ರಾಮಾ ವರಸಿದ್ಧಭದ್ರಾಃ॥ ೧೩ ॥**

ಇಹ=ಇಲ್ಲಿಗೆ; ಆಗತಾಃ=ಬಂದಿರುವೆವು; ಹಂತ=ಆಶ್ಚರ್ಯ; ಸುರಾನ್=ದೇವತೆಗಳನ್ನು; ಉದಾರಾನ್=ಶ್ರೇಷ್ಠರಾದ; ಅಮುಂ=ಈ; ಚ=ಕೂಡಾ; ರಾಮ=ಬಲರಾಮನ; ಅವರ= ತಮ್ಮನೇ; ಸಿದ್ಧ=ಉಂಟಾದ; ಭದ್ರಾಃ=ಮಂಗಲವುಳ್ಳ; ವಿಹಾಯ=ಬಿಟ್ಟು; ಲೋಕಂ= ಲೋಕವನ್ನು; ತವ=ನಿನ್ನ; ಸಂಗ=ಸಂಬಂಧದ; ಸಿದ್ಧ್ಯೈ=ಸಿದ್ಧಿಗೋಸ್ಕರ; ನ ಮುಂಚ= ಬಿಡಬೇಡ; ರಾಮಾಃ=ಸುಂದರಿಯರನ್ನು; ವರ=ವರದಿಂದ; ಸಿದ್ಧ=ಸಿದ್ಧರಿಗೂ; ಭದ್ರಾಃ=ಚಂದದ.

ಹೇ ಕೃಷ್ಣ, ನೀನು ಭೂಮಿಯಲ್ಲಿ ಅವತರಿಸುವಾಗ ನಿನ್ನ ಸಂಗವು ನಮಗೆ ಆಗಬೇಕು ಎಂದು ಆಲೋಚಿಸಿ ದೇವತೆಯನ್ನು ಪೂಜಿಸಿದ್ದೆವು. ಆ ದೇವತೆಯು ತಥಾ ಅಸ್ತು ಎಂದಿತ್ತು. ಅನಂತರ ನಾವು ದೇವತೆಗಳನ್ನೂ ಅವರ ಲೋಕವನ್ನೂ ಬಿಟ್ಟು ಈ ಭೂಮಿಯಲ್ಲಿ ಹುಟ್ಟಿದೆವು. ನಾವು ಬಹಳ ಸುಂದರಿಯರು. ಎಷ್ಟೆಂದರೆ ದೇವತೆಗಳೂ ನಮ್ಮನ್ನು ಅಪೇಕ್ಷಿಸುತ್ತಾರೆ. ನಾವೇ ಅವರನ್ನು ಒಮ್ಮೊಮ್ಮೆ ತಿರಸ್ಕರಿಸುತ್ತೇವೆ. ನಮ್ಮಲ್ಲಿ ದೇವತಾವರದಿಂದ ಬಂದ ಪುಣ್ಯ ಇದೆ. ಸೌಂದರ್ಯ ಇದೆ. ನಾವಾಗಿ ಬಂದಿದ್ದೇವೆ. ಹೀಗಿರುವಾಗ ನಮ್ಮನ್ನು ತಿರಸ್ಕರಿಸಬೇಡ.

**ಸಂದೇಶ** : ದೇವರ ಸಂಗ ನಮಗೆ ಆಗಬೇಕಾದರೆ ಇತರ ದೇವತೆಗಳ ಅನುಗ್ರಹ ಮೊದಲು ಬೇಕು.

**ಉಚಿತೈವ ನಾಥ ಸುದಯಾಸು ದಯಾ**
**ಚಕಿತಾಸು ದುಷ್ಟಭಯದಾಭ ಯದಾ ।**
**ನ ಭವಾಂಸ್ತದಾ ಗೃಹಮದೋಹಮದೋ**
**ಭಯದಂ ಕಿಮುತ್ಸ್ವನವನಂ ನ ವನಮ್ ॥ ೧೪ ॥**

ಉಚಿತಾ ಏವ=ಯೋಗ್ಯವೇ, ನಾಥ=ಒಡೆಯನೇ; ಸುದಯ=ಒಳ್ಳೆಯ ದಯೆಯಿಂದ ಕೂಡಿದ; ಆಸು=ಈ; ದಯಾ=ದಯೆಯು; ಚಕಿತಾಸು=ಹೆದರಿದ; ದುಷ್ಟ=ದುಷ್ಟರಿಗೆ; ಭಯ= ಭಯವನ್ನು; ದ=ಕೊಡುವ; ಆಭ=ಕಾಂತಿವುಳ್ಳ; ಯದಾ=ಯಾವಾಗ; ನ=ಇಲ್ಲ; ಭವಾನ್= ನೀನು; ತದಾ=ಆಗ; ಗೃಹಂ=ಮನೆಯು; ಅದೋಹಂ=ದೋಹನಕ್ರಿಯೆ ಇಲ್ಲದ; ಅದಃ=ಈ; ಭಯ=ಭಯವನ್ನು; ದಂ=ಕೊಡತಕ್ಕದ್ದು; ಕಿಂ=ಏನು?; ಉತ್=ಶ್ರೇಷ್ಠವಾದ; ಸ್ವನ=ಶಬ್ದವುಳ್ಳ; ವನಂ=ನೀರುಳ್ಳ; ನ=ಇಲ್ಲ; ವನಂ=ಕಾಡು.

ನೀನು ದುಷ್ಟರಲ್ಲಿ ಸ್ವಲ್ಪವೂ ಕನಿಕರ ತೋರುವುದಿಲ್ಲ. ಅವರಿಗೆ ಭಯ ಬರಲು ನೀನು ಅವರಲ್ಲಿ ಬಲವನ್ನು ಪ್ರದರ್ಶಿಸಬೇಕಾಗಿಲ್ಲ. ಕೇವಲ ನಿನ್ನ ತೇಜಸ್ಸಿನಿಂದಲೇ ಅವರು ಭೀತರಾಗುತ್ತಾರೆ. ಅದಕ್ಕೆ ವಿರುದ್ಧವಾಗಿ ಶಿಷ್ಟರಲ್ಲಿ ನೀನು ದಯೆಯನ್ನು ತೋರಿಸಲೇ ಬೇಕು. ದುಷ್ಟರ ಬಗ್ಗೆ ಕಲ್ಲಿನಷ್ಟು ಕಠಿಣ ನಿನ್ನ ಹೃದಯ. ಶಿಷ್ಟರ ಬಗ್ಗೆ ಪುಷ್ಪಕ್ಕಿಂತಲೂ ಮೃದು. ನೀನು ಇಲ್ಲ ಅಂದರೆ ನಮ್ಮ ಮನೆಗಳಲ್ಲಿ ಯಾವ ಕೆಲಸವೂ ನಡೆಯುವುದಿಲ್ಲ. ನಾನಾ ರೀತಿಯ ಕೆಲಸಗಳಲ್ಲಿ ಆಕಳ ಹಿಂಡುವುದೂ ಒಂದು ಕೆಲಸ. ನಿನಗೆ ಪ್ರಿಯವಾದ ಕೆಲಸ. ಅದೂ ನಡೆಯುವುದಿಲ್ಲ. ಇಡೀ ಮನೆಯಲ್ಲಿ ಭಯದ ವಾತಾವರಣ. ಭಯದಲ್ಲಿ ಜನ ಏನೂ ಮಾಡುವುದಿಲ್ಲ. ಮನೆಯಲ್ಲಿಯೇ ಭಯ ಎಂದ ಮೇಲೆ ಕಾಡಲ್ಲಿ ಭಯ ಆಗುತ್ತದೆ ಎಂದು ಪ್ರತ್ಯೇಕ ಹೇಳಬೇಕಾ? ಈ ಕಾಡಲ್ಲಿ ಝುರಿಯ ನೀರು ಬೀಳುವಾಗ ಶಬ್ದ ಆಗುತ್ತಿರುತ್ತದೆ. ಭಯ ಇರುವಾಗ ಒಂದು ಚೂರು ಶಬ್ದವಾದರೂ ಭಯ

ಹೆಚ್ಚಾಗುತ್ತದೆ. ಆದ್ದರಿಂದ ಈ ಸಂದರ್ಭದಲ್ಲಿ ನೀನು ಬಂದು ರಕ್ಷಿಸುವುದು ಬಹಳ ಯೋಗ್ಯ.

<u>**ಸಂದೇಶ**</u> : ದೇವರಿಲ್ಲದೆ ಬೇರೆ ಯಾರು ರಕ್ಷಕರಿದ್ದರೂ ಭಯ ತಪ್ಪಿದ್ದಲ್ಲ.

**ಭ್ರಮರಂಜಿತಸ್ತವ ಪದಾಬ್ಜಯುಗೇ**
**ಭ್ರಮರಂ ಜಿತಾರಿಕುಲ ನಃ ಸದಯ ।**
**ಹೃದಯಂ ವಿಯುಕ್ತತರುಣೇಸ್ಥಿರತಾ–**
**ಹೃದಯಂ ವಿಭೋಽರ್ದಯತಿ ಭೃಂಗಚಯಃ** ॥ ೧೫ ॥

ಭ್ರಮ=ಸಂಚಾರದಿಂದ; ರಂಜಿತಃ=ಶೋಭಿತವಾದ; ತವ=ನಿನ್ನ; ಪದ=ಚರಣವೆಂಬ; ಅಬ್ಜ=ಕಮಲಗಳ; ಯುಗೇ=ಎರಡರಲ್ಲಿ; ಭ್ರಮರಂ=ದುಂಬಿಯಂತಿರುವ; ಜಿತ= ಪರಾಜಯಗೊಂಡ; ಅರಿ=ವೈರಿಗಳ; ಕುಲ=ಸಮೂಹವುಳ್ಳ; ನಃ=ನಮ್ಮ; ಸದಯ= ದಯೆಯಿಂದ ಕೂಡಿದ; ಹೃದಯಂ=ಮನಸ್ಸನ್ನು; ವಿಯುಕ್ತ=ಅಗಲಿದ; ತರುಣೀ= ನಾರಿಯರ; ಸ್ಥಿರತಾ=ಧೈರ್ಯವನ್ನು; ಹೃತ್=ಅಪಹರಿಸಿದ; ಅಯಂ=ಈ; ವಿಭೋ= ಸ್ವಾಮಿಯೇ; ಅರ್ದಯತಿ=ಪೀಡಿಸುತ್ತದೆ; ಭೃಂಗ-ದುಂಬಿಗಳ; ಚಯಃ=ಸಮೂಹವು.

ಕೃಷ್ಣ, ಈ ಕಾಡಲ್ಲಿ ಬಹಳ ದುಂಬಿಗಳು ಕಮಲಗಳಲ್ಲಿ ಹಾರಾಡುತ್ತಿವೆ. ಈ ಹಾರಾಟ ನೋಡಲು ಬಲು ಚಂದ. ಇದನ್ನು ನೋಡಿದಾಗ ನಮ್ಮ ಮನಸ್ಸು ಮತ್ತಷ್ಟು ವ್ಯಗ್ರವಾಗುತ್ತದೆ. ನಾವು ತರುಣಿಯರು. ನಿನ್ನ ವಿಯೋಗ ಉಳ್ಳವರು. ಇದರಿಂದಾಗಿ ಮನಸ್ಸು ಮತ್ತೂ ವ್ಯಗ್ರವಾಗುತ್ತದೆ. ಇಂತಹ ಮನಸ್ಸು ನಿನ್ನ ಚರಣಕಮಲಗಳಲ್ಲಿ ಭ್ರಮರಗಳಂತೆ ಹಾರಾಡ ಬೇಕಿತ್ತು. ಆದರೆ ನಿನ್ನ ಚರಣಕಮಲ ಸಿಗುತ್ತಿಲ್ಲ. ಆ ಭ್ರಮರಗಳು ತಾವು ಪ್ರತ್ಯಕ್ಷವಾಗಿ ಕಮಲಗಳಲ್ಲಿ ಹಾರಾಡುತ್ತಾ ನಮ್ಮನ್ನು ಮೂದಲಿಸುವಂತಿವೆ. ನಮಗೆ ಈಗ ಈ ದುಂಬಿಗಳು ಶತ್ರುಗಳಂತಿವೆ. ನೀನು ಶತ್ರುನಿಗ್ರಹ ಮಾಡುವವನು. ಹಾಗೆಯೇ ನಮ್ಮಲ್ಲಿ ದಯೆ ಉಳ್ಳವನು. ಆದ್ದರಿಂದ ಶೀಘ್ರದಲ್ಲಿ ಬಾ.

<u>**ಸಂದೇಶ**</u> : ನಮಗೆ ಶತ್ರುಗಳ ಪೀಡೆ ಉಂಟಾದಾಗ ಅದರ ನಿವಾರಣೆಗೆ ದೇವರಲ್ಲಿ ಮೊರೆ ಇಡಬೇಕು. ದೇವರ ಸಹಾಯ ಇಲ್ಲದೆ ನಾವೇ ಮುಂದೆ ಹೋಗುವುದು ಸಲ್ಲದು.

**ಚರಣಾಂಬುಜಂ ಕರಸರೋಜರುಚಂ**
**ಕವಿವರ್ಣನಾಕರಸರೋಜರುಚಮ್ ।**
**ತವ ನಾಭಿಮಚ್ಯುತ ದಿದೃಕ್ಷತಿ ದೃಕ್**
**ವಿಷಯೇಕ್ಷಯಾ ಸಪದಿ ದೃಕ್ಷತಿದೃಕ್ ॥** ॥ ೧೬ ॥

ಚರಣ=ಪಾದಗಳೆಂಬ; ಅಂಬುಜಂ=ಕಮಲವನ್ನು; ಕರ=ಕೈಗಳೆಂಬ; ಸರೋಜ=ಕಮಲಗಳ; ರುಚಂ=ಕಾಂತಿಯನ್ನು; ಕವಿ=ಜ್ಞಾನಿಗಳ; ವರ್ಣನ=ವರ್ಣನೆಗೆ; ಆಕರ=ಆಶ್ರಯವಾದ; ಸರಃ=ಕೊಳದಂತಿರುವ; ಅಜ=ಬ್ರಹ್ಮನಿಗೆ; ರುಚಂ=ಶೋಭೆಯನ್ನು ಕೊಟ್ಟ; ತವ=ನಿನ್ನ; ನಾಭಿಂ=ಹೊಕ್ಕಳನ್ನು; ಅಚ್ಯುತ=ದೇವನೇ; ದಿದೃಕ್ಷತಿ=ನೋಡಲು ಇಚ್ಛಿಸುತ್ತದೆ; ದೃಕ್=ಕಣ್ಣು; ವಿಷಯ=ಲೌಕಿಕ ವಸ್ತುಗಳ; ಈಕ್ಷಯಾ=ದರ್ಶನದಿಂದ; ಸಪದಿ=ಕೂಡಲೇ; ದೃಕ್=ಜ್ಞಾನಕ್ಕೆ; ಕ್ಷತಿ=ನಾಶವನ್ನು; ದೃಕ್=ಕಾಣುವ.

ಕೃಷ್ಣ, ನಿನ್ನ ದರ್ಶನ ಇಲ್ಲ. ನಮ್ಮ ದೃಷ್ಟಿಯು ವಿಷಯದ ಕಡೆಗೆ ಹೋಗುತ್ತಿದೆ. ಹಾಗಾದರೆ ನಮ್ಮ ಜ್ಞಾನವು ನಶಿಸುವುದು ನಿಶ್ಚಯ. ವಿಷಯಪದಾರ್ಥಗಳ ಆಕರ್ಷಣೆಯಿಂದ ನಿನ್ನ ಬಗ್ಗೆ ತಿಳುವಳಿಕೆಯು ನಷ್ಟವಾಗುತ್ತದೆ ಎಂಬುದನ್ನು ನಾವು ಕಣ್ಣಾರೆ ಕಂಡಿದ್ದೇವೆ. ಇಂತಹ ನಮ್ಮ ಕಣ್ಣುಗಳು ವಿಷಯದ ಕಡೆಗೆ ಹೋಗದೆ ನಿನ್ನ ಪಾದಪದ್ಮವನ್ನು ಹಸ್ತಕಮಲದ ಸೌಂದರ್ಯವನ್ನು ನಾಭಿಹ್ರದವನ್ನು ನೋಡಲು ತುಂಬಾ ತವಕಿಸುತ್ತವೆ. ಜ್ಞಾನಿಗಳು ಸರೋವರವನ್ನು ವರ್ಣಿಸುವ ಸಂದರ್ಭದಲ್ಲಿ ನಿನ್ನ ಹೊಕ್ಕುಳನ್ನು ಉದಾಹರಣೆಯನ್ನಾಗಿ ತೆಗೆದುಕೊಳ್ಳುತ್ತಾರೆ. ಬ್ರಹ್ಮನ ಉಗಮಸ್ಥಾನವೂ ಆಗಿದೆ. ಅಷ್ಟು ಚಂದ ಹಾಗೂ ಮಹತ್ವ ಉಳ್ಳದ್ದು. ಆದ್ದರಿಂದ ನಿನ್ನ ತಿಳಿದವರ ಸಂಖ್ಯೆ ಕಡಿಮೆ ಆಗದಿರಲು ಬೇಗ ಬಾ.

<u>**ಸಂದೇಶ**</u> : ದೇವರ ಚಿಂತನೆ ಇಲ್ಲದಿದ್ದರೆ ಮನಸ್ಸು ವಿಷಯದ ಕಡೆಗೆ ಓಡುತ್ತದೆ. ಇದರಿಂದ ವ್ಯಕ್ತಿಯ ಅವನತಿ. ಆದ್ದರಿಂದಲೇ ಶಾಸ್ತ್ರವು 'ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತುಚಿತ್' ದೇವರನ್ನು ಸದಾ ಚಿಂತಿಸು. ಎಂದೂ ಮರೆಯಬೇಡ ಎಂದು ಹೇಳಿದ್ದು.

**ಪದಾರವಿಂದಂ ಹೃದಿ ದೇಹಿ ನಃ ಪ್ರಿಯಂ**
**ಸದಾಸ್ಮರನ್ನಿರ್ಮಲದೇಹಿನಃ ಪ್ರಿಯಮ್ ।**
**ತದೇಹಿ ಶಾಂತಸ್ತವನಂದನೋಽಜ ಯನ್–**
**ನಿಹಂತಿ ಶಾಂತಸ್ತವ ನಂದನೋ ಜಯನ್** ॥ ೧೭ ॥

ಪದಾರವಿಂದಂ=ಚರಣಕಮಲವನ್ನು; ಹೃದಿ=ಹೃದಯದಲ್ಲಿ; ದೇಹಿ=ಇಡು; ನಃ=ನಮ್ಮ; ಪ್ರಿಯಂ=ಇಷ್ಟವಾದ; ಸದಾ=ಯಾವಾಗಲೂ; ಸ್ಮರನ್=ಸ್ಮರಿಸುವ; ನಿರ್ಮಲ=ಸ್ವಚ್ಛರಾದ; ದೇಹಿನಃ=ಜೀವರಿಗೆ; ಪ್ರಿಯಂ=ಇಷ್ಟವಾದ; ತತ್=ಆದ್ದರಿಂದ; ಏಹಿ=ಬಾ; ಶಾಂತ=ಅಹಂಕಾರರಹಿತರ; ಸ್ತವ=ಸ್ತೋತ್ರದಿಂದ; ನಂದನಃ=ಆನಂದಪಡುವ; ಅಜ= ಉತ್ಪತ್ತಿ ರಹಿತನೇ; ಯನ್=ಬರುವ; ನಿಹಂತಿ=ಹೊಡೆಯುತ್ತಾನೆ; ಶಾಂತಃ=ಶಾಂತನಾದ; ತವ=ನಿನ್ನ; ನಂದನಃ=ಮಗನು; ಜಯನ್=ಗೆಲ್ಲುತ್ತಾ.

ಶುದ್ಧರಾದ ಸಾತ್ವಿಕರು ಸದಾ ನಿನ್ನ ಪಾದಕಮಲವನ್ನು ಅಪೇಕ್ಷಿಸುತ್ತಾರೆ. ಯಾಕೆಂದರೆ

ಅವರು ಶುದ್ಧರಾದದ್ದೇ ಈ ನಿನ್ನ ಚರಣದಿಂದ. ಅಂತಹ ಚರಣ ನಮ್ಮ ಹೃದಯದಲ್ಲಿಯೂ ಇರಲಿ. ಇದರಿಂದ ನಮಗೆ ನೆಮ್ಮದಿ ಸಿಗುತ್ತದೆ. ನಮ್ಮ ಮನಸ್ಸಿನಲ್ಲಿ ನಿನ್ನ ಪಾದವು ಮೂಡಬೇಕಾದರೆ ನಾವು ಅದನ್ನು ನೋಡಬೇಕು. ನೋಡಬೇಕಾದರೆ ನೀನು ಕಾಣಬೇಕು. ಕಾಣಬೇಕಾದರೆ ನೀನು ಪ್ರಸನ್ನನಾಗಬೇಕು. ಪ್ರಸನ್ನನಾಗುವುದು ಸ್ತೋತ್ರದಿಂದ. ಅಹಂಕಾರಿಗಳ ಸ್ತುತಿಗೆ ನೀನು ಒಲಿಯುವುದಿಲ್ಲ. ನಾವು ನಿರಹಂಕಾರಿಗಳು. ಆದ್ದರಿಂದ ಬಾ. ನೀನು ಬಾರದಿದ್ದರೆ ನಿನ್ನ ಮಗ ಕಾಮನು ನಮಗೆ ಬಹಳ ಉಪದ್ರವ ಕೊಡುತ್ತಾನೆ. ನೀನಿದ್ದರೆ ಆತನು ತಣ್ಣಗಾಗುತ್ತಾನೆ. ನಿನ್ನ ಮಗನನ್ನು ದಂಡಿಸಲು ನೀನೇ ಬರಬೇಕು.

**ಸಂದೇಶ** : ದೇವರ ಚಿಂತನೆಯಿಂದಲೇ ವ್ಯಕ್ತಿಯು ಶುದ್ಧನಾಗುವುದು. ಅಹಂಕಾರರಹಿತವಾದ ಮನಸ್ಸಿನಿಂದಲೇ ಚಿಂತನೆ ಮಾಡಬೇಕು.

**ನನು ಚಂಪಕಾಚ್ಯುತಪದಾಂಬುಜಯೋ–**
**ದಯಮಸ್ತಿ ತೇಽಚ್ಯುತಪದಾಂಬುಜಯೋಃ ।**
**ಉಚಿತಂ ಚ ಪುಷ್ಪಮಲಿನಾಕಲಿತಂ**
**ತಮಿಹೇಕ್ಷಯಾಶು ಮಲಿನಾಕಲಿತಮ್** ॥ ೧೮ ॥

ಚಂಪಕ=ಸಂಪಿಗೆಯೇ; ಅಚ್ಯುತಪದ=ಆಕಾಶದ; ಅಂಬು=ನೀರುಳ್ಳ; ಜಯ= ಅಭಿವೃದ್ಧಿಗೆ; ಉದಯಂ=ಕಾರಣವಾದ; ಅಸ್ತಿ=ಇದೆ; ತೇ=ನಿನಗೆ; ಅಚ್ಯುತ=ದೇವರ; ಪದ=ಚರಣವೆಂಬ; ಅಂಬುಜಯೋಃ=ಕಮಲಗಳಿಗೆ; ಉಚಿತಂ=ಯೋಗ್ಯವಾದ; ಪುಷ್ಪಂ= ಹೂ; ಅಲಿನಾ=ದುಂಬಿಯಿಂದ; ಅಕಲಿತಂ=ಮೂಸದ; ತಂ=ಅವನನ್ನು; ಇಹ=ಇಲ್ಲಿ; ಈಕ್ಷಯ=ತೋರಿಸು; ಆಶು=ಕೂಡಲೇ; ಮಲಿನ=ದೋಷಗಳಿಂದ; ಅಕಲಿತಂ= ತಿಳಿಯಲ್ಪಡದ.

ಎಲೋ ಸಂಪಿಗೆಯೇ ನೀನು ಪರಿಶುದ್ಧಳಾಗಿದ್ದಿ. ಯಾಕೆಂದರೆ ನೀನು ಮಳೆಗಾಲದಲ್ಲಿ ಚೆನ್ನಾಗಿ ಬೆಳೆಯುವಿ. ಇದಕ್ಕೆ ಕಾರಣವಾದ ನೀರು ಅಚ್ಯುತಪದದಿಂದ ಅಂದರೆ ವಿಷ್ಣುಪದದಿಂದ ಅಂದರೆ ಆಕಾಶದಿಂದ ನಿನ್ನ ಮೇಲೆ ಬೀಳುತ್ತದೆ (ಆಕಾಶಕ್ಕೆ ವಿಷ್ಣುಪದ ಎಂದು ಹೆಸರು). ಸಾಮಾನ್ಯವಾಗಿ ಎಲ್ಲಾ ಪುಷ್ಪಗಳನ್ನೂ ದುಂಬಿಗಳು ತಾವು ಬಳಸಿ ಕೊಳ್ಳುತ್ತವೆ. ನಿನ್ನನ್ನು ಹೊರತು (ದುಂಬಿಗೆ ಸಂಪಿಗೆಯ ಪರಿಮಳ ಆಗೋಲ್ಲ) ಯಾರು ಅಶುದ್ಧರೋ ಅವರಿಗೆ ದೇವರು ಗೋಚರಿಸುವುದಿಲ್ಲ. ನೀನು ದೇವರಿಗೆ ನೈವೇದ್ಯವಾಗಲು ಯೋಗ್ಯಳು. ದೇವರು ನಿನ್ನಂತವರನ್ನು ಹುಡುಕಿಕೊಂಡು ಬರುವನು. ಆದ್ದರಿಂದ ಕೃಷ್ಣನನ್ನು ಬೇಗ ತೋರಿಸು.

**ಸಂದೇಶ** : ಪರಿಶುದ್ಧವಾದ ಸ್ಥಳದಲ್ಲಿ ದೇವರ ಸನ್ನಿಧಾನ. ಪರಿಶುದ್ಧರಾದವರು ದೇವರನ್ನು ತೋರಿಸಲು ದಕ್ಷರು. ಅಂತಹವರ ಮುಖದಿಂದಲೇ ದೇವರನ್ನು ತಿಳಿದುಕೊಳ್ಳಬೇಕು.

ಅಲಿರಯಂ ನಹಿ ವೇತ್ತಿ ಮಧುದ್ವಿಷಂ
ತದಪಿ ನಾತ್ರ ಶಿವೇऽತ್ತಿ ಮಧುದ್ವಿಷನ್ ।
ಬಹುಪದೇ ಪ್ರಕೃತಿರ್ವಿಷಮಸ್ಥಿತಿಃ
ಪರಮಿಹಾತನುತೇ ವಿಷಮಸ್ಥಿತಿಃ ॥ ೧೯ ॥

ಅಲಿಃ=ದುಂಬಿಯು; ಅಯಂ=ಇದು; ನಹಿ ವೇತ್ತಿ=ತಿಳಿಯಲಿಲ್ಲ; ಮಧು=ಮಧು ಎಂಬ ಅಸುರನಿಗೆ; ದ್ವಿಷಂ=ಶತ್ರುವಾದ ಕೃಷ್ಣನನ್ನು; ತದಪಿ=ಹಾಗಿದ್ದರೂ; ನ=ಇಲ್ಲ; ಅತ್ರ=ಇಲ್ಲಿ; ಶಿವೇ=ಒಳ್ಳೆಯದರಲ್ಲಿ; ಅತ್ತಿ=ತಿನ್ನುವುದು; ಮಧು=ಮಕರಂದವನ್ನು; ದ್ವಿಷನ್=ದ್ವೇಷಿಸುವ; ಬಹು=ಬಹಳ; ಪದೇ=ಪಾದವುಳ್ಳ; ಪ್ರಕೃತಿಃ=ಸ್ವಭಾವವು; ವಿಷಮ=ವಿಪರೀತದಲ್ಲಿ; ಸ್ಥಿತಿಃ= ಇರುವಿಕೆಯು; ಪರಂ=ಮುಖ್ಯವಾಗಿ; ಇಹ=ಇಲ್ಲಿ; ಆತನುತೇ=ಮಾಡುತ್ತದೆ; ವಿಷಂ= ವಿಷವನ್ನಾಗಿ; ಅಸ್ಥಿತಿಃ=ಗೈರುಹಾಜರಿಯು.

ಎಲೋ ಗೆಳತಿಯೇ, ಈ ಕೃಷ್ಣನು ಬಹುಪದನು. ಅಂದರೆ ಬಹಳ ಗೆಳತಿಯರನ್ನು ಕಟ್ಟಿಕೊಂಡವನು. ಆದ್ದರಿಂದ ಒಬ್ಬಳನ್ನು ಪ್ರೀತಿಸುವಾಗ ಮತ್ತೊಬ್ಬಳನ್ನು ದ್ವೇಷಿಸಲೇ ಬೇಕಾಗುತ್ತದೆ. ಈ ಭ್ರಮರವೂ ಬಹಳ ಪುಷ್ಪಗಳನ್ನು ಮಕರಂದಕ್ಕಾಗಿ ಆಶ್ರಯಿಸುತ್ತದೆ. ಒಂದು ಪುಷ್ಪವನ್ನು ಆಶ್ರಯಿಸುವಾಗ ಮತ್ತೊಂದನ್ನು ಬಿಡುತ್ತದೆ. ಸಂಪಿಗೆಯನ್ನು ಆಶ್ರಯಿಸುವುದೇ ಇಲ್ಲ. ಈ ದುಂಬಿಗೆ ಕೃಷ್ಣನ ಪರಿಚಯ ಇಲ್ಲ. ಆದ್ದರಿಂದ ಇದಕ್ಕೆ ಕೃಷ್ಣನು ಹೇಳಿಕೊಡಲಿಕ್ಕಿಲ್ಲ. ಒಂದನ್ನು ಪ್ರೀತಿಸುವಾಗ ಒಂದನ್ನು ದ್ವೇಷಿಸಬೇಕೆಂದು. ಹಾಗಾದರೆ ಇದಕ್ಕೆ ಹೇಗೆ ಗೊತ್ತಾಯಿತು? ಅಂದರೆ ಇದು ಕೂಡಾ ಕೃಷ್ಣನಂತೆ ಬಹುಪದ. (ಹೆಸರಿನಲ್ಲಿ ಸಾಮ್ಯ. ದುಂಬಿಯು ಬಹುಪದ ಅಂದರೆ ಬಹಳ ಕಾಲುಗಳುಳ್ಳದ್ದು) ಬಹುಪದರ ಸ್ವಭಾವವೇ ಹೀಗೆ. ಇವರು ಮಾತ್ರ ಸ್ವಭಾವ ಎಂದು ತಪ್ಪಿಸಿಕೊಳ್ಳಬಹುದು. ಆದರೆ ನಮಗೆ ಮಾತ್ರ ಕೃಷ್ಣನ ವಿರಹವು ಕಾಲಕೂಟ ವಿಷದ ಅನುಭವವನ್ನು ದುಃಖವನ್ನು ಕೊಡುತ್ತಿದೆ. ಇತರ ಎಲ್ಲಾ ಹೂಗಳನ್ನು ಅನುಸರಿಸುವ ದುಂಬಿಯು ಸಂಪಿಗೆಯನ್ನು ತ್ಯಜಿಸುವಾಗ ಸಂಪಿಗೆಗೆ ಹೇಗಾಗಬೇಡ.

**ಸಂದೇಶ** : ಈಶನಿಂದ ರಹಿತವಾದ ಜೀವನ ನರಕಸದೃಶ. ಮೇಲ್ನೋಟಕ್ಕೆ ಚಂದ ಕಾಣಬಹುದು. ಒಳಗೊಳಗೆ ಬಹಳ ದುಃಖಮಯ.

ಮುರಲೀ ಮನೋ ವಿಜಯತೇऽಜ ಯತೇ-
ರಪಿ ಮೋಹದಾಗ್ರ್ಯವಲಯೇವ ಲಯೇ ।
ಕಮಲಾ ತವಾಧರಸುಧಾರಸುಧಾಃ
ಪಿಬತಿ ತ್ವದುದ್ಯಮಹಿತಾ ಮಹಿತಾ ॥ ೨೦ ॥

ಮುರಲೀ=ಕೊಳಲು; ಮನಃ=ಮನಸ್ಸನ್ನು; ವಿಜಯತೇ=ಸೋಲಿಸುತ್ತದೆ; ಅಜ= ಉತ್ಪತ್ತಿರಹಿತನೇ; ಯತೇಃ ಅಪಿ= ಸನ್ಯಾಸಿಗೂ; ಮೋಹ=ಮೋಹವನ್ನು; ದಾ=ಕೊಡುವ; ಅಗ್ರ್ಯ=ಉತ್ತಮವಾದ; ವಲಯಾ=ಬಳೆವುಳ್ಳ; ಇವ=ಅಂತೆ; ಲಯೇ=ಪ್ರಳಯದಲ್ಲಿ; ಕಮಲಾ=ರಮೆಯು; ತವ=ನಿನ್ನ; ಅಧರ=ತುಟಿಯ; ಸು=ಒಳ್ಳೆಯ; ಧಾರ=ಧಾರೆವುಳ್ಳ; ಸುಧಾಃ=ರಸವನ್ನು; ಪಿಬತಿ=ಕುಡಿಯುತ್ತಾಳೆ; ತ್ವತ್=ನಿನ್ನ; ಉದ್ಯಮ=ಕೆಲಸಕ್ಕೆ; ಹಿತಾ=ಯೋಗ್ಯವಾದ; ಮಹಿತಾ=ಪೂಜ್ಯವಾದ.

ಕೃಷ್ಣ, ನಿನ್ನಲ್ಲಿ ಒಂದು ಕೊಳಲು ಇದೆ. ಎಲ್ಲವನ್ನೂ ತ್ಯಜಿಸಿದ ಸನ್ಯಾಸಿಗಳೂ ನಿನ್ನ ಕೊಳಲು ಅಂದಾಗ ಒಮ್ಮೆ ಕಿವಿ ಅರಳಿಸುತ್ತಾರೆ. ನಿನ್ನ ಎಲ್ಲಾ ಕೆಲಸಗಳಿಗೂ ನಿನಗೆ ಸಹಾಯಕ. ಮುಖ್ಯವಾಗಿ ನಮ್ಮನ್ನು ನಿನ್ನಲ್ಲಿಗೆ ಬರುವಂತೆ ಮಾಡುವುದೇ ಈ ಕೊಳಲು. ಆದ್ದರಿಂದ ಎಲ್ಲರೂ ಅದನ್ನು ಆದರಿಸುತ್ತಾರೆ. ಇಂತಹ ಕೊಳಲು ನಮ್ಮನ್ನು ಪೂರ್ಣವಾಗಿ ವ್ಯಗ್ರವನ್ನಾಗಿ ಮಾಡಿ ನಮ್ಮನ್ನು ಸೋಲಿಸಿದೆ. ನಮಗೆ ಸಿಗಬೇಕಾದ ನಿನ್ನ ತುಟಿಯ ರಸಧಾರೆಯನ್ನು ಈ ಕೊಳಲು ಸ್ವೀಕರಿಸುತ್ತಿದೆ. ಲಕ್ಷ್ಮಿಯೇ ಕೊಳಲಿನ ರೂಪದಲ್ಲಿ ಬಂದು ಅದನ್ನು ಸ್ವೀಕರಿಸುತ್ತಿದ್ದಾಳೆ. ಪ್ರಳಯಕಾಲದಲ್ಲಿ ಸ್ವೀಕರಿಸಲಿ. ಆಗ ನಾವು ಯಾರೂ ಇರುವುದಿಲ್ಲ. ಈಗಲಾದರೂ ನಮಗೆ ಕೊಡಬಾರದಾ?

<u>**ಸಂದೇಶ**</u> : ದೇವರ ಬಳಿ ಇರುವ ಎಲ್ಲಾ ವಸ್ತುಗಳೂ ರಮಾತ್ಮಕ. ಅವಳ ಮೂಲಕವೇ ದೇವರು ಎಲ್ಲರನ್ನೂ ತನ್ನ ಬಳಗೆ ಸೆಳೆಕೊಳ್ಳುವುದು.

**ತವ ವೇಣುನಾ ಸುರನತಾ ರಣತಾ**
**ವಿನತಾ ವಧೂತತಿಜಿತಾತಿಜಿತಾ ॥**
**ಯಮುನಾ ಗತಾಂತಿಕಮಲಂ ಕಮಲಂ**
**ದದತೀವ ತೇ ಕರಮುದಾರ ಮುದಾ** ॥ ೨೧ ॥

ತವ=ನಿನ್ನ; ವೇಣುನಾ=ಕೊಳಲಿನಿಂದ; ಸುರ=ದೇವತೆಗಳಿಂದ; ನತಾ=ಪೂಜ್ಯಳಾದ; ರಣತಾ=ಶಬ್ದಮಾಡುವ; ವಿನತಾ=ವಿನೀತಳಾದ; ವಧೂ=ಗೋಪಿಯರ; ತತಿ= ಸಮೂಹವನ್ನು; ಜಿತಾ=ಗೆದ್ದಿರುವ; ಅತಿ=ಚೆನ್ನಾಗಿ; ಜಿತಾ=ಗೆಲ್ಲಲ್ಪಟ್ಟ; ಯಮುನಾ= ಯಮುನೆಯು; ಗತಾ=ಹೋದಳು; ಅಂತಿಕಂ=ಸಮೀಪವನ್ನು; ಅಲಂ=ಚೆನ್ನಾಗಿ; ಕಮಲಂ=ಕಮಲವನ್ನು; ದದತಿ ಇವ=ಕೊಡುವವಳಂತೆ; ತೇ=ನಿನಗೆ; ಕರಂ=ಕಪ್ಪವನ್ನು; ಉದಾರ=ಉತ್ತಮನೇ; ಮುದಾ=ನೆಮ್ಮದಿಯಿಂದ.

ಕೃಷ್ಣ, ನೀನು ಬಹಳ ಉತ್ತಮನು. ನೀನು ಕೊಳಲನ್ನು ನುಡಿಸಿದರೆ ನಾವು ಮರುಳಾಗುವುದು ಇರಲಿ, ಯಮುನೆಯೂ ಪೂರ್ಣವಾಗಿ ನಿನಗೆ ಶರಣಾಗಿದ್ದಾಳೆ. ಯಮುನೆಯು ಸಾಮಾನ್ಯಳಲ್ಲ. ದೇವತೆಗಳೂ ಅವಳನ್ನು ಆದರಿಸುತ್ತಾರೆ. ಹೀಗಿದ್ದರೂ

ಕೊಳಲಿನ ಧ್ವನಿಗೆ ಮಾರುಹೋಗಿದ್ದಾಳೆ. ನಿನಗೆ ಶುಲ್ಕವನ್ನು ತೆತ್ತು ಗಾನವನ್ನು ಕೇಳುವಳೋ ಎಂಬಂತೆ ತನ್ನಲ್ಲಿ ಅರಳಿದ ಕಮಲಗಳ ಸಹಿತ ನಿನ್ನ ಬಳಿಯಲ್ಲೇ ಹರಿಯುತ್ತಿದ್ದಾಳೆ.

<u>**ಸಂದೇಶ**</u> : ಯೋಗ್ಯ ವ್ಯಕ್ತಿಗಳನ್ನು ದೇವರು ಯಾವ ರೀತಿಯಲ್ಲಾದರೂ ತನ್ನ ಬಳಿಗೆ ಬರುವಂತೆ ಮಾಡುತ್ತಾನೆ.

**ಕರಜಪ್ರಸಕ್ತ್ಯುರುರುಚಾ ರುರುಚಾ-**
**ರ್ವವಲೋಕನಾಕಲಿತಯಾಲಿ ತಯಾ ॥**
**ಕಮಲಾನ್ವಕಾರಿ ರುಚಿರಾರುಚಿರಾ**
**ಶ್ಯಪಹಪ್ರಿಯೋಷ್ಠರಸತೀರಸತೀ ॥ ೨೨ ॥**

ಕರ=ಕೈಗಳಲ್ಲಿ; ಜ=ಹುಟ್ಟಿದ ಉಗುರುಗಳ; ಪ್ರಸಕ್ತಿ=ಸಂಬಂಧದಿಂದ; ಉರು=ಬಹಳವಾದ; ರುಚಾ=ಕಾಂತಿವುಳ್ಳ; ರುರು=ಕೃಷ್ಣಮೃಗದಂತೆ; ಚಾರು=ಚಂದದ; ಅವಲೋಕನ=ನೋಟದಿಂದ; ಆಕಲಿತಯಾ=ಕೂಡಿದ; ಆಲಿ=ಗೆಳತಿಯೇ; ತಯಾ=ಆ ಕೊಳಲಿನಿಂದ; ಕಮಲಾ=ರಮೆಯು; ಅನ್ವಕಾರಿ=ಅನುಸರಿಸಲ್ಪಟ್ಟಳು; ರುಚಿರಾ=ಚಂದದ; ಅರುಚಿ=ರುಚಿ ಇಲ್ಲದ ವಸ್ತುಗಳ; ರಾಶಿ=ಸಮೂಹವನ್ನು; ಅಪಹ=ನಾಶಮಾಡುವ; ಪ್ರಿಯ=ಇಷ್ಟವಾದ; ಓಷ್ಠ=ತುಟಿಯ; ರಸ=ರಸದ; ತೀರ=ಸಮೀಪದಲ್ಲಿ; ಸತೀ=ಇರುವ.

ಕೃಷ್ಣನು ರಮೆಯನ್ನು ಆಲಿಂಗಿಸುತ್ತಾನೆ. ಆಗ ಆತನ ಬೆರಳಿನ ಉಗುರುಗಳು ಆಕೆಗೆ ತಾಗುತ್ತವೆ. ಇದರಿಂದ ಅವಳಲ್ಲಿ ಒಂದು ಶೋಭೆ ಬರುತ್ತದೆ. ಹಾಗೆಯೇ ತನ್ನ ಚಂಚಲವಾದ ಕಣ್ಣುಗಳಿಂದ ಆಕೆಯನ್ನು ಜಿಂಕೆಯಂತೆ ನೋಡುತ್ತಾನೆ. ಇದರಿಂದ ಮರುಳಾದ ಆಕೆಯು ಆತನ ತುಟಿಯ ರಸವನ್ನು ಹೀರಲು ಸಮೀಪ ಬರುತ್ತಾಳೆ. ಈ ರಸವು ಬಹಳ ರುಚಿ. ಎಷ್ಟು ರುಚಿ ಎಂದರೆ –ಕೆಟ್ಟ ಪದಾರ್ಥಗಳನ್ನು ತಿಂದು ಬಾಯಿ ಹಾಳಾಗಿದ್ದರೆ ಸರಿಮಾಡುತ್ತದೆ. ಇದೆಲ್ಲಾ ಭಾಗ್ಯ ಕೊಳಲಿಗೂ ಇದೆ. ಕೊಳಲಿನ ರಂಧ್ರಗಳಲ್ಲಿ ಕೃಷ್ಣನು ಕೈ ಇಟ್ಟಾಗ ಉಗುರುಗಳು ಕೊಳಲಿಗೆ ತಾಗುತ್ತವೆ. ಕಾಂತಿಯುಕ್ತವಾದ ಉಗುರು ತಾಗುವಾಗ ಕೊಳಲು ವಿಚಿತ್ರವಾಗಿ ಬೆಳಗುತ್ತದೆ. ಕೃಷ್ಣನ ದೃಷ್ಟಿಯಂತೂ ಸದಾಕಾಲ ಕೊಳಲಮೇಲೇ ಇರುತ್ತದೆ. ಕೊಳಲಿಗೂ ತುಟಿಯ ರಸವು ಊದುವ ಸಂದರ್ಭದಲ್ಲಿ ಸಿಗುತ್ತದೆ. ಹೀಗೆ ಕೊಳಲು ಒಂದು ರೀತಿಯಲ್ಲಿ ರಮೆಯನ್ನು ಅನುಸರಿಸುತ್ತಿದೆ.

<u>**ಸಂದೇಶ**</u> : ದೇವರು ತನ್ನವರಿಗೆ ಲಕ್ಷ್ಮಿಯಂತೆ ಆದರ ಮಾಡುತ್ತಾನೆ.

**ಮುರಲೀಮಮಾನಯ ತವಾಯತವಾಕ್-**
**ಜಿತಚೇತಸಾಂತಿಕಮಿತಾಃ ಕಮಿತಾ ।**
**ವಿಸೃಜೇನ್ನಿಜೇಽಭಿನವಧೂರ್ನವಧೂಃ**
**ನ ಚಕಾಸ್ತಿ ಸಾಧ್ವಿ ವಿನತಾವಿನತಾ ॥ ೨೩ ॥**

ಮುರಲಿ=ಕೊಳಲೇ; ಇಮಂ=ಕೃಷ್ಣನನ್ನು; ಅನಯಾ=ತಾ; ತವ=ನಿನ್ನ; ಆಯತ=ದೀರ್ಘವಾದ ಪದ್ಯರೂಪವಾದ; ವಾಕ್=ಶಬ್ದದಿಂದ; ಜಿತ=ಸೋತ; ಚೇತಸಾ=ಮನಸ್ಸಿನಿಂದಾಗಿ; ಅಂತಿಕ=ಸಮೀಪವನ್ನು; ಇತಾಃ=ಹೊಂದಿರುವ; ಕಮಿತಾ=ಕಾಂತನು; ವಿಸೃಜೇತ್=ಬಿಡುವುದು; ನಿಜೇ=ತನ್ನವರಲ್ಲಿ; ಅಭಿನವ=ಹೊಸದಾದ; ಧೂಃ=ಭಾರವುಳ್ಳ; ನ=ಇಲ್ಲ; ವಧೂಃ=ಸ್ತ್ರೀಯರನ್ನು; ನ=ಇಲ್ಲ; ಚಕಾಸ್ತಿ=ಶೋಭಿಸುವುದು; ಸಾಧ್ವಿ=ಯೋಗ್ಯಳೇ; ವಿನತೌ=ಬಗ್ಗಿದವರಲ್ಲಿ; ಇನತಾ=ಒಡೆತನವು.

ರಮೆಯು ಕರೆದಾಗ ದೇವರು ಬರುತ್ತಾನೆ. ನಿನಗೆ ರಮೆಯ ಸ್ಥಾನವನ್ನು ಕೊಟ್ಟಿದ್ದಾನೆ. ಆದ್ದರಿಂದ ನೀನು ಕರೆದಾಗಲೂ ಬರುತ್ತಾನೆ. ಆತನನ್ನು ಕರೆದು ತಾ. ಆತನು ತಾನಾಗಿ ಕರೆದದ್ದೂ ಅಲ್ಲ. ನಾವು ನಾವಾಗಿಯೇ ಬಂದದ್ದೂ ಅಲ್ಲ. ಆತನು ತನ್ನ ಪಾಡಿಗೆ ನಿನ್ನಲ್ಲಿ ಗಾಳಿಯನ್ನು ತುಂಬಿಸಿದ. ಅದು ದೀರ್ಘವಾದ ಹಾಡಿನ ರೂಪದಲ್ಲಿ ಹೊರಗೆ ಬಂತು. ನಮ್ಮ ಕಿವಿಗೆ ಬಡಿಯಿತು. ನಮಗೆ ಮನೆಯಲ್ಲಿ ಇರಲು ಸಾಧ್ಯವಾಗಲಿಲ್ಲ. ಕೃಷ್ಣನಿಗೆ ಮನಸೋತು ಬಂದೆವು. ತನ್ನ ಭಕ್ತರಾದ ನಮ್ಮನ್ನು ರಕ್ಷಿಸುವ ಒಂದು ಹೆಚ್ಚಿನ ಭಾರ ಆತನಲ್ಲಿದೆ. ಆದ್ದರಿಂದ ನಮ್ಮನ್ನು ಆತನು ಬಿಡಬಾರದು. ಎಲೋ ಕೊಳಲೇ, ನೀನು ಮಹಾಪತಿವ್ರತೆ. ನೀನು ಕೃಷ್ಣನನ್ನು ಬಿಟ್ಟು ಅನ್ಯರ ಕೈ ಸೇರುವುದೇ ಇಲ್ಲ. ನೀನೇ ಹೇಳು. ನಾವು ಇಷ್ಟು ವಿನೀತರಾಗಿರುವಾಗ ನಮ್ಮಲ್ಲಿ ಆತನು ದರ್ಪವನ್ನು ತೋರಿಸಬಾರದು ತಾನೆ. ಇದು ಆತನಿಗೆ ಭೂಷಣವಾ?

**ಸಂದೇಶ** : ದೇವರ ಪರಿವಾರದಲ್ಲಿ ಹೊಸ ಸೇರ್ಪಡೆಯನ್ನು ದೇವರು ತಿರಸ್ಕರಿಸುತ್ತಾನೋ ಎಂಬ ಭಯ ಬೇಡ. ಕೊಳಲು ಹೊಸ ಸೇರ್ಪಡೆ. ಅದನ್ನು ಕಡೆಗಣಿಸಲಿಲ್ಲ. ಅದೇ ರೀತಿ ಕಡೆಗಣಿಸುವುದಿಲ್ಲ.

**ವ್ರಜಭೂರಿಯಂ ಭುವಿ ತತಾವಿತತಾ–**
**ಪ್ಯುದಭೂತ್ತವೇಶ್ವರ ಜನೇರಜನೇ ।**
**ಕಮಲಾಪಿ ತತ್ರ ಲಸತೇಽಲಸತೇ**
**ತ್ಯಧುನೋತ್ಸೃಜೇತ್ ಸುರಮಣೇ ರಮಣೇ ॥ ೨೪ ॥**

ವ್ರಜಭೂಃ=ವೃಂದಾವನವು; ಇಯಂ=ಈ; ಭುವಿ=ಭೂಮಿಯಲ್ಲಿ; ತತಾ=ವ್ಯಾಪ್ತವಾದ; ಅವಿ=ಆಡುಗಳಿಂದ; ತತಾ=ವ್ಯಾಪ್ತವಾದದ್ದು; ಅಪಿ=ಕೂಡಾ; ಉದಭೂತ್=ಆಯಿತು; ತವ=ನಿನ್ನ; ಈಶ್ವರ=ಒಡೆಯನೇ; ಜನೇಃ=ಅವತಾರದಿಂದ; ಅಜನೇ=ಉತ್ಪತ್ತಿರಹಿತನೇ; ಕಮಲಾ ಅಪಿ=ರಮೆಯೂ ಕೂಡಾ; ತತ್ರ=ಅಲ್ಲಿ; ಲಸತೇ=ಶೋಭಿಸುತ್ತಾಳೆ; ಅಲಸತಾ=ಆಲಸ್ಯವು; ಇತಿ=ಎಂದು; ಅಧುನಾ=ಈಗ; ಉತ್ಸೃಜೇತ್=ಬಿಡುತ್ತಾಳೆ; ಸುರ=ದೇವತೆಗಳಿಗೆ; ಮಣೇ=ಶ್ರೇಷ್ಠನೇ. ರಮಣೇ=ಪತಿಯಲ್ಲಿ.

ಕೃಷ್ಣ, ಈ ವೃಂದಾವನವು ಒಂದು ಕಾಡು. ಕಾಡೆಂದಮೇಲೆ ಆಡುಗಳು ಸಾಮಾನ್ಯ.

ಈ ಕಾಡು ಆಡುಗಳಿಂದ ತುಂಬಿದ್ದರೂ ಜಗತ್ತೆಲ್ಲಾ ಪ್ರಸಿದ್ಧವಾಯಿತು. ಕಾರಣ ನೀನು ಇಲ್ಲಿ ಅವತರಿಸಿದ್ದರಿಂದ. ನೀನು ಇಲ್ಲಿಗೆ ಬಂದದ್ದರಿಂದ ರಮೆಯೂ ಇಲ್ಲಿಗೆ ಬಂದಳು. ಆದ್ದರಿಂದ ಇದು ಬಹಳ ಸಮೃದ್ಧವಾಯಿತು. ಈಗ ನೀನು ಇಲ್ಲಿ ಇಲ್ಲ. ಇದನ್ನು ತಿಳಿದ ರಮೆಯೂ ಇಲ್ಲಿ ಇರಲು ಔದಾಸೀನ್ಯ ತಾಳಿದ್ದಾಳೆ. ಇದರ ಪರಿಣಾಮ –ನೀನು ಅವತರಿಸಿದ ಈ ಕಾಡು ಪುನಃ ಅಪ್ರಸಿದ್ಧವಾಗುತ್ತದೆ. ನೀನು ಸಮಸ್ತದೇವತೆಗಳಿಗೂ ಉತ್ತಮನು. ಸಾಮಾನ್ಯದೇವತೆಗಳೇ ಹುಟ್ಟಿದ ಜಾಗವು ಚೆನ್ನಾಗಿ ಬೆಳಗುತ್ತೆ. ನಿನ್ನ ಜಾಗವು ಸದಾಕಾಲ ಚೆನ್ನಾಗಿ ಬೆಳಗಬೇಕು. ಆದ್ದರಿಂದ ಬೇಗ ಬಾ.

**ಸಂದೇಶ** : 'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ' ಎಂಬ ಉಪನಿಷತ್ತಿನ ಮಾತಿನಂತೆ ದೇವರ ಸನ್ನಿಧಾನವಿದ್ದರೆ ಎಂತಹ ವಸ್ತುವೂ ಪ್ರಸಿದ್ಧಿಗೆ ಬರುತ್ತದೆ.

**ವಿಜನೇ ವನೇ ಸ್ವಜನಮುತ್ಸೃಜತಃ**
**ತವ ನಾಗಮಂ ಯದಿ ಮನೋ ಮನುತೇ ।**
**ವಿನಿಹಂಸಿ ಹಂಸನುತಪುಣ್ಯಯಶ**
**ಸ್ತವನಾಗಮಂ ಪರಮ ತರ್ಹಿ ತವ ॥ ೨೫ ॥**

ವಿಜನೇ=ನಿರ್ಜನ'ವಾದ; ವನೇ=ಕಾಡಿನಲ್ಲಿ; ಸ್ವಜನಂ=ತನ್ನವರನ್ನು; ಉತ್ಸೃಜತಃ= ತ್ಯಜಿಸುವ; ತವ=ನಿನ್ನ; ನ=ಇಲ್ಲ; ಆಗಮಂ=ಆಗಮನವನ್ನು; ಯದಿ=ಒಂದು ವೇಳೆ; ಮನಃ=ಮನಸ್ಸು; ಮನುತೇ=ಎಣಿಸುವುದು; ವಿನಿಹಂಸಿ=ನಾಶಮಾಡುತ್ತಿ; ಹಂಸ= ಸನ್ಯಾಸಿಗಳಿಂದ; ನುತ=ಸ್ತುತಿಸಲ್ಪಟ್ಟ; ಪುಣ್ಯ=ಒಳ್ಳೆಯ; ಯಶಃ=ಕೀರ್ತಿಯನ್ನು; ಸ್ತವನ=ಸ್ತುತಿಸುವ; ಆಗಮಂ=ಶಾಸ್ತ್ರವನ್ನು; ಪರಮ=ಶ್ರೇಷ್ಠನೇ; ತರ್ಹಿ=ಆ ಪಕ್ಷದಲ್ಲಿ; ತವ=ನಿನ್ನ.

ಕೃಷ್ಣ, ನೀನು ನಮ್ಮನ್ನು ಈ ಮಧ್ಯದಾರಿಯಲ್ಲಿ ಕೈಬಿಟ್ಟೆ. ಈಗ ನಮಗೆ ಯಾರೂ ಗತಿ ಇಲ್ಲ. ನಿರ್ಗತಿಕರಾಗಿ ಅಲೆಯುವ ನಮ್ಮನ್ನು ಕಂಡು ನಿನ್ನ ಮನಸ್ಸು ಕರಗುವುದಿಲ್ಲವೋ? ಕರಗಿ ಪುನಃ ನಾವಿದ್ದಲ್ಲಿಗೆ ಬರಬೇಕೆಂದು ತೋರುವುದಿಲ್ಲವೋ? ತೋರದೆ ಇದ್ದರೆ ನಿನ್ನ ಮಾತು ಗೀತೆಯಲ್ಲಿ ಹೇಳಿದ್ದು ಸುಳ್ಳಾಗುವುದಿಲ್ಲವೋ? 'ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್' ಯಾರು ನನ್ನ ಸದಾ ಭಕ್ತರೋ ಅವರನ್ನು ಕೈಬಿಡುವುದಿಲ್ಲ ಎಂದು. ಗೀತೆ ಸಾಮಾನ್ಯ ಶಾಸ್ತ್ರವಲ್ಲ; ಋಷ್ಯಾದಿಗಳು ಸದಾ ಇದರ ಅಧ್ಯಯನವನ್ನು ಮಾಡುತ್ತಾರೆ. ನಾವು ಸದಾ ನಿನ್ನ ಭಕ್ತರು. ಇಂತಹ ನಮ್ಮನ್ನು ಕೈಬಿಟ್ಟರೆ ನಿನ್ನ ಮಾತನ್ನು ನೀನು ಮುರಿದಂತೆ ಆಗುತ್ತದೆ.

**ಸಂದೇಶ** : ದೇವರದರ್ಶನವಾಗಲು ಕೇವಲ ಅಲೆಯುವಿಕೆಯು ಪ್ರಯೋಜನವಿಲ್ಲ. ಜೊತೆಯಲ್ಲಿ ಶಾಸ್ತ್ರದ ಮೆಲುಕು ಹಾಕುವಿಕೆಯೂ ಬೇಕು.

**ಅಯೋಗಭಿನ್ನಾ ನಯತೀಶಮಾನೀ**
**ತವಾಂಘ್ರಿದಾಸೀರ್ಬತ ದಂಡಪಾಣಿಃ ।**
**ಅಯೋಗಭಿನ್ನಾ ನ ಯತೀಶಮಾನೀ**
**ಹ್ರಿಯೇತ ಕಸ್ತೇನ ಭವದ್ವಿಯೋಗೇ** ॥ ೨೬ ॥

ಅಯೋಗ=ವಿರಹದಿಂದ; ಭಿನ್ನಾ=ಬಳಲಿದ; ನಯತಿ=ಒಯ್ಯುತ್ತಾನೆ; ಈಶ= ಒಡೆಯನೆಂದು; ಮಾನೀ=ಅಭಿಮಾನವುಳ್ಳ; ತವ=ನಿನ್ನ; ಅಂಘ್ರಿ=ಚರಣದ; ದಾಸೀಃ= ಸೇವಕಿಯರಾದ; ಬತ=ಕಷ್ಟವು; ದಂಡಪಾಣಿಃ=ಯಮನು; ಅಯಃ=ಕಬ್ಬಿಣವನ್ನು; ಅಗ= ಬೆಟ್ಟವನ್ನು; ಭಿತ್=ನಾಶಮಾಡುವ; ನಾ=ವ್ಯಕ್ತಿಯು; ನ=ಇಲ್ಲ; ಯತಿ=ಋಷಿಗಳಿಗೆ; ಈಶ= ಒಡೆಯನೆಂದು; ಮಾನೀ=ತಿಳಿಯುವ; ಹ್ರಿಯೇತ=ಒಯ್ಯಲ್ಪಡುವುದು; ಕಃ=ಯಾರು; ತೇನ= ಅವನಿಂದ; ಭವತ್=ನಿನ್ನ; ವಿಯೋಗೇ=ವಿರಹದಲ್ಲಿ.

ಕೃಷ್ಣ, ನಿನ್ನ ವಿರಹದುಃಖವನ್ನು ತಡೆಯಲು ನಮ್ಮಿಂದ ಸಾಧ್ಯವಿಲ್ಲ. ಈ ದುಃಖದಿಂದಲೇ ನಾವು ಯಮನ ಪಾಲಾಗುತ್ತೇವೆ. ಯಮ ತನ್ನ ಅಧಿಕಾರವನ್ನು ನಮ್ಮಲ್ಲಿ ಚಲಾಯಿಸುತ್ತಾನೆ. ನೀನು ಎಣಿಸಬಹುದು –ನಿನ್ನ ಪಾದಸೇವಕಿಯರಾದ ನಮ್ಮನ್ನು ಯಮ ಮುಟ್ಟಲಾರ ಎಂದು. ನಿನ್ನ ಎಣಿಕೆ ಸರಿ ಇಲ್ಲ. ಎಂತೆಂತಹ ಬಲಿಷ್ಠರನ್ನೂ ಯಮ ಬಿಡುವುದಿಲ್ಲ. ಅವರು ಬೆಟ್ಟ ಅಗೆಯುವವರೇ ಆಗಲಿ, ಕಬ್ಬಿಣವನ್ನು ಮಣ್ಣಿನ ಹೆಂಟೆಯಂತೆ ಪುಡಿಮಾಡುವವರೇ ಆಗಲಿ, ಉತ್ತಮೋತ್ತಮ ಜ್ಞಾನಿಗಳೇ ಆಗಿರಲಿ, ಅಂತಹವರನ್ನೂ ಯಮನು ತನ್ನ ಹಿಡಿತಕ್ಕೆ ತೆಗೆದುಕೊಳ್ಳುತ್ತಾನೆ –ನಿನ್ನ ವಿಯೋಗ ಆದಾಗ. ಹೀಗಿರುವಾಗ ದುರ್ಬಲರಾದ ನಮ್ಮ ಪಾಡೇನು? ಆದ್ದರಿಂದ ನಮ್ಮನ್ನು ಯಾರ್‍ಯಾರಿಗೋ ಒಪ್ಪಿಸದೆ ನಿನ್ನಲ್ಲಿಯೇ ಇಟ್ಟುಕೋ. ಅದಕ್ಕಾಗಿ ಬೇಗ ಬಾ.

**ಸಂದೇಶ** : 'ಹರಿಣಾ ತ್ಯಕ್ತದೇಹಸ್ತು ಮೃತ ಇತಿ ಉಚ್ಯತೇ ಬುಧೈಃ' ದೇವರು ಒಬ್ಬನನ್ನು ತ್ಯಾಗಮಾಡಿದರೆ ಆತನು ಸತ್ತ ಎಂದೇ ಅರ್ಥ. ಆದ್ದರಿಂದ ಸ್ಮರಣೆ ರೂಪದಲ್ಲಾದರೂ ದೇವರು ನಮ್ಮ ಜೊತೆಗೆ ಇರಬೇಕು.

**ವಿನಾಶನಾನಾಮಯದೇಹಪುಷ್ಟೀಃ**
**ಅನಾದಿತಸ್ತ್ವಂ ಪರಮುಜ್ಝಸೀಶ ।**
**ವಿನಾಶನಾನಾಮಯದೇಹಪುಷ್ಟೀಃ**
**ಲಭೇಮಹಿ ತ್ವತ್ತುಲನಾಂ ವಯಂ ಚ** ॥ ೨೭ ॥

ವಿನಾಶ=ನಾಶವು; ನಾನಾ=ಬೇರೆಬೇರೆ; ಆಮಯ=ರೋಗವು; ದೇಹ=ದೇಹದ; ಪುಷ್ಟೀಃ=ಪೋಷಣೆಯನ್ನು; ಅನಾದಿತಃ=ಅನಾದಿಕಾಲದಿಂದ; ತ್ವಂ=ನೀನು; ಪರಂ=

ಮುಖ್ಯವಾಗಿ; ಉಜ್ಝಸಿ=ತ್ಯಜಿಸಿದ್ದಿ; ಈಶ=ಒಡೆಯನೇ; ವಿನಾ=ಹೊರತಾಗಿ; ಅಶನ=ಭೋಜನವು; ಅನಾಮಯ=ಆರೋಗ್ಯವು; ದೇಹ=ಶರೀರದ; ಪುಷ್ಟೀಃ=ಪೋಷಣೆಯನ್ನು; ಲಭೇಮಹಿ=ಹೊಂದುವೆವು; ತ್ವತ್=ನಿನ್ನ; ತುಲನಾಂ=ಹೋಲಿಕೆಯನ್ನು; ವಯಂ ಚ=ನಾವೂ ಕೂಡಾ.

ಕೃಷ್ಣ, ನೀನು ಅನಾದಿಕಾಲದಿಂದ ಒಂದೇ ರೀತಿ ಇರುವವನು. ಜರೆ, ಮರಣ, ಕಾಯಿಲೆ, ದೇಹದ ಪೋಷಣೆ ಇದು ಯಾವುದೂ ಇಲ್ಲ. ನೀನು ಶಶ್ವದೇಕಪ್ರಕಾರ. ಅಂದರೆ ಯಾವಾಗಲೂ ಒಂದೇ ರೀತಿ ಇರುವವನು. ನಾವೂ ಕೂಡಾ ಮೋಕ್ಷದಲ್ಲಿ ನಿನ್ನಂತೆಯೇ ಆಗಬೇಕೆಂದು ಇಚ್ಛಿಸಿದ್ದೇವೆ. ಅದಕ್ಕಾಗಿ ಈಗ ಊಟ, ಆರೋಗ್ಯ, ದೇಹದ ರಕ್ಷಣೆ ಇತ್ಯಾದಿ ಯಾವುದರ ಕಡೆಗೂ ಗಮನ ಕೊಡುತ್ತಿಲ್ಲ. ಇದರ ಪರಿಣಾಮವಾಗಿ ಒಂದು ದಿನ ದೇಹವನ್ನು ಬಿಡುವೆವು. ನಿನ್ನ ಬಳಿ ಸೇರುವೆವು. ನಿನ್ನಂತೆಯೇ ಆಗುವೆವು.

<u>**ಸಂದೇಶ**</u> : ದೇವರಿಗಾಗಿ ಸರ್ವಸ್ವವನ್ನೂ ತ್ಯಜಿಸಿದರೆ ಉಪನಿಷತ್ತು ಹೇಳುವಂತೆ 'ಪರಮಂ ಸಾಮ್ಯಂ ಉಪೈತಿ' ಉತ್ತಮವಾದ ಸಾಮ್ಯವನ್ನು ದೇವರ ಜೊತೆ ಹೊಂದಬಹುದು.

**ವಿಧಿಶರ್ವಪೂರ್ವಸುಮನಃಸುಮನಃ–**
**ಸರಸೀನಿವಾಸ ಜಗತಾಜಗತಾ ।**
**ತ್ವದಭಿನ್ನತಾ ತುಹಿನತೋ ಹಿ ನತೋ**
**ದಹನೋಽಪರೋಽಸದೃಶ ತಾದೃಶತಾ** ॥ ೨೮ ॥

ವಿಧಿ=ಬ್ರಹ್ಮನು; ಶರ್ವ=ರುದ್ರನು; ಪೂರ್ವ=ಮೊದಲಾದ; ಸುಮನಃ=ದೇವತೆಗಳ; ಸುಮನಃ=ಒಳ್ಳೆಯ ಮನಸ್ಸೆಂಬ; ಸರಸೀ=ಕೊಳದಲ್ಲಿ; ನಿವಾಸ=ವಾಸಿಸುವವನೇ; ಜಗತಾ=ಲೋಕದಿಂದ; ಅಜ=ಜನನರಹಿತನೇ; ಗತಾ=ಹೋಯಿತು; ತ್ವತ್=ನಿನ್ನಿಂದ; ಅಭಿನ್ನತಾ=ಅಭೇದವು; ತುಹಿನತಃ=ಹಿಮದಿಂದ; ಹಿ=ಪ್ರಸಿದ್ಧ; ನತಃ=ಪೂಜಿತವಾದ; ದಹನಃ=ಬೆಂಕಿಯು; ಅಪರಃ=ಬೇರೆ; ಅಸದೃಶ=ಸಾಟಿ ಇಲ್ಲದವನೇ; ತಾದೃಶತಾ=ಆ ರೀತಿ.

ಹೇ ಕೃಷ್ಣ, ನೀನು ಬ್ರಹ್ಮರುದ್ರಾದಿ ಸಮಸ್ತ ದೇವತೆಗಳ ಮನಸ್ಸೆಂಬ ಕೊಳದಲ್ಲಿ ವಾಸಿಸುವವನು. ಅವರು ನಿನ್ನನ್ನು ಸದಾ ಧ್ಯಾನಮಾಡುತ್ತಾರೆ. ಅವರು ಧ್ಯಾನಮಾಡುವವರು. ನೀನು ಧ್ಯೇಯ. ಈ ರೀತಿ ಈಶಜೀವರಾದ ನಿಮಗೆ ಧ್ಯಾತೃಧ್ಯೇಯಭಾವ ಎಂಬ ವಿರುದ್ಧ ಧರ್ಮ ಇದೆ. ಅಗ್ನಿಯನ್ನು ಎಲ್ಲರೂ ನಮಸ್ಕರಿಸುತ್ತಾರೆ. ಅದು ಬಿಸಿ ಇದೆ. ಹಿಮವನ್ನು ಯಾರೂ ನಮಸ್ಕರಿಸುವುದಿಲ್ಲ. ಅದು ತಂಪು ಇದೆ. ಹೀಗೆ ವಿರುದ್ಧ ಧರ್ಮವುಳ್ಳ ಇವೆರಡು ಒಂದಲ್ಲ. ಅದೇ ರೀತಿ ಜೀವೇಶರೂ ಒಂದಾಗಲು ಸಾಧ್ಯವಿಲ್ಲ. ಕೃಷ್ಣ, ನೀನು ಸಾಟಿ ಇಲ್ಲದವನು. ಇತರ ಜೀವರಿಗೆ ಸಾಟಿ ಇದೆ.

**ಸಂದೇಶ** : ವಿರುದ್ಧಧರ್ಮವುಳ್ಳ ಯಾವ ಎರಡು ವಸ್ತುಗಳನ್ನೂ ಒಂದು ಎಂದು ತಿಳಿಯಬಾರದು.

**ಕಮಲಾಸನಾಚ್ಚ ಭವತೋಽಭವತೋ**
**ಮಹತೀಂದಿರಾ ಕಿಲ ತಯಾ ಲತಯಾ ।**
**ತರುವದ್ ಭವಾನ್ ಪರಿವೃತೋಽರಿವೃತೋ-**
**ದಯದಾವ ಸೇದಮನು ತೇ ಮನುತೇ ॥ ೨೯ ॥**

ಕಮಲಾಸನಾತ್=ಬ್ರಹ್ಮನಿಂದ; ಭವತಃ=ರುದ್ರನಿಗಿಂತ; ಅಭವತಃ=ಮುಕ್ತರಿಗಿಂತ; ಮಹತೀ=ದೊಡ್ಡವಳು; ಇಂದಿರಾ=ರಮೆಯು; ಕಿಲ=ಪ್ರಸಿದ್ಧ; ತಯಾ=ಅವಳಿಂದ; ಲತಯಾ=ಬಳ್ಳಿಯಿಂದ; ತರುವತ್=ಮರದಂತೆ; ಭವಾನ್=ನೀನು; ಪರಿವೃತಃ=ಸುತ್ತುವರಿಯಲ್ಪಟ್ಟಿದ್ದಿ; ಅರಿ=ಶತ್ರುಗಳಿಂದ; ವೃತಃ=ಸ್ವೀಕೃತವಾದ; ಉದಯ=ಅಭಿವೃದ್ಧಿಗೆ; ದಾವ=ಬೆಂಕಿ; ಸಾ=ಆ; ಇದಂ=ಇದನ್ನು; ಅನು=ಅನುಸರಿಸಿ; ತೇ=ನಿನಗೆ; ಮನುತೇ= ತಿಳಿಯುತ್ತಾಳೆ.

ಹೇ ಕೃಷ್ಣ, ರಮೆಯು ಬ್ರಹ್ಮಾದಿಗಳಾದ ಸಂಸಾರಿಗಳಿಗಿಂತಲೂ, ಮುಕ್ತರಿಂದಲೂ ಶ್ರೇಷ್ಠಳು ಎಂದು ಅಂಭೃಣೀಸೂಕ್ತವು ಚೆನ್ನಾಗಿ ಹೇಳುತ್ತಿದೆ. ಅವಳಾದರೂ ಬಳ್ಳಿಯು ಮರವನ್ನು ಸದಾ ಆಶ್ರಯಿಸುವಂತೆ ನಿನ್ನನ್ನು ಆಶ್ರಯಿಸಿಕೊಂಡೇ ಇರುವವಳು ಎಂಬುದನ್ನು ಅದೇ ವೇದ ಹೇಳುತ್ತದೆ. ರಮೆಯು ಇಡೀ ಜಗತ್ತನ್ನು ತನ್ನ ಅಧೀನವನ್ನಾಗಿ ತಿಳಿದಿದ್ದಾಳೆ. ತಾನು ಮಾತ್ರ ನಿನ್ನನ್ನು ಆಶ್ರಯಿಸಿದ್ದಾಳೆ. ಇದರಿಂದ ನೀನು ಸರ್ವೋತ್ತಮ ಎಂದು ತಿಳಿಯುತ್ತದೆ. ನೀನು ತಾಮಸರ ಅಭಿವೃದ್ಧಿಯನ್ನು ಸಹಿಸುವವನಲ್ಲ. ಇದರಿಂದ ದೈತ್ಯರಿಂದಲೂ ನೀನು ದೊಡ್ಡವನು ಎಂದು ತಿಳಿಯಿತು.

**ಸಂದೇಶ** : ದೇವರ ಸರ್ವೋತ್ತಮತ್ವವನ್ನು ಶ್ರುತಿಸಹಿತ ಅನುಭವದಿಂದಲೇ ತಿಳಿಯಬೇಕು. ಇಂತಹ ತಿಳುವಳಿಕೆಯೇ ಆತನ ಸಾಕ್ಷಾತ್ಕಾರಕ್ಕೆ ಕಾರಣ.

**ನಿಗಮೋಽಸ್ತಿ ತೇ ಮತಿಮತೋಽತಿಮತಃ**
**ನಿಖಿಲೇಶ್ವರತ್ವಸಮಯೇಽಸಮ ಯೇ ।**
**ತಮಪಿ ತ್ಯಜಂತ್ಯಸುಭೃತಃ ಸುಭೃತಃ**
**ಸ್ವನಯಃ ಕುತೋಽಕ್ಷರಹಿತೈ ರಹಿತೈಃ ॥ ೩೦ ॥**

ನಿಗಮಃ=ವೇದವು; ಅಸ್ತಿ=ಇದೆ; ತೇ=ನಿನಗೆ; ಮತಿಮತಃ=ಬುದ್ಧಿವಂತರಿಗೆ; ಅತಿಮತಃ=ಒಪ್ಪಿಗೆಯಾದ; ನಿಖಿಲ=ಎಲ್ಲದಕ್ಕೂ; ಈಶ್ವರತ್ವ=ಒಡೆತನದ; ಸಮಯೇ=

ವಿಚಾರದಲ್ಲಿ; ಅಸಮ=ಸಾಟಿ ಇಲ್ಲದವನೇ; ಯೇ=ಯಾರು; ತಂ ಅಪಿ=ಅದನ್ನೂ; ತ್ಯಜಂತಿ= ಬಿಡುತ್ತಾರೆ; ಅಸುಭೃತಃ=ಜನರು; ಸುಭೃತಃ=ಅಂಗೀಕೃತವಾದದ್ದು; ಸ್ವನಯಃ=ತನ್ನ ಸಿದ್ಧಾಂತವು; ಕುತಃ=ಯಾಕೆ? ಅಕ್ಷ=ನೇತ್ರಗಳಿಂದ; ರಹಿತೈಃ=ರಹಿತರಾದ; ಅಹಿತೈಃ= ಅನಿಷ್ಟರಾದ.

ಕೃಷ್ಣ, ನಿನಗೆ ಸಾಟಿ ಇಲ್ಲ. ನೀನು ಎಲ್ಲರಿಗಿಂತಲೂ ಉತ್ತಮನು ಎಂಬ ವಿಚಾರದಲ್ಲಿ ಒಳ್ಳೆಯ ವಿಮರ್ಶಕರು ಒಪ್ಪುವ ವೇದಗಳಿವೆ. ಆ ವೇದಗಳು ನಿರವಕಾಶಗಳಾಗಿವೆ. ಅವುಗಳಿಗೆ ಸರ್ವೋತ್ತಮತ್ವರೂಪ ಅರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳಲು ಬರುವುದಿಲ್ಲ. ಇಂತಹ ವೇದಗಳನ್ನೂ ಕೆಲವರು 'ಅತತ್ವಾವೇದಕಗಳು' ಅಂದರೆ ಸುಳ್ಳು ಹೇಳುತ್ತವೆ ಎಂದು ಕಡೆಗಣಿಸುತ್ತಾರೆ. ತಾವು ಹೇಳುವ ಐಕ್ಯವಿಷಯದಲ್ಲಿಯೋ ಸಾಮ್ಯವಿಷಯದಲ್ಲಿಯೋ ವೇದವನ್ನೇ ಹೇಳುತ್ತಾರೆ. ಆಗ ಈ ಮಾತು –ಅತತ್ವಾವೇದಕ ಎಂಬ ಮಾತು ಲಗಾವ್ ಆಗುವುದಿಲ್ಲವಾ? ತಾವು ಇನ್ನೊಬ್ಬರಿಗೆ ಹೇಳಿದ ಮಾತು ತಮಗೆ ತಿರುಗಿ ಬರುವುದನ್ನು ಕಾಣದವರು. ಆದ್ದರಿಂದಲೇ ಅಂತರ್ದೃಷ್ಟಿರಹಿತರು. ಭೇದಸಿದ್ಧಾಂತವನ್ನು ವಿರೋಧಿಸುವುದು ಒಂದೇ ಅವರ ಗುರಿ.

<u>**ಸಂದೇಶ**</u> : ಹರಿಸರ್ವೋತ್ತಮತ್ವವಿಚಾರವನ್ನು ಯಾರಾದರೂ ವಿರೋಧಿಸಿದರೆ ಅದು ಅವರಿಗೇ ಮುಳುವಾಗುತ್ತದೆ. ಗಾಜಿನ ಮನೆಯಲ್ಲಿ ಇರುವವನು ಇನ್ನೊಬ್ಬರ ಮನೆಗೆ ಕಲ್ಲು ಬಿಸಾಡಬಾರದು.

**ಅನೃತಂ ಜಗತ್ ಕಲಯತೇಽಲಯ ತೇ**
**ಯದಿ ಕೋಽಪಿ ಮಾನಸಹಿತಂ ಸ ಹಿತಮ್ ।**
**ರುಚಿರಂ ಕಥಂ ನಿಜನಯೇ ಜನಯೇತ್**
**ನಹಿ ರಜ್ಜುಹೇಃ ಕ್ಷತಿರಭೂತಿರಭೂತ್** ॥ ೩೧ ॥

ಅನೃತಂ=ಸುಳ್ಳನ್ನಾಗಿ; ಜಗತ್=ಲೋಕವನ್ನು; ಕಲಯತೇ=ತಿಳಿಯುತ್ತಾರೆ; ಅಲಯ=ನಾಶ ಇಲ್ಲದವನೇ; ತೇ=ನಿನ್ನ; ಯದಿ=ಒಂದುವೇಳೆ; ಕೋಽಪಿ=ಯಾರಾದರೂ; ಮಾನ=ಪ್ರಮಾಣದಿಂದ; ಸಹಿತಂ=ಕೂಡಿದ; ಸಃ=ಅವನು; ಹಿತಂ=ಇಷ್ಟವನ್ನು; ರುಚಿರಂ= ಪ್ರಿಯವನ್ನು; ಕಥಂ=ಹೇಗೆ; ನಿಜನಯೇ=ತನ್ನ ಸಿದ್ಧಾಂತದಲ್ಲಿ; ಜನಯೇತ್= ಉಂಟುಮಾಡುತ್ತಾನೆ; ನಹಿ=ಇಲ್ಲ; ರಜ್ಜು=ಹಗ್ಗ; ಅಹೇಃ=ಸರ್ಪಕ್ಕೆ; ಕ್ಷತಿಃ=ನಾಶವು; ಅಭೂತಿಃ= ಅಮಂಗಳವಾದ; ಅಭೂತ್=ಆಗುವುದು.

ಕೃಷ್ಣ, ಮಾಯಾವಾದಿಗಳು ಈ ಜಗತ್ತನ್ನು ಸುಳ್ಳು ಎನ್ನುತ್ತಾರೆ. 'ಬ್ರಹ್ಮ ಸತ್ಯಂ ಜಗತ್ ಮಿಥ್ಯಾ' ದೇವರು ಒಂದೇ ಸತ್ಯ. ತದತಿರಿಕ್ತವಾದ ಎಲ್ಲವೂ ಸುಳ್ಳು ಎನ್ನುತ್ತಾರೆ. ಯದ್ಯಪಿ ಜಗತ್ತು ಸತ್ಯ. ನಿನ್ನ ಅಧೀನ. ನೀನೊಬ್ಬನೇ ನಾಶ ಇಲ್ಲದವ. ಮತ್ತೆ ಎಲ್ಲದಕ್ಕೂ

ನಾಶ ಇದೆ. ನಾಶ ಇರುವುದರಿಂದಲೇ ಸತ್ಯ ಎಂದು ತಿಳಿಯುತ್ತದೆ. ಸುಳ್ಳಾದ ಮೊಲದ ಕೋಡಿಗೆ ನಾಶ ಇಲ್ಲ. ಇಷ್ಟೇ ಅಲ್ಲದೆ ಜಗತ್ತು ಸತ್ಯ ಎಂಬ ವಿಷಯದಲ್ಲಿ ಪ್ರಮಾಣವೂ ಇದೆ. ಬ್ರಹ್ಮಾತಿರಿಕ್ತವಾದ ಎಲ್ಲವೂ ಸುಳ್ಳಾದರೆ ವೇದವೂ ಸುಳ್ಳು ಎಂದಾಯಿತು. ಸುಳ್ಳಾದ ವೇದವು ಸಾಧಕವೂ ಬಾಧಕವೂ ಆಗುವುದಿಲ್ಲ. ಹೀಗಿರುವಾಗ ಮಾಯಾವಾದಿಗಳು ತಮಗೆ ಇಷ್ಟವಾದ ಜಗನ್ಮಿಥ್ಯಾತ್ವವಿಷಯದಲ್ಲಿ ಜನರಿಗೆ ಹೇಗೆ ತಾನೆ ನಂಬಿಕೆಯನ್ನು ಹುಟ್ಟಿಸಿಯಾರು? ಹಗ್ಗವನ್ನು ಹಾವಾಗಿ ಕಂಡರೆ ಅಂತಹ ಹಾವಿನಿಂದ ನಮಗೆ ಸಾವು ಬರುವುದಿಲ್ಲ. ಈ ಹಾವು ಸುಳ್ಳು. ಸುಳ್ಳಾದದ್ದು ಅರ್ಥಕ್ರಿಯಾಕಾರಿ ಅಲ್ಲ.

<u>**ಸಂದೇಶ**</u> : ದೇವರನ್ನು ಮಾತ್ರ ಸರಿಯಾಗಿ ತಿಳಿದರೆ ಸಾಲದು. ದೇವರಿಂದ ನಿರ್ಮಿತವಾದ ಈ ಜಗತ್ತನ್ನೂ ಸರಿಯಾಗಿ ತಿಳಿಯಬೇಕು. ಆಗಲೇ ಬಿಂಬದ ಸಾಕ್ಷಾತ್ಕಾರ ಆಗುವುದು.

**ಭಯಹೇತುತಾಸ್ಯ ನ ಚ ಕಂಪಕತೋ-**
**ಭಯಹೇತುತಾಸ್ಯ ಚಿತ ಏವ ಪರಮ್ ।**
**ನ ಹಿ ಚಿದ್ಗತೇರ್ಥಮಹಿಮಾ ನಿಶಿ ತಾ-**
**ನಹಿಚಿದ್ಗತೇರ್ಥ ಇಹ ರಾತಿ ಹಿ ತಾನ್** ॥ ೩೨ ॥

ಭಯ=ಭಯಕ್ಕೆ; ಹೇತುತಾ=ಕಾರಣತ್ವವು; ಅಸ್ಯ=ಸುಳ್ಳಾದ ಹಾವಿಗೆ; ನ ಚ=ಇಲ್ಲ; ಕಂಪಕತಾ=ನಡುಗಿಸುವಿಕೆಯು; ಉಭಯ=ಎರಡಕ್ಕೂ; ಹೇತುತಾ=ಕಾರಣತ್ವವು; ಅಸ್ಯ=ಈ ಸರ್ಪದ; ಚಿತ ಏವ=ಜ್ಞಾನಕ್ಕೆ; ಪರಮ್=ಮುಖ್ಯವಾಗಿ; ನಹಿ=ಇಲ್ಲ; ಚಿತ್=ಜ್ಞಾನವು; ಗತೇ=ಹೋಗುತ್ತಿರಲು; ಅರ್ಥ=ವಸ್ತುವಿನ; ಮಹಿಮಾ=ಶಕ್ತಿಯು; ನಿಶಿ=ರಾತ್ರಿಯಲ್ಲಿ; ತಾನ್=ಅವುಗಳನ್ನು; ಅಹಿ=ಸರ್ಪದ; ಚಿತ್=ಜ್ಞಾನವು; ಗತೇ= ಹೋಗುತ್ತಿರಲು; ಅರ್ಥೇ=ವಸ್ತುವು; ಇಹ=ಇಲ್ಲಿ; ರಾತಿ=ಕೊಡುತ್ತದೆ; ಹಿ=ಪ್ರಸಿದ್ಧ; ತಾನ್=ಅವುಗಳನ್ನು.

ಸುಳ್ಳಾದ ಸರ್ಪವು ಕಚ್ಚುವುದಿಲ್ಲ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದರು. ಕಚ್ಚದಿದ್ದರೂ ಭಯವನ್ನು ಹಾಗೆಯೇ ಶರೀರದಲ್ಲಿ ನಡುಕವನ್ನೂ ಉಂಟುಮಾಡುತ್ತದೆ. ಆದ್ದರಿಂದ ಸುಳ್ಳಾದ ವಸ್ತುವೂ ಸಾಧಕ ಆಗಬಹುದು ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ಇದೆ -ನಮಗೆ ಭಯವನ್ನೋ ನಡುಕವನ್ನೋ ಉಂಟುಮಾಡಿದ್ದು ಸರ್ಪ ಅಲ್ಲ. ಸರ್ಪದ ತಿಳುವಳಿಕೆ. ತಿಳುವಳಿಕೆ ಸತ್ಯ. ಎಲ್ಲಾ ಕಡೆಯೂ ವಸ್ತುವು ಯಾವುದಕ್ಕೂ ಕಾರಣ ಅಲ್ಲ. ಅದರ ತಿಳುವಳಿಕೆ. ಭಯ ಆಗಲು ಸರ್ಪವೇ ಕಾರಣ ಆಗಿದ್ದರೆ ರಾತ್ರಿಯಲ್ಲಿ ನಾವು ಮಲಗಿರುವಾಗ ನಿದ್ರೆಯಲ್ಲಿರುವಾಗ ನಮ್ಮ ಮೈಮೇಲೆ ಸರ್ಪ ಹರಿದಾಡಿದರೆ ಭಯ ಆಗಬೇಕಿತ್ತು. ಆದರೆ ಆಗುತ್ತಿಲ್ಲ. ಯಾಕೆಂದರೆ ನಮಗೆ ಆಗ ಸರ್ಪದ ತಿಳುವಳಿಕೆ ಇರುವುದಿಲ್ಲ. ನಾವು ನಿದ್ರೆಯಲ್ಲಿ ಇರುತ್ತೇವೆ. ಹೊರಗಿನ ಯಾವ ಜ್ಞಾನವೂ ಇರುವುದಿಲ್ಲ. ಒಂದು ಕಡೆ ನಿಜವಾಗಿ ಸರ್ಪ ಇರಲಿಲ್ಲ. ಆದರೆ ಯಾರೋ ಹಾವು ಎಂದು ಬೊಬ್ಬಿಟ್ಟರು.

ನಾವು ಹೆದರಿದೆವು. ಹೆದರಲು ಹಾವೇ ಕಾರಣವಾಗಿದ್ದರೆ ಆಗ ನಾವು ಹೆದರಬಾರದಿತ್ತು. ಈ ರೀತಿ ಅನ್ವಯದಿಂದ ಅಂದರೆ ಸರ್ಪ ಇದ್ದರೂ ಭಯ ಆಗಿಲ್ಲ. ವ್ಯತಿರೇಕದಿಂದ ಅಂದರೆ ಸರ್ಪ ಇಲ್ಲದಿದ್ದರೂ ಭಯ ಆಯಿತು. ಈ ರೀತಿಯ ಅನ್ವಯವ್ಯತಿರೇಕದಿಂದಾಗಿ ಜ್ಞಾನವೇ ಭಯಕ್ಕೆ ಕಾರಣ –ವಸ್ತುವಲ್ಲ ಎಂದು. ಇಲ್ಲಿ ಹಾವಿನ ತಿಳುವಳಿಕೆ ಸತ್ಯ. ಆದ್ದರಿಂದ ಸತ್ಯಕ್ಕೇ ಸಾಧಕತ್ವ ಹೊರತು ಸುಳ್ಳಾದ್ದಕ್ಕೆ ಇಲ್ಲ.

<u>ಸಂದೇಶ</u> : ಶಾಸ್ತ್ರವು ಜ್ಞಾನಕ್ಕೆ ಬಹಳ ಮಹತ್ವವನ್ನು ಕೊಟ್ಟಿದೆ. ಆದ್ದರಿಂದಲೇ **'ಜ್ಞಾನೀ ಪ್ರಿಯತಮಃ ಮೇ' । ನಹಿ ಜ್ಞಾನೇನ ಸದೃಶಂ ಪವಿತ್ರಂ ಇಹ ವಿದ್ಯತೇ'** –ಜ್ಞಾನಿಯು ನನಗೆ ಬಹಳ ಇಷ್ಟನು. ಜ್ಞಾನಕ್ಕಿಂತ ಪವಿತ್ರವಾದ ವಸ್ತು ಇನ್ನೊಂದಿಲ್ಲ ಎಂದು ಕೃಷ್ಣನು ಗೀತೆಯಲ್ಲಿ ಹೇಳಿದ್ದು.

**ಯದಿ ಭೇದಶೂನ್ಯಮಖಿಲಂ ಮಖಿಲಂ–**
**ಘ್ಯಸುರಾರ್ದಿತಾ ಸುರಸಭಾರ ಸಭಾ ।**
**ತವ ಧಾಮ ಕಿಂ ಮುರರಿಪೋಽರರಿಪೋ**
**ಸ್ತುತಿರಪ್ಯುದಾರಚರಿತಾಚರಿತಾ ॥ ೩೩ ॥**

ಯದಿ=ಒಂದು ವೇಳೆ; ಭೇದ=ಭೇದದಿಂದ; ಶೂನ್ಯಂ=ರಹಿತವಾದದ್ದು; ಅಖಿಲಂ= ಎಲ್ಲವೂ; ಮಖಿ=ಋಷಿಗಳನ್ನು; ಲಂಘಿ=ಮೀರಿರುವ; ಅಸುರ=ದೈತ್ಯರಿಂದ; ಅರ್ದಿತಾ= ಪೀಡಿತವಾದ; ಸಭಾ=ಕಾಂತಿಯಿಂದ ಕೂಡಿದ; ಸುರ=ದೇವತೆಗಳ; ಸಭಾ=ಸಭೆಯು; ಆರ=ಹೊಂದಿತು; ತವ=ನಿನ್ನ; ಧಾಮ=ಮನೆಯನ್ನು; ಕಿಂ=ಯಾಕೆ? ಮುರರಿಪೋ= ಮುರರಾಕ್ಷಸನಿಗೆ ಶತ್ರುವೇ; ಅರ=ಪಾಪಗಳಿಗೆ; ರಿಪೋ=ನಾಶಕನೇ; ಸ್ತುತಿರಪಿ=ಸ್ತೋತ್ರವೂ; ಉದಾರ=ಉತ್ತಮವಾದ; ಚರಿತ=ಚರಿತ್ರೆವುಳ್ಳವನೇ; ಆಚರಿತಾ=ಮಾಡಲ್ಪಟ್ಟಿತು.

ಹೇ ಕೃಷ್ಣ, ನೀನು ಮುರನನ್ನು ಕೊಲ್ಲುವ ಶಕ್ತಿವುಳ್ಳವ. ದೋಷದೂರ. ಇತರರು ಯಾರೂ ಶಕ್ತರೂ ಅಲ್ಲ. ದೋಷರಹಿತರೂ ಅಲ್ಲ. ಈ ರೀತಿ ಜೀವ ಈಶರಿಗೆ ವಿರುದ್ಧ ಧರ್ಮ ಇದೆ. ಹೀಗಿದ್ದರೂ ಇವೆರೆಲ್ಲರಿಗೂ ಮಾಯಾವಾದಿಗಳು ಐಕ್ಯವನ್ನು ಹೇಳುತ್ತಾರೆ. ಈಶದಾಸಭಾವವನ್ನು ಒಪ್ಪುವುದಿಲ್ಲ. ಹಾಗಾದರೆ ಪುರಾಣದಲ್ಲಿ ಬರುವ ಒಂದು ಘಟನೆಯು ಸುಳ್ಳಾ? ಇದನ್ನು ಸ್ವಯಂ ವ್ಯಾಸರೇ ಹೇಳಿದ್ದು –ಋಷಿಗಳು ಯಾಗ ಮಾಡುತ್ತಿದ್ದರು. ಆಗ ದೈತ್ಯರು ಅವರನ್ನು ಪೀಡಿಸುತ್ತಿದ್ದರು. ಋಷಿಗಳು ದೇವತೆಗಳಿಗೆ ಮೊರೆ ಹೋದರು. ಅಸುರರು ಅವರನ್ನು ಪೀಡಿಸಿದರು. ದಿಕ್ಕು ತೋಚದ ದೇವತೆಗಳು ನಿನ್ನ ಬಳಿ ಬಂದು ರಕ್ಷಣೆಗಾಗಿ ಪ್ರಾರ್ಥಿಸಿದರು. ಪುರುಷಸೂಕ್ತದಿಂದ ಚೆನ್ನಾಗಿ ಹೊಗಳಿದರು. ದೇವತೆಗಳ ಸ್ತುತಿಗೆ ನೀನು ಯೋಗ್ಯನಾಗಿಯೇ ಇದ್ದಿ ಎಂದು. ಈ ರೀತಿ ಗಮ್ಯಗಂತೃಭಾವ,

ರಕ್ಷ್ಯರಕ್ಷಕಭಾವ, ಸ್ತೋತೃಸ್ತುತ್ಯಭಾವ ಎಂಬ ವಿರುದ್ಧಧರ್ಮಗಳಿವೆ, ಆದ್ದರಿಂದ ಭೇದ ಇಲ್ಲ ಎಂದು ಹೇಳುವುದು ಎಷ್ಟು ಸಮಂಜಸ?

**ಸಂದೇಶ** : ದೇವರ ಸಾಕ್ಷಾತ್ಕಾರಕ್ಕೆ ಅನೇಕ ರೀತಿಯ ತಿಳುವಳಿಕೆ ಅಗತ್ಯ. ಅದರಲ್ಲಿ ಪಂಚಭೇದಜ್ಞಾನವೂ ಒಂದು. ಅದರಲ್ಲಿ ಜೀವೇಶಭೇದಜ್ಞಾನ ಒಂದು ಅವಾಂತರಭೇದ.

**ಅಮಿತೋರುವಿಕ್ರಮ ತವಾಮತವಾಕ್**
**ಅಭಿಧಾಂ ವದನ್ ಖರಮತೇ ರಮತೇ ।**
**ಕ್ವ ವಿರುದ್ಧಧರ್ಮಜಲಧೀಜಲಧೀ-**
**ಕಲಿತಾಭಿದಾ ಕ್ವ ನಿಜಯೋನಿಜಯೋಃ ॥ ೩೪ ॥**

ಅಮಿತ=ಬಹಳವಾದ; ಉರು=ಉತ್ತಮವಾದ; ವಿಕ್ರಮ=ಶಕ್ತಿಯುಳ್ಳ; ತವ=ನಿನಗೆ; ಅಮತ=ಒಪ್ಪಿಗೆ ಇಲ್ಲದ; ವಾಕ್=ಮಾತುಳ್ಳ; ಅಭಿದಾಂ=ಐಕ್ಯವನ್ನು; ವದನ್=ಹೇಳುವ; ಖರ=ಕತ್ತೆಯ; ಮತೇ=ವಿಚಾರದಲ್ಲಿ; ರಮತೇ=ಪವಡಿಸುತ್ತಾನೆ; ಕ್ವ=ಎಲ್ಲಿ; ವಿರುದ್ಧ= ವಿರುದ್ಧವಾದ; ಧರ್ಮ=ಗುಣಗಳಿಂದ; ಜಲಧೀ=ಸಮುದ್ರದಂತೆ ಇರುವ; ಜಲ=ಮೂರ್ಖರ; ಧೀಃ=ಬುದ್ಧಿವುಳ್ಳ; ಕಲಿತಾ=ಹೇಳಲ್ಪಟ್ಟ; ಅಭಿದಾ=ಐಕ್ಯವು; ಕ್ವ=ಎಲ್ಲಿ; ನಿಜ=ಸಹಜ; ಯೋನಿಜಯೋಃ=ಹುಟ್ಟಿದವನಿಗೆ.

ಕೃಷ್ಣ, ನೀನು ಅನಂತವಾದ ಶ್ರೇಷ್ಠವಾದ, ನಿತ್ಯವಾದ ಮಹಿಮೆ ಉಳ್ಳವನು. ಜೀವನು ಸಾಂತವಾದ ಕನಿಷ್ಠವಾದ ಅನಿತ್ಯವಾದ ಮಹಿಮೆ ಉಳ್ಳವನು. ನೀನು ಪೂರ್ಣ, ಉಪಜೀವ್ಯ, ಮುಕ್ತ. ಜೀವನು ಅಪೂರ್ಣ, ಉಪಜೀವಕ, ಬದ್ಧ. ಹೀಗೆ ಬಹಳವಾದ ವಿರುದ್ಧ ಧರ್ಮಗಳಿಂದ ನೀವಿಬ್ಬರು ಸಮುದ್ರದಂತೆ ಇರುವವರು. ಇಂತಹ ನಿಮಗೆ ಐಕ್ಯವನ್ನು ಮಾಯಾವಾದಿಗಳು ಹೇಳುತ್ತಾರೆ. ಇದು ಶಾಸ್ತ್ರಸಮ್ಮತವಲ್ಲ. ಆದ್ದರಿಂದಲೇ ಇವರೆಲ್ಲಾ ಕತ್ತೆಬುದ್ಧಿಯವರು. ದೇವರು ನಿಜ. ಅಂದರೆ ಸಹಜವಾಗಿ ಇರುವವನು. ಜೀವನು ಯೋನಿಜ. ಹುಟ್ಟುವವನು. ಪರಸ್ಪರ ವಿರುದ್ಧಧರ್ಮ ಉಳ್ಳ ಜೀವ ಈಶರೆಲ್ಲಿ. ಇವರಿಬ್ಬರಿಗೆ ಅಭೇದವನ್ನು ಹೇಳುವ ಮಾತೆಲ್ಲಿ? ಸಮಾನವಾದ ಧರ್ಮವುಳ್ಳವರಿಗೇ ಐಕ್ಯ ಇಲ್ಲ. ವಿರುದ್ಧಧರ್ಮವುಳ್ಳವರಿಗೆ ಐಕ್ಯ ಇಲ್ಲ ಎಂದು ಏನು ಹೇಳತಕ್ಕದ್ದು. ಆದರೂ ಐಕ್ಯವನ್ನು ಹೇಳುತ್ತಾರೆ ಅಂದರೆ ಅವರು ಮೂರ್ಖರೇ ಸರಿ.

**ಸಂದೇಶ** : ಜೀವ ಈಶರಿಗೆ ಭೇದ ಇದೆ ಎಂದು ತಿಳಿದರೆ ಮಾತ್ರ ಸಾಲದು. ಐಕ್ಯ ಇಲ್ಲ ಎಂದೂ ತಿಳಿಯಬೇಕು. ಇಷ್ಟೇ ಸಾಲದು –ಐಕ್ಯವಾದಿಗಳನ್ನು ಖಂಡಿಸಲೂ ಬೇಕು.

**ಸ್ಮೃತಿಭಾರತಾವ್ರಣಪುರಾಣಪುರಾ-**
**ತನವೇದಶಾಸ್ತ್ರವಿಭವಂ ವಿಭವಮ್ ।**

**ಪರಮಂ ಚ ಮಾನಸಮಯ್ಯೈಃ ಸಮಯ್ಯೈಃ**
**ಅನೃತಂ ವದನ್ನ ಸುಸಭಾಸುಸಭಾಃ** ॥ ೩೫ ॥

ಸ್ಮೃತಿ=ಸ್ಮೃತಿಗಳು; ಭಾರತ=ಮಹಾಭಾರತವು; ಅವ್ರಣ=ದೋಷ ಇಲ್ಲದ; ಪುರಾಣ=೧೮ ಪುರಾಣಗಳು; ಪುರಾತನ=ಅಪೌರುಷೇಯವಾದ; ವೇದ=ವೇದಗಳು; ಶಾಸ್ತ್ರ=ಸೂತ್ರಗಳು ಇವುಗಳ; ವಿಭವಂ=ಸಂಪತ್ತಾದ; ವಿಭವಂ=ಸಂಸಾರದಿಂದ ರಹಿತನಾದ; ಪರಮಂ=ಉತ್ತಮನಾದ ದೇವರನ್ನು; ಮಾನಸಮಯ್ಯೈಃ= ಸ್ವಕಪೋಲಕಲ್ಪಿತವಾದ; ಸಮಯ್ಯೈಃ=ಗ್ರಂಥಗಳಿಂದ; ಅನೃತಂ=ಸುಳ್ಳನ್ನಾಗಿ; ವದನ್=ಹೇಳುತ್ತಾ; ನ=ಇಲ್ಲ; ಸುಸಭಾಸು=ಒಳ್ಳೆಯ ಸಭೆಗಳಲ್ಲಿ; ಸಭಾಃ=ಗೆಲುವಿನಿಂದ ಕೂಡಿದವನು.

ವ್ಯಾಸರಿಂದ ರಚಿತವಾದ ಎಲ್ಲಾ ಗ್ರಂಥಗಳು ಹಾಗೂ ತದನುಸಾರಿಯಾದ ಇತರರ ಗ್ರಂಥಗಳು ವೇದಗಳು ಎಲ್ಲವೂ ದೇವರ ವೈಭವವನ್ನು ಕೊಂಡಾಡುತ್ತವೆ. ಈ ಗ್ರಂಥಗಳಿಗೆ ಗೌರವ ಬಂದದ್ದೇ ಭಿನ್ನನಾದ ಅನಂತಗುಣಗಳಿಂದ ಕೂಡಿದ ದೇವರನ್ನು ಹೇಳುವುದರಿಂದ. ಇಂತಹ ದೇವರು ಈ ಶಾಸ್ತ್ರಗಳ ದೊಡ್ಡ ಸಂಪತ್ತು. ಈ ದೇವರನ್ನು ಸುಳ್ಳು ಎಂದು ಮಾಯಾವಾದಿಗಳು ತಮ್ಮ ಗ್ರಂಥದಲ್ಲಿ ಹೇಳಿದರು. ಈ ಗ್ರಂಥಗಳು ಸ್ವಕಪೋಲಕಲ್ಪಿತಗಳು. ಇವುಗಳಿಗೆ ಯಾವ ಆಧಾರವೂ ಇಲ್ಲ. ಈ ಗ್ರಂಥಗಳನ್ನು ಹಿಡಿದುಕೊಂಡು ಅದ್ವೈತಿಗಳು ವಿವೇಕಿಗಳ ಸಭೆಯಲ್ಲಿ ವಾದ ಮಾಡಿದರೆ ತಾವು ನಗೆಪಾಟಲಿಗೆ ಗುರಿಯಾಗುತ್ತಾರೆ.

**ಸಂದೇಶ** : ದೇವರ ವಿಷಯದಲ್ಲಿ ಶಾಸ್ತ್ರದ ಬೆಂಬಲ ಇಲ್ಲದ ಊಹೆಯು ಪ್ರಯೋಜನಕ್ಕೆ ಬಾರದು.

**ಫಣಿರಾಜಗರ್ವಶಮನಃ ಶಮನಃ**
**ಕ್ಷಯಕಾರಕಃ ಸ ಕುರುತಾತ್ ಕುರುತಾತ್ ।**
**ಚಕಿತಾತ್ಮನಾಮಿಹ ವನೇ ಹವನೇ**
**ವಿನುತಃ ಕೃಪಾವಸುಹೃದಾಂ ಸುಹೃದಾಮ್** ॥ ೩೬ ॥

ಫಣಿ=ಹಾವುಗಳಿಗೆ ರಾಜ=ಒಡೆಯನಾದ ಕಾಳಿಂಗನ; ಗರ್ವ=ಅಹಂಕಾರವನ್ನು; ಶಮನಃ=ಪರಿಹರಿಸಿದ; ಶಂ=ಸುಖವನ್ನು; ಅನಃ=ಬಂಡಿಯ; ಕ್ಷಯ=ನಾಶವನ್ನು; ಕಾರಕಃ=ಮಾಡಿದ; ಸ=ಆ ಕೃಷ್ಣನು; ಕುರುತಾತ್=ಮಾಡಲಿ; ಕು=ಕೆಟ್ಟ; ರುತಾತ್=ಶಬ್ದದಿಂದ; ಚಕಿತ=ಭಯಗೊಂಡ; ಆತ್ಮನಾಂ=ಮನಸ್ಸುಳ್ಳ; ಇಹ=ಇಲ್ಲಿ; ವನೇ=ಕಾಡಲ್ಲಿ; ಹವನೇ=ಯಾಗದಲ್ಲಿ; ವಿನುತಃ=ಹೊಗಳಲ್ಪಟ್ಟ; ಕೃಪಾ=ದಯೆಯೆಂಬ; ವಸು=ಸಂಪತ್ತಿನಲ್ಲಿ; ಹೃದಾಂ=ಮನಸ್ಸುಳ್ಳ; ಸುಹೃದಾಂ=ಬಂಧುಗಳ.

ಕಾಳೀಯನು, ಶಕಟನು ಇವರೆಲ್ಲಾ ನಮಗೆ ಬಹಳ ದುಃಖ ಕೊಟ್ಟವರು. ಅವರನ್ನು ನೀನು ದಮನಿಸಿದ್ದಿ. ಹಾಗೆಯೇ ಕಾಡಿನಲ್ಲಿ ಕ್ರೂರಪ್ರಾಣಿಗಳು ಘರ್ಜಿಸುವಾಗ ನಾವು

ಭಯಗೊಂಡಿದ್ದೆವು. ಆಗಲೂ ನೀನೇ ರಕ್ಷಿಸಿದವ. ಋಷಿಗಳು ನಿನ್ನನ್ನು ಯಜ್ಞದಲ್ಲಿ ಚೆನ್ನಾಗಿ ಸ್ತುತಿಸುತ್ತಾರೆ. ಆಗ ಅವರನ್ನು ರಕ್ಷಿಸುತ್ತಿ. ಹಾಗೆಯೇ ನಾವೂ ಹೊಗಳುತ್ತಿರಬೇಕಾದರೆ ಯಾಕೆ ಬರುತ್ತಿಲ್ಲ. ನಮ್ಮನ್ನು ಈಗ ಕಾಮನು ಬಹಳ ಪೀಡಿಸುತ್ತಾನೆ. ಭುಜಬಲವೋ, ಮನೋಬಲವೋ; ಆತ್ಮಬಲವೋ, ಜಯಬಲವೋ ಯಾವುದಿದ್ದರೂ ಯಾರಿಗೂ ಭಯಪಡಬೇಕಾಗಿಲ್ಲ. ನಮಗಿರುವುದು ಈಗ ನಿನ್ನ ಕೃಪಾಬಲ ಮಾತ್ರ, ಈ ಬಲವುಳ್ಳ ನಮ್ಮನ್ನು ಸಂತೋಷಗೊಳಿಸು.

<u>**ಸಂದೇಶ**</u> : ದೇವರು ಕಾಣಿಸಿಕೊಳ್ಳಬೇಕಾದರೆ ಆತನ ಚರಿತ್ರೆಗಳನ್ನು ಚೆನ್ನಾಗಿ ಮೆಲುಕು ಹಾಕಬೇಕು.

**ಮುಖಸಾರಸಂ ಚ ಸುರಸಂ ಸುರಸಂ–**
**ಸ್ತುತಚಾರುಭಾವಯುಗಲಂ ಯುಗಲಮ್ ।**
**ನಯನಾಬ್ಜಯೋರಜ ಮನೋಜಮನೋ**
**ಜಯಿ ಸುಸ್ಮಿತಂ ಹೃದಯತೇಽದಯ ತೇ** ॥ ೩೭ ॥

ಮುಖ=ಮುಖವೆಂಬ; ಸಾರಸಂ=ಕಮಲವನ್ನು; ಚ=ಮತ್ತು; ಸುರಸಂ=ಲಾವಣ್ಯದಿಂದ ಕೂಡಿದ; ಸುರ=ದೇವತೆಗಳಿಂದ; ಸಂಸ್ತುತ=ಹೊಗಳಲ್ಪಟ್ಟ; ಚಾರು=ಒಳ್ಳೆಯ; ಭಾವ= ಚಂದದಿಂದ; ಯುಕ್=ಕೂಡಿದ; ಅಲಂ=ಚೆನ್ನಾಗಿ; ಯುಗಲಂ=ಎರಡು; ನಯನ= ಕಣ್ಣುಗಳೆಂಬ; ಅಬ್ಜಯೋಃ=ಕಮಲಗಳ; ಅಜ=ಹುಟ್ಟು ರಹಿತನೇ; ಮನೋಜ=ಕಾಮನ; ಮನಃ=ಮನಸ್ಸನ್ನು; ಜಯಿ=ಗೆದ್ದಿರುವ; ಸುಸ್ಮಿತಂ=ನಗುವನ್ನು; ಹೃತ್=ಮನಸ್ಸು; ಅಯತೇ=ಎಣಿಸುತ್ತದೆ; ಅದಯ=ಕರುಣೆ ಇಲ್ಲದವನೇ; ತೇ=ನಿನ್ನ.

ಕೃಷ್ಣ, ನಿನ್ನ ಮುಖವೋ, ಕಣ್ಣೋ, ನಗುವೋ ಒಂದೊಂದೂ ಬಹಳ ಮೋಹಕ ವಾದದ್ದು. ದೇವತೆಗಳು ಇವುಗಳ ಚಂದವನ್ನು ಬಾಯ್ತುಂಬಾ ಹೊಗಳುತ್ತಾರೆ. ಕಾಮನಂತೂ ಇನ್ನೊಬ್ಬರನ್ನು ಸೋಲಿಸುವವ. ಇಲ್ಲಿ ಮಾತ್ರ ತಾನೇ ಸೋತನು. ಈ ರೀತಿ ನಿನ್ನ ಪ್ರತಿಯೊಂದು ಅವಯವವೂ ಸಹಜವಾಗಿ ಚಂದ. ಈ ಸೌಂದರ್ಯ ವಂಶಪಾರಂಪರ್ಯ ಅಲ್ಲ. ಯಾಕೆಂದರೆ ನಿನಗೆ ಹುಟ್ಟೇ ಇಲ್ಲ ತಾನೆ. ಇಂತಹ ನಿನ್ನನ್ನು ನಮ್ಮ ಮನಸ್ಸು ಸದಾ ಸ್ಮರಿಸುತ್ತಿದೆ. ಆದರೂ ನೀನು ಬರುತ್ತಿಲ್ಲ. ನೀನು ಬಹಳ ನಿಷ್ಕರುಣಿ ಇರಬೇಕು.

<u>**ಸಂದೇಶ**</u> : ದೇವರನ್ನು ನಿಂದಾಸ್ತುತಿಯಿಂದಲೂ ಹೊಗಳಬೇಕು.

**ಗೋಪೀನಾಂ ಪರಿತಾಪಮಿತ್ಯುಡುಪತಿಃ ಕೃಷ್ಣಾಯ ಶಂಸನ್ನಿವ**
**ಪ್ರಾಪಾಬ್ಧ್ಯಂತಿಕಮಚ್ಯುತೇಂದುರುದಿತಸ್ತತ್ಪುಣ್ಯಪುಂಜಾಚಲಾತ್ ।**
**ವಕ್ಷೋಜಾಖ್ಯಗಿರಿಂ ಕರೈಃ ಪರಿಮೃಜನ್ ನೇತ್ರೋತ್ಪಲಂ ಹರ್ಷಯನ್**
**ಹೃದ್ವ್ಯೋಮಾಪ್ಯನುರಂಜಯನ್ ವಿರಚಯನ್ ವೃದ್ಧಿಂ ಪ್ರಮೋದಾಂಬುಧೇಃ** ॥ ೩೮ ॥

ಗೋಪೀನಾಂ=ಗೋಪಿಯರ; ಪರಿತಾಪಂ=ದುಃಖವನ್ನು; ಇತಿ=ಈರೀತಿಯಾದ; ಉಡು=ನಕ್ಷತ್ರಗಳಿಗೆ; ಪತಿಃ=ಒಡೆಯನಾದ ಚಂದ್ರನು; ಕೃಷ್ಣಾಯ=ಕೃಷ್ಣನಿಗೆ; ಶಂಸನ್ನಿವ=ಹೇಳುವವನಂತೆ; ಪ್ರಾಪ=ಹೊಂದಿದನು; ಅಬ್ಧಿ=ಸಮುದ್ರದ; ಅಂತಿಕಂ=ಸಮೀಪವನ್ನು; ಅಚ್ಯುತ=ಕೃಷ್ಣನೆಂಬ; ಇಂದುಃ=ಚಂದ್ರನು; ಉದಿತಃ=ಉದಿಸಿದನು; ತತ್=ಗೋಪಿಯರ; ಪುಣ್ಯ=ಪುಣ್ಯಗಳ; ಪುಂಜ=ಸಮೂಹವೆಂಬ; ಅಚಲಾತ್=ಬೆಟ್ಟದಿಂದ; ವಕ್ಷೋಜ=ಎದೆಯಲ್ಲಿ ಹುಟ್ಟಿದ, ಸ್ತನವೆಂಬ; ಗಿರಿಂ=ಬೆಟ್ಟವನ್ನು; ಕರೈಃ=ಕೈಗಳಿಂದ; ಪರಿಮೃಜನ್=ಮುಟ್ಟುತ್ತಾ; ನೇತ್ರ=ಕಣ್ಣುಗಳೆಂಬ; ಉತ್ಪಲಂ=ನೈದಿಲೆ ಯನ್ನು; ಹರ್ಷಯನ್=ಸಂತೋಷಗೊಳಿಸುತ್ತಾ; ಹೃತ್=ಮನವೆಂಬ; ವ್ಯೋಮ ಅಪಿ=ಆಕಾಶವನ್ನು; ಅನುರಂಜಯನ್=ಬೆಳಗಿಸುತ್ತಾ; ವಿರಚಯನ್=ಮಾಡುತ್ತಾ; ವೃದ್ಧಿಂ=ಅಭಿವೃದ್ಧಿಯನ್ನು; ಪ್ರಮೋದ=ನೆಮ್ಮದಿ ಎಂಬ; ಅಂಬುಧೇಃ=ಸಮುದ್ರದ.

ಈ ರೀತಿಯಾಗಿ ಗೋಪಿಯರು ಬಹಳವಾಗಿ ತಪಿಸಿದರು. ಇವರ ಈ ದುಃಖವನ್ನು ರಾತ್ರಿ ಇಡೀ ಕೇಳಿಸಿಕೊಂಡ ಚಂದ್ರನು ಕೃಷ್ಣನಿಗೆ ತಿಳಿಸಲು ಆತನ ಮನೆಗೋ ಎಂಬಂತೆ ಪಶ್ಚಿಮ ಸಮುದ್ರದಲ್ಲಿ ಇಳಿದನು. ಅಂದರೆ ಚಂದ್ರ ಅಸ್ತದ ಸಮಯವಾಯಿತು. ಬೆಳಗಾಗುತ್ತಾ ಬಂತು. ದೇವರು ಸಮುದ್ರಶಾಯಿ ತಾನೆ. ಚಂದ್ರನಿಗೆ ಕೃಷ್ಣನ ಪರಿಚಯ ಚೆನ್ನಾಗಿ ಇದೆ. ಅವನ ವಂಶದಲ್ಲಿ ಕೃಷ್ಣನು ಹುಟ್ಟಿದ್ದರಿಂದ. ಈಚೆ ಕೃಷ್ಣನೆಂಬ ಚಂದ್ರನು ಉದಿಸಿದನು. ಚಂದ್ರನು ಉದಿಸುವಾಗ ಬೆಟ್ಟಗಳ ಮೇಲೆ ತನ್ನ ಕಿರಣಗಳನ್ನು ಚೆಲ್ಲುತ್ತಾನೆ. ನೈದಿಲೆಗಳನ್ನು ಅರಳಿಸುತ್ತಾನೆ. ಆಕಾಶವನ್ನು ಬೆಳಗಿಸುತ್ತಾನೆ. ಸಮುದ್ರವನ್ನು ಉಕ್ಕಿಸುತ್ತಾನೆ. ಕೃಷ್ಣನು ತಾನು ಕಾಣಿಸಿಕೊಂಡವನು ಗೋಪಿಯರ ಎದೆಯಲ್ಲಿ ಪರ್ವತದಂತಿರುವ ಸ್ತನಗಳಲ್ಲಿ ತನ್ನ ಕೈಗಳನ್ನು ಹರಡುತ್ತಾನೆ. ನೈದಿಲೆಯಂತಿರುವ ಕಣ್ಣುಗಳನ್ನು ಅರಳಿಸುತ್ತಾನೆ. ಆಕಾಶದಂತೆ ಸ್ವಚ್ಛವಾದ ಗೋಪಿಯರ ಮನಸ್ಸನ್ನು ಬೆಳಗಿಸುತ್ತಾನೆ. ಆಗ ಗೋಪಿಯರು ಆನಂದದಿಂದ ಸಮುದ್ರದಂತೆ ಉಕ್ಕುತ್ತಾರೆ. ಈ ರೀತಿ ಕೃಷ್ಣನಿಗೆ ಚಂದ್ರನ ಹೋಲಿಕೆ. ಕೃಷ್ಣಪಕ್ಷದಲ್ಲಿ ದಿನೇ ದಿನೇ ಕ್ಷೀಣಿಸುವ ಚಂದ್ರನು ಪಶ್ಚಿಮದಲ್ಲಿ ಅಸ್ತಮಿಸಿದನು. ಇತ್ತ ಕೃಷ್ಣನೆಂಬ ಚಂದ್ರನು ಎಂದೂ ಚ್ಯುತಿ ಇಲ್ಲದವನು, ಗೋಪಿಯರ ಪುಣ್ಯಗಳೆಂಬ ಬೆಟ್ಟದಿಂದ ಉದಿಸಿದನು. ಕೃಷ್ಣನು ಕಾಣಿಸಿಕೊಳ್ಳಬೇಕಾದರೆ ಬೆಟ್ಟದಂತಹ ಪುಣ್ಯ ಬೇಕು.

<u>**ಸಂದೇಶ**</u> : ಅಜ್ಞಾನವೆಂಬ ಕತ್ತಲಲ್ಲಿ ಇರುವ ನಾವು ದೇವರ ಹುಡುಕಾಟವನ್ನು ಆರಂಭಿಸಬೇಕು. ಕ್ರಮೇಣ ಜ್ಞಾನವೆಂಬ ಬೆಳಕು ಹರಿಯಲು ಆರಂಭಿಸಿದಾಗ ದೇವರು ಕಾಣಿಸಿಕೊಳ್ಳುತ್ತಾನೆ.

**ಕಾಚಿತ್ ಮುಕುಂದಮುಖಸಾರಸಸೌರಭಾಢ್ಯಂ**
**ತಾಂಬೂಲಚರ್ವಿತಮಭಕ್ಷಯದಂಬುಜಾಕ್ಷೀ ।**
**ಅಂತರ್ನಿಲೀನಮದನಾಯುಧಜಾತಘಾತ**
**ಶಾಂತಿಂ ವಿಧಾತುಮಿವ ಸಂಚಿತಪುಣ್ಯಶೇಷಾ** ॥ ೩೯ ॥

ಕಾಚಿತ್=ಒಬ್ಬಳು; ಮುಕುಂದ=ದೇವರ; ಮುಖ=ವದನವೆಂಬ; ಸಾರಸ=ಕಮಲದ; ಸೌರಭ=ಪರಿಮಳದಿಂದ; ಆಢ್ಯಂ=ಕೂಡಿದ; ತಾಂಬೂಲ=ಎಲೆ ಅಡಿಕೆಯ; ಚರ್ವಿತಂ= ರಸವನ್ನು; ಅಭಕ್ಷಯತ್=ನುಂಗಿದಳು; ಅಂಬುಜ=ಕಮಲದಂತೆ; ಅಕ್ಷೀ=ಕಣ್ಣುಳ್ಳವಳು; ಅಂತಃ=ಒಳಗೆ; ನಿಲೀನ=ಇರುವ; ಮದನ=ಕಾಮನ; ಆಯುಧ=ಬಾಣಗಳಿಂದ; ಜಾತ=ಉಂಟಾದ; ಘಾತ=ಗಾಯದ; ಶಾಂತಿಂ=ಪರಿಹಾರ ವನ್ನು; ವಿಧಾತುಂ=ಮಾಡಲು; ಇವ=ಎಂಬಂತೆ; ಸಂಚಿತ=ಕೂಡಿದ; ಪುಣ್ಯ=ಪುಣ್ಯದ; ಶೇಷಾ=ಸ್ವಲ್ಪ ಉಳ್ಳ.

ಕೃಷ್ಣನ ದರ್ಶನವಾಗಿದೆ. ಇದರಿಂದಾಗಿ ಪುಣ್ಯಸಂಗ್ರಹ ಬಹಳವಾಗಿದೆ ಎಂದರ್ಥ. ಆನಂದವೂ ಬಹಳವಾಗಿದೆ. ಆ ಆನಂದವು ಕಣ್ಣುಗಳಿಂದ ಹೊರಗೆ ಬರುವಂತಿದೆ. ಆದ್ದರಿಂದಲೇ ದೊಡ್ಡ ಕಣ್ಣುಗಳಿಂದ ಒಬ್ಬಳು ಕೃಷ್ಣನನ್ನು ನೋಡುತ್ತಿದ್ದಾಳೆ. ಅವಳಲ್ಲಿ ಇನ್ನೂ ಸ್ವಲ್ಪ ಪುಣ್ಯ ಇದೆ. ಆದ್ದರಿಂದ ಅವಳಿಗೆ ಕೃಷ್ಣನು ತಿಂದ ತಾಂಬೂಲದ ಎಂಜಲು ಸಿಕ್ಕಿತು. ಆ ತಾಂಬೂಲದಲ್ಲಿ ಪಚ್ಚೆಕರ್ಪೂರಾದಿಗಳು ಮಾತ್ರವಲ್ಲ. ಕೃಷ್ಣನ ಮುಖವೆಂಬ ಕಮಲದ ಪರಿಮಳವೂ ಸೇರಿದೆ. ಆ ಎಂಜಲನ್ನು ಈಕೆ ನುಂಗಿದಳು. ನುಂಗಲು ಕಾರಣವನ್ನು ರಾಜರು ಉತ್ಪ್ರೇಕ್ಷಿಸುತ್ತಾರೆ –ಸಾಮಾನ್ಯವಾಗಿ ಲೋಕದಲ್ಲಿ ಈ ರೂಢಿ ಇದೆ. ಆಯುಧದಿಂದ ಗಾಯ ಆದಾಗ ಅದರ ಉರಿ ಕಡಿಮೆ ಆಗಲು ತಾಂಬೂಲದ ಎಂಜಲನ್ನು ಆ ಗಾಯದ ಮೇಲೆ ಉಗುಳುವುದು. ಈಕೆಗೆ ಕಾಮನ ಬಾಣಗಳಿಂದ ಮನಸ್ಸಿಗೆ ತುಂಬಾ ಗಾಯವಾಗಿ ಉರಿಯುತ್ತಿತ್ತು. ಆ ಉರಿ ಕಡಿಮೆ ಆಗಲು ಈಕೆ ತಾಂಬೂಲವನ್ನು ನುಂಗಿದಳು ಎಂದು. ಕೃಷ್ಣನ ತಾಂಬೂಲಚರ್ವಣಕ್ಕೆ ಇಷ್ಟು ಶಕ್ತಿ ಇರುವುದಾದರೆ ಕೃಷ್ಣನಿಗೆ ಎಂತಹ ಶಕ್ತಿ ಇರಲಿಕ್ಕಿಲ್ಲ.

<u>**ಸಂದೇಶ**</u> : ದೇವರ ನೈವೇದ್ಯದ ಸೇವನೆಯಿಂದ ವಿಷಯಪದಾರ್ಥಗಳ ಆಸಕ್ತಿಯು ಕಡಿಮೆ ಆಗುತ್ತದೆ. ಯಾವುದೇ ರೀತಿಯ ಕಾಯಿಲೆಗಳಿಗೂ ಅವಕಾಶ ಇರುವುದಿಲ್ಲ.

**ಅನ್ಯಾ ತದಂಸಪರಿಲಂಬಿತಪಾಣಿಪದ್ಮಾ**
**ಧನ್ಯಾ ಸ್ಫುರನ್ಮಕರಕುಂಡಲಶೋಭಿಗಂಡಮ್ ।**
**ಪ್ರೇಷ್ಠಾಂತರಾಂಕುರಿತರಾಸವಿಲಾಸತೃಷ್ಣಾ–**
**ಪುಷ್ಟಿಪ್ರದೇವ ಮೃದುಹೃಷ್ಟಮುಖೀ ಚುಚುಂಬೇ ॥ ೪೦ ॥**

ಅನ್ಯಾ=ಇನ್ನೊಬ್ಬಳು; ತತ್=ಕೃಷ್ಣನ; ಅಂಸ=ಹೆಗಲಲ್ಲಿ; ಪರಿಲಂಬಿತ=ಇಟ್ಟಿರುವ; ಪಾಣಿ=ಕೈಗಳೆಂಬ; ಪದ್ಮಾ=ಕಮಲವುಳ್ಳ; ಧನ್ಯಾ=ಕೃತಾರ್ಥಳಾದ; ಸ್ಫುರತ್=ಶೋಭಿಸುವ; ಮಕರಕುಂಡಲ=ಕರ್ಣಾಭರಣದಿಂದ; ಶೋಭಿ=ಶೋಭಿಸುವ; ಗಂಡಂ=ಕಪೋಲವುಳ್ಳ; ಪ್ರೇಷ್ಠ=ಪ್ರಿಯನ; ಅಂತರ=ಮನಸ್ಸಿನಲ್ಲಿ; ಅಂಕುರಿತ=ಚಿಗುರಿದ; ರಾಸ=ರಸವತ್ತಾದ; ವಿಲಾಸ=ಕ್ರೀಡೆಯ; ತೃಷ್ಣಾ=ಆಸೆಗೆ; ಪುಷ್ಟಿ=ಪೋಷಣೆಯನ್ನು; ಪ್ರದಾ ಇವ=ಕೊಡುವಂತೆ;

ಮೃದು=ನಿಧಾನವಾಗಿ; ಹೃಷ್ಟ=ಸಂತೋಷಗೊಂಡ; ಮುಖೀ=ಮುಖವುಳ್ಳವಳಾಗಿ; ಚುಚುಂಬೇ=ಮುದ್ದಿಸಿದಳು.

ಇನ್ನೊಬ್ಬಳು ಕೃಷ್ಣನ ಭುಜಗಳ ಮೇಲೆ ತನ್ನ ಎರಡು ಕೈಗಳನ್ನಿಟ್ಟಳು. ಆತನ ಎದುರಿಗೆ ನಿಂತು ಆತನ ಕಪೋಲವನ್ನು ಮೆಲ್ಲಗೆ ಚುಂಬಿಸಿದಳು. ಕಿವಿಗಳಲ್ಲಿ ಇರುವ ಆಭರಣಗಳಿಂದ ಕಪೋಲಗಳು ಆಕರ್ಷಣೀಯಗಳಾಗಿದ್ದವು. ತಾನು ಈ ರೀತಿ ಮಾಡಿ ಕೃಷ್ಣನ ಮನಸ್ಸಿನಲ್ಲಿ ಇರುವ ಕಾಮನನ್ನು ಎಬ್ಬಿಸಿ ಆತನೂ ತನಗೆ ಇದೇ ರೀತಿ ಮಾಡಬೇಕು ಎಂಬ ಬುದ್ಧಿಯನ್ನು ಆತನಿಗೆ ಉಂಟುಮಾಡುವವಳಂತೆ ತಾನು ಆತನ ಜೊತೆ ವಿಹರಿಸಿದಳು. ಇದನ್ನೇ ರಾಸಲೀಲೆ ಎಂದು ಕರೆಯುವುದು –ಸ್ತ್ರೀಪುರುಷರು ಪರಸ್ಪರ ಹೆಗಲಿಗೆ ಕೈಹಾಕಿ ಎದುರುಬದುರಾಗಿ ನಿಂತು ಆಲಿಂಗನಾದಿಗಳಲ್ಲಿ ತೊಡಗುವುದು. ಈಕೆ ಕೃಷ್ಣನ ಜೊತೆ ಈ ರೀತಿ ವ್ಯವಹರಿಸಬೇಕಾದರೆ ನಿಜವಾಗಿಯೂ ಬಹಳ ಪುಣ್ಯವಂತೆಯೇ ಆಗಿರಬೇಕು.

**ಸಂದೇಶ** : ದೇವರಿಗೆ ನಮ್ಮಲ್ಲಿ ಪ್ರೀತಿ ಉಂಟಾಗಬೇಕಾದರೆ ನಾವು ಮೊದಲು ದೇವರನ್ನು ಪ್ರೀತಿಸಬೇಕು. 'ತಂ ಯಥಾ ಉಪಾಸತೇ ತಥೈವ ಭವತಿ'

**ಕಾಚಿಚ್ಚ ದಷ್ಟಮೃದುಲೋಷ್ಠಪುಟೀ ಮುಕುಂದಂ**
**ತನ್ವೀ ತತಾನ ತರಲಾತ್ಮಕಟಾಕ್ಷಲಕ್ಷ್ಯಮ್ ।**
**ಭ್ರೂಸಂಜ್ಞಯೈವ ರಮಣಂ ಪ್ರತಿ ದರ್ಶಯಂತೀ**
**ಬಿಂಬೋಷ್ಠಚುಂಬನರುಚಿಂ ರುಚಿರಾಲಕಾಸ್ಯಮ್** ॥ ೪೧ ॥

ಕಾಚಿತ್ ಚ=ಒಬ್ಬಳಾದರೂ; ದಷ್ಟ=ದಷ್ಟವಾದ; ಮೃದುಲ=ಚಂದದ; ಓಷ್ಠ ಪುಟೀ=ತುಟಿವುಳ್ಳ; ಮುಕುಂದಂ=ದೇವರನ್ನು; ತನ್ವೀ=ಗೋಪಿಯು; ತತಾನ=ಮಾಡಿದಳು; ತರಲ=ಚಂಚಲವಾದ; ಆತ್ಮ=ತನ್ನ; ಕಟಾಕ್ಷ=ಕಡೆಗಣ್ಣಿಗೆ; ಲಕ್ಷ್ಯಂ=ಗುರಿಯನ್ನಾಗಿ; ಭ್ರೂ=ಹುಬ್ಬಿನ; ಸಂಜ್ಞಯಾ ಏವ=ಸೂಚನೆಯಿಂದಲೇ; ರಮಣಂ=ಪತಿಯನ್ನು; ಪ್ರತಿ= ಕುರಿತು; ದರ್ಶಯಂತೀ=ತೋರಿಸುವವಳಾಗಿ; ಬಿಂಬ=ತೊಂಡೆಯಂತಿರುವ; ಓಷ್ಠ= ತುಟಿಯ; ಚುಂಬನ=ಮುದ್ದಿಡುವಿಕೆಯ; ರುಚಿಂ=ರುಚಿಯನ್ನು; ರುಚಿರ=ಚಂದದ; ಅಲಕ=ಮುಂಗುರುಳುಳ್ಳ; ಆಸ್ಯಂ=ಮುಖವುಳ್ಳ.

ಇನ್ನೊಬ್ಬಳು ಸ್ವಲ್ಪ ದಪ್ಪವಾಗಿದ್ದಳು. ಆಕೆಯ ತುಟಿಗಳೂ ದಪ್ಪವಾಗಿ ಚಂದವಾಗಿ ಕಾಣುತ್ತಿತ್ತು. ಕೃಷ್ಣನ ಸೌಂದರ್ಯ ಪ್ರಸಿದ್ಧ ತಾನೆ. ಇನ್ನು ಮುಖದ ಮೇಲೆ ಮುಂಗುರುಳು ಬಂದಾಗ ಸೌಂದರ್ಯ ಇಮ್ಮಡಿಯಾಗಿತ್ತು. ಈಕೆಗೆ ಕೃಷ್ಣನ ತುಟಿಯನ್ನು ಚುಂಬಿಸಬೇಕೆಂದು ಬಹಳ ಆಸೆ. ಹೇಳಲು ನಾಚಿಕೆ. ಅದಕ್ಕಾಗಿ ಕೃಷ್ಣನನ್ನು ನೋಡಿ ತನ್ನ ಹುಬ್ಬುಗಳಿಂದ ಸಂಜ್ಞೆಯನ್ನು ಕೊಡುತ್ತಾ ಇದ್ದಾಳೋ ಎಂಬಂತೆ ಆತನನ್ನು ತನ್ನ ಚಂಚಲವಾದ ಕಡೆಗಣ್ಣಿನಿಂದ ನೋಡಿ ಆತನು ತನ್ನನ್ನು ನೋಡುವಂತೆ ಮಾಡಿದಳು.

**ಸಂದೇಶ** : ಬಾಯಿ, ಮನಸ್ಸು ಮಾತ್ರವಲ್ಲದೆ ನಮ್ಮ ದೇಹದ ಪ್ರತಿಯೊಂದು ಭಾಗವೂ ದೇವರನ್ನು ನಮ್ಮಲ್ಲಿಗೆ ಕರೆಯುವ ಸ್ಥಿತಿಯಲ್ಲಿರಬೇಕು.

**ನ ಸ್ವೈರಿಣೀತಿ ನಯಕೋವಿದ ಮಯ್ಯುಪೇಕ್ಷಾ**
**ಯುಕ್ತಾ ತವೇತಿ ತಮಿವ ಪ್ರತಿಬೋಧಯಂತೀ ।**
**ಪಸ್ಪರ್ಶ ಪಾಣಿಕಮಲಂ ಸುಖಜಾಶ್ರುಧಾರಾ–**
**ಹಸ್ತೇನ ಹರ್ಷಕರಕಂಕಣ ಸುಸ್ವನೇನ** ॥ ೪೨ ॥

ನ=ಅಲ್ಲ; ಸ್ವೈರಿಣೀ=ವ್ಯಭಿಚಾರಿಣಿಯು; ಇತಿ=ಎಂದು; ನಯ=ನೀತಿಗಳಲ್ಲಿ; ಕೋವಿದ=ಜ್ಞಾನಿಯೇ; ಮಯಿ=ನನ್ನಲ್ಲಿ; ಉಪೇಕ್ಷಾ=ತಿರಸ್ಕಾರವು; ಯುಕ್ತಾ=ಯೋಗ್ಯವು; ತವ=ನಿನಗೆ; ಇತಿ=ಎಂದು; ತಂ=ಕೃಷ್ಣನನ್ನು; ಇವ=ಅಂತೆ; ಪ್ರತಿಬೋಧಯಂತೀ= ತಿಳಿಸುವವಳಾಗಿ; ಪಸ್ಪರ್ಶ=ಹಿಡಿದಳು; ಪಾಣಿಕಮಲಂ=ಕರಕಮಲವನ್ನು; ಸುಖ= ಆನಂದದಿಂದ; ಜ=ಉಂಟಾದ; ಅಶ್ರು=ಕಣ್ಣೀರಿನ; ಧಾರಾ=ಧಾರೆವುಳ್ಳ; ಹಸ್ತೇನ=ಕೈಯಿಂದ; ಹರ್ಷ=ನೆಮ್ಮದಿಯನ್ನು; ಕರ=ಉಂಟುಮಾಡುವ; ಕಂಕಣ=ಬಳೆಗಳ; ಸು=ಒಳ್ಳೆಯ; ಸ್ವನೇನ=ಧ್ವನಿವುಳ್ಳ.

ಮಗದೊಬ್ಬಳು ಗೋಪಿಯು ಕೃಷ್ಣನ ಬಳಿಗೆ ಬಂದು ಆತನ ಕೈಯನ್ನು ಹಿಡಿದಳು. ಕಣ್ಣಿನಲ್ಲಿ ತುಂಬಾ ನೀರನ್ನು ಸುರಿಸಿದಳು ಪ್ರೇಮದಿಂದ. ಓಡಿ ಬಂದು ಕೃಷ್ಣನ ಕರವನ್ನು ಹಿಡಿದಾಗ ಆಕೆಯ ಕೈಯ ಬಳೆಗಳು ಬಹಳ ಶಬ್ದ ಮಾಡುತ್ತಿದ್ದವು. ಆಕೆ ಕೃಷ್ಣನಲ್ಲಿ ಈ ರೀತಿ ಪ್ರಶ್ನಿಸಿದಳು –ಕೃಷ್ಣ, ನನ್ನನ್ನು ಯಾಕೆ ಬಿಟ್ಟು ಹೋದಿ? ನಿನ್ನಲ್ಲಿ ಯಾವ ಪ್ರಶ್ನೆಯನ್ನು ಕೇಳಿದರೂ ನಿನ್ನಲ್ಲಿ ಉತ್ತರ ಸಿದ್ಧ. ಅಷ್ಟು ತಿಳಿದವನು ನೀನು. ನಾನು ವ್ಯಭಿಚಾರಿಣಿ ಎಂದೋ? ಮನೆಯಲ್ಲಿ ಕೈಹಿಡಿದ ಪತಿಯನ್ನು ಬಿಟ್ಟು ಇಲ್ಲಿಗೆ ಬಂದಿದ್ದೇನೆ ಎಂದೋ? ನಾನು ಆತನ ಕೈಹಿಡಿಯಲೇ ಇಲ್ಲ. ನಾನು ನಿನ್ನ ಕೈಯನ್ನೇ ಪ್ರಥಮ ಬಾರಿಗೆ ಹಿಡಿಯುವುದು ಎನ್ನುವಳೋ ಎಂಬಂತೆ ಆತನ ಕೈ ಹಿಡಿದಳು. ಕೈ ಹಿಡಿಯುವಾಗ ಧಾರೆ ಎರೆಯಬೇಕಲ್ಲಾ ಅಂದರೆ ಆಕೆಯ ಕಣ್ಣಿಂದ ಹೊರಟ ನೀರೇ ಧಾರೆ ವಾದ್ಯ ಕೈಗಳಲ್ಲಿ ಹಾಕಿದ ಬಳೆಗಳ ಇಂಪಾದ ಧ್ವನಿ.

**ಸಂದೇಶ** : ನಮ್ಮ ಜೀವನದ ಅಳುವಿಕೆಯೋ ನಗುವಿಕೆಯೋ, ಅಥವಾ ನಾನಾ ರೀತಿಯ ಧ್ವನಿಗಳೋ ಎಲ್ಲವನ್ನೂ ದೇವರ ಪೂಜೆಗಾಗಿ ಎಂದು ಅನುಸಂಧಾನ ಮಾಡಬೇಕು.

**ರತ್ಯುತ್ಸವಾರ್ಹತನುಮಂದಿರಸಂಗಿತುಂಗ–**
**ವಕ್ಷೋಜಸತ್ಕಲಶಮಂಡನಧೀರಿವಾನ್ಯಾ ।**
**ಸಂಯೋಜ್ಯ ತಚ್ಚರಣಪಲ್ಲವಮಾಶು ಮಾರ–**
**ಧಿಕ್ಕಾರಚಿಹ್ನಮಖನದ್ಧ್ವಜಮುತ್ಪತಾಕಮ್** ॥ ೪೩ ॥

ರತಿ=ಕ್ರೀಡೆ ಎಂಬ; ಉತ್ಸವ=ಉತ್ಸವಕ್ಕೆ; ಅರ್ಹ=ಯೋಗ್ಯವಾದ; ತನು=ದೇಹವೆಂಬ ಮಂದಿರ=ಮನೆಯಲ್ಲಿ; ಸಂಗಿ=ಇರುವ; ತುಂಗ=ದೊಡ್ಡದಾದ; ವಕ್ಷೋಜ=ಕುಚಗಳೆಂಬ; ಸತ್=ಒಳ್ಳೆಯ; ಕಲಶ=ಕಲಶಗಳಿಗೆ; ಮಂಥನ=ಅಲಂಕಾರದ; ಧೀರಿವ=ಬುದ್ಧಿ ಉಳ್ಳವಳಂತೆ; ಅನ್ಯಾ=ಇನ್ನೊಬ್ಬಳು; ಸಂಯೋಜ್ಯ=ಜೋಡಿಸಿ; ತತ್=ಕೃಷ್ಣನ; ಚರಣ= ಪಾದಗಳೆಂಬ; ಪಲ್ಲವ=ಚಿಗುರುಗಳನ್ನು; ಆಶು=ಕೂಡಲೇ; ಮಾರ=ಕಾಮನಿಗೆ; ಧಿಕ್ಕಾರ= ಪರಾಜಯದ; ಚಿಹ್ನಂ=ಸೂಚಕವಾದ; ಅಖನತ್=ನೆಟ್ಟಳು; ಧ್ವಜಂ=ಧ್ವಜವನ್ನು; ಉತ್=ಹಾರುವ; ಪತಾಕಂ=ಬಟ್ಟೆವುಳ್ಳ.

ಅಗಲಿದ ಕೃಷ್ಣನು ಸಿಕ್ಕಿದ ಆತುರದಲ್ಲಿ ಇನ್ನೊಬ್ಬಳು ಆತನ ಪಾದವನ್ನು ತನ್ನ ಎದೆಯಲ್ಲಿ ಇಟ್ಟುಕೊಂಡಳು. ಇದನ್ನು ರಾಜರು ಈ ರೀತಿ ವರ್ಣಿಸುತ್ತಾರೆ. ಈ ಶರೀರವು ದೇವರ ಲೀಲೆಗೋಸ್ಕರ ಇರತಕ್ಕದ್ದು. ದೇವರು ಕ್ರೀಡೆ ಮಾಡಲು ಈ ಶರೀರ ಎಂಬ ಮನೆಗೆ ಬರುತ್ತಾನೆ. ಆಗ ಈ ಮನೆಯನ್ನು ಅಲಂಕರಿಸಬೇಕು. ಸಾಮಾನ್ಯವಾಗಿ ಮನೆಗಳನ್ನು ಅಲಂಕರಿಸುವಾಗ ಮನೆಯ ಮುಂಭಾಗದಲ್ಲಿ ಎರಡು ಕಲಶಗಳನ್ನು ಇಡುತ್ತಾರೆ. ಅವುಗಳಲ್ಲಿ ಮಾವು ಹಲಸು ಇತ್ಯಾದಿ ಮರಗಳ ಚಿಗುರುಗಳನ್ನು ಇಡುತ್ತಾರೆ. ಇಲ್ಲಿ ಈ ಗೋಪಿಯ ಸ್ತನಗಳೇ ಕಲಶಗಳು. ಈ ಕಲಶಗಳನ್ನು ಅಲಂಕರಿಸಲು ಚಿಗುರುಗಳನ್ನೇ ತನ್ನ ಎದೆಯ ಮೇಲೆ ಇಟ್ಟುಕೊಂಡಳು. ಇದರಿಂದ ಇನ್ನೊಂದು ಕೆಲಸವೂ ಆಯಿತು –ತನ್ನಲ್ಲಿ ಕಾಮನ ಉಪಟಳ ಬಹಳ ಇತ್ತು. ಕೃಷ್ಣನ ಪಾದವನ್ನು ತನ್ನ ಎದೆಯಲ್ಲಿ ಇಟ್ಟುಕೊಂಡದ್ದರಿಂದ ಆತ ತಣ್ಣಗಾದ. ಕೃಷ್ಣನ ಪಾದದಲ್ಲಿ ಧ್ವಜದ ಗುರುತು ಇದೆ. ಇನ್ನೊಬ್ಬನನ್ನು ಜಯಿಸುವುದು ಅಂದರೆ ಆತನ ಜಾಗದಲ್ಲಿ ಒಂದು ಧ್ವಜವನ್ನು ನೆಡುವುದು. ಕಾಮನ ಉಪದ್ರವ ಎದೆಯಲ್ಲಿ. ಅಲ್ಲಿ ಕೃಷ್ಣನ ಪಾದದ ಸಂಪರ್ಕವಾಗಿದೆ. ಒಂದು ಧ್ವಜವನ್ನು ನೆಟ್ಟಂತಾಗಿದೆ. ಕಾಮನನ್ನು ಜಯಿಸಿದಂತೆ ಆಯಿತು. ಹೀಗೆ ಒಂದು ಕೆಲಸದಿಂದ ಎರಡು ಪ್ರಯೋಜನಗಳು ಸಿದ್ಧಿಸಿದವು.

**ಸಂದೇಶ** : ಶರೀರ ಇದು ನಮ್ಮದಲ್ಲ. ದೇವರದ್ದು. ಇಲ್ಲಿ ನಮ್ಮ ಧ್ವಜ ಹಾರಬಾರದು. ದೇವಧ್ವಜ ಹಾರಬೇಕು. ಅದಕ್ಕಾಗಿ ದೇವರ ಪಾದವನ್ನು ಸದಾ ಚಿಂತಿಸಬೇಕು.

**ಅನ್ಯಾ ಚ ತಂ ಹೃದಿ ನಿಧಾಯ ನಿಮೀಲಿತಾಕ್ಷೀ**
**ಧನ್ಯಾ ಪ್ರಿಯಂ ಪುಲಕಶೋಭಿತಸರ್ವಗಾತ್ರೀ ।**
**ಸರ್ವಾಭಿರಾಭಿರನುಭೂತಮಭುಂಕ್ತ ಭೋಗಂ**
**ಕಿಂ ನಾಮ ನಾಸ್ತಿ ಮುನಿಮಾರ್ಗಜುಷಾಂ ಹಿ ಲೋಕೇ ॥ ೪೪ ॥**

ಅನ್ಯಾ=ಇನ್ನೊಬ್ಬಳು; ತಂ=ಕೃಷ್ಣನನ್ನು; ಹೃದಿ=ಮನಸ್ಸಿನಲ್ಲಿ; ನಿಧಾಯ=ಇಟ್ಟು; ನಿಮೀಲಿತ=ಮುಚ್ಚಿದ; ಅಕ್ಷೀ=ಕಣ್ಣುಳ್ಳವಳಾಗಿ; ಧನ್ಯಾ=ಕೃತಾರ್ಥಳಾಗಿ; ಪ್ರಿಯಂ=ಇಷ್ಟನಾದ;

ಪುಲಕ=ರೋಮಾಂಚದಿಂದ; ಶೋಭಿತ=ಶೋಭಿಸುವ; ಸರ್ವ=ಎಲ್ಲಾ; ಗಾತ್ರೀ=ದೇಹ ಉಳ್ಳವಳಾಗಿ; ಸರ್ವಾಭಿಃ=ಎಲ್ಲರಿಂದ; ಆಭಿಃ=ಈ; ಅನುಭೂತಂ=ಅನುಭವಿಸಲ್ಪಟ್ಟ; ಅಭುಂಕ್ತ=ಅನುಭವಿಸಿದಳು; ಭೋಗಂ=ಸುಖವನ್ನು; ಕಿಂ ನಾಮ=ಯಾವುದು; ನಾಸ್ತಿ=ಇಲ್ಲ; ಮುನಿ=ಋಷಿಗಳ; ಮಾರ್ಗ=ದಾರಿಯನ್ನು; ಜುಷಾಂ=ಸೇವಿಸುವವರಿಗೆ; ಲೋಕೇ= ಜಗತ್ತಿನಲ್ಲಿ.

ಕೃಷ್ಣನು ಸಿಕ್ಕಿದ ಆನಂದದಲ್ಲಿ ಒಬ್ಬಳು ಕಣ್ಣುಮುಚ್ಚಿಕೊಂಡು ಆತನ ಧ್ಯಾನಕ್ಕೆ ತೊಡಗಿದಳು. ಮನಸ್ಸಿನಲ್ಲಿ ಕೃಷ್ಣನ ರೂಪವು ಚೆನ್ನಾಗಿ ಮೂಡಿದೆ. ಮೈ ರೋಮಾಂಚನಗೊಂಡಿದೆ. ದೇಹದಲ್ಲಿ ವಿಲಕ್ಷಣ ಒಂದು ಕಾಂತಿ ಉಂಟಾಗಿದೆ. ಹಿಂದೆ ಹೇಳಿದ ಒಬ್ಬೊಬ್ಬ ಗೋಪಿಯರು ಒಂದೊಂದು ರೀತಿಯ ಸುಖವನ್ನು ಅನುಭವಿಸಿದರೆ ಈಕೆಯು ಎಲ್ಲಾ ರೀತಿಯ ಸುಖವನ್ನು ಅನುಭವಿಸಿದಳು. ಆದ್ದರಿಂದಲೇ ಧನ್ಯಳು. ಆದ್ದರಿಂದಲೇ ಋಷಿಗಳು ಸದಾ ಕಾಲ ಧ್ಯಾನದಲ್ಲೇ ಇರುವುದು. ದೇವರನ್ನು ಚೆನ್ನಾಗಿ ತಿಳಿದು ಅನಂತರ ಧ್ಯಾನ ಮಾಡುತ್ತಾರೆ. ಆದ್ದರಿಂದ ಎಲ್ಲಾ ಅಭೀಷ್ಟಗಳನ್ನೂ ಪಡೆಯುತ್ತಾರೆ. ಈಕೆಯೂ ಈ ಋಷಿಗಳ ಮಾರ್ಗವನ್ನೇ ಅನುಸರಿಸಿದಳು.

**ಸಂದೇಶ** : ದೇವರನ್ನು ಸಾಕ್ಷಾತ್ಕರಿಸಿಕೊಂಡ ಮೇಲೂ ಧ್ಯಾನಾದಿಗಳನ್ನು ಬಿಡಬಾರದು.

**ನಯನೈರ್ದಧುಃ ಮುಖವಿಧುಂ ಖವಿಧುಂ**
**ವಿಹಸಂತಮಸ್ಯ ಚರಣೇ ಚರಣೇ ।**
**ಜಯದಾಯಿನಿ ಸ್ತನಯುಗೇನ ಯುಗೇ**
**ಕ್ಷಣತಾಂ ಶಮಾವಧಿಗತೇಽಧಿಗತೇ** ॥ ೪೫ ॥

ನಯನೈಃ=ಕಣ್ಣುಗಳಿಂದ; ದಧುಃ=ಧರಿಸಿದರು; ಮುಖ=ಮುಖವೆಂಬ; ವಿಧುಂ= ಚಂದ್ರನನ್ನು; ಖ=ಆಕಾಶದ; ವಿಧುಂ=ಚಂದ್ರನನ್ನು; ವಿಹಸಂತಂ=ತಮಾಷೆ ಮಾಡುವ; ಅಸ್ಯ=ಕೃಷ್ಣನ; ಚರಣೇ=ಪಾದಗಳು; ರಣೇ=ಯುದ್ಧದಲ್ಲಿ; ಜಯ=ಜಯವನ್ನು; ದಾಯಿನಿ=ಕೊಡುವ; ಸ್ತನ=ಕುಚಗಳ; ಯುಗೇನ=ಎರಡರಿಂದ; ಯುಗೇ=ಯುಗದಲ್ಲಿ; ಕ್ಷಣತಾಂ=ಕ್ಷಣಕಾಲತ್ವವನ್ನು; ಶಮ=ಗರ್ವದ; ಅವಧಿ=ತನಕ; ಗತೇ=ಹೋಗಲು; ಅಧಿಗತೇ=ಕಾಣಲು.

ಕೃಷ್ಣನು ಕಾಣಿಸಿಕೊಂಡಾಗ ಈ ಗೋಪಿಯರು ಕೃಷ್ಣನ ಮುಖಚಂದ್ರನನ್ನು ಕಣ್ತುಂಬ ನೋಡಿದರು. ಕೃಷ್ಣನ ಮುಖದ ಮುಂದೆ ಆಕಾಶದ ಚಂದ್ರ ನಗಣ್ಯ. ಕೃಷ್ಣನಲ್ಲಿ ಇವರಿಗಿರುವ ಪ್ರೀತಿಯು ಕಣ್ಣುಗಳ ಮೂಲಕ ಹೊರಬರುತ್ತಿತ್ತು. ಕೃಷ್ಣನ ಎರಡು ಪಾದಗಳನ್ನು ತಮ್ಮ ಎದೆಯಲ್ಲಿ ಇಟ್ಟುಕೊಂಡರು. ಈ ಪಾದಗಳನ್ನು ಸ್ಮರಿಸಿದರೂ ಸಾಕು ಸಾಂಸಾರಿಕವಾದ ಎಲ್ಲಾ ಯುದ್ಧಗಳಲ್ಲೂ ಜಯ ನಿಶ್ಚಿತ. ರಾತ್ರಿ ಪೂರ್ಣ ಈ ಹೆಮ್ಮಕ್ಕಳನ್ನು ಕೃಷ್ಣ ಸತಾಯಿಸಿದ್ದ.

ಯಾಕೆಂದರೆ ಇವರು ಗರ್ವಿಗಳಾಗಿದ್ದರು. ಗರ್ವ ಇಳಿದ ಮೇಲೆ ಕೃಷ್ಣ ಕಾಣಿಸಿಕೊಂಡ. ಈತನ ಜೊತೆ ಬಹಳ ಸಮಯ ವಿಹರಿಸಿದರು. ಆದರೆ ಅಷ್ಟು ಕಾಲವೂ ಒಂದು ಕ್ಷಣದಂತೆ ಕಳೆಯಿತು.

<u>ಸಂದೇಶ</u> : ದೇವರು ಕಾಣಿಸಿದರೆ ಆತನ ಆರಾಧನೆಯ ಕ್ರಮ ಇಲ್ಲಿ ತಿಳಿಯುತ್ತದೆ.

**ಸ್ವಾನಂದಂ ಪ್ರಕಟೀಚಕಾರ ಸುಖದಂ ಸಾಯುಜ್ಯಮಾಲಿಂಗ್ಯ ತಾಃ**
**ಸಾಧರ್ಮ್ಯಂ ಸ್ವಕೃತಾನುಲೇಪತಿಲಕೈಃ ಮೋಕ್ಷಂ ಹೃದಿಸ್ಥಾವೃತೇಃ ।**
**ತಾಭಿಃ ಸಸ್ಮಿತಮೀಕ್ಷಿತೋ ಯದುಪತಿಃ ಸಾರೂಪ್ಯಸಾರ್ಷ್ಟೀರ್ದಿಶನ್**
**ರಾಸಾಖ್ಯಂ ಚ ತಥೋತ್ಸವಂ ನಹಿ ಕಥಾ ವ್ಯರ್ಥಾ ಪರಬ್ರಹ್ಮಣಃ ॥ ೪೬ ॥**

ಸ್ವಾನಂದಂ=ಸ್ವರೂಪಸುಖವನ್ನು; ಪ್ರಕಟೀಚಕಾರ=ಪ್ರಕಟಪಡಿಸಿದನು; ಸುಖದಂ= ಆನಂದವನ್ನು ಕೊಡುವ; ಸಾಯುಜ್ಯಂ=ಸಾಯುಜ್ಯಮೋಕ್ಷವನ್ನು; ಆಲಿಂಗ್ಯ=ಆಲಿಂಗಿಸಿ; ತಾಃ=ಗೋಪಿಯರನ್ನು; ಸಾಧರ್ಮ್ಯಂ=ಸಮಾನಧರ್ಮತೆಯನ್ನು; ಸ್ವ=ತನ್ನಿಂದ; ಕೃತ= ಮಾಡಲ್ಪಟ್ಟ; ಅನುಲೇಪ=ಚಂದನದ ಲೇಪವು; ತಿಲಕೈಃ=ತಿಲಕಗಳಿಂದ; ಮೋಕ್ಷಂ= ಮೋಕ್ಷವನ್ನು; ಹೃದಿ=ಹೃದಯದಲ್ಲಿ; ಸ್ಥ=ಇರತಕ್ಕದ್ದರ; ಆವೃತೇಃ=ಅಪಸರಣದ; ತಾಭಿಃ= ಅವರಿಂದ; ಸಸ್ಮಿತಂ=ನಗುಪೂರ್ವಕವಾಗಿ; ಈಕ್ಷಿತಃ=ನೋಡಲ್ಪಟ್ಟ; ಯದುಪತಿಃ= ಶ್ರೀಕೃಷ್ಣನು; ಸಾರೂಪ್ಯ=ಸಾರೂಪ್ಯವೆಂಬ; ಸಾರ್ಷ್ಟೀ=ಸಾರ್ಷ್ಟೀ ಎಂಬ ಮೋಕ್ಷಗಳನ್ನು; ದಿಶನ್=ಕೊಡುವವನಾಗಿ; ರಾಸ=ರಾಸ ಎಂದು; ಆಖ್ಯಂ=ಹೆಸರುಳ್ಳ; ತಥಾ=ಹಾಗೆಯೇ; ಉತ್ಸವಂ=ಉತ್ಸವವನ್ನು; ನಹಿ=ಅಲ್ಲ; ಕಥಾ=ಚರಿತ್ರೆಯು; ವ್ಯರ್ಥಾ=ವ್ಯರ್ಥವು; ಪರಬ್ರಹ್ಮಣಃ=ದೇವರ.

ಕೃಷ್ಣನಲ್ಲಿ ಏಕಾಗ್ರತೆಯಿಂದ ಈ ಗೋಪಿಯರು ಒಂದು ರಾತ್ರಿ ಶ್ರವಣಾದಿ ನವವಿಧ ಭಕ್ತಿಯನ್ನು ಮಾಡಿದರು. ಅದರ ಫಲವಾಗಿ ಅವರಿಗೆ ದೇವರ ದರ್ಶನ (ಸಾಕ್ಷಾತ್ಕಾರ) ಆಯಿತು. ಸಾಕ್ಷಾತ್ಕಾರದ ಫಲ ಬಂಧನದಿಂದ ಬಿಡುಗಡೆ. ನಾನಾ ವಿಧದ ಮೋಕ್ಷದ ಅನುಭವ. ಅದನ್ನು ಕೃಷ್ಣ ಇವರಿಗೆ ಪಾಲಿಸಿದ ಎಂಬುದನ್ನು ರಾಜರು ಚಮತ್ಕಾರದಿಂದ ವರ್ಣಿಸುತ್ತಾರೆ –ಭಿದ್ಯತೇ ಹೃದಯಗ್ರಂಥಿಃ....... ಎಂಬ ಶ್ರುತಿಯು ಇದೆ. ಹೃದಯದಲ್ಲಿ ದೇವರ ಜೊತೆ ಜೀವನು ಇರುತ್ತಾನೆ. ದೇವರ ಸಾಕ್ಷಾತ್ಕಾರ ಆದ ಮೇಲೆ ಹೃದಯದಲ್ಲಿರುವ ಜೀವನ ಎಲ್ಲಾ ಕರ್ಮಬಂಧನಗಳನ್ನೂ ಬಿಡಿಸುತ್ತಾನೆ. ಅದನ್ನು ಕೃಷ್ಣನು ಇಲ್ಲಿ ಮಾಡಿದ. ಹೇಗೆಂದರೆ ಅವರ ಎದೆಯಲ್ಲಿ ತೊಟ್ಟಿರುವ ಕುಪ್ಪಸದ ಗಂಟನ್ನು ಬಿಚ್ಚಿದನು. ಆಗ ಹೃದಯಗ್ರಂಥಿ ಬಿಚ್ಚಿಕೊಂಡಂತಾಯಿತು. ಅವರ ಜೊತೆ ತಾನು ವಿಹಾರ ಮಾಡಿದನು. ತನ್ನ ವಿಹಾರದಿಂದ ಅವರಿಗೆ ಆನಂದವನ್ನು (ಸ್ವಾನಂದ) ಕೊಟ್ಟನು. ಮೋಕ್ಷ ಅಂದರೆ ಸ್ವಾನಂದವನ್ನು ಅನುಭವಿಸುವುದು. ಈ ಗೋಪಿಯರನ್ನು ಬಿಗಿಯಾಗಿ ಅಪ್ಪಿದನು. ಇದರಿಂದ ಸಾಯುಜ್ಯ ಎಂಬ ಮೋಕ್ಷ ಲಭಿಸಿತು. ಸಾಯುಜ್ಯ ಅಂದರೆ ಚೆನ್ನಾಗಿ

ಜೊತೆಗೆ ಇರುವುದು. ಅದು ಆಲಿಂಗನ ಸಂದರ್ಭದಲ್ಲಿ ಮಾತ್ರ ಸಾಧ್ಯ. ಸಾಧರ್ಮ್ಯ ಎಂಬ ಒಂದು ತೆರನಾದ ಮೋಕ್ಷ ಇದೆ. ಸಾಧರ್ಮ್ಯ ಅಂದರೆ ಸಮಾನವಾದ ಧರ್ಮ. ದೇವರಲ್ಲಿ ಏನು ಧರ್ಮಗಳು ಇರುತ್ತೋ ಅದು ಈತನಲ್ಲೂ ಇರುವುದು. ದೇವರಲ್ಲಿ ಚಂದನ ಲೇಪನ ತಿಲಕಮಾಲಿಕೆ ಇವುಗಳೆಲ್ಲಾ ಇರುತ್ತವೆ. ಈ ಗೋಪಿಯರನ್ನು ಕೃಷ್ಣನು ಆಲಿಂಗಿಸಿದಾಗ ಆತನ ಮೈಯಲ್ಲಿರುವ ಇವುಗಳು ಈಕೆಯರಿಗೆ ಅಂಟಿಕೊಂಡಿತು. ಸಾರೂಪ್ಯ ಅಂದರೆ ಮುಕ್ತ ಎಷ್ಟು ರೂಪದಿಂದ ಇರುವನೋ ದೇವರೂ ಅಷ್ಟೇ ರೂಪವನ್ನು ಸ್ವೀಕರಿಸುವುದು. ಈ ಗೋಪಿಯರು ಅನೇಕರು ಇದ್ದರು. ಆದ್ದರಿಂದ ಕೃಷ್ಣನೂ ಅನೇಕ ರೂಪ ಸ್ವೀಕರಿಸಿದ. ಪರಸ್ಪರವಾಗಿ ಹೆಗಲಮೇಲೆ ಕೈಹಾಕಿಕೊಂಡು ಅಡ್ಡಾಡುವುದೇ ಸಾರ್ಷ್ಟಿ ಎಂಬ ಮೋಕ್ಷ. ಅದನ್ನೂ ಕೂಡಾ ಕೃಷ್ಣ ಇಲ್ಲಿ ರಾಸಲೀಲೆಯ ಸಂದರ್ಭದಲ್ಲಿ ಮಾಡಿ ತೋರಿಸಿದ. ಅಂತೂ ಗೋಪಿಯರಿಗೆ ಭಾರೀ ಉತ್ಸವದ ವಾತಾವರಣವನ್ನೇ ನಿರ್ಮಿಸಿದನು.

<u>**ಸಂದೇಶ**</u> : ಪರಮಾತ್ಮನ ಬಗ್ಗೆ ನಾವು ಮಾಡುವ ಯಾವ ಕ್ರಿಯೆಯೂ ವ್ಯರ್ಥವಲ್ಲ.

**ರಮ್ಯಸ್ಥಲೀಂ ರಾಸಮಹಾಯ ಶೌರಿಃ**
**ಅಗಾತ್ ಅಸೌ ಸಾರಜನೀಹಿತಾಯ ।**
**ಆಸಾಮಭೂದೀಪ್ಸಿತದಾತರೀಶೇ**
**ರಾಗಾದಸೌ ಸಾ ರಜನೀ ಹಿತಾಯ** ॥ ೪೭ ॥

ರಮ್ಯ=ಯೋಗ್ಯವಾದ; ಸ್ಥಲೀಂ=ಸ್ಥಳವನ್ನು; ರಾಸ=ಕ್ರೀಡೆ ಎಂಬ; ಮಹಾಯ=ಉತ್ಸವ ಕ್ಕೋಸ್ಕರ; ಶೌರಿಃ=ಕೃಷ್ಣನು; ಅಗಾತ್=ಹೋದನು; ಅಸೌ=ಈ; ಸಾರ=ಒಳ್ಳೆಯ; ಜನಿ= ಉತ್ಪತ್ತಿವುಳ್ಳ ಗೋಪಿಯರ; ಈಹಿತಾಯ=ಹಿತಕ್ಕೋಸ್ಕರ; ಆಸಾಂ=ಇವರಿಗೆ; ಅಭೂತ್= ಆಯಿತು; ಈಪ್ಸಿತ=ಇಷ್ಟವಾದದ್ದನ್ನು; ದಾತರಿ=ಕೊಡುವ; ಈಶೇ=ಕೃಷ್ಣನಲ್ಲಿ; ರಾಗಾತ್= ಪ್ರೀತಿಯಿಂದ; ಅಸೌ=ಪ್ರಾಣದಲ್ಲಿ; ಸಾ=ಆ; ರಜನೀ=ರಾತ್ರಿಯು; ಹಿತಾಯ=ಒಳಿತಿಗೋಸ್ಕರ.

ಈ ಗೋಪಿಯರು ಒಳ್ಳೆಯ ವಂಶದಲ್ಲಿ ಹುಟ್ಟಿದವರು. ಆದ್ದರಿಂದ ಕೃಷ್ಣನು ಅವರ ಜೊತೆ ಆಡಲು ಇಚ್ಛಿಸಿದನು. ಅದಕ್ಕೋಸ್ಕರ ಒಳ್ಳೆಯ ಸ್ಥಳಕ್ಕೆ ಅವರನ್ನು ಕರೆದುಕೊಂಡು ಹೋದನು. ಗೋಪಿಯರಿಗೆ ಬಹಳ ಸಂತೋಷ. ನಮ್ಮ ಅಭೀಷ್ಟಗಳನ್ನು ಕೃಷ್ಣನು ಕೊಡುತ್ತಾನೆ ಎಂದು. ಇದರಿಂದ ಕೃಷ್ಣನಲ್ಲಿರುವ ಅನುರಾಗವೂ ಇವರಿಗೆ ಇಮ್ಮಡಿಯಾಯಿತು. ಇದೇ ರಾತ್ರಿಯ ಪೂರ್ವಭಾಗದಲ್ಲಿ ಈ ಗೋಪಿಯರಿಗೆ ದ್ವೇಷವು ಬಂದಿತ್ತು –ಕೃಷ್ಣನಿಲ್ಲ ಎಂಬ ಕಾರಣದಿಂದ. ತನ್ಮೂಲಕ ತಮ್ಮ ಪ್ರಾಣಗಳಲ್ಲಿಯೂ ವೈರಾಗ್ಯ ಬಂದಿತ್ತು. ಕೃಷ್ಣನ ದರ್ಶನವಾದ್ದರಿಂದ ತಮ್ಮ ಪ್ರಾಣಗಳೂ ರಾತ್ರಿಯೂ ಹಿತವೆನಿಸಿತು.

**ಸಂದೇಶ** : 'ಆತ್ಮನಸ್ತು ಕಾಮಾಯ ಸರ್ವಂ ಹಿತಂ ಭವತಿ' –ದೇವರಿದ್ದಾನೆ ಎಂಬ ಒಂದೇ ದೃಷ್ಟಿಯಿಂದ ನಮಗೆ ಎಲ್ಲವೂ ಹಿತವಾಗುತ್ತದೆ ಎಂಬುದು ಉಪನಿಷತ್ತಿನ ಮಾತು. ಈ ಮಾತು ಈ ಶ್ಲೋಕದ ಸಂದೇಶ.

**ಕಂಠಾಶ್ಲೇಷಕರಾಗ್ರಪಾತಮಧುರವ್ಯಾಹಾರಮಂದಸ್ಮಿತೈಃ**
**ಲೋಲಾಪಾಂಗನಿರೀಕ್ಷಣೇನ ಮರುತಾ ಗೀತೇನ ಶೀತಾಂಶುನಾ ।**
**ಶೃಂಗಾರಂ ರಸಮುಚ್ಚಕೈಃ ಕುಸುಮಿತೇ ವೃಂದಾವನೇ ಪೋಷಯನ್**
**ಗೋಪೀಮಂಡಲಮಂಡಿತಂ ಮಧುಪತೀ ರಾಸೋತ್ಸವಂ ನಿರ್ಮಮೇ ॥ ೪೮ ॥**

ಕಂಠ=ಕುತ್ತಿಗೆಯ; ಆಶ್ಲೇಷ=ಆಲಿಂಗನವು; ಕರಾಗ್ರ=ಕೈಯ ತುದಿಯ ಉಗುರಿನ; ಪಾತ=ಬೀಳಿಸುವಿಕೆಯು; ಮಧುರ=ಒಳ್ಳೆಯ; ವ್ಯಾಹಾರ=ಮಾತು; ಮಂದ=ನಿಧಾನವಾದ; ಸ್ಮಿತೈಃ=ನಗುವಿನಿಂದ; ಲೋಲ=ಚಂಚಲವಾದ; ಅಪಾಂಗ=ಕಡೆಗಣ್ಣಿನ; ನಿರೀಕ್ಷಣೇನ= ನೋಟದಿಂದ; ಮರುತಾ=ಗಾಳಿಯಿಂದ; ಗೀತೇನ=ಹಾಡಿನಿಂದ; ಶೀತಾಂಶುನಾ= ಚಂದ್ರನಿಂದ; ಶೃಂಗಾರಂ=ಶೃಂಗಾರವೆಂಬ; ರಸಂ=ರಸವನ್ನು; ಉಚ್ಚಕೈಃ=ಚೆನ್ನಾಗಿ; ಕುಸುಮಿತೇ=ಅರಳಿದ; ವೃಂದಾವನೇ=ಕಾಡಲ್ಲಿ; ಪೋಷಯನ್= ಬೆಳೆಸುತ್ತಾ; ಗೋಪೀ= ಗೋಪಿಯರ; ಮಂಡಲ=ಗುಂಪಿನಿಂದ; ಮಂಡಿತಂ=ಅಲಂಕೃತ ವಾದ; ಮಧುಪತಿಃ= ಕೃಷ್ಣನು; ರಾಸೋತ್ಸವಂ=ರಾಸಲೀಲೆಯನ್ನು; ನಿರ್ಮಮೇ=ಮಾಡಿ ದನು.

ಕೃಷ್ಣ ಈ ಗೋಪಿಯರನ್ನು ಆಲಿಂಗಿಸಿದ. ಪ್ರೀತಿಯಿಂದ ಅವರ ಮೈಯನ್ನು ಪರಚಿದ. ಒಳ್ಳೆಯ ಮಾತುಗಳನ್ನಾಡಿದ. ಕಡೆಗಣ್ಣಿನಿಂದ ಅವರನ್ನು ನೋಡಿ ಮಂದಹಾಸವನ್ನು ಬೀರಿದ. ಇಷ್ಟರಿಂದ ಅವರಲ್ಲಿರುವ ಶೃಂಗಾರವನ್ನು ಬಡಿದೆಬ್ಬಿಸಿದ. ಈ ರಸವು ಸ್ಫೋಟಗೊಳ್ಳಲು ಮಂದವಾದ ಗಾಳಿ, ಚಂದ್ರ, ಪಕ್ಷಿಗಳ ಹಾಡು, ಪುಷ್ಪಗಳ ಅರಳುವಿಕೆ ಕಾರಣ. ಇವೆಲ್ಲವೂ ಈ ಸಮಯದಲ್ಲಿ ಇತ್ತು. ಈ ರಸವು ಶಾಸ್ತ್ರೀಯವಾದದ್ದು. ಆದ್ದರಿಂದ ಮಧುವಿನಂತೆ, ಜೇನಿನಂತೆ ಸಿಹಿ. ಇಂತಹ ರಸಾಧಿಪತಿಯಾದ, ಆದ್ದರಿಂದಲೇ ಮಧುಪತಿಯಾದ ಕೃಷ್ಣನು ರಾಸಲೀಲೆಯನ್ನು ಗೋಪಿಯರಿಂದ ಕೂಡಿಕೊಂಡು ಮಾಡಿದನು. ಈ ಆಟಕ್ಕೆ ಗೋಪಿಯರಿಂದಲೂ ಮೆರಗು ಬಂತು.

**ಸಂದೇಶ** : ಶಾಸ್ತ್ರವು ಶೃಂಗಾರರಸದಿಂದ ದೂರ. ಆದರೂ ದೇವರ ಜೊತೆ ಸೇರಿದರೆ ನವರಸಗಳೂ ಶಾಸ್ತ್ರೀಯಗಳಾಗುತ್ತವೆ.

ಪ್ರೇಷ್ಠಸ್ಯಾಂಸಯುಗಂ ಕರೈರುಭಯತಃ ಪ್ರೇಮೋತ್ಥರೋಮೋದ್ಗಮೈಃ
ಸುಷ್ಠ್ವಾಲಿಂಗ್ಯ ಪುನಃ ಪಲಾಯನಭಿಯೇವೌತ್ಸುಕ್ಯತೋ ವೀಕ್ಷತಾಮ್ ।
ಸಿದ್ಧಾನಾಂ ನಯನೈಃ ಸಮಂ ಸಮುದಿತಂ ಶೃಂಗಾರಸಂಜ್ಞಂ ರಸಂ
ಮಧ್ಯಸ್ಥಂ ಮುಮುಚುರ್ಮಿಥೋ ಧೃತಕರಾ ಗಂತುಂ ಬಹಿರ್ನ ಕ್ವಚಿತ್ ॥ ೪೯ ॥

ಪ್ರೇಷ್ಠಸ್ಯ=ಬಹಳ ಪ್ರಿಯನನ; ಅಂಸಯುಗಂ=ಎರಡು ಹೆಗಲುಗಳನ್ನು; ಕರೈಃ= ಕೈಗಳಿಂದ; ಉಭಯತಃ=ಎರಡೂ ಬದಿಯಲ್ಲಿ; ಪ್ರೇಮ=ಆನಂದದಿಂದ; ಉತ್ಥ=ಉಂಟಾದ; ರೋಮ=ರೋಮಗಳ; ಉದ್ಗಮೈಃ=ಏಳುವಿಕೆಯಿಂದ; ಸುಷ್ಠು=ಚೆನ್ನಾಗಿ; ಆಲಿಂಗ್ಯ= ಆಲಿಂಗಿಸಿ; ಪುನಃ=ಮತ್ತು; ಪಲಾಯನ=ಓಡುವ; ಭಿಯಾ ಇವ=ಹೆದರಿಕೆಯಿಂದಲೋ ಎಂಬಂತೆ; ಔತ್ಸುಕ್ಯತಃ=ಕುತೂಹಲದಿಂದ; ವೀಕ್ಷತಾಂ=ನೋಡುವ; ಸಿದ್ಧಾನಾಂ=ಸಿದ್ಧರ; ನಯನೈಃ= ಕಣ್ಣುಗಳಿಂದ; ಸಮಂ=ಕೂಡಿಕೊಂಡು; ಸಮುದಿತಂ=ಉಂಟಾದ; ಶೃಂಗಾರ= ಶೃಂಗಾರ ಎಂದು; ಸಂಜ್ಞಂ=ಹೆಸರುಳ್ಳ; ರಸಂ=ರಸವನ್ನು; ಮಧ್ಯಸ್ಥಂ=ಮಧ್ಯ ದಲ್ಲಿರುವ; ಮುಮುಚುಃ=ಬಿಟ್ಟರು; ಮಿಥಃ=ಪರಸ್ಪರವಾಗಿ; ಧೃತ=ಹಿಡಿದುಕೊಂಡ; ಕರಾಃ=ಕೈಗಳುಳ್ಳ; ಗಂತುಂ=ಹೋಗಲು; ಬಹಿಃ=ಹೊರಗೆ; ನ=ಇಲ್ಲ; ಕ್ವಚಿತ್=ಎಂದೂ.

ಕೃಷ್ಣನನ್ನು ಗೋಪಿಯರು ಕಂಡರು. ಇವರಿಗೆ ಕೃಷ್ಣನು ಪ್ರಿಯರಿಗಿಂತ ಪ್ರಿಯನು. ಆತನ ಕೊರಳಸುತ್ತ ತಮ್ಮ ಎರಡೂ ಕೈಗಳನ್ನು ಜೋಡಿಸಿದರು. ಕೃಷ್ಣನ ದರ್ಶನ ಸ್ಪರ್ಶನದಿಂದ ಇಡೀ ಮೈ ರೋಮಾಂಚನಗೊಂಡಿದೆ. ಆತನನ್ನು ಚೆನ್ನಾಗಿ ಬಿಗಿದಪ್ಪಿದರು. ಪುನಃ ಎಲ್ಲಿ ಮರೆಯಾಗುತ್ತಾನೋ ಎನ್ನುವ ಭಯದಿಂದ ಆತನನ್ನು ಬಂಧಿಸಿದಂತೆ ಕಾಣುತ್ತಿತ್ತು. ಈ ದೃಶ್ಯವನ್ನು ಗಗನದಲ್ಲಿ ಸಿದ್ಧರು ಕುತೂಹಲದಿಂದ ನೋಡುತ್ತಿದ್ದರು. ಈಗ ಗೋಪಿಯರು ತಾವು ಪರಸ್ಪರ ಕೈಹಿಡಿದುಕೊಂಡು ಒಂದು ಕೋಟೆಯನ್ನು ರಚಿಸಿದರು. ಇದು ಈ ರೀತಿಯಾಗಿ ಕಾಣುತ್ತಿತ್ತು –ಶೃಂಗಾರ ಎಂಬ ರಸವು ನಮ್ಮಲ್ಲಿಯೇ ಇರಬೇಕು. ಬೇರೆ ಕಡೆ ಹೋದರೆ ಕೃಷ್ಣನು ಅಲ್ಲಿಗೆ ಹೋದಾನು. ಹಾಗೆಯೇ ಸಿದ್ಧರ ದೃಷ್ಟಿಯೂ ನಮ್ಮಲ್ಲಿಯೇ ಇರಬೇಕು ಎಂದು. ಶೃಂಗಾರರಸಕ್ಕೆ ಸೌಂದರ್ಯವು ಪ್ರಧಾನ. ಈ ಹೆಮ್ಮಕ್ಕಳಲ್ಲಿ ಹಾಗೂ ಕೃಷ್ಣನಲ್ಲಿ ಸೌಂದರ್ಯ ಬಹಳ ಇದೆ. ಆದ್ದರಿಂದ ಶೃಂಗಾರರಸ ಬೇರೆ ಕಡೆ ಹೋಗಲು ಸಾಧ್ಯವೇ ಇಲ್ಲ. ಕೃಷ್ಣನಿಂದ ಕೂಡಿಕೊಂಡು ರಾಸಲೀಲೆಯಾದ್ದರಿಂದ ಸಿದ್ಧರು ಈ ರಾಸಲೀಲೆಯನ್ನೇ ನೋಡುತ್ತಾರೆ ಹೊರತು ಬೇರೆಯನ್ನಲ್ಲ.

<u>ಸಂದೇಶ</u> : ದೇವರ ಜೊತೆ ಆಡುವ ಆಟಕ್ಕೆ ಎಂತಹ ಸಿದ್ಧರೂ ಮರುಳಾಗುತ್ತಾರೆ. ದೊಡ್ಡವರ ದೃಷ್ಟಿಗೆ ನಾವು ಬೀಳಬೇಕಾದರೆ ದೇವರ ಒಡನೆ ನಾವಿರಬೇಕು.

**ಸ ನೇಷ್ಯತಿ ಪ್ರಾಗಿವ ಕಾಂಚಿದಾಸಾಂ**
**ಮನೋರಮಾಂ ಶೌರಿರಿತೀವ ಭೀತ್ಯಾ ।**
**ಪರಸ್ಪರಾಬದ್ಧಮನೋಜ್ಞಹಸ್ತಾಃ**
**ವಿರೇಜುರಿಂದೀವರಲೋಚನಾಸ್ತಾಃ** ॥ ೫೦ ॥

ಸಃ=ಕೃಷ್ಣನು; ನೇಷ್ಯತಿ=ಒಯ್ಯುತ್ತಾನೆ; ಪ್ರಾಕ್ ಇವ=ಮೊದಲಿನಂತೆ; ಕಾಂಚಿತ್= ಒಬ್ಬಳನ್ನು; ಆಸಾಂ=ಇವರಲ್ಲಿ; ಮನೋರಮಾಂ=ಚಂದದ; ಶೌರಿಃ=ಶೂರನ ವಂಶದವನಾದ;

ಇತಿ ಇವ=ಎಂಬಂತೆ; ಭೀತ್ಯಾ=ಭಯದಿಂದ; ಪರಸ್ಪರ=ಅನ್ಯೋನ್ಯವಾಗಿ; ಆಬದ್ಧ=ಕಟ್ಟಲ್ಪಟ್ಟ; ಮನೋಜ್ಞ=ಚಂದದ; ಹಸ್ತಾಃ=ಕೈಗಳುಳ್ಳ; ವಿರೇಜುಃ=ಶೋಭಿಸಿದರು; ಇಂದೀವರ= ನೈದಿಲೆಯಂತೆ; ಲೋಚನಾಃ=ಕಣ್ಣುಗಳುಳ್ಳ; ತಾಃ=ಆ.

ಕೃಷ್ಣನ ದರ್ಶನದಿಂದ ಈ ಹೆಂಗಳೆಯರ ಕಣ್ಣುಗಳು ನೈದಿಲೆಯಂತೆ ಚೆನ್ನಾಗಿ ಅರಳಿವೆ. ಈತನ ಜೊತೆಯಲ್ಲಿ ಆಡುವ ಸಲುವಾಗಿ ಈ ಹೆಮ್ಮಕ್ಕಳೆಲ್ಲಾ ಪರಸ್ಪರ ಕೈಗಳನ್ನು ಹಿಡಿದುಕೊಂಡರು. ರಾಜರು ಇದನ್ನು ಈ ರೀತಿ ಚಿತ್ರಿಸುತ್ತಾರೆ –ಮೊದಲು ಕೃಷ್ಣನು ಇವರಲ್ಲಿ ಚಂದದವಳನ್ನು ಕರೆದುಕೊಂಡು ಹೋಗಿ ಬಹಳ ಸಮಯದ ತನಕ ಅದೃಶ್ಯನಾಗಿದ್ದನು. ಇನ್ನೊಬ್ಬಳನ್ನು ಕರೆದುಕೊಂಡು ಅದೃಶ್ಯನಾಗದಿರಲಿ ಎಂದು ಭಯದಿಂದ ಪರಸ್ಪರ ಕೈಹಿಡಿದುಕೊಂಡಿದ್ದಾರೋ ಏನೋ ಎಂದು.

<u>**ಸಂದೇಶ**</u> : 'ಏಕಃ ತಪಸ್ವೀ ದ್ವಿರಧ್ಯಾಯೀ' –ಜಪಮಾಡುವಾಗ ಒಬ್ಬನೇ ಇರಬೇಕು. ಅಧ್ಯಯನದ ಕಾಲದಲ್ಲಿ ಅನೇಕರಿರಬೇಕು ಎಂಬ ಮಾತಿನಂತೆ ಕಂಡ ದೇವರನ್ನು ಹಿಡಿದಿಟ್ಟುಕೊಳ್ಳಲು ಎಲ್ಲರೂ ಒಟ್ಟು ಸೇರಬೇಕು.

**ವಿಷ್ವಗ್ವಿಸರ್ಪಿನಯನಾಃ ಪರಿಮುಚ್ಯಮಾನ–**
**ವಕ್ಷೋಜವಸ್ತ್ರಕಬರೀಭರಭವ್ಯನೀವ್ಯಃ ।**
**ಸಿಂಜದ್ವಿಭೂಷಣಗಣಾ ಮಿಷತಾಮಲೌಲ್ಯಂ**
**ನಾಟ್ಯಚ್ಛಲೇನ ಚರಣೈಃ ಕಣಶೋ ವಿತೇನುಃ ॥ ೫೧ ॥**

ವಿಷ್ವಕ್=ಸುತ್ತಲೂ; ವಿಸರ್ಪಿ=ಹರಡಿದ; ನಯನಾಃ=ಕಣ್ಣುಳ್ಳ; ಪರಿಮುಚ್ಯಮಾನ= ಸಡಿಲಾದ; ವಕ್ಷೋಜ=ಸ್ತನಗಳ; ವಸ್ತ್ರ=ಬಟ್ಟೆಯು; ಕಬರೀ=ತಲೆಕೂದಲುಗಳ; ಭರ= ಭಾರವು; ಭವ್ಯ=ಉತ್ತಮವಾದ; ನೀವ್ಯಃ=ಬಟ್ಟೆವುಳ್ಳ; ಸಿಂಜನ್=ಶಬ್ದಮಾಡುವ; ವಿಭೂಷಣ= ಆಭರಣಗಳ; ಗಣಾಃ=ಸಮೂಹವುಳ್ಳ ಗೋಪಿಯರು; ಮಿಷತಾಂ=ನೋಡುವವರ; ಅಲೌಲ್ಯಂ=ಧೈರ್ಯವನ್ನು; ನಾಟ್ಯ=ನರ್ತನದ; ಛಲೇನ=ನಿಮಿತ್ತದಿಂದ; ಚರಣೈಃ= ಕಾಲುಗಳಿಂದ; ಕಣಶಃ=ಪುಡಿಗಳನ್ನಾಗಿ; ವಿತೇನುಃ=ಮಾಡಿದರು.

ಈ ಗೋಪಿಯರು ರಾಸಲೀಲೆಯ ಸಮಯದಲ್ಲಿ ಶೃಂಗಾರರಸವನ್ನು ಇನ್ನಷ್ಟು ಹೆಚ್ಚಿಸಲು ಕಣ್ಣುಮುಚ್ಚಾಲೆಯಂತೆ ಮಾಡುತ್ತಿದ್ದಾರೆ. ಈ ಲೀಲೆಯಲ್ಲಿ ಎಷ್ಟು ತಲ್ಲೀನ ರಾಗಿದ್ದಾರೆಂದರೆ ತಮ್ಮ ಎದೆಯ ಬಟ್ಟೆ, ಉಟ್ಟ ಸೀರೆ, ತಲೆಕೂದಲು ಇವುಗಳು ಜಾರು ತ್ತಿದ್ದರೂ ಅದನ್ನು ಸರಿಮಾಡುವ ಗೊಡವೆಗೆ ಹೋಗಲಿಲ್ಲ. ಕುಣಿಯುವ ಭರದಲ್ಲಿ ಕಾಲಿನ ಗೆಜ್ಜೆಗಳು ಬಹಳ ಶಬ್ದಮಾಡುತ್ತಿದ್ದವು. ಕಾಲುಗಳನ್ನು ವೇಗವಾಗಿ ನೆಲಕ್ಕೆ ಬಡಿಯು ತ್ತಿದ್ದರು. ಗೋಪಿಯರು ಈ ಅವಸ್ಥೆಯಲ್ಲಿ ಇರುವಾಗ ಸಾಮಾನ್ಯವಾಗಿ ಪುರುಷರು ಯಾವುದೋ ಒಂದು ದೃಷ್ಟಿಯಿಂದ ನೋಡುವುದು ಸಹಜ. ಆದರೆ ಇವರನ್ನು ಯಾವ ಪುರುಷನೂ ನೋಡುವ ಧೈರ್ಯ ಮಾಡಲಿಲ್ಲ. ಯಾಕೆಂದರೆ ಗೋಪಿಯರು ಕಾಲನ್ನು

ನೆಲಕ್ಕೆ ಬಡಿಯುವ ಮುಲಕ ಇವರ ಧೈರ್ಯವನ್ನು ಪುಡಿಮಾಡುತ್ತಿದ್ದಾರೋ ಎಂಬಂತಿತ್ತು ಈ ನಾಟ್ಯ. ಗಟ್ಟಿಯಾದ ವಸ್ತುವನ್ನು ಪುಡಿಮಾಡಲು ಕಾಲಿನಿಂದ ಒದೆತವನ್ನು ಕೊಡುವುದು ಸಾಮಾನ್ಯ.

**ಸಂದೇಶ** : ದೇವರ ಜೊತೆ ನಾವು ಯಾವ ಅವಸ್ಥೆಯಲ್ಲಿದ್ದರೂ ನಮ್ಮನ್ನ ಯಾರೂ ಕೆಣಕಲಾರರು.

**ಕೃಷ್ಣಾಂಸವಿನ್ಯಸ್ತಕರಾಬ್ಜಮಾಲಾ**
**ಹೃಷ್ಟಾಃ ಸ್ತ್ರಿಯಸ್ತಾ ನನೃತುಃ ಸಲೀಲಾಃ ।**
**ಆನಂದಮೂರ್ತಿಂ ಪರಿರಭ್ಯ ಮರ್ತ್ಯಃ**
**ಕೋ ನಾಮ ನೋ ನೃತ್ಯತಿ ಸಿದ್ಧಕೃತ್ಯಃ ॥ ೫೨ ॥**

ಕೃಷ್ಣ=ಕೃಷ್ಣನ; ಅಂಸ=ಹೆಗಲಲ್ಲಿ; ವಿನ್ಯಸ್ತ=ಇಟ್ಟಿರುವ; ಕರ=ಕೈಗಳೆಂಬ; ಅಬ್ಜ=ಕಮಲಗಳ; ಮಾಲಾಃ=ಮಾಲಿಕೆವುಳ್ಳ; ಹೃಷ್ಟಾಃ=ಆನಂದಗೊಂಡ; ಸ್ತ್ರಿಯಃ=ಗೋಪಿಯರು; ತಾಃ=ಆ; ನನೃತುಃ=ಕುಣಿದರು; ಸಲೀಲಾಃ=ವಿಲಾಸದಿಂದ ಕೂಡಿ; ಆನಂದ ಮೂರ್ತಿಂ=ಆನಂದಸ್ವರೂಪವನ್ನು; ಪರಿರಭ್ಯ=ಆಲಿಂಗಿಸಿ; ಮರ್ತ್ಯಃ=ಮಾನವನು; ಕೋನಾಮ=ಯಾರುತಾನೆ?; ನೋ ನೃತ್ಯತಿ=ಕುಣಿಯುವುದಿಲ್ಲ; ಸಿದ್ಧಕೃತ್ಯಃ=ಧನ್ಯನಾದ.

ಈ ಗೋಪಿಯರು ಕೃಷ್ಣನ ಕೊರಳಿಗೆ ತಮ್ಮ ಎರಡು ಕೈಗಳನ್ನು ಹಾಕಿ ಆಲಿಂಗಿಸಿದ್ದಾರೆ. ಬಹಳ ನೆಮ್ಮದಿಯಲ್ಲಿ ಇದ್ದಾರೆ. ನಾನಾ ರೀತಿಯ ಆಟವನ್ನು ಆಡುತ್ತಾ ಬಹಳವಾಗಿ ಕುಣಿಯುತ್ತಿದ್ದಾರೆ. ರಾಜರು ಹೇಳುತ್ತಾರೆ –ಈ ಗೋಪಿಯರು ದೇವರ ಜೊತೆ ಆಡುತ್ತಿದ್ದಾರೆ. ದೇವರು ಸ್ವಯಂ ಸದಾ ಆನಂದಪೂರ್ಣ. ಇಂತಹ ದೇವರನ್ನು ಆಲಿಂಗಿಸಿದರೆ ಎಂತಹವನೂ ಒಮ್ಮೆ ತನ್ನ ಸಾಂಸಾರಿಕ ಸಮಸ್ಯೆಗಳನ್ನು ಮರೆತು ಕುಣಿಯುತ್ತಾನೆ. ಇಂತಹ ದೇವರನ್ನು ಪಡೆದಾಗ ಎಂತಹ ವ್ಯಕ್ತಿಗೂ ಒಮ್ಮೆ ಧನ್ಯತಾ ಭಾವನೆ ಬರುತ್ತದೆ. ಆಗ ಮನಸ್ಸು ಹಗುರವಾಗಿ ತಾನು ಹಾರಾಡುತ್ತಾನೆ.

**ಸಂದೇಶ** : ಮಾನವನನ್ನು ಮರ್ತ್ಯ ಎಂದು ಕರೆಯುತ್ತಾರೆ. ಅಂದರೆ ಮರಣಶೀಲ ಎಂದರ್ಥ. ಇದೇ ದೊಡ್ಡ ದುಃಖ. ಈ ದುಃಖದಿಂದ ಬಿಡುಗಡೆ ಹೊಂದಲು ದೇವರನ್ನು ಆನಂದರೂಪನೆಂದು ಚಿಂತಿಸಬೇಕು.

**ಆಬಧ್ಯ ಮುಕ್ತಗಣವಲ್ಲಭಕಂಠಮೇಕಾ**
**ಬಾಲಾ ವಿಮುಕ್ತಕಬರೀಭರಬಂಧನಾಯ ।**
**ಚಕ್ರೇ ನ ಯತ್ನಮಲಸಾ ಗುರುಕಾರ್ಯಲಾಭೇ**
**ಲಬ್ಧಾರ್ಥಸಾಧನಕೃತಿರ್ನ ಹಿ ದೃಷ್ಟಪೂರ್ವಾ ॥ ೫೩ ॥**

ಆಬಧ್ಯ=ಕಟ್ಟಿ; ಮುಕ್ತ=ಮುಕ್ತರು; ಗಣ=ಸಮೂಹಕ್ಕೆ; ವಲ್ಲಭ=ಪ್ರಿಯನಾದ ಕೃಷ್ಣನ; ಕಂಠಂ=ಕುತ್ತಿಗೆಯನ್ನು; ಏಕಾ=ಒಬ್ಬಳು; ಬಾಲಾ=ಬಾಲಿಕೆಯು; ವಿಮುಕ್ತ=ಬಿಚ್ಚಿದ; ಕಬರೀಭರ=ತಲೆಸೂಡಿಯ; ಬಂಧನಾಯ=ಕಟ್ಟಲು; ಚಕ್ರೇ=ಮಾಡಿದಳು; ನ=ಇಲ್ಲ; ಯತ್ನಂ=ಪ್ರಯತ್ನವನ್ನು; ಅಲಸಾ=ಸೋಮಾರಿ; ಗುರು=ದೊಡ್ಡ; ಕಾರ್ಯ=ಕೆಲಸದ; ಲಾಭೇ=ಲಾಭದಲ್ಲಿ; ಲಘು=ಅಲ್ಪ; ಅರ್ಥ=ಪ್ರಯೋಜನಕ್ಕೆ; ಸಾಧನ=ಪ್ರಯತ್ನದ; ಕೃತಿಃ=ಮಾಡುವಿಕೆಯು; ದೃಷ್ಟ=ಕಂಡದ್ದು; ಪೂರ್ವಾ=ಮೊದಲು.

ಒಬ್ಬಳ ತಲೆಕೂದಲು ಪೂರಾ ಬಿಚ್ಚಿದೆ. ಅದನ್ನು ಕಟ್ಟುವ ಗೊಡವೆಗೆ ತಾನು ಹೋಗಿಲ್ಲ. ಅದರ ಬಗ್ಗೆ ಅಸಡ್ಡೆ ತೋರಿದ್ದಾಳೆ. ಆದರೆ ಕೃಷ್ಣನ ಕೊರಳನ್ನು ತನ್ನ ಎರಡೂ ಕೈಗಳಿಂದ ಕಟ್ಟಿದ್ದಾಳೆ. ಅಂದರೆ ಆಲಿಂಗಿಸಿದ್ದಾಳೆ ಎಂದರ್ಥ. ಯಾಕೆ ಹೀಗೆ ಮಾಡಿದಳು –ತನ್ನ ಸ್ವಂತ ವಸ್ತುವನ್ನು ಬಂಧಿಸದೆ ಕೃಷ್ಣನನ್ನು ಯಾಕೆ ಬಂಧಿಸಿದಳು? ಕೃಷ್ಣನು ನಿತ್ಯಮುಕ್ತ. ಹಾಗೆಯೇ ಎಲ್ಲಾ ದುಃಖಗಳಿಂದ ಮುಕ್ತರಾದವರಿಗೆ ಪ್ರಿಯನು. ಅಂತಹವನನ್ನು ಬಂಧಿಸಿದರೆ ನಮಗೂ ನಿತ್ಯವಾಗಿ ಇದರಿಂದ ಸಿಗುವ ಈ ದುಃಖದಿಂದ ಮುಕ್ತಿ ಸಿಗುತ್ತದೆ. ತಲೆಕೂದಲು ನಿತ್ಯಮುಕ್ತವಲ್ಲ. ಈಗ ಮುಕ್ತವಾದದ್ದು (ಬಿಚ್ಚಿದ್ದು). ಈಗ ತಾನೆ ಮುಕ್ತವಾದದ್ದನ್ನು ಬಂಧಿಸಿದರೆ ನಮಗೆಲ್ಲಿ ನಿತ್ಯ ಬಿಡುಗಡೆ ದೊರೆಯುತ್ತದೆ? ಲೋಕದಲ್ಲಿಯೂ ಇದೆ –ಬಡತನದಿಂದ ಈಗ ತಾನೇ ಚೇತರಿಸಿಕೊಂಡವನು. ಇನ್ನೊಬ್ಬನನ್ನು ಹೇಗೆ ತಾನೆ ಉದ್ಧರಿಸಿಯಾನು?

**ಸಂದೇಶ** : ನಮ್ಮ ಮುಂದೆ ಲೋಕದ ಕೆಲಸ ದೇವರ ಕೆಲಸ ಎರಡು ಬಂದಾಗ ಮೊದಲು ದೇವರ ಕೆಲಸವನ್ನು ಮಾಡಬೇಕು.

**ಕೃಷ್ಣಾಲಿಂಗನಭಂಗಶಂಕಿಹೃದಯಾಃ ಸ್ರಸ್ತಂ ಕಚಂ ಪ್ರಚ್ಯುತಂ**
**ವಕ್ಷೋಜಾಂಬರಮುದ್ಗತಾಮಪಿ ನ ತಾ ನೀವೀಂ ಬಬಂಧುಃ ಕಿಲ ।**
**ತದ್ಭರ್ತ್ರಾ ರತಿಸೂಚಕಂ ಮೃಗದೃಶೋ ದೃಷ್ಟ್ವಾ ಪ್ರಹೃಷ್ಟಾನನಾ**
**ರತ್ಯಂತೋಚಿತಕರ್ಮ ಚಕ್ರುರಮತಂ ನೈವೇತಿ ಚೇತೋ ಮಮ ॥ ೫೪ ॥**

ಕೃಷ್ಣ=ಕೃಷ್ಣನ; ಆಲಿಂಗನ=ಆಲಿಂಗನದ; ಭಂಗ=ನಾಶದ; ಶಂಕಿ=ಸಂಶಯವುಳ್ಳ; ಹೃದಯಾಃ=ಮನವುಳ್ಳ; ಸ್ರಸ್ತಂ=ಬಿಚ್ಚಿದ; ಕಚಂ=ತಲೆಕೂದಲನ್ನು; ಪ್ರಚ್ಯುತಂ=ಜಾರಿದ; ವಕ್ಷೋಜ=ಸ್ತನಗಳ; ಅಂಬರಂ=ಬಟ್ಟೆಯನ್ನು; ಉದ್ಗತಾಂ ಅಪಿ=ಜಾರಿದ್ದರೂ; ನ=ಇಲ್ಲ; ತಾಃ=ಅವರು; ನೀವೀಂ=ಸೀರೆಯನ್ನು; ಬಬಂಧುಃ ಕಿಲ=ಕಟ್ಟಿದರು; ತತ್=ಅದನ್ನು; ಭರ್ತ್ರಾ=ಪತಿಯಿಂದ; ರತಿ=ಕ್ರೀಡೆಗೆ; ಸೂಚಕಂ=ಸೂಚನೆಯಾದ; ಮೃಗ=ಜಿಂಕೆಯಂತೆ; ದೃಶಃ=ಕಣ್ಣುಳ್ಳ; ದೃಷ್ಟ್ವಾ=ನೋಡಿ; ಪ್ರಹೃಷ್ಟ=ಆನಂದಗೊಂಡ; ಆನನಾಃ=ಮುಖವುಳ್ಳ; ರತಿ=ಕ್ರೀಡೆಯ; ಅಂತ=ಕೊನೆಯಲ್ಲಿ; ಉಚಿತ=ಯೋಗ್ಯವಾದ; ಕರ್ಮ=ಕೆಲಸವನ್ನು;

ಚಕ್ರುಃ=ಮಾಡಿದರು; ಅಮತಂ=ಅನಿಷ್ಟವಾದ; ನ ಏವ=ಇಲ್ಲ; ಇತಿ=ಎಂದು; ಚೇತಃ= ವಿಚಾರವು; ಮಮ=ನನ್ನ.

ತಲೆಕೂದಲು ಬಿಚ್ಚಲಿ. ಕುಪ್ಪಸ, ಸೀರೆಗಳು ಜಾರಲಿ. ಏನಾದರೂ ಅದನ್ನು ಸರಿಮಾಡಲು ಈ ಗೋಪಿಯರು ಅಪೇಕ್ಷಿಸಲಿಲ್ಲ. ಯಾಕೆಂದರೆ ಸರಿಮಾಡಬೇಕು ಕೈಗಳಿಂದ. ಈ ಗೋಪಿಯರು ಕೈಗಳಿಂದ ಕೃಷ್ಣನನ್ನು ಆಲಿಂಗಿಸಿಕೊಂಡಿದ್ದಾರೆ. ಸರಿಮಾಡುವ ಸಲುವಾಗಿ ಕೈಗಳನ್ನು ಉಪಯೋಗಿಸಿದರೆ ಅಷ್ಟುಹೊತ್ತು ದೇವರ ಆಲಿಂಗನ ತಪ್ಪುತ್ತೆ ಎಂಬ ಭಯ ಅವರಿಗೆ. ಈ ಎಲ್ಲಾ ಅವಸ್ಥೆಗಳನ್ನು ಕಂಡು ಗೋಪಿಯರು ಸ್ವಯಂ ಆನಂದವನ್ನೇ ಪಟ್ಟಿದ್ದಾರೆ. ಯಾಕೆಂದರೆ ಇವುಗಳೆಲ್ಲಾ ಪತಿಯ ಜೊತೆಗೆ ವಿಹಾರಮಾಡಲು ಪೂರ್ವ ಸೂಚನೆಗಳು. ಈ ಸೂಚನೆಗಳು ಇವರ ದೇಹದಲ್ಲಿ ಸಹಜವಾಗಿ ಆಗಿದೆ. ಆಗ ಕೃಷ್ಣನು ಇವರ ಜೊತೆ ರಮಿಸುತ್ತಾನೆ. ಈ ಆನಂದದಿಂದ ಇವುಗಳನ್ನು ಸರಿಮಾಡಲು ಹೋಗಿಲ್ಲ. ಆದರೆ ರಾಜರು ಈ ರೀತಿ ಉತ್ಪ್ರೇಕ್ಷಿಸುತ್ತಾರೆ –ವಸ್ತ್ರಾದಿಗಳನ್ನು ಸರಿಮಾಡುವುದು ರತಿಕ್ರೀಡೆ ಎಲ್ಲಾ ಮುಗಿದ ಮೇಲೆ ಎಂದು ಲೋಕದಲ್ಲಿ ಇದೆ. ಈಗ ಈ ಗೋಪಿಯರು ವಸ್ತ್ರಾದಿಗಳನ್ನು ಸರಿ ಮಾಡಿದರೆ ಈ ಗೋಪಿಯರಿಗೆ ರತಿಕ್ರೀಡೆಯು ಸಾಕು ಕಾಣುತ್ತದೆ ಎಂದು ಕೃಷ್ಣನು ಎಲ್ಲಿ ಹಿಂದೆ ಹೋಗುತ್ತಾನೋ ಎಂಬ ಭಯದಿಂದ ಸರಿಮಾಡಲಿಲ್ಲ ಎಂದು.

<u>**ಸಂದೇಶ**</u> : ದೇವರ ಕೆಲಸದಲ್ಲಿ ನಾವು ತೊಡಗುವಾಗ ಎಂದೂ 'ಸಾಕು' ಎಂಬುದಕ್ಕೆ ಸೂಚನೆಗಳು ನಮ್ಮಲ್ಲಿ ಆಗದಂತೆ ನೋಡಿಕೊಳ್ಳಬೇಕು.

**ಕಾಚಿಚ್ಚುಚುಂಬೇ ಕಮಲೇಕ್ಷಣಸ್ಯ**
**ಕಾರುಣ್ಯಸಿಂಧೋಃ ಕರಮಬ್ಜನೇತ್ರಾ ।**
**ಆಶ್ಲಿಷ್ಯ ಕಂಠಂ ಬತ ಪೂರ್ವವನ್ಮಾಂ**
**ಸ್ವೀಯಾಂ ನ ಮುಂಚೇತಿ ತಮಂಚಯಂತೀ ॥ ೫೫ ॥**

ಕಾಚಿತ್=ಒಬ್ಬಳು; ಚುಚುಂಬೇ=ಮುತ್ತಿಕ್ಕಿದಳು; ಕಮಲ=ತಾವರೆಯಂತೆ; ಈಕ್ಷಣಸ್ಯ=ಕಣ್ಣುಳ್ಳ; ಕಾರುಣ್ಯ=ದಯೆಯಿಂದ; ಸಿಂಧೋಃ=ಸಮುದ್ರದಂತಿರುವ; ಕರಂ= ಕೈಯನ್ನು; ಅಬ್ಜ=ಕಮಲದಂತೆ; ನೇತ್ರಾ=ಕಣ್ಣುಳ್ಳ; ಆಶ್ಲಿಷ್ಯ=ಆಲಿಂಗಿಸಿ; ಕಂಠಂ= ಕುತ್ತಿಗೆಯನ್ನು; ಬತ=ದುಃಖ; ಪೂರ್ವವತ್=ಮೊದಲಿನಂತೆ; ಮಾಂ=ನನ್ನನ್ನು; ಸ್ವೀಯಾಂ= ನಿನ್ನವಳಾದ; ನ ಮುಂಚ=ಬಿಡಬೇಡ; ಇತಿ=ಎಂದು; ತಂ=ಕೈಯನ್ನು; ಅಂಚಯಂತೀ= ಪೂಜಿಸುತ್ತಾ.

ಕಮಲಾಕ್ಷಿಯಾದ ಮಗದೊಬ್ಬಳು ಗೋಪಿಯು ಕೃಷ್ಣನನ್ನು ಆಲಿಂಗಿಸಿದಳು. ಆತನು ಕಮಲಾಕ್ಷನು. ಆತನ ಕೈಯನ್ನು ತಾನು ಪೂಜಿಸಿದಳು. ಅನಂತರ ಚುಂಬಿಸಿದಳು.

ಎಲೋ ಕೈಯೇ, ನಾನು ನಿನ್ನವಳು. ಮೊದಲು ನನ್ನನ್ನು ತ್ಯಜಿಸಿದ್ದಿ. ಈಗ ಪುನಃ ನನ್ನ ಬಿಡಬೇಡ ಎಂದು ಕೈಯನ್ನು ಕುರಿತು ಹೇಳಿದಳು. ವ್ಯಕ್ತಿಯು ತೆಗೆದುಕೊಳ್ಳುವುದು, ಬಿಡುವುದು ಎಲ್ಲವನ್ನೂ ಮಾಡುವುದು ಕೈಯಿಂದ ತಾನೆ. ಆದ್ದರಿಂದಲೇ ಕೈಗೆ ಕರ ಎಂದು ಹೆಸರು. ಈ ಕಾರಣದಿಂದ ಆಕೆ ಕೃಷ್ಣನ ಕೈಯನ್ನು ಪೂಜಿಸಿದಳು. ಒಂದು ವಸ್ತುವನ್ನು ನಾವು ಮುದ್ದಿಸಿದರೆ ಅದು ನಮ್ಮನ್ನು ಬಿಡುವುದಿಲ್ಲ.

**<u>ಸಂದೇಶ</u>** : ದೇವರ ಅವಯವಗಳಿಗೂ ದೇವರಿಂದ ಅಭೇದವನ್ನು ತಿಳಿಯಬೇಕು. ಅನಂತರ ಒಂದೊಂದು ಅವಯವವನ್ನೂ ಪೂಜಿಸಬೇಕು.

**ಶ್ರೀಲೋಲಕೋಮಲಕಪೋಲವಿಲಗ್ನಗಂಡ-**
**ಲೋಲಂ ಕಯಾಽಪಿಬಲಯಾಽಽನನಮನ್ಯವಧ್ವಾಃ ।**
**ಜಘ್ನೇ ಸ್ವವಕ್ತ್ರಗತವೀಟಿಕಯಾ ತದೇವ**
**ಕೃಷ್ಣಸ್ಯ ಸೂಚಕಮಭೂದಿವ ದಿತ್ಸತಸ್ತಾಮ್ ॥ ೫೬ ॥**

ಶ್ರೀ=ರಮೆಗೆ; ಲೋಲ=ಪ್ರಿಯನಾದ ಕೃಷ್ಣನ; ಕೋಮಲ=ಚಂದದ; ಕಪೋಲ= ಗಂಡಸ್ಥಳದಲ್ಲಿ; ವಿಲಗ್ನ=ಸಂಬದ್ಧವಾದ; ಗಂಡ=ಕಪೋಲದಿಂದ; ಲೋಲಂ= ಚಂದವಾದ; ಕಯಾ ಅಪಿ=ಯಾರೋ ಒಬ್ಬ; ಅಬಲಯಾ=ಗೋಪಿಯಿಂದ; ಆನನಂ=ಮುಖವನ್ನು; ಅನ್ಯ=ಇನ್ನೊಬ್ಬ; ವಧ್ವಾಃ=ಗೋಪಿಯ; ಜಘ್ನೇ=ಉಗುಳಿದಳು; ಸ್ವ=ತನ್ನ; ವಕ್ತ್ರ=ಮುಖದಲ್ಲಿ; ಗತ=ಇರುವ; ವೀಟಿಕಯಾ=ತಾಂಬೂಲದಿಂದ; ತತ್ ಏವ=ಅದೇ; ಕೃಷ್ಣಸ್ಯ=ಕೃಷ್ಣನಿಗೆ; ಸೂಚಕಂ=ಸೂಚಕವು; ಅಭೂತ್ ಇವ=ಆದಂತೆ; ದಿತ್ಸತಃ=ಕೊಡಲು ಇಚ್ಛಿಸುವ; ತಾಂ=ಅದನ್ನು.

ರಮಾಪತಿಯಾದ ಕೃಷ್ಣನ ಕಪೋಲಕ್ಕೆ ಒಬ್ಬಳು ಗೋಪಿಯು ತನ್ನ ಕಪೋಲವನ್ನು ತಾಗಿಸಿಕೊಂಡಿದ್ದಳು. ಇದರಿಂದಾಗಿ ಆಕೆಯ ಇಡೀ ಮುಖ ಚಂದ ಕಾಣುತ್ತಿತ್ತು. ಆ ಹೊತ್ತಿಗೆ ಇನ್ನೊಬ್ಬಳು ಬಂದಳು. ಆಕೆಗೆ ಏನು ತೋರಿತೋ? ತನ್ನ ಬಾಯಿಯ ಎಲೆ ಅಡಿಕೆಯನ್ನು ಆಕೆಯ ಕೆನ್ನೆಗೆ ಉಗುಳಿದಳು. ಮೊದಲನೆಯವಳು ತನ್ನ ಕೆನ್ನೆಯನ್ನು ಕೃಷ್ಣನ ಕಪೋಲಕ್ಕೆ ತಾಗಿಸಿದ್ದು ಯಾಕೆಂದರೆ ಕೃಷ್ಣನ ತಾಂಬೂಲಚರ್ವಣದ ಎಂಜಲಿನ ಆಸೆಯಿಂದ. ಇದು ಕೃಷ್ಣನಿಗೂ ತಿಳಿದಿತ್ತು. ಎಷ್ಟು ಹೊತ್ತಿಗೆ ಕೊಡಲಿ ಎಂದು ಕೃಷ್ಣನು ಆಲೋಚಿಸುತ್ತಿದ್ದ. ಎರಡನೆಯವಳು ಉಗುಳಿದ್ದು ಕೃಷ್ಣನು ಎಂಜಲನ್ನು ಕೊಡಲು ಸೂಚನೆಯಂತಿತ್ತು. ಎರಡನೆಯವಳು ಮತ್ಸರದಿಂದ ಉಗುಳಿದ್ದಿರಲೂ ಬಹುದು. ಆದರೆ ರಾಜರು ಯಾವ ಗೋಪಿಯರ ದೋಷವನ್ನು ಹೇಳುವುದಿಲ್ಲ. ದೋಷದಂತೆ ಕಂಡರೂ ಅದನ್ನು ಗುಣವನ್ನಾಗಿ ಪರಿಣಮಿಸುತ್ತಾರೆ.

**<u>ಸಂದೇಶ</u>** : ನಾವು ಸದಾ ದೇವರ ಎಂಜಲಿಗಾಗಿ ಕಾಯುತ್ತಿರಬೇಕು. **'ಉಚ್ಛಿಷ್ಟ-**

**ಭೋಜಿನೋ ದಾಸಾಃ ತವ ಮಾಯಾಂ ಜಯೇಮಹಿ'** ದೇವರ ಮಾಯೆಯಿಂದ ಹೊರಬರಬೇಕಾದರೆ ದೇವರ ಉಚ್ಛಿಷ್ಟವನ್ನೇ ಉಣಬೇಕು.

ವಿಲಾಸಮಸ್ಯಾಂ ವರಸಿದ್ಧಸತ್ಕೃತಾ–
ವಿಲಾಸಮಸ್ಯಾಂಬರಸಿದ್ಧಸತ್ಕೃತಾ ।
ತತಾನ ವೀಣಾಧ್ವನಿಗಾನವಿದ್ಯಯಾ–
ತತಾನವೀನಾಧ್ವನಿಗಾನವಿದ್ಯಯಾ ॥ ೫೭ ॥

ವಿಲಾಸಂ=ಅನುಕರಣೆಯನ್ನು; ಅಸ್ಯಾಂ=ಈ ಕ್ರೀಡೆಯಲ್ಲಿ; ವರ=ವರದಿಂದ; ಸಿದ್ಧ=ಉಂಟಾದ; ಸತ್=ಒಳ್ಳೆಯ; ಕೃತ=ಪುಣ್ಯದಿಂದ; ಆವಿಲ=ಕೂಡಿದ; ಅಸಮಸ್ಯ=ಅಸ ದೃಶನ; ಅಂಬರ=ಆಕಾಶದ; ಸಿದ್ಧ=ಸಿದ್ಧರಿಂದ; ಸತ್ಕೃತಾ=ಆದೃತವಾದ; ತತಾನ=ಮಾಡಿ ದಳು; ವೀಣಾ=ವೀಣೆಯ; ಧ್ವನಿ=ಶಬ್ದದಂತೆ; ಗಾನ=ಹಾಡಿನ; ವಿದ್ಯಯಾ=ವಿದ್ಯೆಯಿಂದ; ಆತತಾ=ತುಂಬಿದ; ನವೀನ=ಹೊಸದಾದ; ಅಧ್ವನಿ=ದಾರಿಯಲ್ಲಿ; ಗಾನ=ಹಾಡನ್ನು; ವಿತ್=ತಿಳಿದದ್ದು; ಯಯಾ=ಯಾರಿಂದ.

ಈ ಸಂದರ್ಭದಲ್ಲಿ ಕೃಷ್ಣನು ಹಾಡುತ್ತಲೂ ಇದ್ದ. ಇವನಂತೆ ಹಾಡುವವರು ಯಾರೂ ಇಲ್ಲ. ಆದರೂ ಒಬ್ಬಳು ತಾನು ಪ್ರಯತ್ನಪೂರ್ವಕವಾಗಿ ಆತನಂತೆ ಹಾಡಿದಳು. ಮಧ್ಯೆ ಯಾವುದೇ ರೀತಿಯ ಅಪಸ್ವರಗಳು ಬರಲಿಲ್ಲ. ಈ ಅಂಶದಲ್ಲಿ ಕೃಷ್ಣನಂತೆ ಹಾಡಿದಳು. ಇಂಪಿನ ವಿಷಯದಲ್ಲಿ ಅಜಗಜ ಅಂತರ ಇದೆ. ಸ್ವಲ್ಪ ಅಂಶದಲ್ಲಿಯಾದರೂ ಸಾಮ್ಯ ಇರಬೇಕಾದರೆ ಇವಳಿಗೆ ಜನ್ಮಾಂತರದ ಪುಣ್ಯ ಬಹಳ ಇರಬೇಕು. ಆದ್ದರಿಂದಲೇ ಇವಳ ಹಾಡನ್ನು ಆಕಾಶದಲ್ಲಿ ದೇವತೆಗಳು ಬಹಳ ಆದರಿಸಿದರು. ಇವಳ ಧ್ವನಿಯೂ ವೀಣೆಯ ಧ್ವನಿಯಂತೆ ಶ್ರಾವ್ಯವಾಗಿತ್ತು. ಈ ರೀತಿ ಹಾಡುವ ಮೂಲಕ ಈಕೆಯು ಜನರಿಗೆ ಸಂಗೀತದಲ್ಲಿ ಒಂದು ಹೊಸ ಕ್ರಮಕ್ಕೆ ನಾಂದಿ ಹಾಕಿದಳು –ಇನ್ನೊಬ್ಬರು ಹಾಡಿದಂತೆಯೂ ಹಾಡಲು ಆಗುತ್ತದೆ ಎಂದು.

**ಸಂದೇಶ** : ಕೃಷ್ಣನನ್ನು ಧ್ಯಾನಿಸುವವರಿಗೆ ಸಾಧರ್ಮ್ಯರೂಪ ಮೋಕ್ಷವು ಲಭಿಸುತ್ತದೆ.

ಭರ್ತುರ್ಮೃದುಸ್ವರಕೃತಾನುಕೃತಿಃ ಸ್ವಗೀತಂ
ವಿಸ್ತಾರ್ಯ ಹೃದ್ಯಕಲಕಂಠವಧೂರಿವಾದ್ಧಾ ।
ಮುಗ್ಧೀಭವತ್ಸು ಸಕಲೇಷು ಮುಕುಂದವಕ್ತ್ರಂ
ಸ್ನಿಗ್ಧಾ ಚುಚುಂಬ ರಹಸೀವ ವಿಶಂಕಮೇಕಾ ॥ ೫೮ ॥

ಭರ್ತುಃ=ಪತಿಯ; ಮೃದು=ಇಂಪಾದ; ಸ್ವರ=ಧ್ವನಿಯಿಂದ; ಕೃತ=ಮಾಡಲ್ಪಟ್ಟ;

ಅನುಕೃತಿಃ=ಅನುಕರಣೆವುಳ್ಳ; ಸ್ವಗೀತಂ=ತನ್ನ ಹಾಡನ್ನು; ವಿಸ್ತಾರ್ಯ=ಬೆಳೆಸಿ; ಹೃದ್ಯ=ಚಂದದ; ಕಲಕಂಠ=ಕೋಗಿಲೆಯ; ವಧೂಃ ಇವ=ಪತ್ನಿಯಂತೆ; ಅದ್ಧಾ=ಚೆನ್ನಾಗಿ; ಮುಗ್ಧೀಭವತ್ಸು=ಮೋಹಗೊಳ್ಳುತ್ತಿರಲು; ಸಕಲೇಷು=ಎಲ್ಲರೂ; ಮುಕುಂದ=ದೇವರ; ವಕ್ತ್ರಂ=ಬಾಯಿಯನ್ನು; ಸ್ನಿಗ್ಧಾ=ಪ್ರೀತಿ ಉಳ್ಳವಳಾಗಿ; ಚುಚುಂಬ=ಮುದ್ದಿಸಿದಳು; ರಹಸಿ ಇವ=ಗುಟ್ಟಿನಲ್ಲಿ ಎಂಬಂತೆ; ವಿಶಂಕಂ=ಸಂಶಯ ಇಲ್ಲದೆ; ಏಕಾ=ಒಬ್ಬಳು.

ಒಬ್ಬಳಿಗೆ ಕೃಷ್ಣನ ಮುಖವನ್ನು ಮುದ್ದಿಸಬೇಕು ಎಂದು ತೋರಿತು. ಅಲ್ಲಿ ಬಹಳ ಜನರು ಇದ್ದಾರೆ. ಆದ್ದರಿಂದ ನಾಚಿಕೆ. ಇದಕ್ಕೊಂದು ಉಪಾಯ ಹೂಡಿದಳು. ತಾನು ಕೃಷ್ಣನಂತೆ ಹಾಡಲು ಆರಂಭಿಸಿದಳು. ಕೃಷ್ಣನಾದರೂ ಕೋಗಿಲೆಯಂತೆ ಹಾಡುವವನು. ಇವಳು ತಾನು ಹೆಣ್ಣುಕೋಗಿಲೆ ಎಂದು ಭಾವಿಸಿ ಜೋರಾಗಿ ಇಂಪಾಗಿ ಹಾಡುತ್ತಿದ್ದಾಳೆ. ಇದನ್ನು ಕೇಳಿಸಿಕೊಂಡವರು ಪರವಶರಾದರು. ತಾವು ಎಲ್ಲಿದ್ದೇವೆ ಎಂಬುದನ್ನು ಮರೆತರು. ಇದನ್ನು ನೋಡಿದ ಆಕೆ ಈಗ ಯಾರೂ ಇಲ್ಲ. ನಾವಿಬ್ಬರೇ ಇರುವುದು ಎಂದುತಿಳಿದು ಕೃಷ್ಣನನ್ನು ಥಟ್ಟನೆ ಚುಂಬಿಸಿದಳು.

**<u>ಸಂದೇಶ</u>** : ದೇವರ ಜೊತೆ ನಾವು ಏಕಾಂತದಲ್ಲಿ ಇರಬೇಕಾದರೆ ದೇವರನ್ನು ಅನುಸರಿಸಬೇಕು. ಆಗ ದೇವರು ನಮ್ಮ ಸುತ್ತಮುತ್ತ ಇರುವವರನ್ನು ಅನ್ಯಮನಸ್ಕರನ್ನಾಗಿ ಮಾಡುತ್ತಾನೆ. ಅನಂತರ ನಾವು ಯಥೇಚ್ಛವಾಗಿ ದೇವರ ಜೊತೆ ವ್ಯವಹರಿಸಬಹುದು.

**ಕಿಮಾಪ್ತಕಾಮಸ್ಯ ತವಾಭಿರೀಶ**
**ತಥಾಪಿ ನಸ್ತೋಷಯಸೇ ವಿಲಾಸೈಃ ।**
**ಇತೀರಯಂತೀವ ಕರಂ ಮುರಾರೇಃ**
**ಸ್ತನೇ ನ್ಯಧಾತ್ ಕಾಪಿ ಬಲೇನ ಬಾಲಾ ॥ ೫೯ ॥**

ಕಿಂ=ಏನು?; ಆಪ್ತ=ಹೊಂದಿದ; ಕಾಮಸ್ಯ=ಅಭೀಷ್ಟವುಳ್ಳ; ತವ=ನಿನಗೆ; ಆಭಿಃ=ಇವರಿಂದ; ಈಶ=ಒಡೆಯನೇ; ತಥಾಪಿ=ಹಾಗಿದ್ದರೂ; ನಃ=ನಮ್ಮನ್ನು; ತೋಷಯಸೇ=ಸಂತೋಷಗೊಳಿಸುತ್ತಿ; ವಿಲಾಸೈಃ=ಆಟಗಳಿಂದ; ಇತಿ=ಎಂದು; ಈರಯಂತೀ ಇವ=ಹೇಳುವವಳಂತೆ; ಕರಂ=ಕೈಯನ್ನು; ಮುರಾರೇಃ=ಕೃಷ್ಣನ; ಸ್ತನೇ=ಕುಚಗಳಲ್ಲಿ; ನ್ಯಧಾತ್=ಇಟ್ಟಳು; ಕಾಪಿ=ಒಬ್ಬಳು; ಬಲೇನ=ಬಲಾತ್ಕಾರದಿಂದ; ಬಾಲಾ=ಹುಡುಗಿಯು.

ಕೃಷ್ಣ, ನೀನು ಸದಾ ತೃಪ್ತ. ಅಲ್ಪರಾದ ನಮ್ಮಿಂದ ನಿನಗೆ ಯಾವ ಸುಖವೂ ಬೇಕಿಲ್ಲ. ಆದರೂ ನೀನು ನಮ್ಮ ಜೊತೆಗೆ ಬೆರೆತಿದ್ದಿ. ಆಡುತ್ತಿದ್ದಿ. ನಮ್ಮ ನೆಮ್ಮದಿಗೆ ಕಾರಣನಾಗಿದ್ದಿ ಎಂದು ಹೇಳುತ್ತಾ ಆತನ ಕೈಗಳನ್ನು ತನ್ನ ಎದೆಯ ಮೇಲೆ ಇರಿಸಿಕೊಂಡಳು. ಯದ್ಯಪಿ ಇವಳ ಉದ್ದೇಶ ಕೃಷ್ಣನು ತನ್ನ ಕೈಗಳಿಂದ ಇವಳ ಎದೆಯನ್ನು ಮುಟ್ಟಬೇಕೆಂದು.

ಆದರೆ ಆತನು ತಾನಾಗಿ ಯಾಕೆ ಮುಟ್ಟುತ್ತಾನೆ. ಇವಳಾಗಿ ಮುಟ್ಟಿಸಬೇಕು. ಆಗ ಕೃಷ್ಣನು ತಿರಸ್ಕರಿಸಿದರೆ? ಅದಕ್ಕಾಗಿ ಈ ರೀತಿ ಹೇಳುವವಳಂತೆ ಮುಟ್ಟಿಸಿಕೊಂಡಳು. ಲೋಕದಲ್ಲಿಯೂ ಇಂತಹ ವ್ಯವಹಾರ ನಡೆಯುತ್ತದೆ.

**ಸಂದೇಶ** : ದೇವರ ಪ್ರತಿಮಾದಿಗಳನ್ನು ಸ್ಪರ್ಶ ಮಾಡುವಾಗ ದೇವರ ಉದಾತ್ತ ವ್ಯಕ್ತಿತ್ವದ ಚಿಂತನೆ ಇರಬೇಕು.

**ಉರೋಜಯುಗ್ಮಾಂಕಿತಕುಂಕುಮಾಂಕಂ**
**ಅಸಾವಸಾಧಾರಣಮಾತ್ಮಭರ್ತುಃ ।**
**ಕರೇ ಸ್ಥಿರೀಕೃತ್ಯ ಚಕಾರ ಚಾರುಂ**
**ತಮನ್ಯಮಾನಿನ್ಯಭಿರುಚ್ಯಯೋಗ್ಯಮ್** ॥ ೬೦ ॥

ಉರೋಜ=ಸ್ತನಗಳ; ಯುಗ್ಮ=ಎರಡರಲ್ಲಿ; ಅಂಕಿತ=ಇರುವ; ಕುಂಕುಮ=ಕೇಸರಿಯ; ಅಂಕಂ=ಗುರುತುಳ್ಳ; ಅಸೌ=ಈ; ಅಸಾಧಾರಣ=ಅಸದೃಶವಾದ; ಆತ್ಮ=ತನ್ನ; ಭರ್ತುಃ=ಪತಿಯ; ಕರೇ=ಕೈಯಲ್ಲಿ; ಸ್ಥಿರೀಕೃತ್ಯ=ಇರುವಂತೆ ಮಾಡಿ; ಚಕಾರ=ಮಾಡಿದಳು; ಚಾರುಂ=ಚಂದದ; ತಂ=ಅದನ್ನು; ಅನ್ಯ=ಇನ್ನೊಬ್ಬ; ಮಾನಿನೀ=ಗೋಪಿಯ; ಅಭಿರುಚಿ=ಇಷ್ಟಕ್ಕೆ; ಅಯೋಗ್ಯಂ=ಅಯೋಗ್ಯವನ್ನಾಗಿ.

ಆಕೆಯು ಕೃಷ್ಣನ ಕೈಯನ್ನು ತನ್ನ ಎದೆಗೆ ಗಟ್ಟಿಯಾಗಿ ಒತ್ತಿಕೊಂಡಳು. ಅವಳ ಸ್ತನಗಳಿಗೆ ಹಚ್ಚಿದ ಕುಂಕುಮಕೇಸರಿಯಿಂದ ಕೂಡಿದ ಚಂದನವು ಕೃಷ್ಣನ ಕೈಗೆ ತಾಗಿತು. ಯಾಕೆ ಹೀಗೆ ಮಾಡಿದಳು? ಅಂದರೆ ಈ ಕೈಯು ನನಗೆ ಮಾತ್ರ ಸೀಮಿತವಾಗಿರಬೇಕು. ಕೃಷ್ಣನ ಕೈಯಲ್ಲಿ ಕೇಸರಿಯನ್ನು ನೋಡಿದ ಇತರ ಗೋಪಿಯರು, ಹೋ ಕೃಷ್ಣನು ತನ್ನ ಕೈಯನ್ನು ಸವತಿಯ ಮೇಲಿಟ್ಟಿದ್ದಾನೆ. ನಮಗೆ ಈ ಕೈ ಬೇಡ ಎಂದು ಸವತಿಮಾತ್ಸರ್ಯದಿಂದ ಕೃಷ್ಣನನ್ನು ತ್ಯಜಿಸುತ್ತಾರೆ. ಆಗ ಕೃಷ್ಣನು ನನಗೆ ಮಾತ್ರ ಸಿಗುತ್ತಾನೆ ಎಂಬ ಭಾವನೆಯಿಂದ.

**ಸಂದೇಶ** : ಪ್ರತಿಯೊಬ್ಬ ವ್ಯಕ್ತಿಗೂ ಬಿಂಬರೂಪ ಬೇರೆ ಬೇರೆ ಇದೆ. ಒಬ್ಬನ ಬಿಂಬರೂಪವನ್ನು ಇನ್ನೊಬ್ಬನು ಉಪಾಸಿಸುವಂತಿಲ್ಲ.

**ಮುದಾವಹಾ ಭಾಸುರಗೀತಶೋಭಾ**
**ವಿಭಾತಿ ವೃಂದಾವನರಾಸಲೀಲಾ ।**
**ಹರೇಶ್ಚ ಮೂರ್ತಿಃ ಶತಶೋಽಂಗನಾಲ್ಯಾಂ**
**ಉದಾವಹಾಭಾ ಸುರಗೀತಶೋಭಾ** ॥ ೬೧ ॥

ಮುತ್=ಆನಂದವನ್ನು; ಆವಹಾ=ಉಂಟುಮಾಡುವ; ಭಾಸುರ=ಚಂದದ; ಗೀತ=ಹಾಡುಗಳಿಂದ; ಶೋಭಾ=ಬೆಳಗುವ; ವಿಭಾತಿ=ಶೋಭಿಸುತ್ತದೆ; ವೃಂದಾವನ= ಕಾಡಲ್ಲಿ; ರಾಸಲೀಲಾ=ರಾಸಲೀಲೆಯು; ಹರೇಃ ಚ=ಕೃಷ್ಣನ; ಮೂರ್ತಿಃ=ರೂಪವು; ಶತಶಃ= ನೂರಾರು; ಅಂಗನಾ=ಗೋಪಿಯರ; ಆಲ್ಯಾಂ=ಗುಂಪಲ್ಲಿ; ಉದಾವಹಾ=ಮೋಡದಂತೆ; ಆಭಾ=ಕಾಂತಿವುಳ್ಳ; ಸುರ=ದೇವತೆಗಳಿಂದ; ಗೀತಾ=ವರ್ಣಿತವಾದ; ಶೋಭಾ=ಪ್ರಕಾಶವುಳ್ಳ.

ಇವರೆಲ್ಲಾ ಸೇರಿಕೊಂಡು ಕಾಡಲ್ಲಿ ರಾಸಲೀಲೆಯನ್ನು ಆರಂಭಿಸಿದರು. ಈ ಆಟದ ಜೊತೆಗೆ ಹಾಡುಗಳೂ ಇತ್ತು. ಇದರಿಂದ ಒಂದು ರೀತಿಯ ಮೆರಗು ಈ ಆಟಕ್ಕೆ. ಆಡುವವರಿಗೂ ನೋಡುವವರಿಗೂ ಬಹಳ ಆನಂದ. ಯಾವ ಗೋಪಿಗೂ ಬೇಸರ ಆಗದಂತೆ ಕೃಷ್ಣನು ಗೋಪಿಯರ ಸಂಖ್ಯೆಗನುಗುಣವಾಗಿ ಬಹಳ ರೂಪವನ್ನು ಧರಿಸಿದನು. ಎಲ್ಲಾ ರೂಪಗಳೂ ಒಂದೇ ರೀತಿ ಇದ್ದವು. ನೀಲ ಮೋಡದಂತೆ ಹೊಳೆಯುತ್ತಿದ್ದವು. ದೇವತೆಗಳು ಈ ರೂಪಗಳನ್ನು ಬಾಯಿತುಂಬಾ ಹೊಗಳುತ್ತಿದ್ದರು.

**ಸಂದೇಶ** : ದೇವರ ಜೊತೆ ವ್ಯವಹರಿಸುವವರಿಗೆ ಸಾರೂಪ್ಯ ಮೋಕ್ಷವು ಸಿದ್ಧ.

**ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋಽಷ್ಟಮೋಽಯಂ ಮುದಾಮ್ ॥**
**॥ ೬೨ ॥**

**॥ ಇತಿ ಅಷ್ಟಮಃ ಸರ್ಗಃ ॥**

# ॥ ಅಥ ನವಮಃ ಸರ್ಗಃ ॥

**ಮಂಡಲೀಕೃತಮನೋರಮರಾಮಾ**
**ಕುಂಡಲದ್ಯುತಿಸುದೀಪಿತಸೀಮಾ ।**
**ಗಂಡಚುಂಬನಕುತೂಹಲಕಾಮಾ**
**ಖಂಡಿತಾನನಸರೋರುಹಧಾಮಾ ॥ ೧ ॥**

ಮಂಡಲೀಕೃತ=ಸುತ್ತುವರಿದ; ಮನೋರಮ=ಚಂದದ; ರಾಮಾ=ಗೋಪಿಯರ; ಕುಂಡಲ=ಕರ್ಣಾಭರಣಗಳ; ದ್ಯುತಿ=ಕಾಂತಿಯಿಂದ; ಸುದೀಪಿತ=ಶೋಭಿಸುವ; ಸೀಮಾ= ಭೂಮಿಯುಳ್ಳ; ಗಂಡ=ಕಪೋಲಗಳ; ಚುಂಬನ=ಮುದ್ದಿಸುವಿಕೆಯಲ್ಲಿ; ಕುತೂಹಲ= ಕುತೂಹಲದ; ಕಾಮಾ=ಇಚ್ಛೆಯಿಂದ; ಅಖಂಡಿತ=ಕೂಡಿದ; ಆನನ=ಮುಖವೆಂಬ; ಸರೋರುಹ=ಕಮಲಗಳ; ಧಾಮ=ಕಾಂತಿಯುಳ್ಳ.

ಈ ಚಂದದ ಗೋಪಿಯರು ಮಂಡಲಾಕಾರವಾಗಿ ನಿಂತಿದ್ದರು. ಅವರ ಕಿವಿಯ ಆಭರಣದ ಪ್ರಕಾಶವು ಆ ಜಾಗವನ್ನು ಬೆಳಗುತ್ತಿತ್ತು. ಈ ಹೆಂಗಳೆಯರ ಮುಖವು ಕಮಲದಂತೆ ಶೋಭಿಸುತ್ತಿತ್ತು. ಕೃಷ್ಣನ ಕಪೋಲವನ್ನು ಯಾವಾಗ ಚುಂಬಿಸಿಯೇವು ಎಂಬ ಕುತೂಹಲದಿಂದ ಅನುರಾಗದಿಂದ ಕೂಡಿತ್ತು. ಇಂತಹ ಗೋಪಿಯರಿಂದ ಕೂಡಿದ ರಾಸಲೀಲೆಯು ಉತ್ತಮವಾಗಿದೆ.

**<u>ಸಂದೇಶ</u>** : ಈ ಶ್ಲೋಕದಿಂದ ಹನ್ನೊಂದನೇ ಶ್ಲೋಕದವರೆಗೆ ದೇವರ ರಾಸಲೀಲೆಯ ವರ್ಣನೆ. ಈ ಲೀಲೆಯನ್ನು ಹೇಳುವುದರಿಂದ ಕೇಳುವುದರಿಂದ ನಮ್ಮ ಜೀವನವೂ ರಸಮಯವಾಗುತ್ತದೆ.

**ಮುಚ್ಯಮಾನಕಬರೀಭರಬಂಧಃ**
**ಪ್ರೋಚ್ಯಮಾನರಸದಾತೃಮುಕುಂದಃ ।**
**ಪ್ರಥ್ಯಮಾನನಖಲಾಂಛನಚಂದ್ರಃ**
**ಕಥ್ಯಮಾನಹರಿವಿಕ್ರಮವೃಂದಃ ॥ ೨ ॥**

ಮುಚ್ಯಮಾನ=ಜಾರಿದ; ಕಬರೀಭರ=ತಲೆಕೂದಲಿನ; ಬಂಧಃ=ಸೂಡಿಯುಳ್ಳ; ಪ್ರೋಚ್ಯಮಾನ=ಹೇಳಲ್ಪಡುವ; ರಸ=ಸುಖವನ್ನು; ದಾತೃ=ಕೊಡುವ; ಮುಕುಂದಃ= ದೇವರುಳ್ಳ; ಪ್ರಥ್ಯಮಾನ=ವಿಸ್ತಾರವಾದ; ನಖ=ಉಗುರುಗಳ; ಲಾಂಛನ=ಗುರುತೆಂಬ;

ಚಂದ್ರಃ=ಚಂದ್ರನುಳ್ಳ; ಕಥ್ಯಮಾನ=ಹೇಳಲ್ಪಡುವ; ಹರಿ=ದೇವರ; ವಿಕ್ರಮ=ಪರಾಕ್ರಮಗಳ; ವೃಂದಃ=ಸಮೂಹವುಳ್ಳ.

ರಾಸ ಆಟದ ಪ್ರಸಂಗದಲ್ಲಿ ಗೋಪಿಯರ ತಲೆಕೂದಲು ಬಿಚ್ಚಿಹೋಗಿತ್ತು. ಎಷ್ಟೇ ಆಡಿದರೂ ಏನೇ ಆಡಿದರೂ ಮಾನಸಿಕ ನೆಮ್ಮದಿ ಸಿಗಬೇಕೆಂದಿಲ್ಲ. ಗೋಪಿಯರಿಗೆ ಮಾನಸಿಕ ನೆಮ್ಮದಿ ಬೇಕಾಗಿದೆ. ಪ್ರತಿಯೊಬ್ಬರ ನೆಮ್ಮದಿಯೂ ದೇವರ ಹಿಡಿತದಲ್ಲಿ ಇರುವುದು. ಅಂತಹ ದೇವರು ಇಲ್ಲಿ ಇದ್ದಾನೆ. ಗೋಪಿಯರು ನೆಮ್ಮದಿಯನ್ನು ಬೇಡುತ್ತಲೂ ಇದ್ದಾರೆ. ಅಂತಹ ರಾಸಲೀಲೆ ಇದು. ಕೃಷ್ಣನು ಈ ಗೋಪಿಯರನ್ನು ಸ್ಪರ್ಶಿಸುತ್ತಾನೆ. ಆಗ ಕೈಯ ಉಗುರುಗಳ ಗುರುತು ಚಂದ್ರನ ಆಕಾರದಲ್ಲಿ ಅವರ ಮೈಯಲ್ಲಿ ಮೂಡುತ್ತದೆ. ಚಂದ್ರನು ಮನಃಕಾರಕ. ಮಾನಸಿಕವಾಗಿ ಗೋಪಿಯರಿಗೆ ತೃಪ್ತಿ ಕೊಡಲು ದೇವರು ಹೀಗೆ ಮಾಡುತ್ತಾನೆ. ಈ ಗೋಪಿಯರು ನೆಮ್ಮದಿಯನ್ನು ಬೇಡುವ ಕೆಲಸವನ್ನು ಮಾತ್ರ ಮಾಡುತ್ತಿಲ್ಲ. ರಾಸಲೀಲೆಯ ಸಂದರ್ಭದಲ್ಲಿ ಹಾಳುಹರಟೆಯನ್ನು ಮಾಡುತ್ತಿಲ್ಲ. ಬದಲಾಗಿ ದೇವರ ಗುಣಗಳನ್ನು ಬಾಯಿತುಂಬಾ ಹೊಗಳುತ್ತಿದ್ದಾರೆ. ಇಂತಹ ರಾಸಲೀಲೆ ಉತ್ಕೃಷ್ಟವಾಗಿದೆ.

**ಹೃಷ್ಟರೋಮನಿಕರೈರ್ವನಸತ್ತ್ವೈಃ**
**ದೃಷ್ಟರಮ್ಯವಿಭವೋ ಹೃತಚಿತ್ತೈಃ ।**
**ತುಷ್ಟನಿರ್ಜರಗಣೈರ್ಗಗನಸ್ಥೈಃ**
**ವೇಷ್ಟಿತಃ ಸ್ತುತಮುಕುಂದಚರಿತ್ರೈಃ ॥ ೩ ॥**

ಹೃಷ್ಟ=ಆನಂದದಿಂದ ನೆಟ್ಟಗಾದ; ರೋಮ=ಕೂದಲುಗಳ; ನಿಕರೈಃ=ಸಮೂಹವುಳ್ಳ; ವನ=ಕಾಡಿನ; ಸತ್ತ್ವೈಃ=ಪ್ರಾಣಿಗಳಿಂದ; ದೃಷ್ಟ=ನೋಡಲ್ಪಟ್ಟ; ರಮ್ಯ=ಚಂದದ; ವಿಭವಃ= ವೈಭವವುಳ್ಳ; ಹೃತ=ಅಪಹೃತವಾದ; ಚಿತ್ತೈಃ=ಮನಸ್ಸುಳ್ಳ; ತುಷ್ಟ=ಸಂತೋಷ ಗೊಂಡ; ನಿರ್ಜರ=ದೇವತೆಗಳ; ಗಣೈಃ=ಗುಂಪಿನಿಂದ; ಗಗನ=ಆಕಾಶದಲ್ಲಿ; ಸ್ಥೈಃ=ಇರುವ; ವೇಷ್ಟಿತಃ= ಸುತ್ತವರಿಯಲ್ಪಟ್ಟ. ಸ್ತುತ=ಹೇಳಲ್ಪಟ್ಟ; ಮುಕುಂದ=ದೇವರ; ಚರಿತ್ರೈಃ=ಕೀರ್ತಿಯುಳ್ಳ.

ಕಾಡಿನ ಪ್ರಾಣಿಗಳು ಈ ರಾಸಲೀಲೆಯನ್ನು ನೋಡಿದವು. ಆನಂದಪಟ್ಟವು. ಮೈರೋಮಾಂಚನಗೊಂಡಿತು. ಮನಸ್ಸು ಪೂರಾ ಇದರಲ್ಲೇ ನೆಟ್ಟಿದೆ. ಬೇರೆ ಯಾವುದರಲ್ಲೂ ಆಸಕ್ತಿ ಇಲ್ಲ. ಇದು ಭೂಮಿಯ ದೃಶ್ಯ. ಮೇಲೆ ಆಕಾಶ ನೋಡೋಣ. ಅಲ್ಲಿ ದೇವತೆಗಳೆಲ್ಲಾ ಜಮಾಯಿಸಿದ್ದಾರೆ. ನೋಡುತ್ತಿದ್ದಾರೆ. ದೇವರನ್ನು ಹೊಗಳುತ್ತಿದ್ದಾರೆ. ಸಂತೋಷಗೊಂಡಿ ದ್ದಾರೆ. ಇಂತಹ ಆಟವು ಶ್ರೇಷ್ಠವಾಗಿದೆ.

**ಚಾರುಪಾದತಲಸನ್ನಖಕಾಂತ್ಯಾ-**
**ಧೀರನೂಪುರರುಚಾ ವಿಚರಂತ್ಯಾ ।**

**ಸಾರರತ್ನಮಯಮಂಟಪಪಂಕ್ತ್ಯ**
**ಹಾರಿಭೂಮಿವಿಭವೋ ವಿಲಸಂತ್ಯಾ ॥ ೪ ॥**

ಚಾರು=ಚಂದದ; ಪಾದತಲ=ಕಾಲಿನ ಅಡಿಭಾಗದ; ಸನ್ನಖ=ಒಳ್ಳೆಯ ಉಗುರುಗಳ; ಕಾಂತ್ಯಾ=ಕಾಂತಿಯಿಂದ; ಅಧೀರ=ಚಂಚಲವಾದ; ನೂಪುರ=ಕಾಲ್ಗೆಜ್ಜೆಯ; ರುಚಾ=ಕಾಂತಿಯಿಂದ; ವಿಚರಂತ್ಯಾ=ಹರಡಿದ; ಸಾರ=ಉತ್ತಮವಾದ; ರತ್ನಮಯ=ರತ್ನಮಯವಾದ; ಮಂಟಪ=ಮಂಟಪಗಳ; ಪಂಕ್ತಿ=ಸಮೂಹಗಳನ್ನು; ಆಹಾರಿ=ಮೀರಿಸುವ; ಭೂಮಿ=ಜಾಗದ; ವಿಭವಃ=ವೈಭವವುಳ್ಳ; ವಿಲಸಂತ್ಯಾ=ಶೋಭಿಸುವ.

ಕೃಷ್ಣನ ಪಾದದ ಅಡಿ ಕೆಂಪು. ಉಗುರು ಬಿಳಿ. ಇವೆರಡರ ಪ್ರಕಾಶವು ಹೊರಡುತ್ತಿದೆ. ಕಾಲ್ಗೆಜ್ಜೆಯ ಪ್ರಕಾಶವೂ ಇದರ ಜೊತೆಗೆ ಸೇರಿತು. ಹೀಗೆ ಮಿಶ್ರವಾದ ಪ್ರಕಾಶವು ಇಡೀ ಕಾಡಲ್ಲಿ ಹರಡಿದೆ. ಇದರ ಮಹತ್ವ ಎಷ್ಟಿತ್ತೆಂದರೆ –ನವರತ್ನಗಳಿಂದ ಅನೇಕ ಮಂಟಪಗಳನ್ನು ಮಾಡಿದರೆ ಒಂದೊಂದು ಮಂಟಪದಲ್ಲಿಯೂ ವಿವಿಧ ರತ್ನಗಳಿರುವುದರಿಂದ ಅನೇಕ ಪ್ರಕಾಶಗಳು ಮಿಶ್ರವಾಗಿರುತ್ತವೆ. ಈ ಒಂದು ಮಂಟಪದ ಪ್ರಕಾಶವನ್ನು ನೋಡಲು ಎರಡು ನಯನಗಳು ಸಾಲದು. ಇನ್ನು ಅನೇಕ ಮಂಟಪಗಳು ಏಕತ್ರ ಸೇರಿದರೆ ಏನು ಹೇಳುವುದು. ಇಂತಹ ಪ್ರಕಾಶವನ್ನೂ ಮೀರಿದ ಕಾಂತಿ ಆ ಕಾಡಲ್ಲಿ ಇತ್ತು. ಇಷ್ಟು ವೈಭವದಿಂದ ಕೂಡಿದ್ದು ಈ ಆಟ.

**ವೇಣುವಾದ್ಯಪಟುನಾ ವ್ರಜನಾರೀ–**
**ಮಾನದೇನ ಹರಿಣಾಂತರಹಾರೀ ।**
**ಆನತಾಬ್ಜಜನಿಮಾರುತಗೌರೀ–**
**ಪ್ರಾಣನಾಥನಯನೋತ್ಸವಕಾರೀ ॥ ೫ ॥**

ವೇಣುವಾದ್ಯ=ಕೊಳಲು ವಾದ್ಯದಲ್ಲಿ; ಪಟುನಾ=ಚತುರನಾದ; ವ್ರಜ=ಗೋಕುಲದ; ನಾರೀ=ಮಹಿಳೆಯರಿಗೆ; ಮಾನದೇನ=ಆದರವನ್ನು ಕೊಡುವ; ಹರಿಣಾ=ಕೃಷ್ಣನಿಂದ; ಅಂತರಹಾರೀ=ಚಂದವಾದ; ಆನತ=ನಮಿಸಿದ; ಅಬ್ಜ=ಕಮಲದಲ್ಲಿ; ಜನಿ=ಹುಟ್ಟಿದ; ಮಾರುತ=ಗಾಳಿಯು; ಗೌರೀ=ಪಾರ್ವತಿಯ; ಪ್ರಾಣನಾಥ=ಪತಿಯ; ನಯನ=ಕಣ್ಣುಗಳಿಗೆ; ಉತ್ಸವ=ನೆಮ್ಮದಿಯನ್ನು; ಕಾರೀ=ಮಾಡುವ.

ಈ ಆಟದ ಮಧ್ಯದಲ್ಲಿ ಕೃಷ್ಣನು ಕೊಳಲನ್ನು ನುಡಿಸುತ್ತಿದ್ದನು. ಇದರಿಂದ ಆಟವು ಸುಂದರವಾಗಿತ್ತು. ಕೃಷ್ಣನು ಈ ಗೋಪಿಯರಿಗೆ ಸರ್ವತ್ರ ಗೌರವ ಸಿಗುವಂತೆ ಮಾಡುವವನು. ಬ್ರಹ್ಮಾದಿ ಸಮಸ್ತ ಉತ್ತಮ ದೇವತೆಗಳು ಈ ಸಮಯದಲ್ಲಿ ಭಕ್ತಿಯಿಂದ ಈ ಉತ್ಸವವನ್ನು ನೋಡುತ್ತಿದ್ದಾರೆ. ಆಗ ಕೃಷ್ಣನು ಅವರ ಮನಸ್ಸಿಗೂ ಮುದವನ್ನು ಕೊಡುತ್ತಿದ್ದನು.

**ಪಾದಸಂಚರಣದರ್ಶಿತತಾಲಃ ।**
**ಸ್ವಾದುಗೀತವರವಿಭ್ರಮಜಾಲಃ ।**
**ಮೋದಿತದ್ವಿಜಮೃಗಾಂಘ್ರಿಪಶೈಲಃ**
**ಶ್ರೀಧರೇಕ್ಷಣರಸಾಯನಲೋಲಃ ॥ ೬ ॥**

ಪಾದ=ಕಾಲಿನ; ಸಂಚರಣ=ಸಂಚಾರದಿಂದ; ದರ್ಶಿತ=ತೋರಿಸಿದ; ತಾಲಃ=ತಾಳವುಳ್ಳ; ಸ್ವಾದು=ಚಂದದ; ಗೀತ=ಹಾಡುಗಳ; ವರ=ಉತ್ತಮವಾದ; ವಿಭ್ರಮ=ಹಾವಭಾವಗಳ; ಜಾಲಃ=ಸಮೂಹವುಳ್ಳ; ಮೋದಿತ=ತುಷ್ಟವಾದ; ದ್ವಿಜ=ಪಕ್ಷಿಗಳು; ಮೃಗ=ಜಿಂಕೆಗಳು; ಅಂಘ್ರಿಪ=ಮರಗಳು; ಶೈಲಃ=ಪರ್ವತಗಳುಳ್ಳ; ಶ್ರೀಧರ=ಕೃಷ್ಣನ; ಈಕ್ಷಣ=ನೋಟವೆಂಬ; ರಸಾಯನ=ಅಮೃತದಿಂದ; ಲೋಲಃ=ಚಂದದ.

ಆಡುವಾಗ ಹಾಡುತ್ತಾರೆ. ಹಾಡಿಗೆ ತಾಳ ಬೇಕು. ಕೈಯಿಂದ ತಾಳ ಹಾಕದೆ ಹಾಡಿಗೆ ಸರಿಯಾಗಿ ಹೆಜ್ಜೆ ಹಾಕುತ್ತಾ ಆಡುತ್ತಿದ್ದರು. ಆದ್ದರಿಂದ ತಾಳದ ಹೊಡೆತ ಕಾಲಿನಿಂದಲೇ ಆಗುತ್ತಿತ್ತು. ಬಹಳ ಚೆನ್ನಾಗಿ ಹಾಡುತ್ತಿದ್ದರು. ಮಧ್ಯೇ ಮಧ್ಯೇ ದರ್ಶನ, ಚುಂಬನ, ಮಂದಹಾಸಾದಿಗಳು ನಡೆಯುತ್ತಿತ್ತು. ಈ ದೃಶ್ಯವನ್ನು ನೋಡಿ ಪಕ್ಷಿಗಳು, ಪ್ರಾಣಿಗಳು, ಮರಗಳು, ಬೆಟ್ಟಗಳು ಇತ್ಯಾದಿ ಎಲ್ಲಾ ಸ್ಥಾವರಜಂಗಮಗಳು ಅವುಗಳ ಅಭಿಮಾನಿಗಳು ತೃಪ್ತಿಪಟ್ಟರು. ಆಡುತ್ತಿರುವಂತೆಯೇ ಕೃಷ್ಣನು ತನ್ನ ದಯಾಪೂರ್ಣವಾದ ನೋಟದಿಂದ ಇವರನ್ನು ನೋಡುತ್ತಿದ್ದನು. ಈ ಗೋಪಿಯರು ಲಜ್ಜೆಬಿಟ್ಟು ಕೃಷ್ಣನ ಜೊತೆ ಆಡುತ್ತಿದ್ದಾರೆ. ಆದ್ದರಿಂದ ಕೃಷ್ಣನ ದಯಾಪೂರ್ಣ ನೋಟ ಇವರಲ್ಲಿ ಸಹಜ.

**ಕೃಷ್ಣಮೂರ್ತಿಶತವಾಸವನೀಲಃ**
**ಪುಷ್ಟಗೋಪತರುಣೀಮಣಿಮಾಲಃ ।**
**ಘೃಷ್ಟಪಾಣಿವರದಾಮವಿಲೋಲಃ**
**ಚಿತ್ರಹಾರಸರಹಾರಣಶೀಲಃ ॥ ೭ ॥**

ಕೃಷ್ಣ=ಕೃಷ್ಣನ; ಮೂರ್ತಿ=ರೂಪಗಳ; ಶತ=ನೂರರ; ವಾಸವನೀಲಃ= ಇಂದ್ರನೀಲ ಮಣಿಗಳ; ಪುಷ್ಟ=ಒಳ್ಳೆಯ; ಗೋಪತರುಣೀ=ಗೋಪಿಯರೆಂಬ ಮಣಿ=ಮಣಿಗಳ ಮಾಲಃ=ಸಾಲುಳ್ಳ; ಘೃಷ್ಟ=ಸಂಬದ್ಧವಾದ; ಪಾಣಿ=ಕೈಗಳೆಂಬ; ವರ=ಉತ್ತಮವಾದ; ದಾಮ= ಹಗ್ಗದಿಂದ; ವಿಲೋಲಃ=ಚಂದದ; ಚಿತ್ರ=ಬಣ್ಣದ; ಹಾರ=ಮುತ್ತುಗಳ; ಸರ=ಸರಗಳನ್ನು; ಹಾರಣ=ಅಪಹರಿಸುವ; ಶೀಲಃ=ಸ್ವಭಾವವುಳ್ಳ.

ಈ ಗೋಪಿಯರ ಸಂಖ್ಯೆಗನುಗುಣವಾಗಿ ಕೃಷ್ಣನು ರೂಪಗಳನ್ನು ಸ್ವೀಕರಿಸಿದ್ದಾನೆ. ಈ ರೂಪಗಳೆಲ್ಲಾ ನೀಲಬಣ್ಣದವುಗಳು. ಗೋಪಿಯರು ಬಂಗಾರದ ಬಣ್ಣದವರು.

ಮುಖಕ್ಕೆ ಮೈಗೆ ಎರಚುತ್ತಿದ್ದರು. ನೀರಿನಲ್ಲಿಯೇ ಇದ್ದುಕೊಂಡು ಬಿಗಿದು ಅಪ್ಪುತ್ತಿದ್ದರು. ಬಟ್ಟೆಗಳು ಒದ್ದೆಯಾಗಿದ್ದರಿಂದ, ದೇಹದ ಭಾಗಗಳು ತೋರುತ್ತಿದ್ದವು. ಕೂದಲು ಬಿಚ್ಚಿಕೊಂಡು ಹೂಗಳು ಉದುರುತ್ತಿದ್ದವು. ಇವರು ದೇಹಕ್ಕೆ ಹಚ್ಚಿಕೊಂಡ ಕುಂಕುಮಕೇಸರಿಯು ಜಲದಲ್ಲಿ ಸೇರಿಕೊಂಡು ನೀರು ಕೆಂಪಾಯಿತು. ಇದನ್ನು ರಾಜರು ಈ ರೀತಿ ಊಹಿಸುತ್ತಾರೆ: ನಾರಿಯರ ಈ ಅವಸ್ಥೆಯನ್ನು ಕಂಡು ಜಡವಾದ ಸ್ತ್ರೀಯಾದ ನದಿಯೂ ರಾಗದಿಂದ ಕೂಡಿತು. ಇನ್ನು ಚೇತನರಾದ ಪುರುಷರ ಪಾಡೇನು? ರಾಗ ಶಬ್ದಕ್ಕೆ ಎರಡು ಅರ್ಥ. ಕೆಂಪು, ಅನುರಾಗ. ನದಿಯು ರಾಗದಿಂದ ಕೂಡಿತು. ಅಂದರೆ ಕೆಂಪು ಬಣ್ಣದಿಂದ ಕೂಡಿತು ಎಂದರ್ಥ. ಧ್ವನಿತವಾದ ಅರ್ಥ ಕಾಮದಿಂದ ಕೂಡಿದ್ದು ಎಂದು.

**ಸಂದೇಶ** : ದೇವರ ರಾಸಕ್ರೀಡೆಯನ್ನು ಚಿಂತಿಸಿದರೆ ಪ್ರಬಲವಾದ ಜಾಡ್ಯ ಉಳ್ಳವರೂ ಬಹಳ ಚುರುಕಾಗುತ್ತಾರೆ.

**ಸತ್ಕೈರವಾಸ್ಯವಿಭವೋತ್ಪಲಲೋಲನೇತ್ರಾ**
**ವ್ಯಕ್ತಸ್ತನಾಭಮಧುಪಾಂಕಿತಪದ್ಮಕೋಶಾ ।**
**ಆವರ್ತನಾಭಿರುಚಿರಾ ಯಮುನೋರ್ಮಿಹಸ್ತಾ**
**ಗೋಪೀವ ಲಕ್ಷ್ಯಜಘನಾಸ್ತಿ ಸುಫೇನಹಾಸಾ ॥ ೩೬ ॥**

ಸತ್=ಒಳ್ಳೆಯ; ಕೈರವ=ತಾವರೆ; ಆಸ್ಯ=ಮುಖವು; ವಿಭವ=ವೈಭವವು; ಉತ್ಪಲ= ನೈದಿಲೆಯು; ಲೋಲ=ಚಂಚಲವು; ನೇತ್ರಾ=ಕಣ್ಣುಗಳು; ವ್ಯಕ್ತ=ಕಾಣಿಸುವ; ಸ್ತನ= ಸ್ತನಗಳು; ಆಭ=ಕಾಂತಿಯು; ಮಧುಪ=ದುಂಬಿಗಳು; ಅಂಕಿತ=ಚಿಹ್ನಿತ; ಪದ್ಮ= ಕಮಲಗಳು; ಕೋಶಾ=ಮೊಗ್ಗುಗಳು; ಆವರ್ತ=ಸುಳಿಗಳು; ನಾಭಿ=ಹೊಕ್ಕಳು; ರುಚಿರಾ= ಚಂದದ; ಯಮುನಾ=ಯಮುನೆಯು; ಊರ್ಮಿ=ತೆರೆಗಳು; ಹಸ್ತಾ=ಕೈಗಳು; ಗೋಪೀ ಇವ=ಗೋಪಿಯಂತೆ; ಲಕ್ಷ್ಯ=ಕಾಣಿಸುವ; ಜಘನಾ=ಕಟಿಪ್ರದೇಶವು; ಅಸ್ತಿ=ಇದ್ದಾಳೆ; ಸುಫೇನ=ನೊರೆಗಳು; ಹಾಸಾ=ನಗುವು.

ಕೃಷ್ಣನು ಯಮುನೆಯಲ್ಲಿ ಬಹಳ ಆಡುತ್ತಿದ್ದನು. ಯಾಕೆಂದರೆ ಅವಳೂ ಕೂಡಾ ಒಂದು ಗೋಪಿಯಂತೆ ಕಾಣುತ್ತಿದ್ದಳು. ಆ ನದಿಯಲ್ಲಿ ಅರಳಿರುವ ಕೆಂಪಾದ ತಾವರೆಗಳು ಯಮುನೆಗೆ ಮುಖದ ಶೋಭೆಯನ್ನು ಕೊಟ್ಟವು. ಗಾಳಿಗೆ ಅಲುಗಾಡುವ ನೀಲವಾದ ನೈದಿಲೆಗಳು ಕಣ್ಣುಗಳ ಸ್ಥಾನವನ್ನು ಅಲಂಕರಿಸಿದವು. ಕೆಲವು ಕಮಲಗಳು ಇನ್ನೂ ಮೊಗ್ಗುಗಳಾಗಿಯೇ ಇದ್ದವು. ಅವುಗಳ ಮೇಲೆ ಭ್ರಮರಗಳು ಕುಳಿತಿದ್ದವು. ಇವುಗಳನ್ನು ಕಂಡಾಗ ಯಮುನೆಯ ಸ್ತನಗಳೋ ಎಂದು ತೋರುತ್ತಿತ್ತು. ನಾಭಿಯು ಸುಳಿಯಾಗಿ ಇರುವುದು ಲಕ್ಷಣ. ಯಮುನೆಯಲ್ಲಿ ಆಳವಾದ ಮಡುಗಳು ಸುಳಿಯಿಂದ ಕೂಡಿದ್ದವು.

ಇವುಗಳೇ ನಾಭಿಗಳು. ದೊಡ್ಡ ತರಂಗಗಳು ಕೈಗಳಂತೆ ತೋರಿದವು. ಎತ್ತರವಾದ ತೀರಗಳು ಸೊಂಟದಂತೆ ಇದ್ದರೆ, ನೊರೆಗಳೇ ಮಂದಹಾಸಗಳು.

**ಸಂದೇಶ** : ಅಗ್ನಿಪುತ್ರರು ಕೃಷ್ಣನ ಜೊತೆ ವಿಹರಿಸುವ ಸಲುವಾಗಿ ತಾವು ನಾರಿಯರಾದರು. ಇದೇ ರೀತಿ ಯಾರಿಗೆಲ್ಲಾ ಇಂತಹ ಆಸೆಯು ದೃಢವಾಗಿ ಇರುತ್ತೋ ಅದು ಜಡವೇ ಆಗಲಿ, ಚೇತನವೇ ಆಗಲಿ ದೇವರು ಅದನ್ನು ಗೋಪಿಯರನ್ನಾಗಿ ಮಾಡಿ ಆಸೆಯನ್ನು ಪೂರೈಸುತ್ತಾರೆ.

**ಗಾಢಾಲಿಂಗಿತವಲ್ಲಭಾಮಧಿಜಲಂ ನಿಃಶಬ್ದಭೂಷಾವಲೀ**
**ಮಬ್ಜಾಸ್ಯಾಮವಿಮೃಶ್ಯ ಕಾಪ್ಯುಪಗತಾ ಸೀತ್ಕಾರನಾದಶ್ರುತೇಃ ।**
**ಕ್ರುದ್ಧಾ ಭ್ರೂದೃಢಚಾಪಲಗ್ನನಯನಪ್ರಾಂತೇಷುಪಾತಾತ್ ಪುರಾ**
**ಕೃಷ್ಣೇನಾಪರರೂಪಿಣಾ ಶಶಿಮುಖೀ ಸಾಮ್ನಾ ಸಮಾಲಿಂಗಿತಾ ॥ ೩೭ ॥**

ಗಾಢ=ಗಟ್ಟಿ; ಆಲಿಂಗಿತ=ಅಪ್ಪಲ್ಪಟ್ಟ; ವಲ್ಲಭಂ=ಪತಿವುಳ್ಳ; ಅಧಿಜಲಂ=ನೀರಲ್ಲಿ; ನಿಃಶಬ್ದ=ಶಬ್ದಮಾಡದ; ಭೂಷಾ=ಆಭರಣಗಳು; ಆವಲೀಂ=ಸಮೂಹವನ್ನು; ಅಬ್ಜ=ಕಮಲ; ಆಸ್ಯಾಂ=ಮುಖವನ್ನು; ಅವಿಮೃಶ್ಯ=ತಿಳಿಯದೆ; ಕಾ ಅಪಿ=ಒಬ್ಬಳು; ಉಪಗತಾ=ಬಂದಳು; ಸೀತ್ಕಾರ=ಚುಂಬಿಸುವ; ನಾದ=ಧ್ವನಿಯು; ಶ್ರುತೇಃ=ಶ್ರವಣದಿಂದ; ಕ್ರುದ್ಧಾ=ಸಿಟ್ಟಾದ; ಭ್ರೂ=ಹುಬ್ಬು; ದೃಢ=ಗಟ್ಟಿ; ಚಾಪ=ಧನುಸ್ಸು; ಲಗ್ನ=ಕೂಡಿದ; ನಯನ=ಕಣ್ಣು; ಪ್ರಾಂತ=ಕೊನೆಯು; ಇಷು=ಬಾಣವು; ಪಾತಾತ್=ಬೀಳುವುದಕ್ಕಿಂತ; ಪುರಾ=ಮೊದಲು; ಕೃಷ್ಣೇನ=ಕೃಷ್ಣನಿಂದ; ಅಪರ=ಇನ್ನೊಂದು; ರೂಪಿಣಾ=ರೂಪದಿಂದ; ಶಶಿಮುಖೀ= ಚಂದ್ರಮುಖಿಯು; ಸಾಮ್ನಾ=ಶಾಂತಿಯಿಂದ; ಸಮಾಲಿಂಗಿತಾ=ಆಲಿಂಗಿಸಲ್ಪಟ್ಟಳು.

ಕೃಷ್ಣನು ಒಬ್ಬಳು ಗೋಪಿಯ ಜೊತೆ ನೀರಲ್ಲಿ ಇದ್ದಾನೆ. ಇಬ್ಬರೂ ಕುತ್ತಿಗೆ ತನಕದ ನೀರಲ್ಲಿ ಇದ್ದುಕೊಂಡು ಪರಸ್ಪರ ಆಲಿಂಗಿಸಿಕೊಂಡಿದ್ದಾರೆ. ಆದ್ದರಿಂದ ಆಭರಣಾದಿಗಳ ಯಾವ ಸಪ್ಪಳವೂ ಆಗುತ್ತಿಲ್ಲ. ಆ ಹೊತ್ತಿಗೆ ಅಲ್ಲಿಗೆ ಇನ್ನೊಬ್ಬಳು ಬಂದಳು. ಕೃಷ್ಣನನ್ನು ಕಂಡಳು. ಆದರೆ ಗೋಪಿಯನ್ನು ಕಾಣಲಿಲ್ಲ. ಯದ್ಯಪಿ ಆ ಗೋಪಿಯ ಮುಖವು ತೋರುತ್ತಿದೆ. ಆದರೆ ಅದನ್ನು ಕಮಲ ಎಂದು ಈಕೆ ಭ್ರಮಿಸಿದಳು. ಕೃಷ್ಣ ಒಬ್ಬನೇ ಇದ್ದಾನೆ ಎಂದು ತಿಳಿದು ಇನ್ನೂ ಸಮೀಪ ಬಂದಳು. ಆಗ ಕೃಷ್ಣನು ತನ್ನ ಪಾಡಿಗೆ ಆಕೆಯ ಮುಖವನ್ನು ಚುಂಬಿಸುತ್ತಿದ್ದ. ಆ ಸಮಯದಲ್ಲಿ ಮುಖದಿಂದ ಧ್ವನಿ ಬರುವುದು ಸಹಜ. ಧ್ವನಿಯನ್ನು ಕೇಳಿದ ಈಕೆ ಓಹೋ, ಕೃಷ್ಣ ಒಬ್ಬಳ ಜೊತೆಗಿದ್ದಾನೆ. ಅದು ಕಮಲ ಅಲ್ಲ. ಗೋಪಿಯ ಮುಖ ಎಂದು ತಿಳಿದು ಸಿಟ್ಟಾದಳು. ಕೃಷ್ಣನ ಮೇಲೆ ಬಾಣ ಪ್ರಯೋಗಿಸಲು ಮುಂದಾದಳು. ತನ್ನ ಹುಬ್ಬನ್ನೇ ಧನುಸ್ಸನ್ನಾಗಿ ಮಾಡಿಕೊಂಡಳು. ಹುಬ್ಬು ಬಾಗಿ ಇರುವುದು ತಾನೆ. ಕಡೆಗಣ್ಣಿನಿಂದ ದುರುಗುಟ್ಟಿ ನೋಡುವಿಕೆಯೇ ಬಾಣ.

ಇದನ್ನು ಕೃಷ್ಣನು ಕಂಡನು. ಕೂಡಲೇ ಇನ್ನೊಂದು ರೂಪ ತಾಳಿದನು. ಆಕೆ ದುರುಗುಟ್ಟಿ ನೋಡುವ ಮೊದಲೇ ಆಕೆಯನ್ನು ಇನ್ನೊಂದು ರೂಪದಿಂದ ಸಮಾಧಾನಪಡಿಸಿದನು. ಅವಳ ಜೊತೆಯೂ ರಮಿಸಿದನು. ಆಕೆ ತಣ್ಣಗಾದಳು. ಅದಕ್ಕೆಂದೇ ಆಕೆಯನ್ನು ಚಂದ್ರಮುಖೀ ಎಂದು ಸಂಬೋಧಿಸಿದ್ದು.

**ಸಂದೇಶ** : ಭಗವಂತ ಒಬ್ಬನೇ. ಭಕ್ತರು ಬಹಳ. ಎಲ್ಲಾ ಭಕ್ತರಿಗೂ ಈ ಭಗವಂತನೇ ಬೇಕು. ದೇವರು ತಾನು ಬೇಸರಿಸದೆ ಎಲ್ಲಾ ಭಕ್ತರನ್ನು ಅವರವರ ಯೋಗ್ಯತೆ ಗನುಸಾರವಾಗಿ ತೋಷಿಸುತ್ತಾನೆ. ನಾವು ಸಿಟ್ಟಾದರೂ ಆತನು ಸಿಟ್ಟಾಗುವುದಿಲ್ಲ. ತಾಯಿ ಮಗುವಿನಂತೆ.

**ಕರಧೃತದೃತಿತೋಯೈಃ ಸ್ನಾಪಯಿತ್ವಾ ಮುಕುಂದಂ**
**ಕುಚತಟಗತಗಂಧಾಲಿಪ್ತಮಾಲಿಂಗ್ಯ ಕೃತ್ವಾ ।**
**ಶಿರಸಿ ನಿಹಿತಮಾಲ್ಯೈಃ ಅರ್ಚ್ಯಮಾನರ್ಚುರೇನಂ**
**ಗತಿಮಿವ ಯತಿಯೋಗ್ಯಾಂ ಸಾಧಯಂತ್ಯೋಬಲಾಃ ತಾಃ ॥ ೩೮ ॥**

ಕರ=ಕೈಯು; ಧೃತ=ಹಿಡಿದಿರುವ, ದೃತಿ=ಪಾತ್ರವು; ತೋಯೈಃ=ನೀರುಗಳಿಂದ; ಸ್ನಾಪ-ಯಿತ್ವಾ=ಸ್ನಾನಮಾಡಿಸಿ; ಮುಕುಂದಂ=ದೇವರನ್ನು; ಕುಚ=ಸ್ತನವು; ತಟ=ಜಾಗವು; ಗತ=ಇರುವುದು; ಗಂಧ=ಗಂಧವು; ಆಲಿಪ್ತಂ=ಪೂಸಲ್ಪಟ್ಟ; ಆಲಿಂಗ್ಯ=ಆಲಿಂಗಿಸಿ; ಕೃತ್ವಾ= ಮಾಡಿ; ಶಿರಸಿ=ತಲೆಯಲ್ಲಿ; ನಿಹಿತ=ಇರುವ; ಮಾಲ್ಯೈಃ=ಹೂಗಳಿಂದ; ಅರ್ಚ್ಯಂ=ಪೂಜೆಗೆ ಯೋಗ್ಯ; ಆನರ್ಚುಃ=ಪೂಜಿಸಿದರು; ಏನಂ=ಇವನನ್ನು; ಗತಿಂ=ಸ್ಥಾನವನ್ನು; ಇವ=ಅಂತೆ; ಯತಿ=ಸನ್ಯಾಸಿಗಳಿಗೆ; ಯೋಗ್ಯಾಂ=ಉಚಿತವಾದ; ಸಾಧಯಂತ್ಯಃ=ಸಾಧಿಸುವವರಾಗಿ; ಅಬಲಾಃ=ನಾರಿಯರು; ತಾಃ=ಅವರು.

ಈ ಗೋಪಿಯರು ಆಟದ ಸಂದರ್ಭದಲ್ಲಿ ಕೃಷ್ಣನನ್ನು ಯತಿಗಳಂತೆ ಪೂಜಿಸಿದರು. ಯತಿಗಳು ಪ್ರತೀದಿನ ದೇವರನ್ನು ಸ್ನಾನಾದಿಗಳಿಂದ ಅರ್ಚಿಸುತ್ತಾರೆ. ಈ ಗೋಪಿಯರು ಆಟದ ಸಮಯದಲ್ಲಿ ನೀರನ್ನು ಚಿಮುಕಿಸಲು ಕೈಯಲ್ಲಿ ಒಂದೊಂದು ಚರ್ಮದ ಪಾತ್ರೆಗಳನ್ನು ಹಿಡಿದುಕೊಂಡಿದ್ದರು. ಅದರಿಂದ ಕೃಷ್ಣನಿಗೆ ನೀರನ್ನು ಸಿಂಪಡಿಸುತ್ತಿದ್ದರು. ಹೀಗೆ ಕೃಷ್ಣನಿಗೆ ಅಭಿಷೇಕ ಮಾಡಿದರು. ಕೃಷ್ಣನನ್ನು ಆಲಿಂಗಿಸಿದರು. ಆಗ ಇವರ ಎದೆಯಲ್ಲಿರುವ ಗಂಧವು ಕೃಷ್ಣನ ಮೈಗೆ ತಾಗಿತು. ಈ ರೀತಿ ಚಂದನದ ಸಮರ್ಪಣೆ ಆಯಿತು. ಆಲಿಂಗನದಿಂದ ಆತ್ಮನಿವೇದನೆ ಎಂಬ ಭಕ್ತಿಯನ್ನೂ ಮಾಡಿದರು. ತಮ್ಮ ತಲೆಯ ಪುಷ್ಪಗಳನ್ನು ತೆಗೆದು ಆತನ ತಲೆಯಲ್ಲಿ ಇಡುವ ಮೂಲಕ ಪುಷ್ಪಾರ್ಚನೆಯೂ ಆಯಿತು. ಚುಂಬಿಸುವ ಮೂಲಕ ನೈವೇದ್ಯವನ್ನು ಮಾಡಿದರು. ಇಷ್ಟು ವಿಧದಿಂದ ಪೂಜಿಸುವ ಯತಿಗಳು ಕೊನೆಗೆ ಆತನ ಸಾಮೀಪ್ಯವನ್ನು ಹೊಂದುವಂತೆ ಈ ನಾರಿಯರು ಅಬಲೆಯರಾದರೂ ದೇವ ಸಾಮೀಪ್ಯವನ್ನು ಹೊಂದಿದರು.

**ಸಂದೇಶ** : ಕೆಲವು ಮತಾಚಾರ್ಯರು ಸ್ತ್ರೀಯರಿಗೆ ಮೋಕ್ಷ ಇಲ್ಲ ಎಂದು ತಪ್ಪು ವಿಚಾರವನ್ನು ಸಮಾಜಕ್ಕೆ ಒದಗಿಸಿದರು. ಅದನ್ನು ರಾಜರು ಖಂಡಿಸಿದರು. ನಾರಿಯರಿಗೂ ಮುಕ್ತಿ ಇದೆ ಎಂದು ತಿಳಿಸಿದರು.

ಸಿಕ್ತೋऽಪಿ ರಮ್ಯಲಲನಾಕರಪದ್ಮಪತ್ರೈಃ
ಭೃತ್ಯಾಮರಾವಲಿಸಮರ್ಪಿತಪುಷ್ಪಪುಂಜೇ ।
ವಿಸ್ತೀರ್ಣರೇಣುನಿಕರಂ ದಧದಾತ್ಮನೋऽಂಗೇ
ಹಸ್ತೀಶ್ವರಪ್ರಕೃತಿಮಾರ್ಜಯದೇಷ ದೇವಃ ॥ ೩೯ ॥

ಸಿಕ್ತಃ=ಸಿಂಪಡಿಸುವಿಕೆ; ಅಪಿ=ಕೂಡಾ; ರಮ್ಯ=ಚಂದ; ಲಲನಾ=ನಾರಿಯರು; ಕರ=ಕೈಯು; ಪದ್ಮ=ಕಮಲವು; ಪತ್ರೈಃ=ಎಲೆಗಳಿಂದ; ಭೃತ್ಯ=ಸೇವಕರು; ಅಮರ=ದೇವತೆಗಳು; ಆವಲಿ=ಸಮೂಹವು; ಸಮರ್ಪಿತ=ಸಮರ್ಪಣೆಯು; ಪುಷ್ಪ=ಹೂಗಳು; ಪುಂಜೇ=ಸಮೂಹದಲ್ಲಿ; ವಿಸ್ತೀರ್ಣ=ಹರಡುವಿಕೆಯು; ರೇಣು=ಪರಾಗಗಳು; ನಿಕರಂ=ಸಮೂಹವನ್ನು; ದಧತ್=ಧರಿಸಿರುವ; ಆತ್ಮನಃ=ತನ್ನ; ಅಂಗೇ=ದೇಹದಲ್ಲಿ; ಹಸ್ತೀ=ಆನೆ; ಈಶ್ವರ=ಒಡೆಯ; ಪ್ರಕೃತಿ=ಸ್ವಭಾವವನ್ನು; ಆರ್ಜಯತ್=ಪಡೆದನು; ಏಷಃ=ಈ; ದೇವಃ=ಸ್ವಾಮಿಯು.

ಈ ನಾರಿಯರು ತಮ್ಮ ಕೈಗಳಿಂದ ಈತನಿಗೆ ನೀರನ್ನು ಸಿಂಪಡಿಸಿ ಸ್ನಾನ ಮಾಡಿಸಿದರು. ಸ್ನಾನ ಮುಗಿದು ಮೇಲೆ ಬರುವಾಗ ದೇವತೆಗಳು ಬಹಳ ಹೂಗಳನ್ನು ಕೃಷ್ಣನ ಮೇಲೆ ಸುರಿಸಿದರು. ಹೂಗಳು ಕೃಷ್ಣನ ಅಕ್ಕಪಕ್ಕದಲ್ಲಿ ಬಿದ್ದವು. ಆದರೆ ಹೂಗಳ ಪರಾಗಗಳು ಈತನ ದೇಹದಲ್ಲಿ ಅಂಟಿಕೊಂಡವು. ಇದು ಕುಂಜರ ಶೌಚದಂತೆ ಆಯಿತು. ಆನೆಯನ್ನು ಎಷ್ಟೇ ಸ್ನಾನ ಮಾಡಿಸಿದರೂ ಅನಂತರ ಅದು ತನ್ನ ಮೈಮೇಲೆ ಧೂಳನ್ನು ಎರಚಿಕೊಳ್ಳುವುದು. ಅದೇ ರೀತಿ ಕೃಷ್ಣನೂ ಆನೆಯ ಸ್ವಭಾವವನ್ನು ಮೆರೆದನು. ಹಿಂದಿನ ಶ್ಲೋಕದಲ್ಲಿ ಕೃಷ್ಣನನ್ನು ಆನೆಯಂತೆ ವರ್ಣಿಸಿದ್ದನ್ನು ಇಲ್ಲಿ ಮುಂದುವರಿಸಿದರು.

**ಸಂದೇಶ** : ತನ್ನ ಭಕ್ತರಿಗಾಗಿ ದೇವರು ಯಾವ ಸ್ವಭಾವವನ್ನು ಬೇಕಾದರೂ ಹೊಂದುತ್ತಾನೆ.

ದ್ವಿರೇಫಶಾವಾಂಕಿತಶೋಭಿವಕ್ತ್ರಂ
ಕೃತಕ್ಷತಂ ಸುಸ್ವರರಾಜಹಂಸೈಃ ।
ಮನೋರಮಂ ಸಾರಸಕೋಶಮೇಕಾ
ಘನಸ್ತನಸ್ಪರ್ಧಿ ಚಕರ್ತ ಬಾಲಾ ॥ ೪೦ ॥

ದ್ವಿರೇಫ=ದುಂಬಿಯು; ಶಾವ=ಮರಿಯು; ಅಂಕಿತ=ಚಿಹ್ನಿತ; ಶೋಭಿ=ಶೋಭಿಸುವ; ವಕ್ತ್ರಂ=ಮುಖವು; ಕೃತ=ಮಾಡಿದ; ಕ್ಷತಂ=ಗಾಯವು; ಸುಸ್ವರ=ಒಳ್ಳೆಯ ಧ್ವನಿಯು;

ರಾಜಹಂಸೈಃ=ಹಂಸಗಳಿಂದ; ಮನೋರಮಂ=ಚಂದದ; ಸಾರಸ=ಕಮಲದ; ಕೋಶಂ=ಮೊಗ್ಗನ್ನು; ಏಕಾ=ಒಬ್ಬಳು; ಘನ=ಗಟ್ಟಿಯಾದ; ಸ್ತನ=ಸ್ತನವು; ಸ್ಪರ್ಧಿ=ಸ್ಪರ್ಧಿಸುವ; ಚಕರ್ತ=ಕತ್ತರಿಸಿದಳು; ಬಾಲಾ=ನಾರಿಯು.

ಕೊಳದಲ್ಲಿ ಒಂದು ಕಮಲದ ಮೊಗ್ಗು ಇತ್ತು. ಅದರ ತುದಿಯಲ್ಲಿ ದುಂಬಿಯ ಮರಿ ಕೂತಿತ್ತು. ಹಂಸಗಳು ತಮ್ಮ ಕೊಕ್ಕುಗಳಿಂದ ಆ ಮೊಗ್ಗಿಗೆ ಗಾಯವನ್ನು ಮಾಡಿದ್ದವು. ಚಂದವೂ ಇತ್ತು. ಇದನ್ನು ನೋಡಿದ ಒಬ್ಬಳು ಇದು ನನ್ನ ಸ್ತನಗಳಿಗೆ ಪ್ರತಿಸ್ಪರ್ಧಿಯಾಗಿದೆ ಎಂದು ಮತ್ಸರದಿಂದ ಚಿವುಟಿ ಹಾಕಿದಳು.

ಇವಳ ಸ್ತನವೂ ಮೊಗ್ಗಿನಂತೆ ಗಟ್ಟಿಯಾಗಿದೆ. ಸ್ತನದ ತುದಿಯು, ಮೊಗ್ಗಿನ ತುದಿಯಲ್ಲಿ ಕಪ್ಪು ದುಂಬಿ ಕೂತು ಕಪ್ಪಾದಂತೆ ಕಪ್ಪಾಗಿದೆ. ಒಳ್ಳೆಯ ಧ್ವನಿಯುಳ್ಳ ಹಂಸಗಳು ಮೊಗ್ಗನ್ನು ಘಾಸಿಗೊಳಿಸಿದಂತೆ ಚೆನ್ನಾಗಿ ಹಾಡುವ ಕೃಷ್ಣನು ತನ್ನ ಕರಗಳಿಂದ ಇವಳ ಸ್ತನಗಳಿಗೆ ಗಾಯ ಮಾಡಿದ್ದಾನೆ. ಸ್ತನ ಚಂದ ಇರುವುದು ಸ್ವಭಾವಿಕ. ಈ ರೀತಿ ಸ್ಪರ್ಧಿಸುವಂತೆ ತೋರಿತು.

**ಸಂದೇಶ** : ಎಲ್ಲರಿಗಿಂತ ಉತ್ತಮನಾದ ಭಕ್ತನಾಗಬೇಕು ಎಂಬ ಅಭಿಲಾಷೆ ಮಾನವನಲ್ಲಿ ಸದಾ ಇರಬೇಕು.

**ಮಾದ್ಯದ್ದ್ವಿರೇಫೈಃ ಕೃತಗೀತಜಾತಂ**
**ಪದ್ಮಾಸನೇಷ್ಟಂ ಪವನೇನ ಜುಷ್ಟಮ್ ।**
**ಪದ್ಮಂ ಸುಗಂಧಿ ನ್ಯಲುನಾತ್ ಸಪತ್ನೀ**
**ಸದ್ಮಾಭಿಶಂಕ್ಯೇವ ಮುಕುಂದಯೋಗ್ಯಮ್** ॥ ೪೧ ॥

ಮಾದ್ಯತ್=ಮದವೇರಿದ; ದ್ವಿರೇಫೈಃ=ದುಂಬಿಗಳಿಂದ; ಕೃತ=ಮಾಡಲ್ಪಟ್ಟ; ಗೀತ=ಹಾಡುಗಳ; ಜಾತಂ=ಗುಂಪು; ಪದ್ಮಾಸನ=ಬ್ರಹ್ಮ; ಇಷ್ಟಂ=ಪ್ರಿಯವು; ಪವನೇನ=ಗಾಳಿಯಿಂದ; ಜುಷ್ಟಂ=ಸೇವಿತ; ಪದ್ಮಂ=ಕಮಲ; ಸುಗಂಧಿ=ಪರಿಮಳ; ನ್ಯಲುನಾತ್=ಕತ್ತರಿಸಿದಳು; ಸಪತ್ನೀ=ಸವತಿಯು; ಸದ್ಮ=ಮನೆಯು; ಅಭಿಶಂಕ್ಯಾ ಇವ=ಸಂಶಯದಿಂದ ಎಂಬಂತೆ; ಮುಕುಂದ=ದೇವರು; ಯೋಗ್ಯಂ=ಉಚಿತವು.

ಇನ್ನೊಬ್ಬಳು ಒಂದು ಅರಳಿದ ಕಮಲವನ್ನು ಕಂಡು ಅಸೂಯೆಯಿಂದ ಅದನ್ನು ಹಿಚುಕಿದಳು. ಕಮಲವು ರಮೆಯ ಮನೆಯು. ರಮೆಯು ಈಕೆಗೆ ಸವತಿಯು. ಸವತಿಮಾತ್ಸರ್ಯ ಎಂಬುದು ಸಾಮಾನ್ಯ. ಶ್ರೀಮಂತರ ಮನೆಯ ಕುರುಹು ಈ ಕಮಲಕ್ಕೆ ಇದೆ. ಶ್ರೀಮಂತರ ಮನೆಯಲ್ಲಿ ಒಳ್ಳೆಯ ಹಾಡುಗಾರರು ಇರುತ್ತಾರೆ. ಇಲ್ಲಿ ದುಂಬಿಗಳು ಧ್ವನಿಗೈಯುತ್ತಾ ಕಮಲವನ್ನು ಮುತ್ತಿದ್ದಾವೆ. ತಾಯಿಯ ಮನೆಯನ್ನು ಮಕ್ಕಳು ಪ್ರೀತಿಸುತ್ತಾರೆ. ರಮೆಗೆ ಬ್ರಹ್ಮವಾಯುಗಳು ಪುತ್ರರು. ಬ್ರಹ್ಮನು ಕಮಲದಲ್ಲಿಯೇ ಹುಟ್ಟಿದವನು. ಗಾಳಿಯು

ಕಮಲವನ್ನು ಅಲುಗಾಡಿಸುತ್ತದೆ. ನಾನಾ ಸುಗಂಧದ್ರವ್ಯಗಳಿಂದ ಮನೆಯು ಪರಿಮಳಿತವಾಗುತ್ತದೆ. ಕಮಲವು ಸಹಜವಾಗಿಯೇ ಪರಿಮಳಿತ. ದೇವರ ಪೂಜೆಗೆ ಯೋಗ್ಯವಾಗಿದೆ. ಇಂತಹ ಕಮಲವನ್ನು ಆಕೆ ದೇವರಾದ ಕೃಷ್ಣನಿಗೆ ಅರ್ಪಿಸಲು ಮುರಿದಿರಬೇಕು. ಆದರೆ ರಾಜರು ಚಮತ್ಕಾರದಿಂದ ಅಸೂಯೆಯಿಂದಲೋ ಎಂಬಂತೆ ಮುರಿದಳು ಎಂದು ಉತ್ಪ್ರೇಕ್ಷಿಸುತ್ತಾರೆ.

**ಸಂದೇಶ** : ಕಾಮಾದಿಗಳು ನಮ್ಮಲ್ಲಿದ್ದರೂ ಅದು ದೇವರ ಪೂಜೆಯಲ್ಲಿ ಪರ್ಯವಸಾನ ಗೊಳ್ಳಬೇಕು.

**ಶ್ರೀಪತೇರಧರಸೀತ್ಕೃತಿಕಾಲೇ**
**ಗೋಪಿಕೇಕ್ಷಯತಿ ಮಾಮಿತರೇತಿ ।**
**ಕೋಪತಪ್ತಹೃದಯೇವ ಸರಾಗಂ**
**ಕಾಪಿ ಕೋಕನದಮೇತ್ಯ ಜಹಾರ** ॥ ೪೨ ॥

ಶ್ರೀಪತೇಃ=ದೇವರ; ಅಧರ=ತುಟಿ; ಸೀತ್ಕೃತಿ=ಚುಂಬನ; ಕಾಲೇ=ಸಮಯದಲ್ಲಿ; ಗೋಪಿಕಾ=ಗೋಪಿಯು; ಈಕ್ಷಯತಿ=ನೋಡುತ್ತಾಳೆ; ಮಾಂ=ನನ್ನನ್ನು; ಇತರಾ= ಇನ್ನೊಬ್ಬಳು; ಇತಿ=ಎಂದು; ಕೋಪ=ಸಿಟ್ಟು; ತಪ್ತ=ಬೆಂಕಿ; ಹೃದಯಾ=ಮನಸ್ಸು; ಇವ=ಅಂತೆ; ಸರಾಗಂ=ಕೆಂಪಿನಿಂದ ಕೂಡಿದ; ಕಾ ಅಪಿ=ಯಾರೋ ಒಬ್ಬಳು; ಕೋಕನದಂ= ತಾವರೆಯನ್ನು; ಏತ್ಯ=ಹೊಂದಿ; ಜಹಾರ=ಅಪಹರಿಸಿದಳು.

ಮಗದೊಬ್ಬಳೂ ಒಂದು ತಾವರೆಯನ್ನು ಮುರಿದಳು. ಅದಕ್ಕೂ ಕಾರಣವನ್ನು ರಾಜರು ಊಹಿಸುತ್ತಾರೆ– ಕೃಷ್ಣನು ಈಕೆಯ ತುಟಿಯನ್ನು ಚುಂಬಿಸುತ್ತಿದ್ದ. ಪಕ್ಕದಲ್ಲೇ ಒಂದು ಕೆಂಪು ಕಮಲ ಇತ್ತು. ಈಕೆಯು ಈ ಕಮಲವನ್ನು ಇದೊಂದು ಗೋಪಿಯ ಮುಖ ಎಂದು ಭ್ರಮಿಸಿದಳು. ಕೃಷ್ಣನು ಈಕೆಯನ್ನು ಚುಂಬಿಸುವಾಗ ಆ ಗೋಪಿಯು ನೋಡುತ್ತಿದ್ದಾಳೆ ಎಂದು ಸಿಟ್ಟಾದಳು. ಆ ಭರದಲ್ಲಿ ಕಮಲವನ್ನು ತಿರುಚಿದಳು. ನೋಡಬಾರದ ನಮ್ಮ ಕೆಲಸವನ್ನು ಇನ್ನೊಬ್ಬರು ನೋಡಿದರೆ ಅವರನ್ನು ಗದರಿಸುವ, ಹೊಡೆಯುವ ಮೂಲಕ ನೋಡದಂತೆ ಮಾಡುವೆವು.

**ಸಂದೇಶ** : ನಮ್ಮ ಹಾಗೂ ದೇವರ ಒಡನಾಟವು ಕೇವಲ ಪ್ರಚಾರಕ್ಕೆ ಸೀಮಿತವಾಗಿರ ಬಾರದು.

**ದೃಪ್ತಭೃಂಗಸದಪಾಂಗವಿಲೋಲಂ**
**ಸತ್ಸರೋಜಮಲುನಾತ್ಕಿಲ ಕಾಚಿತ್ ।**
**ಸೀತ್ಕರಿಷ್ಯತಿ ಹರಿಃ ಸ ಮದೀಯಂ**
**ವಕ್ತ್ರಮೇತದಿತಿ ಭೀತಿಯುತೇವ** ॥ ೪೩ ॥

ದೃಪ್ತ=ಕೊಬ್ಬಿದ; ಭೃಂಗ=ದುಂಬಿಗಳು; ಸತ್=ಒಳ್ಳೆಯ; ಅಪಾಂಗ=ಕಡೆಗಣ್ಣು; ವಿಲೋಲಂ=ಚಂಚಲ; ಸತ್=ಒಳ್ಳೆಯ; ಸರೋಜಂ=ಕಮಲವನ್ನು; ಅಲುನಾತ್=ಕಿತ್ತಳು; ಕಿಲ=ಪ್ರಸಿದ್ಧ; ಕಾಚಿತ್=ಒಬ್ಬಳು; ಸೀತ್ಕರಿಷ್ಯತಿ=ಚುಂಬಿಸುತ್ತಾನೆ; ಹರಿಃ=ದೇವರು; ಸಃ=ಆ; ಮದೀಯಂ=ನನ್ನ; ವಕ್ತ್ರಂ=ಮುಖವನ್ನು; ಏತದ್=ಇದು; ಇತಿ=ಎಂದು; ಭೀತಿ=ಭಯವು; ಯುತಾ=ಕೂಡಿದ್ದು; ಇವ=ಅಂತೆ.

ಇನ್ನೊಬ್ಬಳು ಬೇರೆ ಉದ್ದೇಶದಿಂದ ಕಮಲವನ್ನು ಕಿತ್ತಳು. ಒಂದು ಕಮಲದಲ್ಲಿ ದುಂಬಿಯು ಅಡ್ಡಾಡುತ್ತಿತ್ತು. ಕಮಲವು ಮುಖದಂತೆ ಇತ್ತು. ದುಂಬಿಯು ಆ ಮುಖದ ಕಣ್ಣಿನಂತೆ ಇತ್ತು. ಈಕೆಗೆ ಭಯವಾಯಿತು: ಕಮಲವನ್ನು ನನ್ನ ಮುಖವೆಂದು ತಿಳಿದು ಅದರಲ್ಲಿ ಓಡಾಡುವ ಭ್ರಮರದಿಂದ ನಾನು ರಮಣಕ್ಕೆ ಸನ್ನೆ ಮಾಡುತ್ತಿದ್ದೇನೆಂದು ತಿಳಿದು ಅದನ್ನೇ ಕೃಷ್ಣನು ಚುಂಬಿಸುತ್ತಾನೋ ಎಂದು. ಅದಕ್ಕಾಗಿ ಆ ಕಮಲವನ್ನೇ ಕಿತ್ತಳು.

**ಸಂದೇಶ** : ಯಾರಿಗೆ ಯಾವುದು ಸಿಗಬೇಕೋ ಅದನ್ನು ದೇವರು ಅವರಿಗೇ ಒದಗಿಸುತ್ತಾನೆ.

**ಆಕಂಠಮಂಭಸಿ ಗತಸ್ಯ ಹರೇರ್ಮನೋಜ್ಞ–**
**ಮಾಸ್ಯಂ ಸಮೀಪಗಸಖೀಜನಜಾತಲಜ್ಜಾ ।**
**ನೀಲೋತ್ಪಲಂ ವಿಲಸದೇತದಧೀರಭೃಂಗ–**
**ಮಾತಾಮ್ರಕೇಸರಮಿತಿ ಪ್ರವದಂತ್ಯಜಿಘ್ರತ್** ॥ ೪೪ ॥

ಆಕಂಠಂ=ಕಂಠತನಕ; ಅಂಭಸಿ=ನೀರಿನಲ್ಲಿ; ಗತಸ್ಯ=ಇರುವ; ಹರೇಃ=ದೇವರ; ಮನೋಜ್ಞಂ=ಚಂದದ; ಆಸ್ಯಂ=ಮುಖವನ್ನು; ಸಮೀಪ=ಪಕ್ಕದಲ್ಲಿ; ಗ=ಇರುವ; ಸಖೀಜನ=ಗೆಳತಿಯು; ಜಾತಃ=ಉಂಟಾದ; ಲಜ್ಜಾ=ನಾಚಿಕೆಯು; ನೀಲೋತ್ಪಲಂ= ನೈದಿಲೆಯು; ವಿಲಸತ್=ಶೋಭಿಸುವ; ಏತದ್=ಇದು; ಅಧೀರ=ಚಂಚಲ; ಭೃಂಗ= ದುಂಬಿಯು; ಆತಾಮ್ರ=ಸ್ವಲ್ಪ ಕೆಂಪು; ಕೇಸರಂ=ಪರಾಗವು; ಇತಿ=ಎಂದು; ಪ್ರವದಂತೀ= ಹೇಳುತ್ತಾ; ಅಜಿಘ್ರತ್=ಆಘ್ರಾಣಿಸುವುದು.

ಕೃಷ್ಣನು ನೀರಲ್ಲಿ ಕುತ್ತಿಗೆಯ ತನಕ ಮುಳುಗಿದ್ದಾನೆ. ಚಂದದ ಮುಖ ನೀರ ಮೇಲೆ ಇದೆ. ಅದನ್ನು ಚುಂಬಿಸಬೇಕೆಂದು ಒಬ್ಬಳಿಗೆ ಮನಸ್ಸಾಯಿತು. ಸಮೀಪ ಬಂದಳು. ಆದರೆ ಆ ಹೊತ್ತಿಗೆ ಇನ್ನೊಬ್ಬಳು ಅಲ್ಲಿಗೆ ಬಂದಳು. ಆಗ ಈಕೆಗೆ ನಾಚಿಕೆ ಆಯಿತು. ಆದರೆ ಚುಂಬಿಸದೆ ಇರಲು ಸಾಧ್ಯವಿಲ್ಲ. ಧೈರ್ಯದಿಂದ ಚುಂಬಿಸಿಯೇ ಬಿಟ್ಟಳು. ಆಗ ಆಕೆ ಏನು ಮಾಡುತ್ತೀಯಾ? ಎಂದು ಕೇಳಿದಳು. ನೈದಿಲೆಯನ್ನು ಮೂಸುತ್ತಿದ್ದೇನೆ ಎಂದಳು. ನೈದಿಲೆ ಎಂದು ಸುಳ್ಳು ಹೇಳುತ್ತೀಯಾ? ಅದರಲ್ಲಿ ಚಂಚಲವಾದ ಎರಡು ಕಣ್ಣುಗಳು ತೋರುತ್ತಿವೆ ಎಂದಳು. ಅದು ಕಣ್ಣುಗಳಲ್ಲ; ಹೆದರಿದ ಎರಡು ದುಂಬಿಗಳು

ಅತ್ತಿತ್ತ ಓಡುತ್ತಿವೆ ಎಂದು ಉತ್ತರಿಸಿದಳು. ಕೆಳ ಬದಿಯಲ್ಲಿ ಸ್ವಲ್ಪ ಕೆಂಪಾದ ತುಟಿಯು ತೋರುತ್ತಿದೆ ಎಂದು ಪುನಃ ಆಕೆ ಪ್ರಶ್ನಿಸಿದಳು. ಅದು ತುಟಿಯಲ್ಲ; ಕೆಂಪಾದ ಉದ್ದವಾದ ಕೇಸರಗಳ ಬಣ್ಣ ಎಂದು ಹೇಳಿದಳು. ಅದು ತುಟಿಯಲ್ಲ! ಸ್ವಲ್ಪ ಕೆಂಪಾದ ಕೇಸರ ಎಂದು ಹೇಳಿ ಕೇಸರವನ್ನು ಸ್ವಲ್ಪ ಕೆಂಪು ಎಂದು ಹೇಳಿದಳು. ಪೂರಾ ಕೆಂಪು ಎನ್ನಲಿಲ್ಲ. ಯಾಕೆಂದರೆ ಅದು ಕೃಷ್ಣನ ತುಟಿಯೇ. ಅದನ್ನು ಈ ಮೊದಲು ಒಬ್ಬಳು ಚುಂಬಿಸಿದ್ದಳು. ಅದನ್ನೇ ನೀನು ಪುನಃ ಚುಂಬಿಸುತ್ತಿ. ನಿನಗೆ ನಾಚಿಕೆ ಇಲ್ಲವಾ? ಆದ್ದರಿಂದಲೇ ತುಟಿಯ ನಿಜವಾದ ಕೆಂಪು ಮಾಸಿದೆ ಎಂದು ಆಕೆ ಕೇಳಿಯಾಳು. ಇದರಿಂದ ತನ್ನ ಮಾನವೂ ಹೋಗುತ್ತೆ. ಕೃಷ್ಣನು ಅನೇಕರ ಸಂಗ ಮಾಡುತ್ತಾನೆ. ಆತನು ಅಪರಾಧಿ ಎಂಬ ಅಪವಾದವೂ ಆತನ ಮೇಲೆ ಬರುತ್ತೆ. ಇವೆರಡನ್ನೂ ಪರಿಹರಿಸಲು ಆಕೆ ಸ್ವಲ್ಪ ಕೆಂಪಾದ ಕೇಸರಗಳು ಎಂದಳು.

<u>**ಸಂದೇಶ**</u> : ದೇವರಿಗೆ ಯಾವುದೇ ರೀತಿಯ ಅಪವಾದ ಬಂದರೂ ಅದನ್ನು ನಾವು ಪರಿಹರಿಸಬೇಕು. ಇಲ್ಲದಿದ್ದರೆ ಆ ಪಾಪಗಳಿಗೆ ನಾವು ಭಾಗಿಗಳಾಗುತ್ತೇವೆ.

**ಆರ್ಯಾಯಾಹಿ ಗೃಹಂ ತ್ವಯಾ ವಿರಹಿತಂ ಸಂತ್ಯಜ್ಯ ಸಾ ಸತ್ವರಾ**
**ದ್ವಾರ್ಯಾಸ್ತೇ ನ ಪುನರ್ವಿವಿಕ್ಷತಿ ತನುಂ ತ್ವದ್ಯೋಗಹೀನಾಮಿವ ।**
**ಚಿತ್ತಂ ತ್ವಚ್ಚರಣೇ ನಿಧಾಯ ವಿವಶಾ ಚಿತ್ರಾರ್ಪಿತೇವ ಪ್ರಭೋ**
**ನೋ ಚೇತ್ ತತ್ತನುಶಾಖಿನೇಶ ಭವನಂ ಸ್ಯಾದೇವ ತತ್ ಕಾನನಮ್ ॥ ೪೫ ॥**

ಆರ್ಯ=ಪೂಜ್ಯನು; ಆಯಾಹಿ=ಬಾ; ಗೃಹಂ=ಮನೆಯನ್ನು; ತ್ವಯಾ=ನಿನ್ನಿಂದ; ವಿರಹಿತಂ=ರಹಿತವು; ಸಂತ್ಯಜ್ಯ=ಬಿಟ್ಟು; ಸಾ=ಅವಳು; ಸತ್ವರಾ=ವೇಗದಿಂದ ಕೂಡಿ; ದ್ವಾರಿ=ಬಾಗಿಲಲ್ಲಿ; ಆಸ್ತೇ=ಇದ್ದಾಳೆ; ನ=ಇಲ್ಲ; ಪುನಃ=ಕೂಡ; ವಿವಿಕ್ಷತಿ=ಪ್ರವೇಶಿಸಲು ಇಚ್ಛಿಸುವುದು; ತನುಂ=ದೇಹವನ್ನು; ತ್ವತ್=ನಿನ್ನ; ಯೋಗ=ಸಂಬಂಧವು; ಹೀನಾಂ=ರಹಿತವು; ಇವ=ಅಂತೆ; ಚಿತ್ತಂ=ಮನಸ್ಸು; ತ್ವತ್=ನಿನ್ನ; ಚರಣೇ=ಪಾದದಲ್ಲಿ; ನಿಧಾಯ=ಇಟ್ಟು; ವಿವಶಾ=ಪರಾಧೀನ; ಚಿತ್ರ=ಚಿತ್ರದಲ್ಲಿ; ಅರ್ಪಿತಾ=ಅರ್ಪಣೆ; ಇವ=ಅಂತೆ; ಪ್ರಭೋ= ಒಡೆಯನೇ; ನೋಚೇತ್=ಇಲ್ಲದಿದ್ದರೆ; ತತ್=ಆ; ತನು=ದೇಹ; ಶಾಖಿನಾ= ಮರದಿಂದ; ಈಶ=ಒಡೆಯನೇ; ಭವನಂ=ಮನೆಯು; ಸ್ಯಾದೇವ=ಆಗುತ್ತದೆ; ತತ್=ಅದು; ಕಾನನಂ= ಕಾಡು.

ಗೋಪಿಯರು ತಮ್ಮ ದೂತಿಯನ್ನು ಕೃಷ್ಣನ ಬಳಿಗೆ ಕಳಿಸಿದರು. ಅವರು ಕೃಷ್ಣನಲ್ಲಿ ಈ ಗೋಪಿಯರ ಅವಸ್ಥೆಯನ್ನು ಬಣ್ಣಿಸುತ್ತಾರೆ– ಕೃಷ್ಣ, ನೀನು ಬರಬೇಕಂತೆ. ಗೋಪಿಯು ನಿನಗಾಗಿ ಕಾಯುತ್ತಿದ್ದಾಳೆ. ಮನೆಯ ಬಾಗಿಲಲ್ಲೇ ಇದ್ದಾಳೆ. ಒಳಗೆ ಹೋಗುವುದಿಲ್ಲ. ಯಾಕೆಂದರೆ ನೀನು ಒಳಗೆ ಇಲ್ಲದಿರುವುದರಿಂದ. ಇದಕ್ಕೆ ಉದಾಹರಣೆ ಹೇಳುವುದಾದರೆ ನೀನು ಮಾನವನ ದೇಹವನ್ನು ಬಿಟ್ಟಮೇಲೆ ಜೀವನೂ ಬಿಡುತ್ತಾನೆ. ಮತ್ತೆ ಅದರ ಒಳಗೆ

ತಾನು ಪ್ರವೇಶ ಮಾಡುವುದಿಲ್ಲ ಹೇಗೋ ಹಾಗೆ. ಆಕೆಯ ಮನಸ್ಸು ದೇಹದ ಕಡೆಗೆ ಇಲ್ಲ. ನಿನ್ನ ಪಾದದ ಕಡೆಗೇ ಇಧೆ. ಇದರಿಂದ ಸ್ವಾಧೀನತೆಯನ್ನು ಕಳೆದುಕೊಂಡಿದ್ದಾಳೆ. ಆದ್ದರಿಂದ ಗೋಡೆಯಲ್ಲಿ ಬರೆದ ಚಿತ್ರದಂತೆ ಸ್ತಬ್ಧಳಾಗಿ ನಿಂತಿದ್ದಾಳೆ. ನೀನು ಬಾರದಿದ್ದರೆ ಆಕೆ ಶರೀರ ಎಂಬ ಮನೆಯನ್ನು ಬಿಡುತ್ತಾಳೆ. ಆದ್ದರಿಂದ ಬಾ. ನೀನು ಪ್ರಭು. ಸ್ವತಂತ್ರ ನಾವು ಪ್ರಾರ್ಥಿಸಿದರೂ ಬಾರದಿರುವ ಅಧಿಕಾರ ನಿನಗಿದೆ. ಆದರೂ ಆಕೆಯ ಜೀವನಕ್ಕಾಗಿ ಬಾ. ನೀನು ಇಲ್ಲದಿದ್ದರೆ ಆಕೆಯ ಮನೆಯು ಭವನವಾಗದೆ ವನವಾಗುತ್ತದೆ. ಭ –ವನ ಎಂಬಲ್ಲಿ ಭ –ಭಗವಂತ. ಭವನ ಎಂಬ ಶಬ್ದದಲ್ಲಿ 'ಭ'ಕಾರವನ್ನು ತೆಗೆದರೆ ಉಳಿಯುವುದು ವನ ಎಂದು. ವನದಲ್ಲಿ ಮರ ಯಾವುದು ಎಂದರೆ ಯಾವುದೇ ಚಟುವಟಿಕೆಯಿಲ್ಲದ ಈಕೆಯ ದೇಹವೇ ಮರ.

**ಸಂದೇಶ** : ನಮ್ಮ ದೇಶ(ಮನೆ) ಹಾಗೂ ದೇಹ ಭವನವಾಗುವುದು ಭಗವಂತನಿಂದ. ಇಲ್ಲದಿದ್ದರೆ ವನ ತುಲ್ಯ. ವನದಲ್ಲಿ ಇರುವುದು ಪ್ರಾಣಿಗಳು. ಪ್ರಾಣಿಗಳಾದರೂ ಇದ್ದೂ ಸತ್ತಂತೆಯೇ.

**ನಿರ್ಯಾಂತೀ ಪ್ರವಿಶಂತ್ಯದೋ ಗೃಹಮಸೌ ಪ್ರತ್ಯಾಕ್ಷಿಪಂತೀ ಮಮ**
**ಪ್ರೇಮಾಲಾಪಮಪಿ ಶ್ವಸಂತ್ಯುರುಶುಚಾ ಹಸ್ತೇ ನಿವೇಶ್ಯಾನನಮ್ ।**
**ಪಶ್ಯಂತೀ ತವ ವರ್ತ್ಮ ಸಾಶ್ರುನಯನಾ ಮಾಂ ಯಾಚಮಾನಾ ಮುಹುಃ**
**ಮೋಹಂ ಕಾಪಿ ವಹತ್ಯಸೌ ನ ಸದಯಂ ಕಸ್ಯೇಶ ಕುರ್ಯಾನ್ಮನಃ ॥ ೪೬ ॥**

ನಿರ್ಯಾಂತೀ=ಹೊರಬರುವುದು; ಪ್ರವಿಶಂತೀ=ಒಳಹೋಗುವುದು; ಅದಃ=ಈ; ಗೃಹಂ=ಮನೆಯು; ಅಸೌ=ಈ; ಪ್ರತ್ಯಾಕ್ಷಿಪಂತೀ=ನಿರಾಕರಣೆ; ಮಮ=ನನ್ನ; ಪ್ರೇಮ=ಪ್ರೀತಿ; ಆಲಾಪಂ=ಸಂಭಾಷಣೆಯನ್ನು; ಅಪಿ=ಕೂಡ; ಶ್ವಸಂತೀ=ಶ್ವಾಸ ಉಚ್ಛ್ವಾಸವನ್ನು ಮಾಡುವುದು; ಉರು=ಬಹಳ; ಶುಚಾ=ದುಃಖದಿಂದ; ಹಸ್ತೇ=ಕೈಯಲ್ಲಿ; ನಿವೇಶ್ಯ=ಇಟ್ಟು; ಆನನಂ=ಮುಖವು; ಪಶ್ಯಂತೀ=ನೋಡುವುದು; ತವ=ನಿನ್ನ; ವರ್ತ್ಮ=ದಾರಿ; ಸಾಶ್ರು= ನೀರಿನಿಂದ ಕೂಡಿದ; ನಯನಾ=ಕಣ್ಣುಗಳು; ಮಾಂ=ನನ್ನನ್ನು; ಯಾಚಮಾನಾ= ಬೇಡುವುದು; ಮುಹುಃ=ಮತ್ತು; ಮೋಹಂ=ಮೂರ್ಛೆಯನ್ನು; ಕಾಪಿ=ಒಬ್ಬಳು; ವಹತಿ= ಹೊಂದಿದ್ದಾಳೆ; ಅಸೌ=ಈ; ನ=ಇಲ್ಲ; ಸದಯಂ=ಅನುಕಂಪದಿಂದ ಕೂಡಿದ್ದು; ಕಸ್ಯ=ಯಾರ; ಈಶ=ಸ್ವಾಮಿಯೇ; ಕುರ್ಯಾತ್=ಮಾಡುವುದು; ಮನಃ=ಮನಸ್ಸನ್ನು.

ಗೋಪಿಯ ಅವಸ್ಥೆಯನ್ನೇ ಪುನಃ ವರ್ಣಿಸುತ್ತಾರೆ– ಕೃಷ್ಣ, ಇನ್ನೊಬ್ಬಳು ಮನೆಯ ಒಳಗೆ ಹೊರಗೆ ಹೋಗುವುದು ಬರುವುದನ್ನು ಆಗಾಗ ಮಾಡುತ್ತಿದ್ದಾಳೆ. ಕೃಷ್ಣನು ಬರುತ್ತಾನೆ. ನಿನ್ನ ಮನಸ್ಸನ್ನು ಸಂತೋಷಗೊಳಿಸುತ್ತಾನೆ ಎಂದು ಎಷ್ಟು ಹೇಳಿದರೂ ಅದನ್ನು ಕೇಳುವ ಹಂತದಲ್ಲಿ ಆಕೆ ಇಲ್ಲ. ಪ್ರತಿಯಾಗಿ ನಾನು ಸುಳ್ಳು ಹೇಳುತ್ತೇನೆಂದು

ನನ್ನನ್ನೇ ಬೈಯುತ್ತಾಳೆ. ನೀನು ಬಂದಿಯಾ ಎಂದು ಹೊರಗೆ ಬಂದು ಕೊರಳು ಉದ್ದ ಮಾಡಿ ನೋಡುತ್ತಾಳೆ. ನೀನು ಬರಲಿಲ್ಲ ಎಂದಾಗ ಮುಖವನ್ನು ಕೈಗಳಿಂದ ಮುಚ್ಚಿಕೊಂಡು ಅಳುತ್ತಾಳೆ. ಹೋಗಿ ಕೃಷ್ಣನನ್ನು ಕರೆದುಕೊಂಡು ಬಾ ಎಂದು ನನ್ನನ್ನು ಅಂಗಲಾಚುತ್ತಾಳೆ. ದುಃಖ ತಡೆಯಲಾಗದೆ ಮೂರ್ಛೆಗೊಳ್ಳುತ್ತಾಳೆ. ಇವಳ ಈ ಅವಸ್ಥೆಯನ್ನು ಕಂಡಾಗ ಯಾರಿಗಾದರೂ ಮನಸ್ಸು ಕರಗಲೇ ಬೇಕು.

<u>**ಸಂದೇಶ**</u> : ದೇವರ ವಿಷಯದಲ್ಲಿ ನಾವು ಹುಚ್ಚರಂತೆ ಇರಬೇಕು. ನಾಚಿಕೆ ಪಡಬಾರದು. ಈ ವಿಷಯದಲ್ಲಿ ದಾಸರ ಹಾಡುಗಳು 'ಹುಚ್ಚು ಹಿಡಿಯಿತು ಎನಗೆ ಹುಚ್ಚು ಹಿಡಿಯಿತು' –ನಾಚಿಕೆ ಪಡಬೇಡ ಮನದಲಿ ಯೋಚಿಸಿ ಕೆಡಬೇಡ.

**ಸಾಯಂ ಹೀನ ನ ಹೀಯಂ ಸಾ ಮಾರತಾತ ತತಾ ರಮಾ ।**
**ಕ್ಷೀಣಾದೇವವದೇಣಾಕ್ಷೀ ಚಾರುರಾಜಜರಾರುಚಾ ॥ ೪೭ ॥**

ಸಾಯಂ ಹಿ=ಸಂಜೆತಾನೆ; ಇನ=ಒಡೆಯ; ನಹಿ=ಅಲ್ಲ; ಇಯಂ=ಇವಳು; ಸಾ=ಆ; ಮಾರ=ಕಾಮನ; ತಾತ=ತಂದೆ; ತತಾ=ವ್ಯಾಪ್ತ; ರಮಾ=ರಮೆಯು; ಕ್ಷೀಣಾ=ಕೃಶಳು; ಅದೇವವತ್=ಮಾನವರಂತೆ; ಏಣ=ಜಿಂಕೆಯಂತೆ; ಅಕ್ಷೀ=ಕಣ್ಣು; ಚಾರು=ಚಂದ; ರಾಜ=ಒಡೆಯ; ಜರಾ=ಮುದಿತನ; ರುಚಾ=ರೋಗದಿಂದ.

ಕೃಷ್ಣ, ಈಗ ಸಾಯಂಕಾಲ. ರಮಣಕ್ಕೆ ಯೋಗ್ಯವಾದ ಸಮಯ. ನೀನು ಕಾಮನ ತಂದೆ. ಆಕೆಯಲ್ಲಿ ಈಗ ಕಾಮದ ಉತ್ಪತ್ತಿ ಆಗುತ್ತಿದೆ. ನೀನು ಎಲ್ಲರಿಗೂ ಗಂಡ. ಆದ್ದರಿಂದ ಆಕೆಗೂ ಕೂಡಾ. ಜಿಂಕೆಯ ಕಣ್ಣಿನಂತೆ ಕಣ್ಣುಳ್ಳ ಆಕೆ ಬಹಳ ಸುಂದರಿ. ನೀನು ಬರಲಿಲ್ಲವಾದರೆ ಆಕೆ ನಿನ್ನ ಚಿಂತೆಯಲ್ಲಿಯೇ ವಯಸ್ಸಿಗಿಂತ ಮೊದಲೇ ಮುದುಕಿಯಾಗುತ್ತಾಳೆ. ಸದಾ ತಾರುಣ್ಯದಲ್ಲಿ ಇರಲು ಆಕೆ ದೇವತೆಯಲ್ಲ ತಾನೆ. ಆದ್ದರಿಂದ ಆಕೆಯಲ್ಲಿರುವ ಕಾಮಕ್ಕೆ ಪೂರ್ಣರೂಪ ಕೊಡಲು ಕಾಮನ ತಂದೆಯಾದ ನೀನು ಬರಲೇ ಬೇಕು. ಈ ಗೋಪಿಯು ಸ್ವಯಂ ರಮೆಯ ಅವತಾರವಲ್ಲ. ಆಗಿದ್ದರೆ ನೀನು ನಮ್ಮ ಗೋಪಿ ಇದ್ದಲ್ಲಿಗೆ ಬರಬೇಕಾಗಿಲ್ಲ. ಯಾಕೆಂದರೆ ರಮೆಯು ಸರ್ವತ್ರ ವ್ಯಾಪ್ತಳು. ನೀನು ಇರುವಲ್ಲೆಲ್ಲಾ ಇದ್ದಾಳೆ. ಆದ್ದರಿಂದ ನೀನಿದ್ದಲ್ಲೇ ಆಕೆ ರಮಿಸುತ್ತಾಳೆ. ಆದರೆ ಈ ಗೋಪಿಯು ವ್ಯಾಪ್ತಳಲ್ಲ. ಆದ್ದರಿಂದ ನೀನು ಆಕೆ ಇದ್ದಲ್ಲಿಗೇ ಬರಬೇಕು.

<u>**ಸಂದೇಶ**</u> : ಒಬ್ಬ ವ್ಯಕ್ತಿ ನಮ್ಮಲ್ಲಿಗೆ ಬರಬೇಕಾದರೆ ಆತನ ಮಗ ನಮ್ಮಲ್ಲಿರಬೇಕು. ಹಾಗೆಯೇ ದೇವರು ನಮ್ಮಲ್ಲಿಗೆ ಬರಬೇಕಾದರೆ ದೇವರ ಕಾಮವು ನಮ್ಮಲ್ಲಿರಬೇಕು.

**ಇತ್ಥಂ ನಿಗದ್ಯ ನಿಗಮಾಕಲಿತಂ ನಯಂತಿ**
**ದೂತ್ಯೋ ವಿತಾನಮಣಿಶೋಭಿಗೃಹಂ ನಿಶಾಸು ।**

**ನೃತ್ಯನ್ಮಯೂರಶುಕಕೋಕಿಲಮತ್ತಭೃಂಗ-**
**ತತ್ಯಾದೃತೋಪವನವಾಸಿತಮಂಗನಾಯಾಃ** ॥ ೪೮ ॥

ಇತ್ಥಂ=ಈ ರೀತಿಯಾಗಿ; ನಿಗದ್ಯ=ಹೇಳಿ; ನಿಗಮ=ವೇದ; ಆಕಲಿತಂ=ಅಜ್ಞೇಯ; ನಯಂತಿ=ಒಯ್ಯುತ್ತಾರೆ; ದೂತ್ಯಃ=ಸೇವಕಿಯರು; ವಿತಾನ=ಮೇಲ್ಕಟ್ಟು; ಮಣಿ= ಮಣಿಗಳು; ಶೋಭಿ=ಶೋಭಿಸುವ; ಗೃಹಂ=ಮನೆಯು; ನಿಶಾಸು=ರಾತ್ರಿಗಳಲ್ಲಿ; ನೃತ್ಯನ್= ನರ್ತಿಸುವ; ಮಯೂರ=ನವಿಲುಗಳು; ಶುಕ=ಗಿಳಿಗಳು; ಕೋಕಿಲ=ಕೋಗಿಲೆ ಗಳು; ಮತ್ತ=ಮದಭರಿತ; ಭೃಂಗ=ದುಂಬಿಗಳು; ತತಿ=ಗುಂಪು; ಆದೃತ=ಸತ್ಕರಿಸಲ್ಪಟ್ಟ; ಉಪವನ=ಕುಟೀರಗಳು; ವಾಸಿತಂ=ಪರಿಮಳಿತ; ಅಂಗನಾಯಾಃ=ಗೋಪಿಯ.

ದಾಸಿಯರು ಈ ರೀತಿ ಹೇಳಿ ಕೃಷ್ಣನನ್ನು ತಮ್ಮ ನಾಯಕಿಯ ಮನೆಗೆ ರಾತ್ರಿಯಲ್ಲಿ ಕರೆದುಕೊಂಡು ಹೋಗುತ್ತಿದ್ದರು. ನಾಯಕಿಯ ಮನೆಯಾದರೂ ಒಳ್ಳೆಯ ಕುಟೀರದಂತೆ ಇತ್ತು. ಮನೆಯ ಒಳಗೆ ಮೇಲ್ಕಟ್ಟುಗಳನ್ನು ಹಾಕಿತ್ತು. ಅದರಲ್ಲಿ ಮಣಿಮಾಲೆಗಳು ಜೋಲುತ್ತಿತ್ತು. ಮನೆಯ ಸುತ್ತಮುತ್ತ ಒಳಗೆ ಹೊರಗೆ ನವಿಲೇ ಮೊದಲಾದ ಸಾಕುಪ್ರಾಣಿಗಳು ಓಡಾಡುತ್ತಿದ್ದವು. ಮನೆಯು ತುಂಬಾ ಪರಿಮಳಿತವಾಗಿಯೂ ಇತ್ತು.

**ಸಂದೇಶ** : ದೇವರು ಮನೆಗೆ ಬರುವ ಸಮಯ ರಾತ್ರಿ. ಅಂದರೆ ಧರ್ಮಗ್ಲಾನಿಯಾದಾಗ. 'ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ' ಎಂಬ ಮಾತು ಪ್ರಮಾಣ. ಹಾಗೆಯೇ ಮನೆಯೂ ಒಳ್ಳೇ ಅಲಂಕೃತವಾಗಿರಬೇಕು. ಕಷ್ಮಲ ಇರಬಾರದು. ಕಾಮಕ್ರೋಧಾದಿಗಳು ಕಷ್ಮಲಗಳು.

**ನೇತ್ರಾನಂದಜಲೇನ ಮಂಜುಕಲಶಪ್ರಖ್ಯಸ್ತನಸ್ಥಾಯಿನಾ**
**ಪಾದ್ಯಾರ್ಘ್ಯೇ ಹಿಮವಾರಿಣೇವ ಮಧುಭಿಃ ಸ್ನಾನಂ ಪ್ರಸೂನಸೃತೈಃ ।**
**ಆಶ್ಲಿಷ್ಯಾಂಗಕಲಾಪರಮ್ಯತಿಲಕಶ್ರೀಖಂಡಲೇಪಾಂಶ್ಚ ಸಾ**
**ಲೋಲೇಕ್ಷೋತ್ಪಲಮಾಲ್ಯಮೋಷ್ಠಜಸುಧಾಂ ಪ್ರಾದಾತ್ ಪ್ರಿಯೇಭ್ಯಾಗತೇ॥ ೪೯ ॥**

ನೇತ್ರ=ಕಣ್ಣು; ಆನಂದ=ನೆಮ್ಮದಿಯು; ಜಲೇನ=ನೀರಿನಿಂದ; ಮಂಜು=ಚಂದ; ಕಲಶ=ಕಲಶವು; ಪ್ರಖ್ಯ=ಸಮಾನ; ಸ್ತನ=ಸ್ತನಗಳು; ಸ್ಥಾಯಿನಾ=ಇರುವ; ಪಾದ್ಯ= ಪಾದ್ಯವು; ಅರ್ಘ್ಯ=ಅರ್ಘ್ಯವು; ಹಿಮ=ತಂಪು; ವಾರಿಣಾ=ನೀರಿನಿಂದ; ಇವ=ಅಂತೆ; ಮಧುಭಿಃ=ಪರಾಗಗಳಿಂದ; ಸ್ನಾನಂ=ಸ್ನಾನವು; ಪ್ರಸೂನ=ಪುಷ್ಪಗಳು; ಸೃತೈಃ= ಹೊರಬರುವ; ಆಶ್ಲಿಷ್ಯ=ಆಲಿಂಗಿಸಿ; ಅಂಗ=ಅವಯವಗಳು; ಕಲಾಪ=ಅಲಂಕಾರ; ರಮ್ಯ= ಚಂದ; ತಿಲಕ=ತಿಲಕವು; ಶ್ರೀಖಂಡ=ಚಂದನ; ಲೇಪ=ಲೇಪನವು; ಸಾ=ಆ; ಲೋಲಾ= ಚಂಚಲ; ಈಕ್ಷಾ=ನೋಟವು; ಉತ್ಪಲ=ನೈದಿಲೆಯು; ಮಾಲ್ಯಂ=ಮಾಲೆಯನ್ನು; ಓಷ್ಠ=

ತುಟಿಯು; ಜ=ಹುಟ್ಟಿದ; ಸುಧಾಂ=ರಸವನ್ನು; ಪ್ರಾದಾತ್=ಕೊಟ್ಟಳು; ಪ್ರಿಯೇ=ಪ್ರಿಯನು; ಅಭ್ಯಾಗತೇ=ಬರುತ್ತಿರಲು.

ಸೇವಕಿಯ ಮಾತಿನಂತೆ ಕೃಷ್ಣನು ಗೋಪಿಯ ಮನೆಗೆ ಬಂದನು. ಆಕೆ ಈತನನ್ನು ಶಾಸ್ತ್ರೀಯವಾಗಿ ಆದರಿಸಿದಳು. ಆದರಿಸಿದ ಕ್ರಮವನ್ನು ರಾಜರು ವರ್ಣಿಸುತ್ತಾರೆ – ಬಂದವರಿಗೆ ಮೊದಲು ಪೂರ್ಣಕುಂಭ ಸ್ವಾಗತ. ಈಕೆ ತನ್ನ ಕುಂಭದಂತಿರುವ ಕುಚಗಳಿಂದ ಈತನನ್ನು ಸ್ವಾಗತಿಸಿದಳು. ಕೃಷ್ಣ ಬಂದದ್ದನ್ನು ಕಂಡ ಈಕೆಯ ಕಣ್ಣುಗಳಲ್ಲಿ ಆನಂದಾಶ್ರು ಸುರಿದವು. ಅವುಗಳು ಸ್ತನಗಳ ಮೇಲೆ ಬಿದ್ದವು. ಈಕೆ ಕೃಷ್ಣನ ಪಾದಗಳಿಗೆ ಎರಗಿದಳು. ಆಗ ಸ್ತನಗಳಿಗೆ ಬಿದ್ದಿರುವ ಅಶ್ರು ಕೃಷ್ಣನ ಕಾಲುಗಳಿಗೆ ತಾಗಿದವು. ಆನಂದಾಶ್ರು ತಣ್ಣಗೆ. ಅಲ್ಲದೆ ಪರ್ವತದಂತಿರುವ ಸ್ತನಗಳಿಗೆ ಬಿದ್ದು ಕೃಷ್ಣನ ಪಾದಗಳಿಗೆ ಬಿದ್ದಿವೆ. ಆದ್ದರಿಂದ ಹಿಮಾಲಯದಲ್ಲಿ ಹರಿಯುವ ಗಂಗೆಯಿಂದಲೇ ಪಾದಗಳನ್ನು ತೊಳೆದಂತಾಯಿತು. ಇದು ಪಾದ್ಯ. ಪಾದ್ಯಕ್ಕಿಂತ ಮೊದಲು ಕೈಗಳಿಗೆ ನೀರನ್ನು ಕೊಡಬೇಕು. ಇದಕ್ಕೆ ಅರ್ಘ್ಯ ಎಂದು ಹೆಸರು. ಕೃಷ್ಣ ಬಂದಕೂಡಲೇ ಈಕೆ ಆತನ ಕೈಗಳನ್ನು ತನ್ನ ಎದೆಯ ಮೇಲೆ ಇರಿಸಿಕೊಂಡಳು. ಆನಂದಾಶ್ರು ಈತನ ಕೈಗಳಿಗೆ ತಾಗಿತು. ಅನಂತರ ಸ್ನಾನ. ಈಕೆ ಕೃಷ್ಣನ ಮೇಲೆ ಬಹಳ ಪುಷ್ಪವೃಷ್ಟಿಯನ್ನು ಮಾಡಿದಳು. ಆ ಪುಷ್ಪರಸಗಳಿಂದ ಈತನ ಮೈಯೆಲ್ಲಾ ಒದ್ದೆಯಾಯಿತು. ಕೊರಳಿಗೆ ಒಂದು ಮಾಲಿಕೆಯನ್ನು ಹಾಕಿದಳು. ಆತನನ್ನು ತಾನು ಆಲಿಂಗಿಸಿದಳು. ಈಕೆಯ ಮೈಯ ಚಂದನವು, ಹಣೆಯ ತಿಲಕವು ಹಾಗೆಯೇ ಈಕೆಯ ಮೈಯ ಆಭರಣಗಳ ಸಂಬಂಧವೂ ಆತನಿಗೆ ಆಯಿತು. ಇದರಿಂದ ಗಂಧಾದಿ ಉಪಚಾರವೂ ಜರಗಿದವು. ಕೃಷ್ಣನ ಬಣ್ಣ ನೀರು ತುಂಬಿದ ಮೋಡದಂತೆ ನೀಲ. ಈಕೆ ಚಿನ್ನದ ಬಣ್ಣದವಳು. ಮಿಂಚು ಬಂದಾಗ ಮೋಡಗಳು ಚಂದ ಕಾಣುವಂತೆ ವ್ಯಾವಹಾರಿಕವಾಗಿ ಇವಳ ಆಲಿಂಗನವೇ ಕೃಷ್ಣನಿಗೆ ಅಲಂಕಾರ. ತನ್ನ ಕಾಡಿಗೆ ಹಚ್ಚಿದ ಕಡೆಗಣ್ಣಿನಿಂದ ಈತನನ್ನು ನಖಶಿಖಾಂತ ನೋಡಿದಳು. ಈ ನೋಟ ಕಪ್ಪಾಗಿತ್ತು. ಆದ್ದರಿಂದ ಕೊರಳಿಗೆ ಹಾಕಿದ ಹೂಮಾಲೆ ಅಂದರೆ ಈ ನೋಟವೇ. ಕಪ್ಪಾಗಿದ್ದರಿಂದ ನೈದಿಲೆಯ ಮಾಲೆಯಂತೆ ಇತ್ತು. ಕೊನೆಗೆ ಚುಂಬಿಸಿದಳು. ತನ್ನ ತುಟಿಯ ರಸವನ್ನು ಆತನಿಗೆ ಉಣಿಸಿದಳು. ಇದುವೇ ನೈವೇದ್ಯ.

<u>**ಸಂದೇಶ**</u> : ದೇವರನ್ನು ಆರಾಧಿಸಲು ಸಲಕರಣೆಗಳು ಇಲ್ಲ ಎಂಬ ಚಿಂತೆ ಬೇಕಿಲ್ಲ. ಎಲ್ಲಾ ಸಾಧನಗಳನ್ನೂ ದೇವರು ನಮ್ಮ ಶರೀರದಲ್ಲಿಯೇ ಇಟ್ಟಿದ್ದಾನೆ. ನಮಗೆ ಮನಸ್ಸು ಬೇಕು ಅಷ್ಟೇ. ತುಟಿಯ ರಸವು ಎಂಜಲು ಎಂಬ ಭಾವನೆಯೂ ತಪ್ಪು. ಆ ರಸದ ಜೊತೆಗೆ ಪ್ರೀತಿ ಇದ್ದರೆ ಎಂಜಲೂ ಪವಿತ್ರವಾಗುತ್ತದೆ.

**ಕಾಂತಾನನದ್ಯುತಿನಿವೃತ್ತಕಟಾಕ್ಷಗಂಡ–**
**ಬಿಂಬೋಷ್ಠರಮ್ಯರುಚಿಭಿರ್ಮಿಲಿತಾ ಸ್ಮಿತಶ್ರೀಃ ।**

**ಇಂದೀವರಾಂಬುರುಹಕೋಕನದ್ಯೈಃ ಸುಗಂಧಿ**
**ಸಾಂದ್ರಂ ತಯಾನುಕುರುತೇ ಮಧುಪೀಯಮಾನಮ್ ॥ ೫೦ ॥**

ಕಾಂತ=ಕೃಷ್ಣನ; ಆನನ=ಮುಖದ; ದ್ಯುತಿ=ಕಾಂತಿಯಿಂದ; ನಿವೃತ್ತ=ಹಿಂದಿರುಗಿದ; ಕಟಾಕ್ಷ=ಕಡೆಗಣ್ಣು; ಗಂಡ=ಕಪೋಲ; ಬಿಂಬ=ತೊಂಡೆಹಣ್ಣು; ಓಷ್ಠ=ತುಟಿಯು; ರಮ್ಯ= ಚಂದ; ರುಚಿಭಿಃ=ಕಾಂತಿಗಳಿಂದ; ಮಿಲಿತಾ=ಕೂಡಿದ; ಸ್ಮಿತ=ನಗುವೆಂಬ; ಶ್ರೀಃ=ಕಾಂತಿಯು; ಇಂದೀವರ=ನೈದಿಲೆಯು; ಅಂಬುರುಹ=ತಾವರೆಯು; ಕೋಕನದ್ಯೈಃ=ಕೆಂದಾವರೆಗಳಿಂದ; ಸುಗಂಧಿ=ಪರಿಮಳಿತ; ಸಾಂದ್ರಂ=ನಿಬಿಡ; ತಯಾ=ಅವಳಿಂದ; ಅನುಕುರುತೇ= ಅನುಕರಿಸುವುದು; ಮಧು=ಜೇನು; ಪೀಯಮಾನಮ್=ಕುಡಿಯಲ್ಪಡುವ.

ಕಾವ್ಯಕ್ಕೆ ಸಂಬಂಧಿಸಿದ ರಾಸಲೀಲೆಯ ವರ್ಣನೆಯಂತೆ ಮದ್ಯಪಾನದ ವರ್ಣನೆ ಯನ್ನೂ ರಾಜರು ಈ ಶ್ಲೋಕದಲ್ಲಿ ಮಾಡುತ್ತಾರೆ –ಕೃಷ್ಣ ಬಂದಾಗ ಆಕೆಯ ಮುಖದಲ್ಲಿ ಮಂದಹಾಸವು ಉಂಟಾಯಿತು. ಮಂದಹಾಸವು ಬಿಳಿ ಎಂದು ಕವಿಗಳ ತಿಳುವಳಿಕೆ. ಮದ್ಯವೂ ಬಿಳಿಯೇ. ಈ ಮದ್ಯವು ಪರಿಮಳಿತವಾಗಬೇಕು. ಅದಕ್ಕಾಗಿ ಹೂಗಳ ಮಿಶ್ರಣ ಆಗಬೇಕು. ಆ ಹೂಗಳು –ನೈದಿಲೆ, ಕಮಲ, ಕೆಂದಾವರೆ. ಹೇಗೆಂದರೆ –ಇವಳ ಕಡೆಗಣ್ಣು ಕಪ್ಪಾದ್ದರಿಂದ ನೈದಿಲೆಯಂತೆ. ಕಪೋಲ ದುಂಡಗೆ ಇದೆ. ಆದ್ದರಿಂದ ದುಂಡಗಾದ ಕಮಲದಂತೆ. ತುಟಿಯು ಕೆಂಪಗಿದೆ. ಕೆಂಪು ತಾವರೆಯಂತೆ. ಈ ಮೂರು ಅವಯವ ಗಳಿಂದಲೂ ಕಾಂತಿಯು ಸದಾ ಹೊರ ಸೂಸುತ್ತದೆ. ಒಂದು ಬೆಳಕಿಗೆ ಇನ್ನೊಂದು ಬೆಳಕು ಎದುರಾದಾಗ ದುರ್ಬಲಬೆಳಕು ಹಿಂದಿರುಗುತ್ತದೆ ಎಂಬುದೂ ಕವಿಕಲ್ಪನೆ. ಆದ್ದರಿಂದ ಈಕೆ ಕೃಷ್ಣನ ಮುಖವನ್ನು ಚುಂಬಿಸುವಾಗ ಕೃಷ್ಣನ ಮುಖದ ಪ್ರಚಂಡ ಕಾಂತಿಯ ಮುಂದೆ ದುರ್ಬಲವಾದ ಈಕೆಯ ಕಾಂತಿಯು ತಿರುಗಿ ಮುಖಕ್ಕೆ ಸೇರಿತು. ತಥಾ ಚ ಮೂರು ಅವಯವಗಳ ಕಾಂತಿಯು ಮೂರು ಪುಷ್ಪಗಳಂತಾದ್ದರಿಂದ ಅದು ಈ ಮಂದಹಾಸದ ಜೊತೆ ಸೇರಿತು. ಆದ್ದರಿಂದ ಮದ್ಯವು ಪರಿಮಳಿತವಾಯಿತು. ಇದು ರಾಜರ ಅದ್ಭುತ ಚಮತ್ಕಾರ.

**ಸಂದೇಶ** : ದೇವರು ಸ್ಪರ್ಶ ಮಾಡಿದರೆ ತ್ಯಾಜ್ಯವಾದದ್ದೂ ಗ್ರಾಹ್ಯವಾಗುತ್ತದೆ.

**ವಿಷ್ವಗ್ವ್ಯಾಪಿಮಣಿಪ್ರಭಾಭಿಧಪಯಃಸಿಂಧೌ ಸ್ಫುರನ್ಮಂಟಪ–**
**ಪ್ರಖ್ಯೇ ವೇಶ್ಮನಿ ಭೋಗಿಕಲ್ಪಕಶಿಪೌ ಸಾಕಂ ವ್ರಜಸ್ತ್ರೀಜನೈಃ ।**
**ಭಿತ್ತಿಶ್ರೀಪತಿಮೌಲಿರತ್ನಮಹಸೋತ್ಸರ್ಪಿಸ್ಸ್ವರತ್ನಶ್ರಿಯಾ**
**ಪುಷ್ಟೋನ್ನಮ್ರಘಣತ್ವಿಷಾಂ ಮುಷಿ ಲಸನ್ ತುಷ್ಟೋಽಸ್ತ್ವಸೌ ವಿಠ್ಠಲಃ ॥ ೫೧ ॥**

ವಿಷ್ವಕ್=ಸುತ್ತಲೂ; ವ್ಯಾಪಿ=ಹರಡುವುದು; ಮಣಿ=ಮಣಿಗಳು; ಪ್ರಭಾ=ಕಾಂತಿಯು; ಅಭಿಧ=ಹೆಸರು; ಪಯಃ=ಹಾಲು; ಸಿಂಧೌ=ಸಮುದ್ರದಲ್ಲಿ; ಸ್ಫುರತ್=ಶೋಭಿಸುವ;

ಮಂಟಪ=ಮಂಟಪವು; ಪ್ರಖ್ಯೇ=ಸದೃಶದಲ್ಲಿ; ವೇಶ್ಮನಿ=ಮನೆಯಲ್ಲಿ; ಭೋಗಿ=ಶೇಷನಿಗೆ; ಕಲ್ಪ=ಸಮಾನವಾದ; ಕಶಿಪೌ=ಹಾಸಿಗೆಯಲ್ಲಿ; ಸಾಕಂ=ಜೊತೆಗೆ; ವ್ರಜ=ಗೋಕುಲ; ಸ್ತ್ರೀ=ಸ್ತ್ರೀಯರು; ಜನ್ಯೈಃ=ಜನರಿಂದ; ಭಿತ್ತಿ=ಗೋಡೆಯು; ಶ್ರೀಪತಿ=ದೇವರು; ಮೌಲಿ=ತಲೆ; ರತ್ನ=ರತ್ನಗಳು; ಮಹಸಾ=ಕಾಂತಿಯಿಂದ; ಉತ್ಸರ್ಪಿ=ಹೊರಟ; ಸ್ವ=ತಾನು; ರತ್ನ= ರತ್ನಗಳು; ಶ್ರಿಯಾ=ಕಾಂತಿಯಿಂದ; ಪುಷ್ಟ=ಉಬ್ಬಿದ; ಉನ್ನಮ್ರ=ಎತ್ತಿದ; ಫಣ=ಹೆಡೆಗಳ; ತ್ವಿಷಾಂ=ಕಾಂತಿಗಳ; ಮುಷಿ=ಅಪಹರಿಸುವ; ಲಸನ್=ಶೋಭಿಸುವ; ತುಷ್ಟಃ=ತುಷ್ಟನು; ಅಸ್ತು=ಆಗಲಿ; ಅಸೌ=ಈ; ವಿಠ್ಠಲಃ=ದೇವರು.

ಈ ಗೋಪಿಯ ಮನೆಯಲ್ಲಿ ಕೃಷ್ಣನು ಹಾಸಿಗೆಯಲ್ಲಿ ಪವಡಿಸಿದನು. ಈ ದೃಶ್ಯವು ಕ್ಷೀರಸಮುದ್ರದಲ್ಲಿ ಮಧ್ಯದಲ್ಲಿರುವ ಮಂದಿರದಲ್ಲಿ ಶೇಷನಲ್ಲಿ ಪವಡಿಸಿದಂತಿತ್ತು. ಈ ಗೋಪಿಯ ಮನೆಯ ಹೊರ ಮೈಯು ಉತ್ತಮ ಮುತ್ತುಗಳಿಂದ ಅಲಂಕೃತವಾಗಿತ್ತು. ಆ ಮುತ್ತುಗಳ ಬಿಳಿಯಾದ ಪ್ರಕಾಶವು ಸುತ್ತ ಹರಡಿತ್ತು. ಆದ್ದರಿಂದ ಹಾಲಿನ ಸಮುದ್ರದಂತೆ ಕಂಡಿತು. ಮಧ್ಯದಲ್ಲಿ ಈಕೆಯ ಮನೆ. ಅದರಲ್ಲಿ ಹಾಸಿಗೆ. ಅದರಲ್ಲಿ ಕೃಷ್ಣ. ಮನೆಯ ಒಳಗೋಡೆಯು, ದೇವರ ಕಿರೀಟವೂ ರತ್ನಗಳಿಂದ ಖಚಿತವಾಗಿತ್ತು. ಅವುಗಳಿಂದ ಸಮಾನ ಬಲವುಳ್ಳ ಪ್ರಕಾಶವು ಹೊರಡುತ್ತಿತ್ತು. ಈ ಮಧ್ಯೆ ಹಾಸಿಗೆಯಿಂದ ಹೊರಡುವ ಕಾಂತಿಯು. ಇದೂ ತೀಕ್ಷ್ಣವೇ. ಆವಾಗ ಈ ಕಾಂತಿಯು ಸಹಜವಾಗಿ ಮೇಲ್ಮುಖವಾಗಿ ಹರಿಯಿತು. ತಥಾ ಚ ಹಾಸಿಗೆ ಶೇಷನ ಶರೀರದಂತಾಗಿ ಮೇಲ್ಮುಖವಾಗಿ ಹರಿದ ಕಾಂತಿಯು ಹೆಡೆಯಂತೆ ಕಾಣುತ್ತಿತ್ತು. ಕೃಷ್ಣನೊಟ್ಟಿಗೆ ಗೋಪಿಯು ಲಕ್ಷ್ಮಿಯಂತೆ ಇದ್ದಾಳೆ. ಇಂತಹ ಮನೆಯಲ್ಲಿ ಇರುವ ಕೃಷ್ಣನು ನಮಗೆ ಪ್ರೀತನಾಗಲಿ.

**ಸಂದೇಶ** : ದೇವರು ನಮ್ಮ ಮನೆಗೆ ಬಂದರೆ 'ಇಲ್ಲೇ ವೈಕುಂಠ ಕಾಣಿರೋ' ಎಂದು ದಾಸರು ಹೇಳಿದಂತೆ ನಮ್ಮ ಮನೆಯನ್ನೇ ವೈಕುಂಠವನ್ನಾಗಿಯೋ ಶ್ವೇತದ್ವೀಪವನ್ನಾಗಿಯೋ ಮಾಡಬಹುದು.

**ಗೋಪೀ ಕಾಚನ ಧೀರತಾಂ ಹೃದಿ ಬಲಾತ್ ಆಲಂಬ್ಯ ರತ್ಯುತ್ಸುಕೇ**
**ಕೋಪೇನೇವ ನಿಮೀಲ್ಯ ನೇತ್ರಯುಗಲಂ ತಲ್ಪೇ ಶಯಾನಾ ಸಕೃತ್ ।**
**ಕಾಂತಂ ನಿದ್ರಿತಮಾಕಲಯ್ಯ ಶನಕೈಃ ಆಲಿಂಗ್ಯ ಬಿಂಬಾಧರಂ**
**ಸೀತ್ಕುರ್ವಂತ್ಯಥ ವೀಕ್ಷಿತಾಽಪಿ ವಿವಶಾ ಮಾನಂ ನ ಸಸ್ಮಾರ ಸಾ ॥ ೫೨ ॥**

ಗೋಪೀ=ಗೋಪಿಯು; ಕಾಚನ=ಒಬ್ಬಳು; ಧೀರತಾಂ=ಧೈರ್ಯವನ್ನು; ಹೃದಿ=ಮನಸ್ಸಿನಲ್ಲಿ; ಬಲಾತ್=ಕಷ್ಟದಿಂದ; ಆಲಂಬ್ಯ=ಹೊಂದಿ; ರತಿ=ರಮಣದ; ಉತ್ಸುಕೇ=ಉತ್ಸಾಹವು; ಕೋಪೇನ=ಕೋಪದಿಂದ; ಇವ=ಎಂಬಂತೆ; ನಿಮೀಲ್ಯ=ಮುಚ್ಚಿ; ನೇತ್ರ=ಕಣ್ಣು; ಯುಗಲಂ=ಎರಡು; ತಲ್ಪೇ=ಹಾಸಿಗೆಯಲ್ಲಿ; ಶಯಾನಾ=ಮಲಗುವುದು; ಸಕೃತ್=ಒಮ್ಮೆ;

ಕಾಂತಂ=ಪತಿಯನ್ನು; ನಿದ್ರಿತಂ=ನಿದ್ರಿಸಿದ್ದನ್ನು; ಅಕಲಯ್ಯ=ತಿಳಿದು; ಶನಕೈಃ=ಮೆಲ್ಲನೆ; ಆಲಿಂಗ್ಯ=ಆಲಿಂಗಿಸಿ; ಬಿಂಬ=ತೊಂಡೆಹಣ್ಣು; ಅಧರಂ=ತುಟಿಯು; ಸೀತ್ಕುರ್ವಂತೀ= ಚುಂಬಿಸುವುದು; ಅಥ=ನಂತರ; ವೀಕ್ಷಿತಾ ಅಪಿ=ನೋಡಲ್ಪಟ್ಟರೂ; ವಿವಶಾ=ಪರವಶ; ಮಾನಂ=ಅಭಿಮಾನವು; ನ ಸಸ್ಮಾರ=ಎಣಿಸಲಿಲ್ಲ; ಸಾ=ಅವಳು.

ಒಂದು ಮನೆಯಲ್ಲಿ ಒಬ್ಬಳು ಗೋಪಿಯು ಕೃಷ್ಣನ ಜೊತೆಯಲ್ಲಿ ಮಲಗಿದ್ದಳು. ಆಕೆಗೆ ಕೃಷ್ಣನನ್ನು ಆಲಿಂಗಿಸಬೇಕು; ಮುದ್ದಿಸಬೇಕು ಎಂಬ ಆಸೆ. ಆದರೆ ಧೈರ್ಯ ಇಲ್ಲ. ಅಭಿಮಾನ ಬಿಡೋಲ್ಲ. ಮನಸ್ಸನ್ನು ಗಟ್ಟಿ ಮಾಡಿ ಧೈರ್ಯವನ್ನು ತಂದುಕೊಂಡಳು. ಕಣ್ಣುಗಳನ್ನು ಮುಚ್ಚಿದಳು. ಹೊರಗಿನ ನೋಟಕ್ಕೆ ಅಭಿಮಾನಿನಿಯಂತೆ ತೋರುತ್ತಿತ್ತು. ಆದರೆ ಒಳಗಿಂದ ಕೃಷ್ಣನಲ್ಲಿ ಪ್ರೀತಿ ಇತ್ತು. ಸ್ವಲ್ಪ ಹೊತ್ತು ಹಾಗೆಯೇ ಮಲಗಿದಳು. ಅನಂತರ ಮೆಲ್ಲಗೆ ಕಣ್ಣು ತೆರೆದು ಕೃಷ್ಣನನ್ನು ನೋಡಿದಳು. ಆತ ನಿದ್ರಿಸುತ್ತಿದ್ದಾನೆ ಎಂದು ನಿಶ್ಚಯಿಸಿದಳು. ಆಗ ಕೃಷ್ಣನು ಕಣ್ಣು ತೆರೆದನು. ಈಕೆ ಮಾತ್ರ ತಾನು ಈ ಸಂದರ್ಭದಲ್ಲಿ ತನ್ನನ್ನೂ ಮರೆತಿದ್ದಳು. ಮಾನ ಅಪಮಾನಾದಿಗಳನ್ನು ಬದಿಗಿಟ್ಟು ಒಂದೇಸವನೆ ಚುಂಬಿಸುತ್ತಲೇ ಇದ್ದಾಳೆ.

**ಸಂದೇಶ** : ದೇವರನ್ನು ಸ್ವಾಮಿತ್ವೇನ, ಮಿತ್ರತ್ವೇನ, ಬಂಧುತ್ವೇನ, ಪತಿತ್ವೇನ – ಈ ರೀತಿಯಾಗಿ ನಾನಾ ಕ್ರಮಗಳಿಂದ ಉಪಾಸಿಸಬಹುದು. ಎಲ್ಲಾ ಉಪಾಸನೆಯನ್ನೂ ಸ್ವೀಕರಿಸುತ್ತಾನೆ.

**ಗಂತುಂ ಕುತ್ರ ಸಮುದ್ಯತೋಽಸಿ ತರುಣಿ ತ್ವದ್ಧಾಮ ತತ್ಪದ್ಧತಿಃ**
**ಕಿಂ ತತ್ರಾಸ್ತಿ ಮುಕುಂದಮಾನಿನಿ ತವ ಸ್ವಚ್ಛೋರ್ಜಿತಾಭೀಷುನಾ ।**
**ಕ್ರಾಂತಂ ದ್ವಾರಮಲಕ್ಷಯನ್ ಕೃಶಮಿದಂ ಗಾತ್ರಂ ಚ ತಸ್ಯಾಂತರೇ**
**ಗಂತಾಽಸ್ಮೀತ್ಯಭಿಧಾಯ ತನ್ಮೃದುಕರಂ ಗೃಹ್ಣನ್ ಸ ಗೃಹ್ಣಾತು ಮಾಮ್ ॥ ೫೩ ॥**

ಗಂತುಂ=ಹೋಗಲು; ಕುತ್ರ=ಎಲ್ಲಿಗೆ; ಸಮುದ್ಯತಃ=ಹೊರಟವನು; ಅಸಿ=ಆಗಿದ್ದಿ; ತರುಣಿ=ತರುಣಿಯೇ; ತ್ವತ್=ನಿನ್ನ; ಧಾಮ=ಮನೆ; ತತ್=ಆ; ಪದ್ಧತಿಃ=ದಾರಿಯು; ಕಿಂ= ಏನು; ತತ್ರ=ಅಲ್ಲಿ; ಅಸ್ತಿ=ಇದೆ; ಮುಕುಂದ=ಕೃಷ್ಣನು; ಮಾನಿನಿ=ಸ್ತ್ರೀಯು; ತವ=ನಿನ್ನ; ಸ್ವಚ್ಛ=ನಿರ್ಮಲ; ಊರ್ಜಿತ=ಉತ್ತಮ; ಅಭೀಷುನಾ=ಕಾಂತಿಯಿಂದ; ಕ್ರಾಂತಂ=ಆವರಿಸಿದ; ದ್ವಾರಂ=ಬಾಗಿಲನ್ನು; ಅಲಕ್ಷಯನ್=ಗುರುತಿಸದೆ; ಕೃಶಂ=ಕೃಶವು; ಇದಂ=ಈ; ಗಾತ್ರಂ=ಶರೀರವನ್ನು; ಚ=ಮತ್ತು; ತಸ್ಯ=ಅದರ; ಅಂತರೇ=ಮಧ್ಯದಲ್ಲಿ; ಗಂತಾ= ಹೋದ ವನು; ಅಸ್ಮಿ=ಆಗಿದ್ದೇನೆ; ಇತಿ=ಎಂದು; ಅಭಿಧಾಯ=ಹೇಳಿ; ತತ್=ಆ; ಮೃದು= ಮೆತ್ತಗಿನ; ಕರಂ=ಕೈಯನ್ನು; ಗೃಹ್ಣನ್=ಹಿಡಿದ; ಸಃ=ಅವನು; ಗೃಹ್ಣಾತು=ಹಿಡಿಯಲಿ; ಮಾಂ=ನನ್ನನ್ನು.

ಕೃಷ್ಣನು ಒಬ್ಬ ಗೋಪಿಯ ಮನೆಯ ಮುಂದಿನಿಂದ ಹೋಗುತ್ತಿದ್ದ. ಆಗ ಆಕೆಯು

ಕೃಷ್ಣ ಎಲ್ಲಿ ಹೋಗುತ್ತಿ? ಎಂದಳು. ನಿನ್ನ ಮನೆಗೆ ಹೋಗುತ್ತಿದ್ದೇನೆ ಎಂದನು. ಕೃಷ್ಣನು ಈಕೆಯನ್ನು ಬಿಟ್ಟು ಇನ್ನೊಬ್ಬಳ ಬಳಿಗೆ ಹೋಗುತ್ತಿದ್ದಾನೆ. ಇದು ಈತನ ಅಪರಾಧ ಎಂಬ ಧಾಟಿಯಲ್ಲಿ ಆಕೆ ಪ್ರಶ್ನಿಸಿದ್ದು. ನಾನು ಇನ್ನೊಬ್ಬಳ ಮನೆಗೆ ಹೋಗುತ್ತಿಲ್ಲ. ನಿನ್ನ ಮನೆಗೇ ಬರುತ್ತಿದ್ದೇನೆ. ಆದ್ದರಿಂದ ನಾನು ಅಪರಾಧಿ ಅಲ್ಲ ಎಂಬ ಭಾವನೆಯಿಂದ ಈತನ ಉತ್ತರ. ಕೃಷ್ಣ, ನೀನು ನನ್ನ ಮನೆಯನ್ನು ದಾಟಿ ಮುಂದಕ್ಕೆ ಹೋಗುತ್ತಿದ್ದಿ. ನನ್ನ ಮನೆ ಇಲ್ಲೇ ಇದೆ. ನೀನು ಸುಳ್ಳು ಹೇಳುತ್ತೀಯಾ. ಎಲೋ ಗೋಪಿಯೇ, ನನಗೆ ನಿನ್ನ ಮನೆಯ ಬಾಗಿಲು ಗೊತ್ತಾಗಲಿಲ್ಲ. ನಿನ್ನ ದೇಹದಿಂದ ಹೊರಟ ಬೆಳಕು ಮನೆಯ ದ್ವಾರವನ್ನು ಆವರಿಸಿದೆ. ಆದ್ದರಿಂದ ಆ ದ್ವಾರವಾಗಲೀ, ದ್ವಾರದಲ್ಲಿ ನಿಂತ ನೀನಾಗಲೀ ನನಗೆ ಗೋಚರಿಸಲಿಲ್ಲ. ನಿನ್ನ ದೇಹದ ಪ್ರಕಾಶ ಬಹಳ. ನಾರಿಯರ ಲಕ್ಷಣದಂತೆ ನೀನು ಬಹಳ ಕೃಶ. ನನ್ನನ್ನು ತಪ್ಪಾಗಿ ತಿಳಿಯಬೇಡ. ನಿನ್ನ ಮನೆಗೇ ಬಂದವನು ಎಂದು ಹೇಳಿ ಆಕೆಯ ಕೈಯನ್ನು ಹಿಡಿದನು. ಇಂತಹ ಕೃಷ್ಣನು ನನ್ನ ಕೈ ಹಿಡಿದು ಉದ್ಧರಿಸಲಿ.

**ಸಂದೇಶ** : ದೇವರು ನಮ್ಮ ಮನದ ಮುಂದೆಯೇ ಹೋಗುತ್ತಿರುತ್ತಾನೆ. ಆಗ ನಾವು ಅಲಕ್ಷಿಸಿದರೆ ಮುಂದೆ ಹೋಗುತ್ತಾನೆ. ಆದರಿಸಿದರೆ ನಮ್ಮ ಮನಕ್ಕೆ ಬರುತ್ತಾನೆ.

**ಯದ್ಯಾಯಾಸಿ ರಿರಂಸಯೇಶ ಮಹಿತಂ ಮದ್ಧಾಮ ತರ್ಹ್ಯಧ್ವನಿ**
**ಸ್ನಿಗ್ಧಾಂ ಮಾಮವಲೋಕ್ಯ ಭೀತಪದವೀಂ ಸದ್ಯೋಽಲಭಿಷ್ಠಾಃ ಕುತಃ ।**
**ಉದ್ವೀಕ್ಷ್ಯ ಸ್ತನಜೃಂಭಿಕುಂಭಯುಗಲಂ ಕುಂಭೀಶ್ವರಾಶಂಕಯಾ**
**ಪದ್ಮಾಕ್ಷೀತಿ ನಿಗದ್ಯ ಸುಸ್ಮಿತಮುಖೀಂ ಚುಂಬನ್ ಸ ತಾಂ ಜೃಂಭತೇ ॥ ೫೪ ॥**

ಯದಿ=ಒಂದುವೇಳೆ; ಆಯಾಸಿ=ಬರುತ್ತಿ; ರಿರಂಸಯಾ=ರಮಣದ ಇಚ್ಛೆಯಿಂದ; ಈಶ=ಒಡೆಯ; ಮಹಿತಂ=ಅಲಂಕೃತ; ಮತ್=ನನ್ನ; ಧಾಮ=ಮನೆ; ತರ್ಹಿ=ಆಗ; ಅಧ್ವನಿ= ದಾರಿಯಲ್ಲಿ; ಸ್ನಿಗ್ಧಾಂ=ಪ್ರೀತಿಯುಳ್ಳ; ಮಾಂ=ನನ್ನನ್ನು; ಅವಲೋಕ್ಯ=ನೋಡಿ; ಭೀತ=ಭಯದ; ಪದವೀಂ=ದಾರಿಯನ್ನು; ಸದ್ಯಃ=ಕೂಡಲೇ; ಅಲಭಿಷ್ಠಾಃ=ಹೊಂದಿದಿ; ಕುತಃ=ಯಾಕೆ; ಉದ್ವೀಕ್ಷ್ಯ=ನೋಡಿ; ಸ್ತನ=ಸ್ತನಗಳು; ಜೃಂಭಿ=ಎತ್ತರ; ಕುಂಭ=ಕುಂಭ ಸ್ಥಳ; ಯುಗಲಂ=ಎರಡು; ಕುಂಭಿ=ಆನೆ; ಈಶ್ವರ=ಒಡೆಯ; ಶಂಕಯಾ=ಸಂಶಯದಿಂದ; ಪದ್ಮ=ಕಮಲ; ಅಕ್ಷಿ=ಕಣ್ಣು; ಇತಿ=ಎಂದು; ನಿಗದ್ಯ=ಹೇಳಿ; ಸುಸ್ಮಿತ=ನಗುವಿನ; ಮುಖೀಂ= ಮುಖಿಯನ್ನು; ಚುಂಬನ್=ಮುದ್ದಿಸುತ್ತಾ; ಸಃ=ಅ; ತಾಂ=ಅವಳನ್ನು; ಜೃಂಭತೇ= ವೃದ್ಧಿಸುತ್ತಾನೆ.

ಇನ್ನೊಬ್ಬಳ ಜೊತೆ ಸಂವಾದ. ಕೃಷ್ಣ, ಎಲ್ಲಿಗೆ ಹೋಗುತ್ತಿಯಾ? ಗೋಪಿಯೇ, ನಿನ್ನ ಮನೆಗೆ. ಕೃಷ್ಣ, ಯಾಕೆ? ಗೋಪಿಯೇ, ನಿನ್ನ ಜೊತೆ ವಿಹರಿಸಲು. ಕೃಷ್ಣ, ಹಾಗಾದರೆ ನಾನು ನಿನಗೆ ಇಲ್ಲೇ ಸಿಕ್ಕಿದ್ದೇನೆ. ನನಗೂ ನಿನ್ನ ಜೊತೆ ವಿಹರಿಸಬೇಕೆಂದು ಆಸೆಯಾಗಿದೆ. ಹೀಗಿರುವಾಗ ನನ್ನನ್ನು ನೋಡಿ ಹೆದರಿ ಯಾಕೆ ಅಡಗಿಕೊಳ್ಳುತ್ತಿ. ಆದ್ದರಿಂದ ನೀನು

ನನ್ನಲ್ಲಿ ಸುಳ್ಳುಹೇಳುತ್ತಿ. ನೀನು ಇನ್ನೊಬ್ಬಳ ಜೊತೆ ರಮಿಸಲು ಹೋಗುತ್ತಿದ್ದಿ. ಎಲೋ ಗೋಪಿಯೇ, ಹಾಗಲ್ಲ. ನೀನು ಎಂದು ನನಗೆ ಗೊತ್ತಾಗಲಿಲ್ಲ. ನಿನ್ನನ್ನು ಆನೆ ಎಂದು ಭಾವಿಸಿದೆ. ನಿನ್ನ ಎದೆಯ ಎತ್ತರದ ಸ್ತನಗಳನ್ನು ಕಂಡಾಗ ಆನೆಯ ಕುಂಭಸ್ಥಳವನ್ನು ಕಂಡಂತೆ ಆಯಿತು. ಆದ್ದರಿಂದ ಆನೆ ಇಲ್ಲಿದೆ. ತಪ್ಪಿಸಿಕೊಳ್ಳೋಣ ಎಂದು ಭಯದಿಂದ ಅಡಗಿ ಕುಳಿತೆ ಎಂದು ಹೇಳಿ ಆಕೆಯನ್ನು ಚುಂಬಿಸಿದನು. ತನ್ನ ಈ ಉತ್ತರಕ್ಕೆ ಆಕೆ ಇನ್ನೇನೋ ಪ್ರಶ್ನೆಯನ್ನು ಮಾಡಬಾರದು ಎಂಬ ಉದ್ದೇಶದಿಂದ ಆಕೆಯ ಬಾಯಿಯನ್ನು ತನ್ನ ಬಾಯಿಯಿಂದ ಕಟ್ಟಿದಂತೆ ಇತ್ತು ಈ ಚುಂಬನ. ಇಂತಹ ಕೃಷ್ಣನು ಶ್ರೇಷ್ಠನಾಗಿದ್ದಾನೆ.

<u>**ಸಂದೇಶ**</u> : ದೇವರು ನಮ್ಮ ಮನೆಗೆ ಬರುವಾಗ ನಮ್ಮನ್ನೂ ಬಹಳ ಅಭಿವೃದ್ಧರನ್ನಾಗಿ ಮಾಡುತ್ತಾನೆ.

**ಅನ್ಯಾ ಚುಂಬನಜಾತಚಿಹ್ನಮಧುನಾ ಬಿಂಬಾಧರೇ ದೃಶ್ಯತೇ**
**ತನ್ಮಾಂ ರಂಜಯಸೀಶ ಕಿಂ ಪ್ರಿಯಗಿರಾ ಧನ್ಯಾಬಲಾ ಸೈವ ಹಿ ।**
**ಮನ್ಯೂದ್ರಿಕ್ತಹೃದಾ ಮುಹುಃ ಸಖಿ ಭವಚ್ಛೂನ್ಯಾಂ ಸಭಾಂ ಪಶ್ಯತ**
**ಸ್ತನ್ಮೇಽಭೂದ್ವರವರ್ಣಿನೀತಿ ಶಮಯನ್ ಮನ್ಮಾನಸೇ ಸ್ಯಾದಸೌ ॥ ೫೫ ॥**

ಅನ್ಯಾ=ಇನ್ನೊಬ್ಬಳು; ಚುಂಬನ=ಮುದ್ದು; ಜಾತ=ಉಂಟಾದ್ದು; ಚಿಹ್ನಂ=ಚಿಹ್ನೆಯನ್ನು; ಅಧುನಾ=ಈಗ; ಬಿಂಬ=ತೊಂಡೇಹಣ್ಣು; ಅಧರೇ=ತುಟಿಯಲ್ಲಿ; ದೃಶ್ಯತೇ=ಕಾಣುತ್ತದೆ; ತತ್=ಆದ್ದರಿಂದ; ಮಾಂ=ನನ್ನನ್ನು; ರಂಜಯಸಿ= ಸಂತೋಷಗೊಳಿಸುತ್ತಿ; ಈಶ=ಒಡೆಯ; ಕಿಂ=ಏನು; ಪ್ರಿಯ=ಒಳ್ಳೆಯ; ಗಿರಾ=ಮಾತಿನಿಂದ; ಧನ್ಯಾ=ಧನ್ಯಳು; ಅಬಲಾ=ನಾರಿಯು; ಸಾಏವ=ಅವಳೇ; ಮನ್ಯು=ಸಿಟ್ಟು; ಉದ್ರಿಕ್ತ=ಹೆಚ್ಚು; ಹೃದಾ=ಮನದಿಂದ; ಮುಹುಃ=ಪುನಃ; ಸಖಿ=ಗೆಳತಿ; ಭವತ್=ನೀನು; ಶೂನ್ಯಾಂ=ರಹಿತ; ಸಭಾಂ=ಸಭೆಯನ್ನು; ಪಶ್ಯತಃ= ನೋಡುವ; ತತ್=ಅದು; ಮೇ=ನನಗೆ; ಅಭೂತ್=ಆಯಿತು; ವರ=ಶ್ರೇಷ್ಠ; ವರ್ಣಿನಿ= ವರ್ಣಿಸಲ್ಪಡುವುದು; ಇತಿ=ಎಂದು; ಶಮಯನ್=ಸಮಾಧಾನಪಡಿಸುತ್ತಾ; ಮತ್=ನನ್ನ; ಮಾನಸೇ=ಮನದಲ್ಲಿ; ಸ್ಯಾತ್=ಇರಲಿ; ಅಸೌ=ಇವನು.

ಚುಂಬನದ ಮೂಲಕ ಈಕೆಯ ಬಾಯಿಯನ್ನು ಕಟ್ಟೋಣ ಎಂಬ ಕೃಷ್ಣನ ಉಪಾಯವು ಆತನಿಗೆ ಅಪಾಯವಾಗಿಯೇ ಪರಿಣಮಿಸಿತು. ಕೃಷ್ಣನು ಆಕೆಯನ್ನು ಚುಂಬಿಸಲು ತನ್ನ ಬಾಯನ್ನು ಸಮೀಪ ತಂದಾಗ ತುಟಿಯಲ್ಲಿ ಗಾಯವು ಆಕೆಗೆ ಗೋಚರಿಸಿತು. ಆಕೆ ತತ್‌ಕ್ಷಣ ಕೇಳಿದಳು: ಕೃಷ್ಣ, ನೀನು ಇನ್ನೊಬ್ಬಳ ಜೊತೆಗೆ ರಮಿಸಿ ಬಂದಿದ್ದೀಯಾ? ನಿನ್ನ ತುಟಿಯಲ್ಲಿ ಗಾಯ ಇದೆ ನೋಡು. ಇಂತಹ ನೀನು ನನ್ನನ್ನು ಹೇಗೆ ರಮಿಸುತ್ತೀಯಾ? ನಿನ್ನೊಡನೆ ಈ ತನಕ ರಮಿಸಿದ ಆ ಗೋಪಿಯೇ ಧನ್ಯಳು. ಆನೆಯ ದೃಷ್ಟಾಂತದ ಮೂಲಕ ನನ್ನ ಸೌಂದರ್ಯವನ್ನು ವರ್ಣಿಸಿ ನನ್ನನ್ನು ಸಮಾಧಾನ

ಪಡಿಸುತ್ತಿ. ನಾನು ಸಿಟ್ಟಾಗಬಾರದು ಎಂದು. ಹೇ ಗೋಪಿಯೇ, ಹಾಗಲ್ಲ. ನಾನು ಈ ತನಕ ನಾರಿಯರ ಹಾಗೂ ಗೋಪರ ಸಭೆಯಲ್ಲಿದ್ದೆ. ಅಲ್ಲಿ ನೀನು ಗೋಚರಿಸಲೇ ಇಲ್ಲ. ನನಗೆ ಬಹಳ ಸಿಟ್ಟು ಬಂತು. ಆ ಸಿಟ್ಟಿನ ಭರದಲ್ಲಿ ನನ್ನ ತುಟಿಯನ್ನು ಕಚ್ಚಿಕೊಂಡೆ. ನಿನ್ನನ್ನು ಹುಡುಕುತ್ತಾ ಹೊರಟೆ. ನೀನು ಸಾಮಾನ್ಯಳಲ್ಲ. ನೀನು ವರವರ್ಣಿನಿ. ಅಂದರೆ ದೊಡ್ಡವರೂ ಕೂಡಾ ನಿನ್ನ ಸೌಂದರ್ಯವನ್ನು ವರ್ಣಿಸುತ್ತಾರೆ. ಅಂತಹ ನೀನು ಇಲ್ಲದ ಆ ಸಭೆಯು ಸಭೆಯೇ ಅಲ್ಲ ಎಂದು ಉತ್ತರಿಸಿದನು. ಇಂತಹ ಕೃಷ್ಣನು ನಮ್ಮನ್ನು ರಕ್ಷಿಸಲಿ. ಸದಾ ನಮ್ಮ ಮನದಲ್ಲಿ ಇರಲಿ.

**ಸಂದೇಶ** : 'ಏಕಮೇವ ಅದ್ವಿತೀಯಂ' ಒಬ್ಬನೇ ದೇವರು ಎಲ್ಲರಿಗೂ ಅವರವರ ರೂಪದಂತೆ ಬಿಂಬನಾಗುತ್ತಾನೆ. ಆದ್ದರಿಂದ ದೇವರು ಎಲ್ಲರನ್ನೂ ರಮಿಸುವವನು.

**ವೃಂದಾರಣ್ಯನಿಕುಂಜಮಂದಿರಗತಂ ಮಂದಾನಿಲೈರ್ವೀಜಿತಂ**
**ಚಂದ್ರಾಮಂದಕರೇಣ ಸೇವಿತಪದಂ ಕಂದರ್ಪತಾತಂ ನಿಶಿ ।**
**ಮಂದಾರಾದಿಲಸತ್ಪ್ರಸೂನನಿಚಯೈರ್ವೃಂದಾರಕಪ್ರೇಷಿತೈಃ**
**ಸಂದೃಶ್ಯ ಪ್ರಿಯವರ್ತ್ಮ ಗೋಪಲಲನಾವೃಂದಂ ಶನೈಃ ಪದ್ಯತೇ ॥ ೫೬ ॥**

ವೃಂದಾರಣ್ಯ=ವೃಂದಾವನ; ನಿಕುಂಜ=ಕುಟೀರ; ಮಂದಿರ=ಮನೆ; ಗತಂ= ಇರುವುದು; ಮಂದ=ನಿಧಾನ; ಅನಿಲೈಃ=ಗಾಳಿಯಿಂದ; ವೀಜಿತಂ=ಬೀಸಿದ್ದು; ಚಂದ್ರ= ಚಂದ್ರನು; ಅಮಂದ=ಸ್ವಲ್ಪ; ಕರೇಣ=ಕಿರಣದಿಂದ; ಸೇವಿತ=ಸೇವಿಸಲ್ಪಟ್ಟ; ಪದಂ=ಪಾದವು; ಕಂದರ್ಪ=ಮನ್ಮಥನ; ತಾತಂ=ತಂದೆಯನ್ನು; ನಿಶಿ=ರಾತ್ರಿಯಲ್ಲಿ; ಮಂದಾರ= ಮಂದಾರಪುಷ್ಪವು; ಆದಿ=ಮೊದಲು; ಲಸತ್=ಶೋಭೆಯು; ಪ್ರಸೂನ=ಪುಷ್ಪವು; ನಿಚಯೈಃ= ಗುಂಪುಗಳಿಂದ; ವೃಂದಾರಕ=ದೇವತೆಗಳು; ಪ್ರೇಷಿತೈಃ=ಕಳುಹಿಸಿದ್ದು; ಸಂದೃಶ್ಯ=ನೋಡಿ; ಪ್ರಿಯ=ಇಷ್ಟ; ವರ್ತ್ಮ=ದಾರಿ; ಗೋಪ=ಗೊಲ್ಲರು; ಲಲನಾ=ನಾರಿಯರು; ವೃಂದಂ=ಗುಂಪು; ಶನೈಃ=ಮೆಲ್ಲಗೆ; ಪದ್ಯತೇ=ಬರುತ್ತದೆ.

ವೃಂದಾವನದಲ್ಲಿ ಬಹಳ ಲತಾಮಂದಿರಗಳು ಇವೆ. ಅವುಗಳಲ್ಲಿ ಕೃಷ್ಣನ ರೂಪಗಳು ಇವೆ. ಗಾಳಿಯು ನಿಧಾನವಾಗಿ ಬೀಸುತ್ತಿದೆ. ಚಂದ್ರನ ಕಿರಣಗಳು ಆ ಕುಟೀರವನ್ನು ಪ್ರವೇಶಿಸುತ್ತವೆ. ಹೊತ್ತು ರಾತ್ರಿಯಾಗಿದೆ. ಗೋಪಿಯರು ಕೃಷ್ಣನನ್ನು ಅರಸುತ್ತಾ ಹೊರಟಿದ್ದಾರೆ. ಇವರಿಗೆ ಕೃಷ್ಣನನ್ನು ಪತ್ತೆಹಚ್ಚುವುದು ಬಹಳ ಸುಲಭವಾಯಿತು. ಹೇಗೆಂದರೆ ಕೃಷ್ಣನು ದಾರಿಯಲ್ಲಿ ಹೋಗುತ್ತಿರುವಾಗ ದೇವತೆಗಳು ಮಂದಾರಾದಿ ಪುಷ್ಪಗಳನ್ನು ವರ್ಷಿಸುತ್ತಿದ್ದರು. ಹೂಗಳು ಬಿದ್ದ ಜಾಗದಲ್ಲೇ ಗೋಪಿಯರು ಹೊರಟರು. ಆಗ ಕೃಷ್ಣನಿರುವ ಸ್ಥಳವು ಲಭಿಸಿತು.

ಐತರೇಯವೇ ಮೊದಲಾದ ಆರಣ್ಯಕಗಳಲ್ಲಿರುವ ದೇವರನ್ನು ತಿಳಿಯಲು ದೇವತೆಗಳ ಅನುಗ್ರಹ ಬೇಕು. ಅವರು ತೋರಿಸಿದ ದಾರಿಯಲ್ಲಿ ಸಾಗಬೇಕು.

**ನೃತ್ಯತ್ಕೇಕಿನಿ ಚಿತ್ರಪುಷ್ಪತಿಲಕಾರತ್ನಸ್ಫುರತ್ತೋರಣೈಃ**
**ವಿಶ್ವಕ್ಶೋಭಿನಿ ಪಲ್ಲವಾಖ್ಯವಿಲಸತ್ತಲ್ಪೇ ಪ್ರದೀಪತ್ವಿಷಿ ।**
**ವಿಸ್ತೀರ್ಣೌಷಧಿಭಿಃ ಪ್ರಸೂನವಿಲಸತ್ ಪತ್ರೈರ್ವಿತಾನಪ್ರಭೇ**
**ಮತ್ತಾಲಿವ್ರಜಗಾಯಕೇ ಹರಿರಭಾತ್ ಕುಂಜೇ ನಿಜಾಂ ರಂಜಯನ್ ॥ ೫೭ ॥**

ನೃತ್ಯನ್=ಕುಣಿಯುವ; ಕೇಕಿನಿ=ನವಿಲುಗಳುಳ್ಳ; ಚಿತ್ರ=ಬಣ್ಣ; ಪುಷ್ಪ=ಹೂಗಳು; ತಿಲಕಾ=ಮಾಲಿಕೆ; ರತ್ನ=ಮಣಿಗಳು; ಸ್ಫುರತ್=ಶೋಭಿಸುವ; ತೋರಣೈಃ=ತೋರಣಗಳಿಂದ; ವಿಶ್ವಕ್=ಸುತ್ತಲೂ; ಶೋಭಿನಿ=ಶೋಭಿಸುವ; ಪಲ್ಲವ=ಚಿಗುರುಗಳು; ಆಖ್ಯ=ಹೆಸರು; ವಿಲಸತ್=ಶೋಭಿಸುವ; ತಲ್ಪೇ=ಹಾಸಿಗೆಯಲ್ಲಿ; ಪ್ರದೀಪ=ದೀಪವು; ತ್ವಿಷಿ=ಕಾಂತಿಯುಳ್ಳ; ವಿಸ್ತೀರ್ಣ=ವಿಶಾಲ; ಓಷಧಿಭಿಃ=ಲತೆಗಳಿಂದ; ಪ್ರಸೂನ=ಹೂಗಳು; ವಿಲಸತ್=ಶೋಭಿಸುವ; ಪತ್ರೈಃ=ಎಲೆಗಳಿಂದ; ವಿತಾನ=ಮೇಲ್ಕಟ್ಟು; ಪ್ರಭೇ=ಕಾಂತಿಯುಳ್ಳ; ಮತ್ತ=ಮದಭರಿತ; ಅಲಿ=ದುಂಬಿಗಳು; ವ್ರಜ=ಗುಂಪು; ಗಾಯಕೇ=ಗಾನಮಾಡುವ; ಹರಿಃ=ದೇವರು; ಅಭಾತ್=ಶೋಭಿಸಿದನು; ಕುಂಜೇ=ಕುಟೀರದಲ್ಲಿ; ನಿಜಾಂ=ತನ್ನವಳನ್ನು; ರಂಜಯನ್=ಪ್ರೀತಿಸುತ್ತಾ.

ಕೃಷ್ಣನು ಕಾಡಿನಲ್ಲಿ ಕುಟೀರದಲ್ಲಿದ್ದರೂ ರಾಜವೈಭವಕ್ಕೆ ಕೊರತೆ ಇರಲಿಲ್ಲ. ರಾಜನ ಅರಮನೆಯಲ್ಲಿ ನರ್ತಕರು, ಗಾಯಕರು, ತೋರಣಗಳು, ಮೇಲ್ಕಟ್ಟುಗಳು, ಹಾಸಿಗೆಗಳು, ಮಡದಿಯರು, ದೀಪಗಳು ಇರುತ್ತವೆ. ಕೃಷ್ಣನ ಬಣ್ಣ ನೀಲ ಮೋಡದಂತೆ. ಮೋಡಗಳನ್ನು ಕಂಡಾಗ ನವಿಲುಗಳು ಕುಣಿಯುತ್ತವೆ. ಕೃಷ್ಣನನ್ನು ಕಂಡು ನಲಿದ ನವಿಲುಗಳು ನರ್ತಕರ ಸ್ಥಾನವನ್ನು ಅಲಂಕರಿಸಿದವು. ಕುಟೀರದಲ್ಲಿ ಪುಷ್ಪಗಳು ಒತ್ತೊತ್ತಾಗಿ ಅರಳಿ ಮಾಲಿಕೆಗಳಂತೆ ತೋರುತ್ತಿದ್ದವು. ಇವುಗಳೇ ತೋರಣಗಳು. ಇವುಗಳಿಂದ ಕುಟೀರಗಳು ಶೋಭಿಸುತ್ತಿದ್ದವು. ಮೃದುವಾದ ಚಿಗುರುಗಳು ಹಾಸಿಗೆಯ ಅನುಭವವನ್ನು ಕೊಡುತ್ತಿದ್ದವು. ಆ ಕಾಡಲ್ಲಿ ನಾನಾ ರೀತಿಯ ಬಳ್ಳಿಗಳಿದ್ದವು. ಕೆಲವು ಬೆಳಕನ್ನು ಕೊಡುತ್ತಿದ್ದವು. ಇಂತಹ ಬಳ್ಳಿಗಳಿಂದ ದೀಪಾಲಂಕಾರವೂ ಆಯಿತು. ಪುಷ್ಪ ಬಳ್ಳಿಗಳ ಎಲೆಗಳು ದಟ್ಟವಾಗಿ ಮೇಲ್ಭಾಗದಲ್ಲಿ ಹರಡಿದೆ. ಇದು ಮೇಲ್ಕಟ್ಟಿನ ಶೋಭೆಯನ್ನು ಕೊಡುತ್ತಿತ್ತು. ಪರಾಗವನ್ನು ಹೀರಿ ಮದಭರಿತಗಳಾದ ದುಂಬಿಗಳು ಬಹಳ ಝೇಂಕರಿಸುತ್ತವೆ. ಇದೇ ಹಾಡು. ಇಂತಹ ವೈಭವವುಳ್ಳ ಅರಮನೆಯಂತಿರುವ ಕುಟೀರದಲ್ಲಿ ಕೃಷ್ಣನು ಲಕ್ಷ್ಮಿಯ ಸನ್ನಿಧಾನವುಳ್ಳ ಗೋಪಿಯಿಂದ ರಮಿಸಿದನು.

**ಸಂದೇಶ** : ದೇವರು ಇರುವ ಜಾಗ ಸಮೃದ್ಧ. ಇಲ್ಲದ ಜಾಗ ಮರುಭೂಮಿ.

**ಸ್ನಾತಃ ಸೌಂದರ್ಯನದ್ಯಾಂ ಪರಿಹೃತವಸನಃ ಗೋಪಿಕಾಲೇಪನಶ್ರೀಃ**
**ವಕ್ಷೋಜಾಬ್ಜಾಸನಸ್ಥಃ ಕೃತವನವಸತಿಃ ಹಾರಮಾಲಾಕರಾಗ್ರಃ ।**

**ಬಿಭ್ರತ್ಕೇಶೌಘಕಾಶಾನಧರಜನಿಪಯೋಮಾತ್ರವೃತ್ತಿರ್ವಿನಿದ್ರಃ**
**ಪ್ರೇಷ್ಠಃ ಶ್ರೀವಿಠ್ಠಲೋಽಸೌ ಜಯತಿ ಮುನಿಗಣಂ ಜಾರವಾರ್ತಾ ಕುತೋಽಸ್ಯ**
**॥ ೫೮ ॥**

ಸ್ನಾತಃ=ಸ್ನಾನಮಾಡಿದ; ಸೌಂದರ್ಯ=ಸೌಂದರ್ಯವು; ನದ್ಯಾಂ=ನದಿಯಲ್ಲಿ; ಪರಿಹೃತ=ಪರಿಹಾರಮಾಡಿದ; ವಸನಃ=ವಸ್ತ್ರವು; ಗೋಪಿಕಾ=ಗೋಪಿಯು; ಲೇಪನ= ಹಚ್ಚುವಿಕೆಯು; ಶ್ರೀಃ=ಕಾಂತಿಯು; ವಕ್ಷಃ=ಎದೆಯು; ಜ=ಹುಟ್ಟಿದ್ದು; ಅಬ್ಜ=ಕಮಲವು; ಆಸನ=ಆಸನವು; ಸ್ಥಃ=ಇರುವುದು; ಕೃತ=ಮಾಡಿದ; ವನ=ಕಾಡು; ವಸತಿಃ=ವಾಸವು; ಹಾರ=ಹಾರವು; ಮಾಲಾ=ಮಾಲೆಯು; ಕರ=ಕೈಯು; ಅಗ್ರಃ=ತುದಿಯು; ಬಿಭ್ರತ್= ಧರಿಸಿದ್ದು; ಕೇಶ=ಕೂದಲು; ಓಘ=ಸಮೂಹವು; ಕಾಶಾನ್=ಹುಲ್ಲನ್ನು; ಅಧರ=ತುಟಿಯು; ಜನಿ=ಉತ್ಪತ್ತಿ; ಪಯೋಮಾತ್ರ=ಕೇವಲ ರಸವು; ವೃತ್ತಿಃ=ಜೀವನವು; ವಿನಿದ್ರಃ=ನಿದ್ದೆ ಇಲ್ಲದಿರುವುದು; ಪ್ರೇಷ್ಠಃ=ಪ್ರಿಯನು; ಶ್ರೀವಿಠ್ಠಲಃ=ಶ್ರೀಕೃಷ್ಣನು; ಅಸೌ=ಈ; ಜಯತಿ= ಶ್ರೇಷ್ಠನಾಗಿದ್ದಾನೆ; ಮುನಿ=ಋಷಿಗಳು; ಗಣಂ=ಸಮೂಹವನ್ನು; ಜಾರ=ಜಾರತನದ; ವಾರ್ತಾ=ಮಾತು; ಕುತಃ=ಹೇಗೆ? ಅಸ್ಯ=ಇವನಿಗೆ.

ಕೃಷ್ಣನು ಗೋಪಿಯರೊಡನೆ ವ್ಯವಹರಿಸಿದ ರೀತಿಯು ಋಷಿ ಜೀವನದಂತೆ ಇದೆ ಹೊರತು ಜಾರತನದ ಜೀವನವಲ್ಲ ಎಂದು ರಾಜರು ವರ್ಣಿಸುತ್ತಾರೆ –ಋಷಿಗಳು ನಿತ್ಯ ಸ್ನಾನ ಮಾಡುತ್ತಾರೆ. ದೇಹದ ಮೇಲೆ ಅಭಿಮಾನ ಇರುವುದಿಲ್ಲ. ಆದ್ದರಿಂದ ದಿಗಂಬರರಾಗಿರುತ್ತಾರೆ. ಗೋಪಿಯಿಂದ ದ್ವಾದಶನಾಮಗಳನ್ನು ಧರಿಸಿರುತ್ತಾರೆ. ಪದ್ಮಾಸನದಲ್ಲಿ ಇರುತ್ತಾರೆ. ಕಾಡೇ ವಾಸಸ್ಥಳ. ಕೊರಳಲ್ಲಿ ತುಳಸಿಹಾರ; ಕೈಯಲ್ಲಿ ಜಪಮಾಲೆ. ಹವನಕ್ಕಾಗಿ ದರ್ಭೆಗಳನ್ನು ಹಿಡಿದಿರುತ್ತಾರೆ. ಹರಿಯುವ ನೀರನ್ನು ಮಾತ್ರ ಸೇವಿಸುವರಾಗಿ ಜೀವಿಸುತ್ತಾರೆ. ನಿದ್ರೆಯಂತೂ ಬಹಳ ದೂರ. ಈ ಎಲ್ಲಾ ಧರ್ಮಗಳನ್ನು ಕೃಷ್ಣನೂ ಆಚರಿಸುತ್ತಿದ್ದಾನೆ.

ನದಿಯ ನೀರಿನಿಂದ ನಾವು ಸುಂದರರಾಗುತ್ತೇವೆ. ಕೃಷ್ಣನು ಸೌಂದರ್ಯಖನಿ. ಸೌಂದರ್ಯ ಎಂಬ ನದಿಯಲ್ಲೇ ಸದಾ ಮೀಯುತ್ತಾ ಇರುವವನು. ರತಿಕಾಲದಲ್ಲಿ ಮೈಮೇಲಿನ ವಸ್ತ್ರಗಳನ್ನು ತೆಗೆಯುವುದು ಸ್ವಾಭಾವಿಕ. ಗೋಪಿಯರನ್ನು ಆಲಿಂಗಿಸುವಾಗ ಅವರ ಮೈಯ ಚಂದನ ಲೇಪನವು ಇವನಿಗೆ ತಾಗುವುದು ಸ್ವಭಾವಿಕ. ಈ ರೀತಿ ಗೋಪಿಕಾ ಲೇಪನವೂ ಆಯಿತು. ಗೋಪಿಯರ ಸ್ತನವು ಪದ್ಮದಂತೆ ಇದೆ. ಅದರಲ್ಲಿ ಕೃಷ್ಣನು ತನ್ನ ತಲೆಯನ್ನು ಇಡುವ ಮೂಲಕ ಪದ್ಮಾಸನದಲ್ಲಿ ಇದ್ದಾನೆ. ಇರುವುದು ವನದಲ್ಲೇ ತಾನೆ. ಕೊರಳಲ್ಲಿ ನಾನಾ ಹಾರಗಳನ್ನು ಧರಿಸಿದ್ದಾನೆ. ಗೋಪಿಗೆ ಕೊಡಲು ಕೈಯಲ್ಲಿ ಒಂದು ಮಾಲೆಯನ್ನು ಹಿಡಿದುಕೊಂಡಿದ್ದಾನೆ. ಮುನಿಯಂತೆ ಮಾಲೆಯನ್ನು ಹಿಡಿದು ಜಪಿಸುತ್ತಿದ್ದಾನೆ. ಮುನಿಯು ದೇವರನ್ನು ಜಪಿಸಿದರೆ ಈತನು ಭಕ್ತಳಾದ

ಗೋಪಿಯನ್ನು ಜಪಿಸುತ್ತಾನೆ. ನಾರಿಯರ ಕೇಶಗಳನ್ನು ದರ್ಭೆಗಳಂತೆ ಕೈಯಿಂದ ಗ್ರಹಣ ಮಾಡಿದ್ದಾನೆ. ರತಿಕಾಲದಲ್ಲಿ ಕೇಶಗ್ರಹಣವು ಸ್ವಾಭಾವಿಕವಾದದ್ದು. ಗೋಪಿಯರ ತುಟಿಗಳಿಂದ ಸುರಿಯುವ ಜಲವನ್ನು ಮಾತ್ರ ಪಾನ ಮಾಡುತ್ತಾನೆ. ರತಿಕಾಲದಲ್ಲಿ ನಿದ್ರೆಗೇ ವಿಶ್ರಾಂತಿ. ಹೀಗೆ ಮುನಿಗಳಂತೆ ಇದ್ದಾನೆ. ಇಷ್ಟೇ ಅಲ್ಲ; ಮುನಿಗಳನ್ನು ಮೀರಿದ್ದಾನೆ. ಮುನಿಗಳು ನಾರಿಯರ ಮಧ್ಯದಲ್ಲಿದ್ದರೆ ಒಮ್ಮೊಮ್ಮೆ ಇಂದ್ರಿಯಗಳಿಗೆ ದಾಸರಾಗುತ್ತಾರೆ. ಆದರೆ ಕೃಷ್ಣನು ಈ ಸಂದರ್ಭದಲ್ಲಿಯೂ ಊರ್ಧ್ವರೇತಸನಾಗಿಯೇ ಇದ್ದನು. ಆದ್ದರಿಂದಲೇ ರಾಜರು 'ಜಯತಿ' ಎಂಬ ಪದವನ್ನು ಬಳಸಿದ್ದು.

<u>**ಸಂದೇಶ**</u> : ರಾಜರು ಈ ಪದ್ಯದ ಅಭಿಪ್ರಾಯವನ್ನು ತನ್ನ ಲಕ್ಷ್ಮೀಶೋಭಾನ ಹಾಡಿನಲ್ಲಿ 'ರಮ್ಮೆ ದೇವಿಯರನು......' ಎಂಬ ನುಡಿಯಲ್ಲಿ ತಿಳಿಸಿದ್ದಾರೆ. ದಾಸರು ಹೇಳಿದ 'ಜಾರತ್ವವನು ಮಾಡಿದ ಪಾಪಗಳಗೆಲ್ಲಾ ಹೇ ಗೋಪೀಜನಜಾರ ಎಂದರೆ ಸಾಲದೇ' ಎಂಬ ನುಡಿಗೂ ಇದೇ ಅರ್ಥ. ನಾವು ಮಾಡಿದ ಇಂತಹ ಪಾಪಗಳಿಗೆ ದೇವರನ್ನು ಈ ರೀತಿ ಚಿಂತಿಸಿದರೆ ಆ ಪಾಪಗಳು ಪರಿಹಾರವಾಗುವುವು.

**ಚುಂಬಂತ್ಯಃ ಸರಸಾಧರಂ ಪುಲಕಿತೈರಂಗೈರ್ಗಲತ್ಭೂಷಣೈ–**
**ಸ್ತಂ ಗಾಢಂ ಪರಿರಭ್ಯ ಸುಸ್ಮಿತಮುಖಂ ಸೌಂದರ್ಯಸಿಂಧುಂ ಮುದಾ ।**
**ತುಂಗಾತ್ಮೀಯಮನೋರಮಸ್ತನತಟೇ ಸಂದರ್ಶಿತಾಂಕಂ ನಖೈ–**
**ರ್ವೃಂದಾರಣ್ಯಮದೋ ನನಂದುರಬಲಾ ಮಂದಾನಿಲೈರ್ಮಂಜುಲಮ್॥ ೫೯ ॥**

ಚುಂಬಂತ್ಯಃ=ಚುಂಬಿಸುವ; ಸರಸಾಧರಂ=ರಸದಿಂದ ಕೂಡಿದ ತುಟಿಯನ್ನು; ಪುಲಕಿತೈಃ=ರೋಮಾಂಚಿತವಾದ; ಅಂಗೈಃ=ಶರೀರದಿಂದ; ಗಲತ್=ಚೆಲ್ಲಿದ; ಭೂಷಣೈಃ= ಆಭರಣಗಳಿಂದ; ತಂ=ಅವನನ್ನು; ಗಾಢಂ=ಬಿಗಿದು; ಪರಿರಭ್ಯ=ಆಲಿಂಗಿಸಿ; ಸುಸ್ಮಿತ= ನಗುವಿನ; ಮುಖಂ=ಮುಖವನ್ನು; ಸೌಂದರ್ಯ=ಚಂದ; ಸಿಂಧುಂ= ಸಮುದ್ರವನ್ನು; ಮುದಾ=ಆನಂದದಿಂದ; ತುಂಗ=ಎತ್ತರವಾದ; ಆತ್ಮೀಯ=ತನ್ನ; ಮನೋರಮ=ಚಂದದ; ಸ್ತನ=ಸ್ತನಗಳ; ತಟೇ=ಸ್ಥಳದಲ್ಲಿ; ಸಂದರ್ಶಿತ=ತೋರಿದ; ಅಂಕಂ=ಗುರುತು; ನಖೈಃ=ಉಗುರುಗಳಿಂದ; ವೃಂದಾರಣ್ಯಂ=ಕಾಡು; ಅದಃ=ಈ; ನನಂದುಃ=ಆನಂದಿಸಿದರು; ಅಬಲಾಃ=ನಾರಿಯರು; ಮಂದಾನಿಲೈಃ=ನಿಧಾನ ಗಾಳಿಯಿಂದ; ಮಂಜುಲಂ=ಚಂದದ.

ಕೃಷ್ಣನು ಸೌಂದರ್ಯಸಾಗರನು. ಸದಾ ಹಸನ್ಮುಖಿಯು. ಇವನನ್ನು ಕಂಡರೆ ಯಾರಾದರೂ ಮರುಳಾಗಲೇ ಬೇಕು. ಗೋಪಿಯರಂತೂ ಮರುಳಾಗುವುದು ಸಹಜ. ಅದಕ್ಕೆ ಪೂರಕವೋ ಎಂಬಂತೆ ಕೃಷ್ಣನು ಗೋಪಿಯರ ಪುಷ್ಟವಾದ ಸ್ತನಗಳನ್ನು ಹಿಡಿಯುವ ಮೂಲಕ ಗಾಯಗೊಳಿಸಿದ್ದನು. ಇದರಿಂದ ಅವರು ರೋಮಾಂಚನಗೊಂಡಿದ್ದಾರೆ. ಕುಣಿಯುತ್ತಿದ್ದಾರೆ. ಇದರಿಂದಾಗಿ ಅವರ ಮೈಯ ಹಾರಗಳು ಚೆಲ್ಲಾಪಿಲ್ಲಿಯಾಗಿವೆ. ಈ

ಅವಸ್ಥೆಯಲ್ಲಿಯೇ ಕೃಷ್ಣನನ್ನು ಬಿಗಿದಪ್ಪಿದರು. ಆತನ ತುಟಿಯನ್ನು ಚುಂಬಿಸಿದರು. ಈ ಕಾಮಬೆಂಕಿಗೆ ತುಪ್ಪ ಸುರಿದಂತೆ ಗಾಳಿಯೂ ತಂಪಾಗಿ ಬೀಸುತ್ತಿದೆ. ಗೋಪಿಯರು ಉಲ್ಲಾಸಭರಿತರಾಗಿದ್ದಾರೆ. ನಾಡಿಗಿಂತ ಈ ಕಾಡೇ ಮೇಲು ಎಂದು ಅಭಿಪ್ರಯಿಸಿದ್ದಾರೆ.

**ಸಂದೇಶ** : ದೇವರಿಂದ ಕೂಡಿದಾಗ ನಮ್ಮ ಮನವೇ ಅರಮನೆ; ಇಲ್ಲದಿದ್ದರೆ ಅದುವೇ ಸೆರೆಮನೆ.

**ಕಾಂತಾಕದಂಬಕುಚಕುಂಜರಕುಂಭಸಂಗಿ–**
**ಸಂತಾಪಹಾರಿನಖಮಂಡಲಮಂಡಿತೋಽಲಮ್ ।**
**ಗಂಡಾನುಷಕ್ತವಿಲಸನ್ಮುಖಚಂದ್ರಚುಂಬೀ**
**ಕುಂಜೇಷು ಸಂಚರತಿ ಕೃಷ್ಣವಿಚಿತ್ರಸಿಂಹಃ ॥ ೬೦ ॥**

ಕಾಂತಾ=ನಾರಿಯರು; ಕದಂಬ=ಗುಂಪು; ಕುಚ=ಸ್ತನಗಳು; ಕುಂಜರ=ಆನೆಗಳು; ಕುಂಭ=ಗಂಡಸ್ಥಳವು; ಸಂಗಿ=ಸಂಬಂಧವುಳ್ಳ; ಸಂತಾಪ=ದುಃಖ; ಹಾರಿ=ನಾಶಮಾಡುವ; ನಖ=ಉಗುರು; ಮಂಡಲ=ಗುಂಪು; ಮಂಡಿತ=ಅಲಂಕರಿಸಲ್ಪಟ್ಟ; ಅಲಂ=ಚೆನ್ನಾಗಿ; ಗಂಡ=ಕಪೋಲವು; ಅನುಷಕ್ತ=ಸಂಬದ್ಧ; ವಿಲಸತ್=ಶೋಭೆ; ಮುಖ=ಮುಖವು; ಚಂದ್ರ=ಚಂದ್ರನು; ಚುಂಬೀ=ಚುಂಬಿಸುವ; ಕುಂಜೇಷು=ಕುಟೀರಗಳಲ್ಲಿ; ಸಂಚರತಿ=ಸಂಚರಿಸುತ್ತಿದೆ; ಕೃಷ್ಣ=ಕೃಷ್ಣನು; ವಿಚಿತ್ರ=ಅದ್ಭುತ; ಸಿಂಹಃ=ಸಿಂಹವು.

ರಾಜರು ಕೃಷ್ಣನನ್ನು ಸಿಂಹಕ್ಕೆ ಹೋಲಿಸುತ್ತಾರೆ –ಸಿಂಹವು ಆನೆಗಳ ಕುಂಭಸ್ಥಳವನ್ನು ತನ್ನ ಉಗುರುಗಳಿಂದ ಸೀಳುತ್ತದೆ. ಈ ಗೋಪಿಯರ ಸ್ತನಗಳು ಕುಂಭಸ್ಥಳಗಳಂತೆ ಇವೆ. ಕೃಷ್ಣನು ತನ್ನ ಉಗುರುಗಳಿಂದ ಅವುಗಳನ್ನು ಘಾಸಿಗೊಳಿಸುತ್ತಾನೆ. ವ್ಯತ್ಯಾಸ ಇಷ್ಟೇ –ಆನೆಗಳಿಗೆ ಬಹಳ ತಾಪವಾಗುತ್ತದೆ. ನಾರಿಯರಿಗೆ ತಾಪಪರಿಹಾರವಾಗುತ್ತದೆ. ಕೃಷ್ಣನ ಕಪೋಲಗಳಿಗೆ ನಾರಿಯರು ತಮ್ಮ ಮುಖಚಂದ್ರನನ್ನು ತಾಗಿಸುತ್ತಾರೆ. ಕೃಷ್ಣನು ಅವುಗಳನ್ನು ಚುಂಬಿಸುತ್ತಾನೆ. ಈ ರೀತಿ ಕೃಷ್ಣನು ಚಂದ್ರನನ್ನು ಆಶ್ರಯಿಸಿದ್ದಾನೆ. ಜ್ಯೋತಿಃ ಶಾಸ್ತ್ರದ ಪ್ರಕಾರ ಚಂದ್ರನು ಸಿಂಹರಾಶಿಯ ಅಧಿಪತಿ ಚಂದ್ರನಿಗೂ ಸಿಂಹಕ್ಕೂ ಈ ರೀತಿ ಸಂಬಂಧ ಇದೆ. ಆದ್ದರಿಂದಲೇ ಇದು ಅದ್ಭುತವಾದ ಸಿಂಹ. ನಿಜಸಿಂಹದಂತೆ ಕೃಷ್ಣನೆಂಬ ಸಿಂಹವೂ ಕಾಡಲ್ಲೇ ಅಡ್ಡಾಡುತ್ತದೆ.

**ಸಂದೇಶ** : ದೇವರು ನಾಡಲ್ಲಿ ನಾಡಾಡಿಗಳಂತೆ ಜಲದಲ್ಲಿ ಜಲಚರದಂತೆ ಕಾಡಲ್ಲಿ ಕಾಡಾಡಿಗಳಂತೆ ಬಿಂಬರೂಪದಲ್ಲಿ ಇರುವನು.

**ಕೃಷ್ಣಾಂಘ್ರ್ಯಂಬುಜಲಕ್ಷ್ಮಲಕ್ಷ್ಯಮಖಿಲಂ ಯತ್ರ ಸ್ಥಲಂ ಸಾಚಲಂ**
**ಸಸ್ತ್ರೀಕಾ ಮುನಯಶ್ಚ ಪಕ್ಷಿಹರಿಣೀಹರ್ಯಕ್ಷವೃಕ್ಷಾದಯಃ ।**

**ಯತ್ಪಾಥಃ ಸುರಸಿಂಧುಸಿಂಧುಮಹಿತಂ ಯಸ್ಮಿನ್ ವ್ರಜಸ್ತ್ರೀವಶಂ**
**ಶ್ರುತ್ಯಂತಾಂತರಿತಂ ಮಹಃ ಪರಮದೋ ವೃಂದಾವನಂ ಸ್ಯಾನ್ಮುದೇ ॥ ೬೧ ॥**

ಕೃಷ್ಣ=ಕೃಷ್ಣನು; ಅಂಘ್ರಿ=ಪಾದವು; ಅಂಬುಜ=ಕಮಲವು; ಲಕ್ಷ್ಮ=ಚಿಹ್ನೆಯು; ಲಕ್ಷ್ಯಂ= ಗುರುತು; ಅಖಿಲಂ=ಎಲ್ಲಾ; ಯತ್ರ=ಎಲ್ಲಿ; ಸ್ಥಲಂ=ಜಾಗವು; ಸಾಚಲಂ=ಬೆಟ್ಟದಿಂದ ಕೂಡಿದ; ಸಸ್ತ್ರೀಕಾಃ=ನಾರಿಯರಿಂದ ಕೂಡಿದ; ಮುನಯಃ=ಋಷಿಗಳು; ಚ=ಕೂಡಾ; ಪಕ್ಷಿ= ಹಕ್ಕಿಗಳು; ಹರಿಣೀ=ಜಿಂಕೆಗಳು; ಹರ್ಯಕ್ಷ=ಸಿಂಹಗಳು; ವೃಕ್ಷ=ಮರಗಳು; ಆದಯಃ= ಮೊದಲಾದ್ದು; ಯತ್=ಎಲ್ಲಿ; ಪಾಥಃ=ನೀರು; ಸುರ=ದೇವತೆಗಳು; ಸಿಂಧು=ನದಿಯು; ಸಿಂಧು=ಸಮುದ್ರವು; ಮಹಿತಂ=ಪೂಜ್ಯ; ಯಸ್ಮಿನ್=ಎಲ್ಲಿ; ವ್ರಜ=ಗೋಕುಲ; ಸ್ತ್ರೀ= ನಾರಿಯರು; ವಶಂ=ಅಧೀನ; ಶ್ರುತಿ=ವೇದವು; ಅಂತ=ಕೊನೆ; ಅಂತರಿತಂ=ನಿಗೂಢ; ಮಹಃ=ಬೆಳಕು; ಪರಂ=ಉತ್ತಮ; ಅದಃ=ಇದು; ವೃಂದಾವನಂ=ಕಾಡು; ಸ್ಯಾತ್=ಆಗಲಿ; ಮುದೇ=ನೆಮ್ಮದಿಗೆ.

ಕೃಷ್ಣನು ಇಡೀ ವೃಂದಾವನದಲ್ಲಿ ಹಾಗೂ ಬೆಟ್ಟದಲ್ಲಿ ಅಡ್ಡಾಡಿದ್ದಾನೆ. ಎಲ್ಲಾ ಕಡೆಯು ಆತನ ಪಾದದ ಗುರುತು ಮೂಡಿದೆ. ಆ ಗುರುತಲ್ಲಿ ಧ್ವಜ ವಜ್ರಾದಿಗಳೂ ಕಾಣುತ್ತಿವೆ. ಅಲ್ಲಿರುವ ನಾರಿಯರು ಪ್ರಾಣಿಗಳು, ಪಕ್ಷಿಗಳು, ಮರಗಿಡಗಳು ಎಲ್ಲವೂ ಜನ್ಮಾಂತರದಲ್ಲಿ ಋಷಿಗಳೇ ಆಗಿದ್ದರು. ಕಾಡಲ್ಲಿದ್ದ ನೀರು ಸಮುದ್ರ, ಗಂಗಾದಿ ನದಿಗಳಿಗಿಂತಲೂ ಉತ್ತಮವಾಗಿತ್ತು. ಉಪನಿಷತ್ತುಗಳಿಗೂ ಸಿಗದ ಕೃಷ್ಣನು ಆ ಕಾಡಲ್ಲಿ ಗೋಪಿಯರ ವಶವಾಗಿದ್ದನು. ಒಂದು ರೀತಿಯಲ್ಲಿ ಗೋಪಿಯರೇ ಧನ್ಯರು. ಯಾರಿಗೂ ಸಿಗದ ದೇವರು ಇವರಿಗೆ ಸಿಕ್ಕಿದನು. ವೇದಗಳಿಗಿಂತಲೂ ಈ ಕಾಡೇ ಮೇಲು. ವೇದಗಳಿಂದಲೂ ಸಾಧ್ಯವಾಗದ ಕೃಷ್ಣನನ್ನು ಈ ಕಾಡು ತೋರಿಸಿತು.

**ಸಂದೇಶ** : 'ಶ್ವಪಚಾದಪಿ ಕಷ್ಟತ್ವಂ ಬ್ರಹ್ಮೇಶಾನಾದಯಃ ಸುರಾಃ' ದೇವರ ದಯ ಇಲ್ಲದಿದ್ದರೆ ಬ್ರಹ್ಮಾದಿದೇವತೆಗಳೂ ಚಂಡಾಲರಿಗಿಂತಲೂ ಕೀಳಾಗುತ್ತಾರೆ ಎಂದು ಶಾಸ್ತ್ರವು ಹೇಳುತ್ತದೆ. ದೇವರ ದಯೆ ಇದ್ದರೆ ಎಂತಹ ನೀಚನೂ ಪೂಜ್ಯನಾಗುತ್ತಾನೆ.

**ಯತ್ ಕುಂಜಾ ಮುರವೈರಿಸಂಗತವಧೂ ವಿಕ್ರೀಡನೈರ್ವಾಸಿತಾ**
**ಯತ್ ಸಂಜಾತಸುರದ್ರುಮೌಘಮಹಸಾ ವಿದ್ಯೋತಿತಾಶಾಮುಖಮ್ ।**
**ಯಚ್ಚಂದ್ರೇಶಸುರೇಶಮುಖ್ಯವಿಬುಧೈಃ ಸಂಸೇವ್ಯಮಾನಂ ಸದಾ**
**ತದ್ವೃಂದಾವನಮಾವಿರಸ್ತು ಸತತಂ ಚಿತ್ತೇ ಪ್ರಮತ್ತೇ ಮಮ ॥ ೬೨ ॥**

ಯತ್=ಯಾವುದು; ಕುಂಜಾಃ=ಕುಟೀರಗಳು; ಮುರ=ದೈತ್ಯನು; ವೈರಿ=ಶತ್ರುವು; ಸಂಗತ=ಸಂಬಂಧವು; ವಧೂ=ನಾರಿಯು; ವಿಕ್ರೀಡನೈಃ=ಆಟಗಳಿಂದ; ವಾಸಿತಾಃ= ಪರಿಮಳಿತ; ಯತ್=ಯಾವುದು; ಸಂಜಾತ=ಉಂಟಾದ; ಸುರ=ದೇವತೆಗಳು; ದ್ರುಮ=

ಮರಗಳು; ಓಘ=ಗುಂಪು; ಮಹಸಾ=ಕಾಂತಿಯಿಂದ; ವಿದ್ಯೋತಿತ=ಶೋಭಿತ; ಆಶಾ= ದಿಕ್ಕುಗಳು; ಮುಖಂ=ಮುಖವು; ಯತ್=ಯಾವ; ಚಂದ್ರ=ಚಂದ್ರನು; ಈಶ=ರುದ್ರನು; ಸುರೇಶ=ಇಂದ್ರನು; ಮುಖ್ಯ=ಮೊದಲಾದ; ವಿಬುಧೈಃ=ದೇವತೆಗಳಿಂದ; ಸಂಸೇವ್ಯ ಮಾನಂ=ಸೇವಿಸಲ್ಪಡುವ; ಸದಾ=ಯಾವಾಗಲೂ; ತತ್=ಆ; ವೃಂದಾವನಂ=ಕಾಡು; ಆವಿರಸ್ತು=ಕಾಣಿಸಲಿ; ಸತತಂ=ಯಾವಾಗಲೂ; ಚಿತ್ತೇ=ಮನದಲ್ಲಿ; ಪ್ರಮತ್ತೇ=ಮರೆಯು ವಿಕೆಯು; ಮಮ=ನನ್ನ.

ಈ ಕಾಡಲ್ಲಿ ಅನೇಕ ಕುಟೀರಗಳು. ಎಲ್ಲದರಲ್ಲಿಯೂ ಕೃಷ್ಣನ ವಾಸ. ಈತನು ದುಷ್ಟತನವನ್ನು ಕಾಡಿನತ್ತ ಸುಳಿಯಲೂ ಬಿಡುವುದಿಲ್ಲ. ಶಿಷ್ಟರಾದ ನಾರಿಯರ ಜೊತೆ ಈ ಕುಟೀರಗಳಲ್ಲಿ ರಾಸಕ್ರೀಡೆ. ಇದರಿಂದ ಕುಟೀರಗಳು ಪರಿಮಳಿತಗಳು. ಈ ಕಾಡಲ್ಲಿ ಸ್ವರ್ಗದ ಮರಗಳೇ ಇರುವುದು. ಅವುಗಳು ಬಹಳ ಪ್ರಕಾಶಮಯಗಳು. ಇದರಿಂದಾಗಿ ದಿಗಂತಗಳೆಲ್ಲಾ ಬೆಳಗುತ್ತವೆ. ಬ್ರಹ್ಮಾದಿ ಸಮಸ್ತದೇವತೆಗಳು ಇಲ್ಲಿಗೆ ಬಂದು ಶ್ರೀಕೃಷ್ಣನನ್ನು ಪೂಜಿಸುತ್ತಾರೆ. ಇಷ್ಟು ಉತ್ತಮವಾದದ್ದು ಈ ಕಾಡು. ಇಂತಹ ಕಾಡನ್ನು ಎಷ್ಟು ಧ್ಯಾನಿಸಿದರೂ ಸಾಲದು. ನಾವು ದುರ್ಬಲ ಮನದವರು. ಆದ್ದರಿಂದ ಆ ವನಾಭಿಮಾನಿದೇವತೆಯು ತಾನಾಗಿಯೇ ನಮ್ಮ ಮನದಲ್ಲಿ ನಿಲ್ಲಲಿ.

**ಸಂದೇಶ** : ಜಡವಾದ ಈ ಮನದಲ್ಲಿ ದೇವರ ಪ್ರತಿಮೆಯಂತಿರುವ ಈ ಕಾಡನ್ನು ಚಿಂತಿಸಬೇಕು. ಜೊತೆಯಲ್ಲಿ ಪರಿವಾರದೇವತೆಗಳ ಚಿಂತನೆಯೂ ಅಗತ್ಯ.

**ಕಸ್ತ್ವಂ ಕಶ್ಚನ ನಿರ್ಜರೋऽಹಮಿಹತೇ ಸ್ವರ್ಗಃ ಕ್ವ ತತ್ತ್ವದ್ಗೃಹಂ**
**ಪೀಯೂಷಂ ಕ್ವ ತವಾಧರೇಸ್ತಿ ಸುಭಗೇ ಕ್ವಾಸ್ತೇ ತವಾನಿದ್ರತಾ ।**
**ತ್ವತ್ಪ್ರೇಮ್ಣಾಂ ಸಖಿ ಚಿಂತಯಾನಿಮಿಷತಾ ಕುತ್ರ ಪ್ರಿಯೇ ಪಶ್ಯತಃ**
**ತ್ವದ್ರೂಪಂ ತ್ವಿತಿ ವಲ್ಲವೀಂ ಪ್ರಿಯಗಿರಾ ಚಕ್ರೀ ಸ ಚಕ್ರೇ ನಿಜಾಮ್ ॥ ೬೩ ॥**

ಕಃ=ಯಾರು; ತ್ವಂ=ನೀನು; ಕಶ್ಚನ=ಒಬ್ಬ; ನಿರ್ಜರ=ದೇವನು; ಅಹಂ=ನಾನು; ಇಹ=ಇಲ್ಲಿ; ತೇ=ನಿನ್ನ; ಸ್ವರ್ಗಃ=ಸ್ವರ್ಗವು; ಕ್ವ=ಎಲ್ಲಿ; ತತ್=ಅದು; ತ್ವತ್=ನಿನ್ನ; ಗೃಹಂ= ಮನೆಯು; ಪೀಯೂಷಂ=ಅಮೃತವು; ಕ್ವ=ಎಲ್ಲಿ; ತವ=ನಿನ್ನ; ಅಧರೇ=ತುಟಿಯಲ್ಲಿ; ಅಸ್ತಿ= ಇದೆ; ಸುಭಗೇ=ಪ್ರಿಯಳೇ; ಕ್ವ=ಎಲ್ಲಿ; ಆಸ್ತೇ=ಇದೆ; ತವ=ನಿನಗೆ; ಅನಿದ್ರತಾ= ಅನಿದ್ರೆಯು; ತ್ವತ್=ನಿನ್ನ; ಪ್ರೇಮ್ಣಾಂ=ಪ್ರೀತಿಗಳ; ಸಖಿ=ಗೆಳತಿಯೇ; ಚಿಂತಯಾ= ಚಿಂತೆಯಿಂದ; ಅನಿಮಿಷತಾ=ಕಣ್ಣುಮುಚ್ಚದಿರುವುದು; ಕುತ್ರ=ಎಲ್ಲಿ; ಪ್ರಿಯೇ=ಇಷ್ಟಳೇ; ಪಶ್ಯತಃ=ನೋಡುವ; ತ್ವತ್=ನಿನ್ನ; ರೂಪಂ=ರೂಪವನ್ನು; ತು ಇತಿ=ಎಂದು; ವಲ್ಲವೀಂ=ಗೋಪಿಯನ್ನು; ಪ್ರಿಯ= ಇಷ್ಟ; ಗಿರಾ=ಮಾತಿನಿಂದ; ಚಕ್ರೀ=ಕೃಷ್ಣನು; ಸಃ=ಆ; ಚಕ್ರೇ=ಮಾಡಿದನು; ನಿಜಾಂ=ತನ್ನ.

ಕೃಷ್ಣನು ಒಂದು ಮನೆಗೆ ಹೋದಾಗ ಅಲ್ಲಿ ಗೋಪಿಯ ಜೊತೆಗೆ ನಡೆದ ಸಂಭಾಷಣೆ

–ಗೋಪಿಯ ಪ್ರಶ್ನೆ –ಯಾರು ನೀನು? ಕೃಷ್ಣನ ಉತ್ತರ –ಒಬ್ಬ ದೇವತೆ. ಗೋ –ಸ್ವರ್ಗ ಎಲ್ಲಿ? ದೇವತೆಯು ಸ್ವರ್ಗದಲ್ಲಿ ಇರುವುದು ತಾನೆ. ಕೃ –ನಿನ್ನ ಮನೆಗಿಂತ ಬೇರೆ ಸ್ವರ್ಗ ಯಾವುದಿದೆ? ಅಷ್ಟು ಚಂದ ಇದೆ ನಿನ್ನ ಮನೆ. ಗೋ –ದೇವತೆಗಳು ಅಮೃತಪಾನ ಮಾಡುತ್ತಾರೆ. ನಿನ್ನ ಅಮೃತ ಎಲ್ಲಿ ತೋರಿಸು. ಕೃ –ನಿನ್ನ ತುಟಿಯ ರಸವು ಅಮೃತದಷ್ಟೇ ರುಚಿ ಇದೆ. ಗೋ–ದೇವತೆಗಳು ನಿದ್ರಿಸುವುದಿಲ್ಲ. ನೀನು ನಿದ್ರಿಸುತ್ತಿಯಾ? ಕೃ –ಇಲ್ಲ. ನೀನೂ ನನ್ನಲ್ಲಿ ತೋರಿಸುವ ಪ್ರೀತಿಯನ್ನು ಚಿಂತಿಸುವಾಗ ನಿದ್ರೆ ಎಲ್ಲಿ ತಾನೆ ಬರುತ್ತದೆ. ಗೋ –ದೇವತೆಗಳು ರೆಪ್ಪೆ ಮುಚ್ಚುವುದಿಲ್ಲ. ನೀನು ಹಾಗೆಯಾ? ಕೃ –ಹೌದು, ನಿನ್ನ ಮುಂದೆ ನಿಂತರೆ ರೆಪ್ಪೆ ಮುಚ್ಚಲು ಮನಸ್ಸೇ ಆಗುವುದಿಲ್ಲ. ನೀನು ಅಷ್ಟು ಚಂದ ಇದ್ದಿ. ಈ ರೀತಿಯಾಗಿ ಎಲ್ಲರ ದೋಷಗಳನ್ನು ಕತ್ತರಿಸುವ ಆದ್ದರಿಂದಲೇ ಚಕ್ರಿಯಾದ ಕೃಷ್ಣನು ತನ್ನ ಈ ಮೋಡಿಯ ಮಾತುಗಳಿಂದ ಆಕೆಯನ್ನು ತನ್ನವಳನ್ನಾಗಿ ಮಾಡಿಕೊಂಡನು.

**<u>ಸಂದೇಶ</u>** : ದೇವರ ಜೊತೆ ಮಾತುಕತೆಯಿಂದ ನಮ್ಮ ವ್ಯಕ್ತಿತ್ವವು ವಿಕಾಸವಾಗುತ್ತದೆ.

**ಪ್ರೀತೇರ್ಲಾಭಮವೇಕ್ಷ್ಯ ಚಿತ್ತಮಪಿ ಯಾ ತಸ್ಮೈ ದದಾವಂ ಕಗಾಂ**
**ತಾಂ ಕೃತ್ವಾ ರತಿಸಂಗರಸ್ಥಹೃದಯಾಮಾಲಿಂಗ್ಯ ರಮ್ಯೈಃ ಭುಜೈಃ ।**
**ತಸ್ಯಾ ದೃಷ್ಟಿಪಥಂ ಗತಂ ಮುಖಮಲಂ ಚಿತ್ತಾಯ ಸಂ ರೋಚಯನ್**
**ಕಸ್ತೂರೀತಿಲಕೇನ ಭೂಷಯತಿಯಃ ಸಸ್ಯಾನ್ಮುದೇ ವಿಠಲಃ ॥ ೬೪ ॥**

ಪ್ರೀತೇಃ=ಪ್ರೀತಿಯ; ಲಾಭಂ=ಲಾಭವನ್ನು; ಅವೇಕ್ಷ್ಯ=ನೋಡಿ; ಚಿತ್ತಂ ಅಪಿ= ಮನಸ್ಸನ್ನೂ; ಯಾ=ಯಾರು; ತಸ್ಮೈ=ಅವನಿಗೆ; ದದೌ=ಕೊಟ್ಟಳು; ಅಂಕ=ತೊಡೆ; ಗಾಂ= ಇರುವ; ತಾಂ=ಅವಳನ್ನು; ಕೃತ್ವಾ=ಮಾಡಿ; ರತಿ=ಕ್ರೀಡೆಯ; ಸಂಗರ=ಯುದ್ಧವು; ಸ್ಥ= ಇರುವುದು; ಹೃದಯಾಂ=ಹೃದಯವನ್ನು; ಆಲಿಂಗ್ಯ=ಆಲಿಂಗಿಸಿ; ರಮ್ಯೈಃ=ಚಂದದ; ಭುಜೈಃ=ಕೈಗಳಿಂದ; ತಸ್ಯಾಃ=ಅವಳ; ದೃಷ್ಟಿ=ಕಣ್ಣಿನ; ಪಥಂ=ದಾರಿಯನ್ನು; ಗತಂ=ಇರುವ; ಮುಖಂ=ಮುಖವು; ಅಲಂ=ಚೆನ್ನಾಗಿ; ಚಿತ್ತಾಯ=ಮನಕ್ಕೆ; ಸಂರೋಚಯನ್=ಪ್ರೀತಿಸುತ್ತಾ; ಕಸ್ತೂರಿ=ಕಸ್ತೂರಿಯ; ತಿಲಕೇನ=ತಿಲಕದಿಂದ; ಭೂಷಯತಿ=ಅಲಂಕರಿಸುವುದು; ಯಃ=ಯಾರು; ಸಃ=ಅವನು; ಸ್ಯಾತ್=ಆಗಲಿ; ಮುದೇ=ಸಂತೋಷಕ್ಕೆ; ವಿಠ್ಠಲಃ=ದೇವರು.

ಒಬ್ಬಳು ಗೋಪಿಯು ಕೃಷ್ಣನಿಗೆ ತನ್ನ ಮನಸ್ಸನ್ನು ಕೊಟ್ಟಳು. ಯದ್ಯಪಿ ಮನಸ್ಸು ಒಳಗಿರುವ ವಸ್ತು. ಅದನ್ನು ಹಾಗೆಲ್ಲಾ ಕೊಡಲು ಬರುವುದಿಲ್ಲ. ಆದರೂ ನಾವು ವಿಶೇಷ ಲಾಭ ಇದ್ದರೆ ನಮ್ಮ ಆಂತರಿಕ ವಸ್ತುಗಳನ್ನೂ ಇನ್ನೊಬ್ಬರಿಗೆ ಕೊಡುತ್ತೇವೆ. ಈಕೆಗೆ ಕೃಷ್ಣನ ಪ್ರೀತಿ ಎಂಬ ಬಹಳ ಲಾಭ ಇದೆ. ಆದ್ದರಿಂದ ಬಹಳ ಆಂತರಿಕವಾದ ವಸ್ತುವನ್ನು ಕೊಟ್ಟಳು. ಇದು ಸಾಮಾನ್ಯವಾಗಿ ವೈಶ್ಯರ ಧರ್ಮ. ಅವರು ತಮಗೆ ಬಹಳ ಲಾಭ ಇದೆ ಎಂದಾದರೆ ತಮಗಾಗಿಯೇ ಒಳಗೆ ಇರಿಸಿದ ವಸ್ತುವನ್ನು ಇನ್ನೊಬ್ಬರಿಗೆ ಕೊಡುತ್ತಾರೆ.

ಸದ್ಯ ಈಗ ಈ ಗೋಪಿಯಲ್ಲಿ ವೈಶ್ಯಧರ್ಮ ಇದೆ. ಆದ್ದರಿಂದ ಈಕೆಯನ್ನು ಕೃಷ್ಣನು ತನ್ನ ತೊಡೆಯಲ್ಲಿ ಕೂಡಿಸಿದನು. ಮಕ್ಕಳನ್ನು ಪ್ರೀತಿಸುವ ಪಿತೃಗಳು ಅವರನ್ನು ತಮ್ಮ ತೊಡೆಯಲ್ಲಿ ಕೂಡಿಸುತ್ತಾರೆ. ವೇದವು ಹೇಳುತ್ತದೆ –ದೇವರ ತೊಡೆಯು ವೈಶ್ಯರು ಹುಟ್ಟಿದ ಜಾಗ ಎಂದು. ಆದ್ದರಿಂದಲೇ ಕೃಷ್ಣನು ವೈಶ್ಯಧರ್ಮದ ಈಕೆಯನ್ನು ಅಲ್ಲೇ ಕೂಡಿಸಿದನು. ಕೃಷ್ಣನ ಜೊತೆ ರತಿ ಯುದ್ಧ ಮಾಡಬೇಕೆಂಬ ಆಸೆ ಇವಳಿಗೆ ಇತ್ತು. ಆದ್ದರಿಂದ ತನ್ನ ಬಹಳ ಕೈಗಳಿಂದ ಈಕೆಯನ್ನು ಆಲಿಂಗಿಸಿದನು. ಯುದ್ಧ ಕ್ಷತ್ರಿಯರ ಧರ್ಮ. ಕ್ಷತ್ರಿಯರು ದೇವರ ಬಾಹುವಿನಿಂದ ಹುಟ್ಟಿದವರು. ಆದ್ದರಿಂದ ಭುಜದ ಸ್ಥಾನವನ್ನು ಗೋಪಿಗೆ ಒದಗಿಸಿದನು. ಈಕೆಗೆ ಮೊದಲು ಈತನ ವಿರಹವಾಗಿತ್ತು. ಅದರಿಂದ ಬಹಳ ನೊಂದುಕೊಂಡಿದ್ದಳು. ಬಹಳ ಸಿಟ್ಟಾಗಿದ್ದಳು. ಬಹಳ ಬೆವತಿದ್ದಳು. ಇದರಿಂದಾಗಿ ಮುಖದ ತಿಲಕವೂ ಅಳಿಸಿತ್ತು. ಒಂದು ರೀತಿ ಸೂರ್ಯನಂತೆ ಇತ್ತು. ಸೂರ್ಯನಲ್ಲಿಯೂ ಮಧ್ಯದಲ್ಲಿ ಯಾವ ಕಪ್ಪೂ ಇಲ್ಲ. ಸುಡುತ್ತಿರುತ್ತಾನೆ. ಅಂತಹ ಗೋಪಿಯನ್ನು ಕೃಷ್ಣನು ತನ್ನ ಕೃಪಾದೃಷ್ಟಿಯಿಂದ ನೋಡಿದನು. ಕೃಷ್ಣನ ಕಣ್ಣಿನ ಬೊಂಬೆಯಲ್ಲಿ ಈಕೆಯ ಪ್ರತಿಬಿಂಬ ಮೂಡಿತು. ದೇವರ ಕಣ್ಣಿನಿಂದ ಸೂರ್ಯ ಹುಟ್ಟಿದವನು. ಆದ್ದರಿಂದ ಸೂರ್ಯನಂತಿರುವ ಈಕೆಯನ್ನು ಕಣ್ಣಲ್ಲಿ ಕೂಡಿಸಿದನು. ಈಗ ಆಕೆಯ ಹಣೆಗೆ ಕೃಷ್ಣನು ತಿಲಕವನ್ನು ಇಟ್ಟನು. ಈತನು ಪ್ರೀತಿಪೂರ್ವಕವಾಗಿ ನೋಡಿದ್ದರಿಂದ ಆಕೆಯು ತಣ್ಣಗಾದಳು. ಆದ್ದರಿಂದ ಮಧ್ಯೆ ಕಲೆಯಿಂದ ಕೂಡಿದ, ತಣ್ಣಗಾದ ಚಂದ್ರನಂತೆ ಕಂಡಳು. ಮನಸ್ಸಿನಿಂದ ಹುಟ್ಟಿದವನು. ಈ ರೀತಿ ಕೃಷ್ಣನು ಆ ಗೋಪಿಯ ಜೊತೆಗೆ ರಮಿಸಿದನು.

ರಾಜರು ವೈದಿಕಶೈಲಿಯಲ್ಲಿ ಅದ್ಭುತವಾಗಿ ಈ ದೃಶ್ಯವನ್ನು ವರ್ಣಿಸಿದ್ದಾರೆ.

<u>**ಸಂದೇಶ**</u> : ದೇವರ ಜೊತೆಗಿನ ಆಟವು ಅಂದರೆ ನಾವು ಆಡುವುದಾದರೂ ಆಗಲೂ ದೇವರ ಚಿಂತನೆ ಇದ್ದರೆ ಅದು ಶಾಸ್ತ್ರೀಯವೇ ಆಗುತ್ತದೆ.

**ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ನವಮಃ ಸರ್ಗೋ ಮುದಾಂ ಸತ್ಕೃತಃ ॥ ೬೫ ॥**

**॥ ಇತಿ ನವಮಃ ಸರ್ಗಃ ॥**

## ॥ ಅಥ ದಶಮಃ ಸರ್ಗಃ ॥

ಇತ್ಥಂ ಸರಾತ್ರೌ ವಿವಿಧಾನ್ ವಿಲಾಸಾನ್
ಕೃತ್ವಾ ನಿಶಾಂತೇ ವಿಸಸರ್ಜ ಗೋಪೀಃ ।
ಪ್ರೀತ್ಯೈ ವಿಧೋರನ್ವಯಜಃ ಸ್ವಲೀಲಾಂ
ಮಿತ್ರಂ ನ ಸಂದರ್ಶಯತಿ ಸ್ಮ ನೂನಮ್ ॥ ೧ ॥

ಇತ್ಥಂ=ಈ ರೀತಿಯಾಗಿ; ಸಃ=ಅವನು; ರಾತ್ರೌ=ರಾತ್ರಿಯಲ್ಲಿ; ವಿವಿಧಾನ್=ನಾನಾ ರೀತಿಯ; ವಿಲಾಸಾನ್=ಕ್ರೀಡೆಗಳನ್ನು; ಕೃತ್ವಾ=ಮಾಡಿ; ನಿಶಾ=ರಾತ್ರಿ; ಅಂತೇ=ಕೊನೆಯಲ್ಲಿ; ವಿಸಸರ್ಜ=ಬಿಟ್ಟನು; ಗೋಪೀಃ=ಗೋಪಿಯರನ್ನು; ಪ್ರೀತ್ಯೈ=ಸಂತೋಷಕ್ಕೋಸ್ಕರ; ವಿಧೋಃ=ಚಂದ್ರನ; ಅನ್ವಯ=ವಂಶ; ಜ=ಉತ್ಪತ್ತಿ; ಸ್ವಃ=ತಾನು; ಲೀಲಾಂ=ಕ್ರೀಡೆಯನ್ನು; ಮಿತ್ರಂ=ಸೂರ್ಯನನ್ನು; ನ ಸಂದರ್ಶಯತಿಸ್ಮ=ತೋರಿಸಲಿಲ್ಲ; ನೂನಂ=ನಿಶ್ಚಯ.

ಈ ರೀತಿಯಾಗಿ ಕೃಷ್ಣನು ಬೆಳಗಿನ ಜಾವದಲ್ಲಿ ಗೋಪಿಯರ ಜೊತೆ ನಾನಾ ರೀತಿಯ ಆಟಗಳನ್ನು ಆಡಿದನು. ಸೂರ್ಯೋದಯದ ಸಮಯ ಬಂತು. ಗೋಪಿಯರನ್ನು ಕಳಿಸಿದನು. ಇದನ್ನು ರಾಜರು ಈ ರೀತಿ ಊಹಿಸಿದರು –ಸೂರ್ಯಚಂದ್ರರು ಅಣ್ಣತಮ್ಮಂದಿರು. ಆದರೆ ಬಿಸಿ, ತಂಪು ಎಂಬ ವಿರುದ್ಧಧರ್ಮವುಳ್ಳವರು. ಕೃಷ್ಣನು ಚಂದ್ರನ ವಂಶದಲ್ಲಿ ಬಂದವನು. ತನ್ನ ಪೂರ್ವಿಕರಿಗೆ ತನ್ನ ವಿಲಾಸವನ್ನು ತೋರಿಸಿದನು. ತನ್ನ ಪೂರ್ವಿಕರಿಗೆ ವಿರೋಧಿಯಾದ ಸೂರ್ಯನಿಗೆ ತೋರಿಸಬಾರದೆಂದು ಬೆಳಗಾಗುವಾಗ ತನ್ನ ಆಟವನ್ನು ನಿಲ್ಲಿಸಿದನು ಎಂದು.

**ಸಂದೇಶ** : ಸಾತ್ವಿಕರಿಗೆ ಮಾತ್ರ ದೇವರ ದರ್ಶನ. ತೀಕ್ಷ್ಣರಿಗೆ ಇಲ್ಲ. ಮಾನವನು ರಾತ್ರಿ ವಿಲಾಸಜೀವನ ನಡೆಸಿದರೂ ಹಗಲಿಗೆ ತನ್ನ ಕರ್ತವ್ಯದಲ್ಲಿ ತೊಡಗಬೇಕು.

ದುರ್ಗಾವನೇ ವ್ರತಧರಂ ನಿಶಿ ನಂದಗೋಪಂ
ಸರ್ಪೋಽಗ್ರಸೀತ್ ಕಿಲ ಬುಭುಕ್ಷಿತಚಿತ್ತವೃತ್ತಿಃ ।
ಕೃಷ್ಣಂ ವಿಸೃಜ್ಯ ಸಕಲೇಶ್ವರಮನ್ಯದೈವ–
ಪ್ರತ್ಯರ್ಹಣಾಭಿರತಮಿತ್ಯಹಮೂಹಯಾಮಿ ॥ ೨ ॥

ದುರ್ಗಾ=ದುರ್ಗೆಯು; ವನೇ=ಕಾಡಲ್ಲಿ; ವ್ರತ=ವ್ರತವು; ಧರಂ=ಧರಿಸಿದ; ನಿಶಿ=ರಾತ್ರಿಯಲ್ಲಿ; ನಂದಗೋಪಂ=ನಂದಗೋಪನನ್ನು; ಸರ್ಪಃ=ಸರ್ಪವು; ಅಗ್ರಸೀತ್=ನುಂಗಿತು; ಕಿಲ=ಪ್ರಸಿದ್ಧ; ಬುಭಕ್ಷಿತ=ಹಸಿವಿನ ಇಚ್ಛೆ; ಚಿತ್ತ=ಮನಸ್ಸು; ವೃತ್ತಿಃ=ಕೆಲಸವು; ಕೃಷ್ಣಂ=ಕೃಷ್ಣ

ನನ್ನು; ವಿಸೃಜ್ಯ=ಬಿಟ್ಟು; ಸಕಲ=ಎಲ್ಲರೂ; ಈಶ್ವರ=ಒಡೆಯ; ಅನ್ಯ=ಬೇರೆ; ದೈವ=ದೇವತೆಯು; ಪ್ರತ್ಯರ್ಹಣ=ಪೂಜೆ; ಅಭಿರತಂ=ಆಸಕ್ತ; ಇತಿ=ಎಂದು; ಅಹಂ=ನಾನು; ಊಹಯಾಮಿ=ತಿಳಿಯುತ್ತೇನೆ.

ಒಂದು ದಿನ ನಂದಗೋಪನು ಅಂಬಿಕಾವನದಲ್ಲಿ ಅನ್ಯದೇವತೆಯ ಸಂತೋಷಕ್ಕೋಸ್ಕರ ಉಪವಾಸಾದಿಗಳನ್ನು ಮಾಡುತ್ತಿದ್ದನು. ಈ ಮಧ್ಯದಲ್ಲಿ ಒಂದು ದಿನ ಒಂದು ಸರ್ಪವು ಈತನನ್ನು ನುಂಗಿತು. ರಾಜರು ಹೇಳುತ್ತಾರೆ. ಎಲ್ಲಕ್ಕಿಂತ ದೊಡ್ಡ ದೈವ ಕೃಷ್ಣನು ತನ್ನ ಮನೆಯಲ್ಲೇ ಇದ್ದಾನೆ. ಆತನ ಆರಾಧನೆ ಮಾಡುವುದನ್ನು ಬಿಟ್ಟು ಬೇರೆ ಕ್ಷುದ್ರದೇವತೆಗಳನ್ನು ಆರಾಧಿಸಿದ್ದಕ್ಕೆ ಸರ್ಪವು ಈತನನ್ನು ನುಂಗಿತು. ದೊಡ್ಡವರ ಮುಂದೆ ಅನ್ಯರಿಗೆ ಆರಾಧನೆ ಮಾಡುವುದು ದೊಡ್ಡವರಿಗೆ ಮಾಡುವ ಅಪಚಾರ. ಅದಕ್ಕೆ ನಂದಗೋಪನಿಗೆ ಈ ಶಿಕ್ಷೆ.

**ಸಂದೇಶ** : ಲಕ್ಷ್ಮೀನಾರಾಯಣರು ಸಂಸಾರರಹಿತರು. ಮತ್ತೆಲ್ಲರೂ ಸಂಸಾರಿಗಳು. ಕೆಸರಲ್ಲಿ ಹೂತವನು ಇನ್ನೊಬ್ಬರ ಕೆಸರನ್ನು ಬಿಡಿಸಲು ಅಸಮರ್ಥನು. ಹಾಗೆಯೇ ಸಂಸಾರಿಗಳಾದ ದೇವತೆಗಳು ನಮ್ಮ ಸಂಸಾರವನ್ನು ಬಿಡಿಸಲಾರರು. ಸಂಸಾರವೆಂಬ ಹಾವು ಮತ್ತಷ್ಟು ನಮ್ಮನ್ನು ನುಂಗುತ್ತದೆ.

**ಕೃಷ್ಣಃ ಸ್ವದರ್ಶನಸುದರ್ಶನಮೇನಮಾತ್ಮ-**
**ವಿದ್ಯಾಧರಾನ್ವಯಮಮೂಮುಚದಬ್ಜನೇತ್ರಃ ।**
**ತತ್ಪಾದಪೂತತನುರುತ್ತಮ ಪೂರುಷಾಂಘ್ರಿ**
**ಪ್ರೀತ್ಯೈವ ತಸ್ಯ ಪದಮೇವ ಜಗಾಮ ಸೋಽಪಿ** ॥ ೩ ॥

ಕೃಷ್ಣಃ=ಕೃಷ್ಣನು; ಸ್ವ=ತಾನು; ದರ್ಶನ=ದರ್ಶನವು; ಸುದರ್ಶನಂ=ಸುದರ್ಶನನನ್ನು; ಏನಂ=ಈ; ಆತ್ಮ=ತಾನು; ವಿದ್ಯಾ=ವಿದ್ಯೆಯು; ಧರ=ಧಾರಣೆ; ಅನ್ವಯಂ=ವಂಶವನ್ನು; ಅಮೂಮುಚತ್=ಬಿಡಿಸಿದನು; ಅಬ್ಜ=ಕಮಲ; ನೇತ್ರ=ಕಣ್ಣು; ತತ್=ಆ; ಪಾದ=ಪಾದವು; ಪೂತ=ಪವಿತ್ರ; ತನು=ಶರೀರವು; ಉತ್ತಮ=ಉತ್ತಮನು; ಪೂರುಷ=ಪುರುಷನು; ಅಂಘ್ರಿ=ಪಾದವು; ಪ್ರೀತ್ಯಾ=ಪ್ರೀತಿಯಿಂದ; ಇವ=ಅಂತೆ; ತಸ್ಯ=ಅವನ; ಪದಂ=ಪಾದವನ್ನು; ಜಗಾಮ=ಹೋದನು; ಸಃ ಅಪಿ=ಅವನಾದರೂ.

ಈ ಸರ್ಪವು ಪೂರ್ವ ಜನ್ಮದಲ್ಲಿ ಒಬ್ಬ ಗಂಧರ್ವ. ಹೆಸರು ಸುದರ್ಶನ. ವಿದ್ಯಾಧರ ಗಂಧರ್ವರ ವಂಶಕ್ಕೆ ಸೇರಿದವನು. ಈಗ ಈತನ ಹೆಸರು ಹಾಗೂ ವಂಶ ಎರಡೂ ಸಾರ್ಥಕವಾಯಿತು. ಕೃಷ್ಣನು ಈತನಿಗೆ ತನ್ನ ದರ್ಶನವನ್ನು ಕೊಟ್ಟನು. ಆದ್ದರಿಂದ ಈತನು ಕೃಷ್ಣನ ಸು-ಒಳ್ಳೆಯ; ದರ್ಶನ-ದರ್ಶನವುಳ್ಳವನು ಆದನು. ಈತನ ವಂಶವು ದೇವರ ವಿದ್ಯೆಯನ್ನು ಧಾರಣೆ ಮಾಡಿದವರ ವಂಶ. ಆ ವಂಶದಲ್ಲಿ ಬಂದ ಈತನಿಗೆ

## ॥ ಅಥ ದಶಮಃ ಸರ್ಗಃ ॥

ಇತ್ಥಂ ಸರಾತ್ರೌ ವಿವಿಧಾನ್ ವಿಲಾಸಾನ್
ಕೃತ್ವಾ ನಿಶಾಂತೇ ವಿಸಸರ್ಜ ಗೋಪೀಃ ।
ಪ್ರೀತ್ಯೈ ವಿಧೋರನ್ವಯಜಃ ಸ್ವಲೀಲಾಂ
ಮಿತ್ರಂ ನ ಸಂದರ್ಶಯತಿ ಸ್ಮ ನೂನಮ್ ॥ ೧ ॥

ಇತ್ಥಂ=ಈ ರೀತಿಯಾಗಿ; ಸಃ=ಅವನು; ರಾತ್ರೌ=ರಾತ್ರಿಯಲ್ಲಿ; ವಿವಿಧಾನ್=ನಾನಾ ರೀತಿಯ; ವಿಲಾಸಾನ್=ಕ್ರೀಡೆಗಳನ್ನು; ಕೃತ್ವಾ=ಮಾಡಿ; ನಿಶಾ=ರಾತ್ರಿ; ಅಂತೇ=ಕೊನೆಯಲ್ಲಿ; ವಿಸಸರ್ಜ=ಬಿಟ್ಟನು; ಗೋಪೀಃ=ಗೋಪಿಯರನ್ನು; ಪ್ರೀತ್ಯೈ=ಸಂತೋಷಕ್ಕೋಸ್ಕರ; ವಿಧೋಃ=ಚಂದ್ರನ; ಅನ್ವಯ=ವಂಶ; ಜ=ಉತ್ಪತ್ತಿ; ಸ್ವಃ=ತಾನು; ಲೀಲಾಂ=ಕ್ರೀಡೆಯನ್ನು; ಮಿತ್ರಂ=ಸೂರ್ಯನನ್ನು; ನ ಸಂದರ್ಶಯತಿಸ್ಮ=ತೋರಿಸಲಿಲ್ಲ; ನೂನಂ=ನಿಶ್ಚಯ.

ಈ ರೀತಿಯಾಗಿ ಕೃಷ್ಣನು ಬೆಳಗಿನ ಜಾವದಲ್ಲಿ ಗೋಪಿಯರ ಜೊತೆ ನಾನಾ ರೀತಿಯ ಆಟಗಳನ್ನು ಆಡಿದನು. ಸೂರ್ಯೋದಯದ ಸಮಯ ಬಂತು. ಗೋಪಿಯರನ್ನು ಕಳಿಸಿದನು. ಇದನ್ನು ರಾಜರು ಈ ರೀತಿ ಊಹಿಸಿದರು –ಸೂರ್ಯಚಂದ್ರರು ಅಣ್ಣತಮ್ಮಂದಿರು. ಆದರೆ ಬಿಸಿ, ತಂಪು ಎಂಬ ವಿರುದ್ಧಧರ್ಮವುಳ್ಳವರು. ಕೃಷ್ಣನು ಚಂದ್ರನ ವಂಶದಲ್ಲಿ ಬಂದವನು. ತನ್ನ ಪೂರ್ವಿಕರಿಗೆ ತನ್ನ ವಿಲಾಸವನ್ನು ತೋರಿಸಿದನು. ತನ್ನ ಪೂರ್ವಿಕರಿಗೆ ವಿರೋಧಿಯಾದ ಸೂರ್ಯನಿಗೆ ತೋರಿಸಬಾರದೆಂದು ಬೆಳಗಾಗುವಾಗ ತನ್ನ ಆಟವನ್ನು ನಿಲ್ಲಿಸಿದನು ಎಂದು.

<u>**ಸಂದೇಶ**</u> : ಸಾತ್ವಿಕರಿಗೆ ಮಾತ್ರ ದೇವರ ದರ್ಶನ. ತೀಕ್ಷ್ಣರಿಗೆ ಇಲ್ಲ. ಮಾನವನು ರಾತ್ರಿ ವಿಲಾಸಜೀವನ ನಡೆಸಿದರೂ ಹಗಲಿಗೆ ತನ್ನ ಕರ್ತವ್ಯದಲ್ಲಿ ತೊಡಗಬೇಕು.

ದುರ್ಗಾವನೇ ವ್ರತಧರಂ ನಿಶಿ ನಂದಗೋಪಂ
ಸರ್ಪೋऽಗ್ರಸೀತ್ ಕಿಲ ಬುಭುಕ್ಷಿತಚಿತ್ತವೃತ್ತಿಃ ।
ಕೃಷ್ಣಂ ವಿಸೃಜ್ಯ ಸಕಲೇಶ್ವರಮನ್ಯದೈವ–
ಪ್ರತ್ಯರ್ಹಣಾಭಿರತಮಿತ್ಯಹಮೂಹಯಾಮಿ ॥ ೨ ॥

ದುರ್ಗಾ=ದುರ್ಗೆಯು; ವನೇ=ಕಾಡಲ್ಲಿ; ವ್ರತ=ವ್ರತವು; ಧರಂ=ಧರಿಸಿದ; ನಿಶಿ=ರಾತ್ರಿಯಲ್ಲಿ; ನಂದಗೋಪಂ=ನಂದಗೋಪನನ್ನು; ಸರ್ಪಃ=ಸರ್ಪವು; ಅಗ್ರಸೀತ್=ನುಂಗಿತು; ಕಿಲ=ಪ್ರಸಿದ್ಧ; ಬುಭಕ್ಷಿತ=ಹಸಿವಿನ ಇಚ್ಛೆ; ಚಿತ್ತ=ಮನಸ್ಸು; ವೃತ್ತಿಃ=ಕೆಲಸವು; ಕೃಷ್ಣಂ=ಕೃಷ್ಣ

ನನ್ನು; ವಿಸೃಜ್ಯ=ಬಿಟ್ಟು; ಸಕಲ=ಎಲ್ಲರೂ; ಈಶ್ವರ=ಒಡೆಯ; ಅನ್ಯ=ಬೇರೆ; ದೈವ= ದೇವತೆಯು; ಪ್ರತ್ಯರ್ಹಣ=ಪೂಜೆ; ಅಭಿರತಂ=ಆಸಕ್ತ; ಇತಿ=ಎಂದು; ಅಹಂ=ನಾನು; ಊಹಯಾಮಿ=ತಿಳಿಯುತ್ತೇನೆ.

ಒಂದು ದಿನ ನಂದಗೋಪನು ಅಂಬಿಕಾವನದಲ್ಲಿ ಅನ್ಯದೇವತೆಯ ಸಂತೋಷ ಕ್ಕೋಸ್ಕರ ಉಪವಾಸಾದಿಗಳನ್ನು ಮಾಡುತ್ತಿದ್ದನು. ಈ ಮಧ್ಯದಲ್ಲಿ ಒಂದು ದಿನ ಒಂದು ಸರ್ಪವು ಈತನನ್ನು ನುಂಗಿತು. ರಾಜರು ಹೇಳುತ್ತಾರೆ. ಎಲ್ಲಕ್ಕಿಂತ ದೊಡ್ಡ ದೈವ ಕೃಷ್ಣನು ತನ್ನ ಮನೆಯಲ್ಲೇ ಇದ್ದಾನೆ. ಆತನ ಆರಾಧನೆ ಮಾಡುವುದನ್ನು ಬಿಟ್ಟು ಬೇರೆ ಕ್ಷುದ್ರದೇವತೆಗಳನ್ನು ಆರಾಧಿಸಿದ್ದಕ್ಕೆ ಸರ್ಪವು ಈತನನ್ನು ನುಂಗಿತು. ದೊಡ್ಡವರ ಮುಂದೆ ಅನ್ಯರಿಗೆ ಆರಾಧನೆ ಮಾಡುವುದು ದೊಡ್ಡವರಿಗೆ ಮಾಡುವ ಅಪಚಾರ. ಅದಕ್ಕೆ ನಂದಗೋಪನಿಗೆ ಈ ಶಿಕ್ಷೆ.

**ಸಂದೇಶ** : ಲಕ್ಷ್ಮೀನಾರಾಯಣರು ಸಂಸಾರರಹಿತರು. ಮತ್ತೆಲ್ಲರೂ ಸಂಸಾರಿಗಳು. ಕೆಸರಲ್ಲಿ ಹೂತವನು ಇನ್ನೊಬ್ಬರ ಕೆಸರನ್ನು ಬಿಡಿಸಲು ಅಸಮರ್ಥನು. ಹಾಗೆಯೇ ಸಂಸಾರಿಗಳಾದ ದೇವತೆಗಳು ನಮ್ಮ ಸಂಸಾರವನ್ನು ಬಿಡಿಸಲಾರರು. ಸಂಸಾರವೆಂಬ ಹಾವು ಮತ್ತಷ್ಟು ನಮ್ಮನ್ನು ನುಂಗುತ್ತದೆ.

**ಕೃಷ್ಣಃ ಸ್ವದರ್ಶನಸುದರ್ಶನಮೇನಮಾತ್ಮ–**
**ವಿದ್ಯಾಧರಾನ್ವಯಮಮೂಮುಚದಬ್ಜನೇತ್ರಃ ।**
**ತತ್ಪಾದಪೂತತನುರುತ್ತಮ ಪೂರುಷಾಂಘ್ರಿ**
**ಪ್ರೀತ್ಯೈವ ತಸ್ಯ ಪದಮೇವ ಜಗಾಮ ಸೋಽಪಿ** ॥ ೩ ॥

ಕೃಷ್ಣಃ=ಕೃಷ್ಣನು; ಸ್ವ=ತಾನು; ದರ್ಶನ=ದರ್ಶನವು; ಸುದರ್ಶನಂ=ಸುದರ್ಶನನನ್ನು; ಏನಂ=ಈ; ಆತ್ಮ=ತಾನು; ವಿದ್ಯಾ=ವಿದ್ಯೆಯು; ಧರ=ಧಾರಣೆ; ಅನ್ವಯಂ=ವಂಶವನ್ನು; ಅಮೂಮುಚತ್=ಬಿಡಿಸಿದನು; ಅಬ್ಜ=ಕಮಲ; ನೇತ್ರ=ಕಣ್ಣು; ತತ್=ಆ; ಪಾದ=ಪಾದವು; ಪೂತ=ಪವಿತ್ರ; ತನು=ಶರೀರವು; ಉತ್ತಮ=ಉತ್ತಮನು; ಪೂರುಷ=ಪುರುಷನು; ಅಂಘ್ರಿ= ಪಾದವು; ಪ್ರೀತ್ಯಾ=ಪ್ರೀತಿಯಿಂದ; ಇವ=ಅಂತೆ; ತಸ್ಯ=ಅವನ; ಪದಂ=ಪಾದವನ್ನು; ಜಗಾಮ=ಹೋದನು; ಸಃ ಅಪಿ=ಅವನಾದರೂ.

ಈ ಸರ್ಪವು ಪೂರ್ವ ಜನ್ಮದಲ್ಲಿ ಒಬ್ಬ ಗಂಧರ್ವ. ಹೆಸರು ಸುದರ್ಶನ. ವಿದ್ಯಾಧರ ಗಂಧರ್ವರ ವಂಶಕ್ಕೆ ಸೇರಿದವನು. ಈಗ ಈತನ ಹೆಸರು ಹಾಗೂ ವಂಶ ಎರಡೂ ಸಾರ್ಥಕವಾಯಿತು. ಕೃಷ್ಣನು ಈತನಿಗೆ ತನ್ನ ದರ್ಶನವನ್ನು ಕೊಟ್ಟನು. ಆದ್ದರಿಂದ ಈತನು ಕೃಷ್ಣನ ಸು–ಒಳ್ಳೆಯ; ದರ್ಶನ–ದರ್ಶನವುಳ್ಳವನು ಆದನು. ಈತನ ವಂಶವು ದೇವರ ವಿದ್ಯೆಯನ್ನು ಧಾರಣೆ ಮಾಡಿದವರ ವಂಶ. ಆ ವಂಶದಲ್ಲಿ ಬಂದ ಈತನಿಗೆ

ಕೃಷ್ಣನ ತಿಳುವಳಿಕೆ ಚೆನ್ನಾಗಿ ಬಂತು. ಅಂತೂ ವಿಷ್ಣುವಾದ ಕೃಷ್ಣನ ಪಾದದ ಸ್ಪರ್ಶದಿಂದ ಈತನ ಉದ್ಧಾರವಾದದ್ದು. ಆದ್ದರಿಂದ ಈತನಿಗೆ ವಿಷ್ಣುಪದದಲ್ಲಿ ಬಹಳ ಪ್ರೀತಿ ಉಂಟಾಯಿತು. ಇದನ್ನು ಬಿಡಲು ಸಾಧ್ಯವಾಗಲೇ ಇಲ್ಲ. ಆದ್ದರಿಂದ ಈ ಜನ್ಮದಿಂದ ಬಿಡುಗಡೆಗೊಂಡ ಈತನು ವಿಷ್ಣುಪದವನ್ನೇ (ಆಕಾಶವನ್ನು) ಆಶ್ರಯಿಸಿದನು. ಉದ್ಧೃತನಾಗಿ ಮೇಲಿನ ಲೋಕಕ್ಕೆ ಹೋದನು.

**ಸಂದೇಶ** : ಜನ್ಮಾಂತರದ ಸಂಸ್ಕಾರ ಉತ್ತಮವಾಗಿದ್ದರೆ ಎಂತಹ ನೀಚ ಜನ್ಮದಲ್ಲಿಯೂ ದೇವರದರ್ಶನವಾಗಬಹುದು.

**ಅಸಹ್ಯ ನಕ್ತಂಚರನಾಶಕತ್ವಂ**
**ಪ್ರಕಾಶಯನ್ಸ್ವಾತ್ಮನಿ ವಿದ್ಯಮಾನಮ್ ।**
**ಸ ಶಂಖಚೂಡಂ ದಿತಿಜಂ ನಿಗೂಢಂ**
**ಮಮರ್ದ ಶಾರ್ದೂಲಮಿವಕ್ಷಪಾಯಾಮ್** ॥ ೪ ॥

ಅಸಹ್ಯ=ತಡೆಯಲು ಅಸಾಧ್ಯ; ನಕ್ತಂ=ರಾತ್ರಿ; ಚರ=ಸಂಚಾರ; ನಾಶಕತ್ವಂ=ನಾಶ ಕ್ರಿಯೆ; ಪ್ರಕಾಶಯನ್=ತೋರಿಸುವ; ಸ್ವಾತ್ಮನಿ=ತನ್ನಲ್ಲಿ; ವಿದ್ಯಮಾನಂ=ಇರುವ; ಸಃ= ಅವನು; ಶಂಖಚೂಡಂ=ಶಂಖಚೂಡನನ್ನು; ದಿತಿ=ದಿತಿಯು; ಜಂ=ಹುಟ್ಟು; ನಿಗೂಢಂ= ಅಡಗಿದ; ಮಮರ್ದ=ಕೊಂದನು; ಶಾರ್ದೂಲಂ=ಹುಲಿಯನ್ನು; ಇವ=ಅಂತೆ; ಕ್ಷಪಾಯಾಂ= ರಾತ್ರಿಯಲ್ಲಿ.

ಒಂದು ರಾತ್ರಿ ಕೃಷ್ಣನು ಗೋಪಿಯರ ಜೊತೆಗೆ ಇದ್ದನು. ಆಗ ಶಂಖಚೂಡನೆಂಬ ರಾಕ್ಷಸನು ಅಲ್ಲಿಗೆ ಬಂದನು. ಆಗ ಬಂದದ್ದು ಯಾರಿಗೂ ತಿಳಿಯಲಿಲ್ಲ. ಹುಲಿಯಂತೆ ಕ್ರೂರನಾದ ಈತನನ್ನು ಕೃಷ್ಣನು ಆಗಲೇ ಕೊಂದನು. ತಾನು ರಾತ್ರಿ ಸಂಚಾರಕರನ್ನು ಕೊಲ್ಲುವವನು ಎಂಬುದನ್ನು ತೋರಿಸಿದನು. 'ರಾತ್ರಿಂಚರರು' ಎಂದು ರಾಕ್ಷಸರಿಗೆ ಹೆಸರಿದೆ.

**ಸಂದೇಶ** : ತಡರಾತ್ರಿಯಲ್ಲಿ ಸಂಚಾರ ನಿಷಿದ್ಧ. ಆಗ ಸಂಚರಿಸುವವರನ್ನು ದೇವರೇ ತಡೆಯುತ್ತಾನೆ.

**ಶಿರೋಮಣಿಂ ತಸ್ಯ ವಧಾದವಾಪ್ತಂ**
**ಬಲಾಯ ದತ್ವಾ ಬುಭುಜೇ ಸ್ವಯಂ ಸಃ ।**
**ಯಶೋಮಣಿಂ ಚಂದ್ರ ಚಯಾತಿಚಾರುಂ**
**ಮನೋಜ್ಞಕಾಂತಾಮಣಿಭಿಃ ಸಮೇತಮ್** ॥ ೫ ॥

ಶಿರೋಮಣಿಂ=ತಲೆಯ ಮಣಿಯನ್ನು; ತಸ್ಯ=ಅವನ; ವಧಾತ್=ನಾಶದಿಂದ; ಅವಾಪ್ತಂ=ಪಡೆದ; ಬಲಾಯ=ಬಲರಾಮನಿಗೆ; ದತ್ವಾ=ಕೊಟ್ಟು; ಬುಭುಜೇ=ಅನುಭವಿ

ಸಿದನು; ಸ್ವಯಂ=ತಾನು; ಸಃ=ಅವನು; ಯಶಃ=ಕೀರ್ತಿಯು; ಮಣಿಂ=ಮಣಿಯನ್ನು; ಚಂದ್ರ=ಚಂದ್ರನು; ಚಯ=ಗುಂಪು; ಅತಿ=ಬಹಳ; ಚಾರುಂ=ಚಂದದ; ಮನೋಜ್ಞ= ಚಂದದ; ಕಾಂತಾ=ನಾರಿಯರು; ಮಣಿಭಿಃ=ಮಣಿಗಳಿಂದ; ಸಮೇತಂ=ಕೂಡಿದ.

ಆ ದೈತ್ಯನ ತಲೆಯಲ್ಲಿ ಒಂದು ಮಣಿ ಇತ್ತು. ಆ ಮಣಿಯನ್ನು ಕಿತ್ತು ಕೃಷ್ಣನು ಬಲರಾಮನಿಗೆ ಕೊಟ್ಟನು. ಈ ದೈತ್ಯನನ್ನು ಕೊಂದು ಬಂದಿರುವ ಕೀರ್ತಿ ಎಂಬ ಮಣಿಯನ್ನು ತಾನು ಇಟ್ಟುಕೊಂಡನು. ಶಂಖಚೂಡನ ತಲೆಯಲ್ಲಿ ಇದ್ದ ಮಣಿಗೆ ಒಂದೇ ಚಂದ್ರನ ಪ್ರಕಾಶ. ಈ ಒಂದು ಜನ್ಮದಲ್ಲಿ ಮಾತ್ರ ತಾಪವನ್ನು ಪರಿಹರಿಸುತ್ತದೆ. ಆದರೆ ಕೀರ್ತಿ ಮಣಿಗೆ ಅನೇಕ ಚಂದ್ರರಿಗಿಂತಲೂ ಹೆಚ್ಚಿನ ಪ್ರಕಾಶ. ಅಂದರೆ ಕೃಷ್ಣನ ಈ ಕೀರ್ತಿಯನ್ನು ಉಪಾಸಿಸಿದರೆ ಅನೇಕ ಜನ್ಮಗಳಲ್ಲಿ ಸಂಸಾರಿಕ ತಾಪವು ದೂರವಾಗಿ ಮನಕ್ಕೆ ತಂಪು, ಶಾಂತಿ ಸಿಗುತ್ತದೆ. ಶಂಖಚೂಡನು ಈ ನಾರಿಯರನ್ನು ಅಪಹರಿಸಲು ಪ್ರಯತ್ನಿಸಿದ್ದನು. ಕೃಷ್ಣನು ಈತನನ್ನು ಕೊಂದು ನಾರಿಯರನ್ನು ಬಿಡಿಸಿದನು. ಬಲರಾಮನಿಗೆ ಒಂದೇ ಮಣಿ ಲಭಿಸಿದ್ದು, ಕೃಷ್ಣನಿಗೆ ಈ ನಾರೀಮಣಿಗಳೂ ಲಭಿಸಿದವು.

**ಸಂದೇಶ** : ದೇವರನ್ನು ಈ ರೀತಿ ಉಪಾಸಿಸಿದರೆ ನಮಗೂ ಒಳ್ಳೆಯ ಕೀರ್ತಿ, ಒಳ್ಳೆಯ ಸಂಸಾರ ಪ್ರಾಪ್ತವಾಗುತ್ತದೆ.

**ಧೂಲೀಪಾಲಿಭಿರಂಬರಂ ಮಲಿನಯನ್ ವಿಷ್ಣೋಃ ಪದಂ ತೋಯದಾನ್**
**ಲಾಂಗೂಲೇನ ವಿದಾರಯನ್ಸಮರುಚಸ್ತಜ್ಜನ್ಮಮೂಲಂ ತ್ವಿತಿ ।**
**ದೇವೇಂದ್ರಂ ಕಕುದದ್ರಿಣಾ ಖುರಪುಟೈಃ ಪೃಥ್ವಿಂ ಚ ಸ ಕ್ಲೇಶಯ–**
**ನ್ನಭ್ಯಾಯಾತ್ಸ್ವವಿಷಾಣಲಕ್ಷ್ಯಮಜಿತಂ ಕುರ್ವನ್ನರಿಷ್ಟಾಸುರಃ ॥ ೬ ॥**

ಧೂಲೀ=ಧೂಳು; ಪಾಲಿಭಿಃ=ಸಮೂಹಗಳಿಂದ; ಅಂಬರಂ=ಗಗನವು; ಮಲಿನಯನ್= ಕಲುಷಿತಗೊಳಿಸುತ್ತಾ; ವಿಷ್ಣೋಃ=ದೇವರ; ಪದಂ=ಚರಣವು; ತೋಯ=ನೀರು; ದಾನ್= ಕೊಡುವ; ಲಾಂಗೂಲೇನ=ಬಾಲದಿಂದ; ವಿದಾರಯನ್= ಸೀಳುತ್ತಾ; ಸಮ=ಸಮಾನವಾದ; ರುಚಃ=ಕಾಂತಿಯು; ತತ್=ಆ; ಜನ್ಮ=ಉತ್ಪತ್ತಿ; ಮೂಲಂ=ಕಾರಣವು; ತು ಇತಿ=ಎಂದು; ದೇವ=ದೇವತೆಗಳು; ಇಂದ್ರಂ=ಇಂದ್ರನನ್ನು; ಕಕುತ್=ಡುಬ್ಬವು; ಅದ್ರಿಣಾ=ಬೆಟ್ಟದಿಂದ; ಖುರಪುಟೈಃ= ಉಗುರುಗಳಿಂದ; ಪೃಥ್ವಿಂ=ಭೂಮಿಯನ್ನು; ಚ=ಕೂಡಾ; ಸಃ=ಅವನು; ಕ್ಲೇಶಯನ್=ಪೀಡಿಸುತ್ತಾ; ಅಭ್ಯಾಯಾತ್=ಬಂದನು; ವಿಷಾಣ=ಕೋಡು; ಲಕ್ಷ್ಯಂ=ಗುರಿ; ಅಜಿತಂ=ಸೋಲಿಲ್ಲದ; ಕುರ್ವನ್=ಮಾಡುತ್ತಾ; ಅರಿಷ್ಟ=ಅರಿಷ್ಟನೆಂಬ; ಅಸುರಃ=ದೈತ್ಯನು.

ಅರಿಷ್ಟನೆಂಬ ಅಸುರನು ಎತ್ತಿನ ರೂಪದಲ್ಲಿ ಬಂದನು. ತಾನು ಬರುವ ರಭಸದಲ್ಲಿ ಧೂಳನ್ನು ಎಬ್ಬಿಸುತ್ತಿದ್ದಾನೆ. ಇದರಿಂದ ಆಕಾಶ ಮಲಿನವಾಗಿದೆ. ಆಕಾಶಕ್ಕೆ ವಿಷ್ಣುಪದವೆಂಬ ಹೆಸರನ್ನು ಈತನು ಕೇಳಿದ್ದನು. ಸಾಕ್ಷಾತ್ತಾಗಿ ವಿಷ್ಣುವಾದ ಕೃಷ್ಣನ ಪದಕ್ಕೆ ಅಂದರೆ

ಹೆಸರಿಗೆ ಕಳಂಕವನ್ನು ತರಲು ಸಾಧ್ಯವಾಗಲಿಲ್ಲ. ಕೊನೆಗೆ ವಿಷ್ಣುಪದ ಎಂಬ ಹೆಸರುಳ್ಳದ್ದಕ್ಕಾದರೂ ಕಳಂಕವನ್ನು ತರೋಣ ಎಂಬ ಅಭಿಪ್ರಾಯ. ತನ್ನ ಬಾಲವನ್ನು ಎತ್ತಿಕೊಂಡು ಬರುತ್ತಿದ್ದಾನೆ. ಈ ಬಾಲದ ತಗಲುವಿಕೆಯಿಂದ ಮೋಡಗಳು ಛಿದ್ರಗಳಾಗಿವೆ. ಈ ಮೋಡಗಳು ಕೃಷ್ಣನಂತೆ ಬಣ್ಣವುಳ್ಳವುಗಳು. ಆದ್ದರಿಂದ ಮೋಡಗಳಲ್ಲಿಯೂ ದ್ವೇಷ. ಕೃಷ್ಣನು ಭೂಮಿಗೆ ಬರಲು ಇಂದ್ರನು ಕಾರಣ. ಕೃಷ್ಣನಿಗೆ ಆಶ್ರಯ ಈ ಭೂಮಿ. ಆದ್ದರಿಂದ ಇವರಲ್ಲಿಯೂ ದ್ವೇಷ. ತನ್ನ ಬೆಟ್ಟದಂತಿರುವ ಡುಬ್ಬದಿಂದ ಇಂದ್ರನನ್ನು ಅಲ್ಲಾಡಿಸಿದ. ಉಗುರುಗಳಿಂದ ಭೂಮಿಯನ್ನು ಕೊಚ್ಚಿದ. ಕೋಡುಗಳಿಂದ ಕೃಷ್ಣನನ್ನು ತಿವಿಯುವ ಉದ್ದೇಶದಿಂದ ಮುಂದೆ ಬಂದನು. ಕೃಷ್ಣನಿಗೆ ಸೋಲು ಇಲ್ಲ ಎಂಬ ಪ್ರಜ್ಞೆ ಈತನಿಗೆ ಇಲ್ಲ. ಈ ರೀತಿ ಅರಿಷ್ಟ ಎಂಬ ತನ್ನ ಹೆಸರನ್ನು ವಿಷ್ಣು ವೈಷ್ಣವರಿಗೆ ಅನಿಷ್ಟಮಾಡುವ ಮೂಲಕ ಸಾರ್ಥಕ ಪಡಿಸಿದನು.

**ಸಂದೇಶ** : ಭಾಗವತರ ದ್ವೇಷ ಮಾಡುವುದರಿಂದ ಸಮಾಜಕ್ಕೂ ತಮಗೂ ಅನಿಷ್ಟವೇ ಆಗುವುದು.

ಅಗ್ರೇ ನಿಧಾಯ ಸ್ವವಿಷಾಣಯುಗ್ಮಂ
ಉಗ್ರೋಚ್ಯುತಂ ಪ್ರತ್ಯಗಮತ್ಸಹಾಯಮ್ ।
ದೋಷ್ಣಾ ತದುತ್ಪಾಟಯತೋ ಮುರಾರೇಃ
ಕುರ್ವನ್ಶಿರೋಭಾರ ಜಿಹೀರ್ಷಯೇವ ॥ ೭ ॥

ಅಗ್ರೇ=ಮುಂದೆ; ನಿಧಾಯ=ಇಟ್ಟು; ಸ್ವ=ತಾನು; ವಿಷಾಣ=ಕೋಡು; ಯುಗ್ಮಂ=ಎರಡು; ಉಗ್ರಃ=ಕ್ರೂರಿಯು; ಅಚ್ಯುತಂ=ಕೃಷ್ಣನನ್ನು; ಪ್ರತ್ಯಗಮತ್=ಎದುರುಬಂದನು; ಸಹಾಯಂ=ಸಹಾಯವನ್ನು; ದೋಷ್ಣಾ=ಕೈಯಿಂದ; ತತ್=ಅದನ್ನು; ಉತ್ಪಾಟಯತಃ= ಕೀಳುವ; ಮುರಾರೇಃ=ಕೃಷ್ಣನಿಗೆ; ಕುರ್ವನ್=ಮಾಡುತ್ತಾ; ಶಿರಃ=ತಲೆ; ಭಾರ=ಭಾರವು; ಜಿಹೀರ್ಷಯಾ=ಪರಿಹರಿಸುವ ಇಚ್ಛೆಯಿಂದ; ಇವ=ಅಂತೆ.

ಈ ಅರಿಷ್ಟನು ಕೃಷ್ಣನನ್ನು ತನ್ನ ಕೋಡುಗಳಿಂದ ತಿವಿದು ಕೊಲ್ಲಲು ಎತ್ತುಗಳ ಸಹಜ ಕ್ರಮದಂತೆ ಬಂದನು. ಇದನ್ನು ರಾಜರು ಈ ರೀತಿ ಊಹಿಸುತ್ತಾರೆ. ಈ ಅಸುರ ನಿಗೆ ಈ ಕೋಡುಗಳು ತಲೆಗೆ ದೊಡ್ಡ ಭಾರವಾಗಿದೆ. ಈ ಕೋಡುಗಳನ್ನು ಕೀಳುವ ಮೂಲಕ ಭಾರವನ್ನು ಇಳಿಸಬೇಕಾಗಿದೆ. ಕೋಡುಗಳು ಎಲ್ಲಿವೆ ಎಂದು ಹುಡುಕುವುದು ಕೃಷ್ಣನಿಗೆ ಕಷ್ಟವಾಗಬಹುದು. ಆದ್ದರಿಂದ ಆತನಿಗೆ ತನ್ನ ಕೋಡುಗಳನ್ನು ನಾನೇ ತೋರಿಸು ತ್ತೇನೆ ಎಂಬ ಭಾವನೆಯಿಂದಲೋ ಎಂಬಂತೆ ಕೋಡುಗಳನ್ನು ಮುಂದೆ ಮಾಡಿಕೊಂಡು ಹಾಯಲು ಬಂದನು.

**ಸಂದೇಶ** : ನಮ್ಮ ಸಂಸಾರದಲ್ಲಿ ನಮಗೆ ಅನಿಷ್ಟವಾದ ಭಾಗವನ್ನು ನಮ್ಮಿಂದ ದೂರಮಾಡಲು ದೇವರನ್ನೇ ಮೊರೆ ಹೊಂದಬೇಕು.

ಯದುಪತಿಮೃದುಹಸ್ತೇನೋದ್ಧೃತಂ ಶೃಂಗಯುಗ್ಮಂ
ವ್ಯಸುಮಸುರಮಕಾರ್ಷೀತ್ತತ್ಕ್ಷಣೇನೇತಿ ಯುಕ್ತಮ್ ।
ಅಪಿ ಶಿರಸಿ ಧೃತೋ ಯತ್ಸ್ವೀಯ ಏವಾಂತಕಾಲೇ
ಕರವಶಮುಪಯಾತಃ ಶತ್ರುತಾಮೇತಿ ಶತ್ರೋಃ ॥ ೮ ॥

ಯದು=ಯಾದವರು; ಪತಿ=ಒಡೆಯ; ಮೃದು=ಮೆತ್ತಗೆ; ಹಸ್ತೇನ=ಕೈಯಿಂದ; ಉದ್ಧೃತಂ=ಕೀಳಿದ್ದು; ಶೃಂಗ=ಕೋಡು; ಯುಗ್ಮಂ=ಎರಡು; ವ್ಯಸುಂ=ಪ್ರಾಣ ಹೋದವನನ್ನು; ಅಸುರಂ=ದೈತ್ಯನನ್ನು; ಅಕಾರ್ಷೀತ್=ಮಾಡಿತು; ತತ್ಕ್ಷಣೇನ=ಕೂಡಲೇ; ಇತಿ=ಎಂದು; ಯುಕ್ತಂ=ಯೋಗ್ಯವು; ಅಪಿ=ಕೂಡಾ; ಶಿರಸಿ=ತಲೆಯಲ್ಲಿ; ಧೃತಃ=ಹೊತ್ತದ್ದು; ಯತ್=ಯಾವ ಕಾರಣದಿಂದ; ಸ್ವೀಯ ಏವ=ತನ್ನವರೇ; ಅಂತ=ನಾಶವು; ಕಾಲೇ= ಸಮಯದಲ್ಲಿ; ಕರ=ಕೈ; ವಶಂ=ಅಧೀನವನ್ನು; ಉಪಯಾತಃ=ಹೊಂದಿದ; ಶತ್ರುತಾಂ= ಶತ್ರುತ್ವವನ್ನು; ಏತಿ=ಹೊಂದುತ್ತದೆ; ಶತ್ರೋಃ=ಶತ್ರುವಿಗೆ.

ಕೃಷ್ಣನು ತನ್ನ ಕರದಿಂದ ಆ ಎರಡು ಕೋಡುಗಳನ್ನು ಕಿತ್ತನು. ಅದರಿಂದಲೇ ಆ ದೈತ್ಯನನ್ನು ಕೊಂದನು. ಯದ್ಯಪಿ ಈ ದೈತ್ಯನು ಈ ಕೋಡುಗಳನ್ನು ತನ್ನ ಪ್ರಾಣರಕ್ಷಣೆಗಾಗಿ ಇಟ್ಟುಕೊಂಡಿದ್ದನು. ಅದನ್ನು ಬಹಳ ಗೌರವಿಸುತ್ತಿದ್ದನು. ಲೋಕದ ಆಡುಭಾಷೆಯಂತೆ ತಲೆಯ ಮೇಲಿಟ್ಟುಕೊಂಡು ಅಡ್ಡಾಡುತ್ತಿದ್ದನು. ಆದರೆ ಅದೇ ಆತನಿಗೆ ಮುಳುವಾಯಿತು. ತನ್ನ ಶತ್ರುವಾದ ಕೃಷ್ಣನ ಕರದ ವಶವಾಗಿ ತನಗೇ ಶತ್ರುವಾಯಿತು. ಕರವಶ ಎಂಬುದಕ್ಕೆ ಒಂದು ಅರ್ಥ ಕೈಯ ಅಧೀನ ಎಂದು. ಇನ್ನೊಂದರ್ಥ ಕರ ಎಂದರೆ ಹಣ. ಕೃಷ್ಣನ ಕರವಶ ಅಂದರೆ ಕೃಷ್ಣನು ಕೊಡುವ ಆಮಿಷದ ವಶ ಎಂದು. ಲೋಕದಲ್ಲಿ ಈ ರೀತಿ ನಡೆಯುತ್ತದೆ. ಕೆಲವರನ್ನು ತುಂಬಾ ನಂಬುತ್ತೇವೆ. ನಮಗೆ ಬಹಳ ಬೇಕಾದವ ಎಂದು ತುಂಬಾ ಆದರಿಸುತ್ತೇವೆ. ಆದರೆ ಒಮ್ಮೊಮ್ಮೆ ನಮ್ಮ ಶತ್ರುಗಳು ತೋರಿಸುವ ಆಮಿಷಕ್ಕೆ ಬಲಿಯಾಗುತ್ತಾರೆ. ಶತ್ರುಗಳಿಗೆ ಅನುಕೂಲರಾಗುತ್ತಾರೆ. ನಮ್ಮನ್ನೇ ಮುಗಿಸುತ್ತಾರೆ.

**ಸಂದೇಶ** : ನಾವು ದೇವರನ್ನು ಅಲ್ಲದೆ ಯಾರನ್ನೂ ನಂಬಬಾರದು. ಈ ವಿಷಯದಲ್ಲಿ ದಾಸರ ಹಾಡು ಇದೆ –'ಯಾರಿಗೆ ಯಾರುಂಟು ಎರವಿನ ಸಂಸಾರ' ಎಂದು.

ಯದೀಯನಾಮ ಸ್ಮರತಾಂ ಮುನೀನಾಂ
ಅರಿಷ್ಟಂ ಆತ್ಯಂತಿಕನಾಶಮೇತಿ ।
ತದೇಕನಾಥಂ ವ್ರಜಮೇತ್ಯ ಜೈತ್ರಂ
ಅರಿಷ್ಟಪುಷ್ಟಿರ್ನಹಿ ದೃಷ್ಟಪೂರ್ವಾ ॥ ೯ ॥

ಯದೀಯ=ಯತ್ ಸಂಬಂಧಿ; ನಾಮ=ಹೆಸರು; ಸ್ಮರತಾಂ=ಸ್ಮರಿಸುವವರಿಗೆ; ಮುನೀನಾಂ=ಋಷಿಗಳಿಗೆ; ಅರಿಷ್ಟಂ=ಅನಿಷ್ಟವು; ಆತ್ಯಂತಿಕ=ಚೆನ್ನಾಗಿ; ನಾಶಂ=ನಾಶವನ್ನು;

ಏತಿ=ಹೊಂದುತ್ತದೆ. ತತ್=ಆ; ಏಕ=ಮುಖ್ಯ; ನಾಥಂ=ಒಡೆಯನನ್ನು; ವ್ರಜಂ=ಗೋಕುಲವನ್ನು; ಏತ್ಯ=ಹೊಂದಿ; ಜೈತ್ರಂ=ಜಯಶೀಲನನ್ನು; ಅರಿಷ್ಟ=ಅನಿಷ್ಟಗಳು; ಪುಷ್ಟಿ=ಬೆಳವಣಿಗೆಯು; ನಹಿ=ಇಲ್ಲ; ದೃಷ್ಟ=ಕಂಡದ್ದು; ಪೂರ್ವಾ=ಮೊದಲು.

ಈ ಅಸುರನು ನಷ್ಟವಾದದ್ದು ಸರಿಯೇ. ದೇವರ ನಾಮಸ್ಮರಣೆ ಮಾತ್ರ ಮಾಡಿದರೂ ಸಾಕು. ಎತ್ತರದ ಚೇತನರಾದ ಋಷಿಗಳ ಅರಿಷ್ಟಗಳೂ ಪೂರಾ ನಾಶವಾಗುತ್ತವೆ. ಅಂತಹ ದೇವರು ನಂದಗೋಕುಲದಲ್ಲಿ ಇದ್ದಾನೆ. ಈ ಗೋಕುಲದ ಗೋಪಾದಿಗಳಲ್ಲಿ ಯಾರನ್ನು ಸ್ಮರಿಸಿದರೂ ಅರಿಷ್ಟಗಳು ದೂರವಾಗುತ್ತವೆ. ಹೀಗಿರುವಾಗ ಈ ಗೋಪರಿಗೆಲ್ಲಾ ಒಡೆಯನಾದ ಕೃಷ್ಣನನ್ನು ಸ್ಮರಿಸಿದರೆ ಏನು ಹೇಳತಕ್ಕದ್ದು. ಅರಿಷ್ಟ ಎಂಬ ಹೆಸರು ಪಾಪಗಳಿಗೂ ಇದೆ. ಆದ್ದರಿಂದ ಅರಿಷ್ಟಗಳಿಗೆ ಅಂದರೆ ಪಾಪಗಳಿಗೆ ಹೇಗೆ ಕೃಷ್ಣನ ಸಂಪರ್ಕದಿಂದ ಶ್ರೇಯಸ್ಸಾಗುವುದಿಲ್ಲವೋ ಹಾಗೆಯೇ ಅರಿಷ್ಟ ಎಂಬ ಹೆಸರಿನ ಈತನಿಗೂ ಶ್ರೇಯಸ್ಸಾಗದಿದ್ದದ್ದು ಸರಿಯೇ ಆಗಿದೆ.

**ಸಂದೇಶ** : ಆದ್ದರಿಂದಲೇ ಹಿರಿಯರು ನಮಗೆ ದೇವರ ಹೆಸರನ್ನೇ ಇಡುವುದು. ಕೆಟ್ಟ ಕೆಟ್ಟ ಹೆಸರುಗಳನ್ನು ಇಟ್ಟರೆ ಆ ಹೆಸರಿಗೆ ಅನುಗುಣವಾಗಿಯೇ ದೇವರು ನಮಗೆ ಮಾಡುತ್ತಾನೆ.

**ಕೃಷ್ಣಸ್ಯ ಪ್ರಥಮಾನವೀರ್ಯತರಣಿಂ ದೃಷ್ಟ್ವಾ ಸಪತ್ನಾಂಗನಾಃ ।**
**ಚಿಂತಾಕ್ರಾಂತಮನೋರಥಾಃ ಸ್ವನಯನದ್ವಾರಾಶ್ರುಧಾರಾ ದಧುಃ ।**
**ಭಾವಿಸ್ವೀಯಪಯೋಧರದ್ವಯಮಹಾಶುಷ್ಕತ್ವಸಂಪ್ರಾಪ್ತಯೇ**
**ಹೃದ್ಗೋದಗ್ರಪಯೋವಿಯೋಗಕರಣೋದ್ಯುಕ್ತಾ ಇವಾರ್ತಾ ಭೃಶಮ್ ॥ ೧೦ ॥**

ಕೃಷ್ಣಸ್ಯ=ಕೃಷ್ಣನ; ಪ್ರಥಮಾನ=ಬೆಳೆದ; ವೀರ್ಯ=ಶಕ್ತಿಯು; ತರಣಿಂ=ಸೂರ್ಯನನ್ನು; ದೃಷ್ಟ್ವಾ=ನೋಡಿ; ಸಪತ್ನ=ಶತ್ರುಗಳು; ಅಂಗನಾಃ=ನಾರಿಯರು; ಚಿಂತಾ=ಚಿಂತೆಯು; ಆಕ್ರಾಂತ=ಕೂಡಿದ; ಮನೋರಥಾಃ=ಅಪೇಕ್ಷೆಗಳು; ಸ್ವ=ತಾವು; ನಯನ=ಕಣ್ಣುಗಳು; ದ್ವಾರಾ=ಬಾಗಿಲಿನಿಂದ; ಅಶ್ರುಧಾರಾ=ಕಣ್ಣೀರು; ದಧುಃ=ಧರಿಸಿದರು; ಭಾವಿ=ಮುಂದೆ; ಸ್ವೀಯ=ತಮ್ಮ; ಪಯೋಧರ=ಸ್ತನಗಳು; ದ್ವಯ=ಎರಡು; ಮಹಾ=ಬಹಳ; ಶುಷ್ಕತ್ವ=ಒಣಗುವಿಕೆ; ಸಂಪ್ರಾಪ್ತಯೇ=ಪ್ರಾಪ್ತಿಗೋಸ್ಕರ; ಹೃತ=ಎದೆ; ಗ=ಇರುವುದು; ಉದಗ್ರ=ಬಹಳ; ಪಯಃ=ಪಯಸ್ಸು; ವಿಯೋಗ=ಬಿಡುಗಡೆ; ಕರಣ=ಮಾಡುವುದು; ಉದ್ಯುಕ್ತಾಃ=ತಯಾರು; ಇವ=ಅಂತೆ; ಆರ್ತಾಃ=ದುಃಖಿತರು; ಭೃಶಂ=ಬಹಳ.

ಕೃಷ್ಣನನ್ನು ನಾಶಮಾಡಲು ಕಂಸನು ಪ್ರತಿನಿತ್ಯ ಎಂಬಂತೆ ದೈತ್ಯರನ್ನು ಗೋಕುಲಕ್ಕೆ ಕಳುಹಿಸುತ್ತಿದ್ದನು. ಆದರೆ ಅವರಾರೂ ಬದುಕಿ ಉಳಿಯುತ್ತಿರಲಿಲ್ಲ. ಆ ರೀತಿಯಲ್ಲಿ ಕೃಷ್ಣನ ಸಾಮರ್ಥ್ಯವೆಂಬ ಸೂರ್ಯನು ಬೆಳೆಯುತ್ತಿದ್ದನು. ಈ ಸೂರ್ಯನನ್ನು ಕಂಸಾದಿಗಳ ರಮಣಿಯರು ಕಿವಿಗಳೆಂಬ ಕಣ್ಣುಗಳಿಂದ ನೋಡುತ್ತಿದ್ದರು. ತಮ್ಮ ಕಣ್ಣುಗಳಿಂದ

ನೀರುಗಳನ್ನು ಸುರಿಸುತ್ತಿದ್ದರು. ನಾವೂ ಕೂಡಾ ಇದೇ ರೀತಿಯಾಗಿ ನಮ್ಮ ಗಂಡಂದಿರನ್ನು ಕಳೆದುಕೊಳ್ಳಬೇಕಾಗುತ್ತೋ ಏನೋ ಎಂದು. ಸೂರ್ಯನನ್ನು ನೋಡುವಾಗ ಯಾರ ಕಣ್ಣಲ್ಲಾದರೂ ನೀರು ಸುರಿಯುತ್ತದೆ. ಅದಕ್ಕೋಸ್ಕರ ಕೃಷ್ಣನ ಮಹಿಮೆಯನ್ನು ಸೂರ್ಯನಿಗೆ ಹೋಲಿಸಿದ್ದು. ಅದೇ ರೀತಿ ಈ ಹೆಮ್ಮಕ್ಕಳು ದಿನದಿಂದ ದಿನಕ್ಕೆ ಕ್ಷೀಣಿಸುತ್ತಲೂ ಇದ್ದರು. ಇದರ ವರ್ಣನೆಯಲ್ಲಿ ರಾಜರು ಚತುರಾನನರು ಆಗುತ್ತಾರೆ. ಒಂದು ವಸ್ತು ದಪ್ಪವಾಗುವುದು ಅದರಲ್ಲಿ ನೀರೋ ಗಾಳಿಯೋ ತುಂಬಿಕೊಂಡಿರುವುದರಿಂದ ಎಂದು ಪ್ರಾಯಶಃ ಸಿದ್ಧವಾದ ವಿಷಯ. ಈಗ ಈ ನಾರಿಯರು ದಪ್ಪರಾಗಿದ್ದಾರೆ ಎಂದರೆ ಎದೆಯಲ್ಲಿ ಸ್ತನಗಳಲ್ಲಿ ಪಯಃ ತುಂಬಿದೆ ಎಂದರ್ಥ. ಪಯಃ ಶಬ್ದಕ್ಕೆ ಎರಡು ಅರ್ಥ –ನೀರು, ಹಾಲು ಎಂದು. ಗಂಡಂದಿರು ಸಾಯುವಾಗ ತಾವು ಕೃಶರಾಗಬೇಕು. ಇಲ್ಲದಿದ್ದರೆ ಜನರು 'ಈಕೆಗೆ ಗಂಡ ಸತ್ತ ಚಿಂತೆಯೇ ಇಲ್ಲ ಕಾಣುತ್ತೆ. ಬಹಳ ದಪ್ಪವಾಗಿಯೇ ಇದ್ದಾಳೆ ಎಂದು ಸಂಶಯದ ದೃಷ್ಟಿಯಿಂದ ನೋಡುತ್ತಾರೆ. ಈ ಅಪವಾದದಿಂದ ಪಾರಾಗಲು ಎದೆಯಲ್ಲಿ ದ್ದದ್ದನ್ನು ಹೊರಹಾಕಬೇಕು ಎಂದು ಆಲೋಚಿಸಿ ಕಣ್ಣೀರಿನ ರೂಪದಲ್ಲಿ ಹೊರಹಾಕು ತ್ತಿದ್ದಾರೋ ಎಂಬಂತೆ ಅಳುತ್ತಿದ್ದಾರೆ.

**<u>ಸಂದೇಶ</u>** : ದುಷ್ಟರನ್ನು ಶಿಕ್ಷಿಸುವ ಮೂಲಕ ದೇವರು ಶಿಷ್ಟರಿಗೆ ಎಚ್ಚರಿಕೆ ಕೊಡುತ್ತಾನೆ.

**ಮುಕುಂದಮಾಜೌ ಪ್ರತಿಯಾಸ್ಯತೋ ಮೇ**
**ನ ಜೀವಿತಾಶಾ ನನು ವಿದ್ಯತೇ ಶ್ವಃ ।**
**ಇತೀವ ನಿಶ್ಚಿತ್ಯ ಜಗಾಮ ಕೇಶೀ**
**ಜವೇನ ನಂದವ್ರಜಮಶ್ವರೂಪೀ** ॥ ೧೧ ॥

ಮುಕುಂದಂ=ದೇವರನ್ನು; ಆಜೌ=ಯುದ್ಧದಲ್ಲಿ; ಪ್ರತಿಯಾಸ್ಯತಃ=ಎದುರು ಹೋಗುವ; ಮೇ=ನನಗೆ; ನ=ಇಲ್ಲ; ಜೀವಿತಾ=ಜೀವನವು; ಆಶಾ=ಆಸೆಯು; ನನು=ನಿಶ್ಚಯ; ವಿದ್ಯತೇ= ಇದೆ; ಶ್ವಃ=ನಾಳೆ; ಇತಿ ಇವ=ಎಂಬಂತೆ; ನಿಶ್ಚಿತ್ಯ=ನಿಶ್ಚಯಿಸಿ; ಜಗಾಮ=ಹೋದನು; ಕೇಶೀ= ಕೇಶಿಯು; ಜವೇನ=ವೇಗದಿಂದ; ನಂದ=ನಂದನು; ವ್ರಜಂ=ಗೋಕುಲವನ್ನು; ಅಶ್ವ= ಕುದುರೆಯು; ರೂಪೀ=ರೂಪವುಳ್ಳವನು.

ಈಗ ಕೇಶಿ ಎಂಬ ಅಸುರನ ಸರದಿ. ಈತನು ಕುದುರೆಯ ರೂಪದಿಂದ ಬಂದನು. ಕುದುರೆಗೆ ಅಶ್ವ ಎಂಬ ಹೆಸರಿದೆ. ಇದರ ಅರ್ಥ ಬಹಳ ವೇಗವುಳ್ಳದ್ದು; ಹಾಗೆಯೇ ಶ್ವಃ=ನಾಳೆ. ನ ತಿಷ್ಠತಿ=ಇರುವುದಿಲ್ಲ ಎಂಬ ಅರ್ಥವೂ ಇದೆ. ಈ ಅಸುರನಿಗೆ ತಿಳಿದಿದೆ ಕಾಣುತ್ತದೆ. ಕೃಷ್ಣನ ಬಳಿಗೆ ಹೋದರೆ ನಾಳೆ ನಮ್ಮ ಜೀವನ ಇರುವುದಿಲ್ಲ. ಈ ತನಕ ಹೋದವರ ಜೀವನ ಹಾಗೆಯೇ ಆಗಿದೆ. ಹೀಗಿದ್ದರೂ ಪ್ರಭುವಾದ ಕಂಸನ ಆಜ್ಞೆಯನ್ನು ಪಾಲಿಸಲೇ ಬೇಕು ಎಂಬ ಆಶಯದಿಂದ ವೇಗವಾಗಿ ಕೃಷ್ಣನಲ್ಲಿಗೆ ಬಂದನು. ಅದಕ್ಕಾಗಿ

ಕುದುರೆಯ ರೂಪವನ್ನು ತಾಳಿದನು. ಕುದುರೆಗೆ ವಾಜಿ ಎಂಬ ಹೆಸರೂ ಇದೆ. ಯುದ್ಧಕ್ಕೆ ಸಂಬಂಧಿಸಿದ ಪ್ರಾಣಿ ಎಂದು ಇದರ ಅರ್ಥ. ಸೈನ್ಯದ ಒಂದು ಅಂಗ ಕುದುರೆಯೂ ತಾನೆ ಕೃಷ್ಣನ ಜೊತೆ ಕಾದಾಟಕ್ಕೆ ಹೋಗುವುದು. ಆದ್ದರಿಂದಲೂ ಕುದುರೆಯ ರೂಪವನ್ನು ತಾಳಿದ.

**<u>ಸಂದೇಶ</u>** : ನಾವು ಪ್ರಾಣಿಗಳಿಗೆ ಹೆಸರನ್ನು ಇಟ್ಟುಕೊಂಡರೂ ಅದನ್ನು ದೇವರ ವಿಷಯದಲ್ಲಿ ಸಾರ್ಥಕಪಡಿಸಿಕೊಳ್ಳಲು ಸಾಧ್ಯವಿದೆ.

**ಸ ವಿಸ್ತೃತಾಸ್ಯಃ ಕಿಲ ವಿಶ್ವಮೂರ್ತಿಂ**
**ಗ್ರಸಿಷ್ಣುರಭ್ಯಾಗಮದಗ್ರ್ಯಕೀರ್ತಿಮ್ ।**
**ಅದೋ ಯದೋರ್ವಂಶಮಣಿಃ ಸ್ವಪಾಣಿಂ**
**ಪ್ರವೇಶಯನ್ನೀಪ್ಸಿತಮೇವ ಮೇನೇ ॥ ೧೨ ॥**

ಸಃ=ಅವನು; ವಿಸ್ತೃತ=ತೆರೆದ; ಆಸ್ಯಃ=ಮುಖನು; ಕಿಲ=ಪ್ರಸಿದ್ಧ; ವಿಶ್ವ=ದೊಡ್ಡ; ಮೂರ್ತಿಂ=ರೂಪವನ್ನು; ಗ್ರಸಿಷ್ಣುಃ=ನುಂಗುವವನು; ಅಭ್ಯಾಗ್ಯಮತ್=ಎದುರು ಬಂದನು; ಅಗ್ರ್ಯ=ಉತ್ತಮ; ಕೀರ್ತಿಂ=ಕೀರ್ತಿಯನ್ನು; ಅದಃ=ಇದು; ಯದೋಃ=ಯದುವಿನ; ವಂಶ= ವಂಶವು; ಮಣಿಃ=ಮಣಿಯು; ಸ್ವ=ತಾನು; ಪಾಣಿಂ=ಕೈಯನ್ನು; ಪ್ರವೇಶಯನ್= ಪ್ರವೇಶಿಸುವುದು; ಈಪ್ಸಿತಂ=ಇಷ್ಟವನ್ನು; ಮೇನೇ=ತಿಳಿದನು.

ಕುದುರೆಯು ಕೃಷ್ಣನನ್ನು ನುಂಗಲು ಬಾಯಿಯನ್ನು ತೆರೆದುಕೊಂಡು ಬಂದಿತು. ಕೃಷ್ಣನು ದೊಡ್ಡ ದೇಹದವನು ಎಂಬ ಪ್ರಜ್ಞೆ ಈತನಿಗಿಲ್ಲ. ಇದ್ದಿದ್ದರೆ ಬರುತ್ತಿರಲಿಲ್ಲ. ಕೃಷ್ಣನು ಸಮಸ್ತ ಯಾದವರಲ್ಲಿಯೂ ಶ್ರೇಷ್ಠನು. ಈತನು ಕುದುರೆಯ ಬಾಯಿಯೊಳಗೆ ತನ್ನ ಕೈಯನ್ನು ಹಾಕಿದನು. ಈತನ ಬಾಯಿಯೊಳಗೆ ಕೈ ಹಾಕಬೇಕೆಂದು ಕೃಷ್ಣನ ಸಂಕಲ್ಪ ಇತ್ತು. ಅದಕ್ಕೆ ಅನುಗುಣವಾಗಿ ಈತನು ಬಾಯಿ ತೆರೆದುಕೊಂಡು ಬಂದದ್ದು ಅನುಕೂಲವೇ ಆಯಿತು.

**<u>ಸಂದೇಶ</u>** : ಪ್ರತಿಯೊಂದು ಕ್ರಿಯೆಯಲ್ಲಿಯೂ ದೇವರ ಸಂಕಲ್ಪಕ್ಕೆ ಅನುಗುಣವಾಗಿ ನಮಗೆ ಪ್ರೇರಣೆ ಮಾಡುತ್ತಾನೆ.

**ಸ ಕೇಶಿದೈತ್ಯಸ್ಯ ಮುಖೇ ಮುರಾರಿಃ**
**ನಿವೇಶಯಾಮಾಸ ಕರಂ ಸ್ವಕೀಯಮ್ ।**
**ತದೀಯಹಾರ್ದಾಂಬರಮಧ್ಯಸಂಸ್ಥಂ**
**ಅಸುಂ ಬಹಿಷ್ಕರ್ತುಮಿವೇಹಮಾನಃ ॥ ೧೩ ॥**

ಸಃ=ಅವನು; ಕೇಶಿ=ಕೇಶಿಯು; ದೈತ್ಯಸ್ಯ=ದೈತ್ಯನ; ಮುಖೇ=ಬಾಯಿಯಲ್ಲಿ;

ಮುರ=ಮುರನು; ಅರಿಃ=ಶತ್ರುವು; ನಿವೇಶಯಾಮಾಸ=ಪ್ರವೇಶಿಸಿದನು; ಕರಂ=ಕೈಯನ್ನು; ಸ್ವಕೀಯಂ=ತನ್ನ; ತದೀಯ=ಅವನಿಗೆ ಸಂಬಂಧಿಸಿದ; ಹಾರ್ದ=ಹೃದಯದ; ಅಂಬರ=ಆಕಾಶ; ಮಧ್ಯ=ನಡು; ಸಂಸ್ಥಂ=ಇರುವ; ಅಸುಂ=ಪ್ರಾಣವನ್ನು; ಬಹಿಃ=ಹೊರಗೆ; ಕರ್ತುಂ=ಮಾಡಲು; ಇವ=ಅಂತೆ; ಈಹಮಾನಃ=ಇಚ್ಛಿಸುವುದು.

ಮುರನೇ ಆದಿಯಾದ ಎಲ್ಲಾ ದೈತ್ಯರಿಗೂ ನಾಶಕ ಕೃಷ್ಣನು. ಇವನು ಆ ಕುದುರೆಯ ಬಾಯಿಗೆ ತನ್ನ ಕೈಯನ್ನು ಹಾಕಿದನು. ಹೃದಯದ ತನಕ ಕೈಯನ್ನು ಒಯ್ದನು. ಹೃದಯಾಕಾಶದಲ್ಲಿ ಈ ದೈತ್ಯನ ಜೀವ ಇತ್ತು. ಅದನ್ನು ಅಲ್ಲಿಂದ ಕಿತ್ತು ಹೊರಹಾಕಲು ಕೃಷ್ಣನು ಈ ರೀತಿ ಮಾಡಿದನೋ ಎಂಬಂತಿತ್ತು. ಉತ್ತಮ ಮನೆಯಲ್ಲಿ ಬೇಡದ ವಸ್ತುಗಳು ಇದ್ದರೆ ಅದನ್ನು ನಾವು ಕೈಯಿಂದ ಹೊರಹಾಕುತ್ತೇವೆ. ಕುದುರೆರೂಪದ ಶರೀರ ಬಹಳ ಒಳ್ಳೆದು. ಆದರೆ ಇರುವುದು ಕೆಟ್ಟ ದೈತ್ಯಜೀವ. ಆದ್ದರಿಂದ ಆ ಮನೆಯಿಂದ ಈ ಕೆಟ್ಟ ವಸ್ತುವನ್ನು ಹೊರಹಾಕಲು ತನ್ನ ಕೈಯನ್ನೇ ಉಪಯೋಗಿಸಿದನು.

**ಸಂದೇಶ** : ದೇವರು ಕೊಟ್ಟಿರುವ ಒಳ್ಳೆಯ ಮನೆಗಳಾದ ಮನಸ್ಸು ಶರೀರಗಳಲ್ಲಿ ಕೆಟ್ಟ ವಿಚಾರಗಳನ್ನು ತುಂಬಿಸಿಡಬಾರದು.

**ತದ್ಧೈರ್ಯಂ ಜರಯನ್ ಬಲಂ ಚ ಶಮಯನ್ ಅಂಗಂ ಮುಹುಃ ಕಂಪಯ-**
**ನ್ನಕ್ಷೇಭ್ಯೋ ಪಟುತಾಂ ದಿಶನ್ ದೃಢತರಾನ್ ದಂತಾನ್ ಬಲಾತ್ ಪಾಟಯನ್ ।**
**ತಚ್ಛ್ವಾಸಂ ಸ್ಖಲಯನ್ ಜರೇವ ಬಹುಶಃ ತದ್ಯೌವನಂ ದೂರಯನ್**
**ಹಸ್ತೋಽಸೌ ವವೃಧೇಽಂತರಂತಕಪುರಾತಿಥ್ಯಂ ದ್ವಿಷಃ ಸೂಚಯನ್ ॥ ೧೪ ॥**

ತತ್=ಆ; ಧೈರ್ಯಂ=ಧೈರ್ಯವು; ಜರಯನ್=ನಾಶಿಸುವುದು; ಬಲಂ=ಬಲವು; ಶಮಯನ್=ಕಮ್ಮಿ ಮಾಡುವುದು; ಅಂಗಂ=ಅವಯವವು; ಮುಹುಃ=ಮತ್ತೂ; ಕಂಪಯನ್=ನಡುಗಿಸುವುದು; ಅಕ್ಷೇಭ್ಯಃ=ಇಂದ್ರಿಯಗಳಿಗೆ; ಅಪಟುತಾಂ=ನಿಃಶಕ್ತಿ ಯನ್ನು; ದಿಶನ್=ಕೊಡುವುದು; ದೃಢತರಾನ್=ಗಟ್ಟಿಯಾದ; ದಂತಾನ್=ಹಲ್ಲುಗಳನ್ನು; ಬಲಾತ್=ಬಲಾತ್ಕಾರದಿಂದ; ಪಾಟಯನ್=ಚೀಳಿಸುವುದು; ತತ್=ಆ; ಶ್ವಾಸಂ=ಗಾಳಿ ಯನ್ನು; ಸ್ಖಲಯನ್=ತಡೆಯುವುದು; ಜರಾ=ಮುದಿತನವು; ಇವ=ಅಂತೆ; ಬಹುಶಃ=ಬಹಳ; ತತ್=ಆ; ಯೌವನಂ=ತಾರುಣ್ಯವು; ದೂರಯನ್=ದೂರ ಮಾಡುವುದು; ಹಸ್ತಃ=ಕೈಯು; ಅಸೌ=ಈ; ವವೃಧೇ=ಬೆಳೆಯಿತು; ಅಂತಃ=ಒಳಗೆ; ಅಂತಕ=ಯಮನು; ಪುರ=ಮನೆಯು; ಆತಿಥ್ಯಂ=ಅತಿಥಿಯು; ದ್ವಿಷಃ=ಶತ್ರುವಿಗೆ; ಸೂಚಯನ್=ಸೂಚಿಸುವುದು.

ಕೃಷ್ಣನು ತನ್ನ ಕೈಯನ್ನು ಆತನ ಉದರದಲ್ಲಿ ಪ್ರವೇಶಿಸಿ ದೊಡ್ಡದು ಮಾಡಿದನು. ಆಗ ಈತನಲ್ಲಿ ಮುದಿತನದ ಎಲ್ಲಾ ಲಕ್ಷಣಗಳೂ ಕಂಡುಬಂದವು. ಮಾನಸಿಕ ಧೈರ್ಯ ಉಡುಗಿತು. ದೇಹದ ಬಲ ಕಮ್ಮಿಯಾಯಿತು. ಶರೀರದಲ್ಲಿ ನಡುಕ ಉಂಟಾಯಿತು.

ಇಂದ್ರಿಯಗಳು ಶಕ್ತಿಯನ್ನು ಕಳಕೊಂಡವು. ಹಲ್ಲುಗಳೆಲ್ಲಾ ಉದುರಿದವು. ಕಫಾದಿಗಳಿಂದ ಆಗುವಂತೆ ಉಸಿರಾಟಕ್ಕೆ ತೊಂದರೆಯಾಯಿತು. ತಾರುಣ್ಯದ ಲಕ್ಷಣಗಳೆಲ್ಲಾ ದೂರವಾದವು. ತಾರುಣ್ಯ ಹೋಗಿ ಮುದಿತನ ಬಂದರೆ ಯಮನ ಮನೆಗೆ ಸಮೀಪ ಎಂದೇ ಅರ್ಥ. ತಾನು ಈಗ ಸಾವಿನ ಅಂಚಿನಲ್ಲಿ ಇದ್ದೇನೆ ಎಂದು ಕೇಶಿಯು ತಿಳಿದನು.

<u>ಸಂದೇಶ</u> : ಶಾಸ್ತ್ರದಲ್ಲಿ ಒಂದು ಮಾತಿದೆ: 'ಅತ್ಯುನ್ನತಿಃ ಪತನಹೇತುಃ' –ನಮಗೆ ದಕ್ಕದ್ದನ್ನು ಪಡೆಯಲು ಇಚ್ಛಿಸಿದರೆ ನಾವು ಬೀಳುತ್ತೇವೆ ಎಂದು. ಕೃಷ್ಣನ ದೊಡ್ಡ ಹಸ್ತವನ್ನು ಜೀರ್ಣಿಸಿಕೊಳ್ಳುವ ತಾಕತ್ತು ಈ ಅಸುರನ ಹಣೆಯಲ್ಲಿ ಬರೆದಿರಲಿಲ್ಲ. ಆದರೂ ದೊಡ್ಡ ಹಸ್ತವನ್ನೇ ಪಡೆದನು. ಬಿದ್ದನು.

ಸ ಕೃಷ್ಣದೋರ್ದಂಡವರಾಭಿವೃದ್ಧ್ಯಾ
ಖಲಾಗ್ರಗಣ್ಯೋ ವಿಸಸರ್ಜ ಕಾಯಮ್ ॥
ಕರೋದಯಾನ್ ವೀಕ್ಷ್ಯ ಪರಸ್ಯ ಜಾತಾ–
ನಸೂನಸೂಯಾಭಿರತಾಸ್ತ್ಯಜಂತಿ ॥ ೧೫ ॥

ಸಃ=ಅವನು; ಕೃಷ್ಣ=ಕೃಷ್ಣನು; ದೋಃ=ಕೈಯು; ದಂಡ=ಕೋಲು; ವರ=ಶ್ರೇಷ್ಠ; ಅಭಿವೃದ್ಧ್ಯಾ=ಬೆಳವಣಿಗೆಯಿಂದ; ಖಲ=ದುಷ್ಟನು; ಅಗ್ರಗಣ್ಯಃ=ಉತ್ತಮನು; ವಿಸಸರ್ಜ= ಬಿಟ್ಟನು; ಕಾಯಂ=ದೇಹವನ್ನು; ಕರ=ಕೈಯು; ಉದಯಾನ್=ಬರುವುದನ್ನು; ವೀಕ್ಷ್ಯ= ನೋಡಿ; ಪರಸ್ಯ=ಇನ್ನೊಬ್ಬರಿಗೆ; ಜಾತಾನ್=ಉಂಟಾದ; ಅಸೂನ್=ಪ್ರಾಣಗಳನ್ನು; ಅಸೂಯ=ಮತ್ಸರವು; ಅಭಿರತಾಃ=ನಿರತರು; ತ್ಯಜಂತಿ=ಬಿಡುತ್ತಾರೆ.

ಕೃಷ್ಣನ ಕೈಯು ದಪ್ಪವಾದ ಕೋಲಿನಂತೆ ಇದೆ. ಕರಕ್ಕೆ ಇನ್ನೊಂದು ಅರ್ಥ ಹಣ ಎಂದು. ಕೃಷ್ಣನ ಕರವು ಬೆಳೆದದ್ದು; ಇನ್ನೊಂದು ಅರ್ಥ ಕೃಷ್ಣನಿಗೆ ಸಂಪತ್ತು ಬೆಳೆದದ್ದು. ಕೃಷ್ಣನು ಕೇಶಿಯ ಶತ್ರುವು. ಶತ್ರುಗಳಿಗೆ ಸಂಪತ್ತು ಬಂದರೆ ಯಾರುತಾನೆ ಅಸೂಯೆ ಪಡುವುದಿಲ್ಲ. ಅಸೂಯೆಯಿಂದ ಪ್ರಾಣ ಬಿಡುವವರೂ ಇದ್ದಾರೆ. ಅವರಲ್ಲಿ ಈತನೂ ಒಬ್ಬನು. ಕೃಷ್ಣನ ಕರ ಅಭಿವೃದ್ಧಿಯನ್ನು ನೋಡಿ ಸಹಿಸಲಾರದೆ ಪ್ರಾಣಬಿಟ್ಟ ಎಂದು ರಾಜರ ವರ್ಣನೆ.

<u>ಸಂದೇಶ</u> : ಇನ್ನೊಬ್ಬರಿಗೆ ಸಂಪತ್ತು ಬಂದರೆ ನಾವು ಅಸೂಯೆ ಪಡಬಾರದು. ಪಟ್ಟರೆ ನಮ್ಮ ಪ್ರಾಣಕ್ಕೇ ಸಂಚಕಾರ.

ಅಥೋ ವಿಪಕ್ಷಂ ಕುಶಲೇನ ನಿಂದನ್
ಸುರರ್ಷಿರಭ್ಯೇತ್ಯ ಶಶಂಸ ಕಂಸಮ್ ।
ಪಿತಾನಸೋಯಂ ತವಭೋಜರಾಜಃ
ತ್ವಮಂಗಮಾಯಾಮಯಜಾರಜಾತಃ ॥ ೧೬ ॥

ಅಥೋ=ಅನಂತರ; ವಿಪಕ್ಷಂ=ಶತ್ರುಪಕ್ಷವನ್ನು; ಕುಶಲೇನ=ಕೌಶಲ್ಯದಿಂದ; ನಿಂದನ್=ಬೈಯುತ್ತಾ; ಸುರ=ದೇವತೆಗಳು; ಋಷಿಃ=ಋಷಿಯು; ಅಭ್ಯೇತ್ಯ=ಬಂದು; ಶಶಂಸ=ಹೇಳಿದನು; ಕಂಸಂ=ಕಂಸನನ್ನು; ಪಿತಾ=ತಂದೆಯು; ನ=ಅಲ್ಲ; ಸಃ=ಅವನು; ಅಯಂ=ಇವನು; ತವ=ನಿನ್ನ; ಭೋಜ=ಭೋಜವಂಶವು; ರಾಜಃ=ರಾಜನು; ತ್ವಂ=ನೀನು; ಅಂಗ=ಎಲೋ; ಮಾಯಾಮಯ=ಮಾಯೆಯ; ಜಾರ=ಉಪಪತಿಯು; ಜಾತಃ=ಹುಟ್ಟಿದನು.

ಒಂದು ದಿನ ನಾರದರು ಕಂಸನ ಬಳಿಗೆ ಬಂದರು. ಕೇಶ್ಯಾದಿಗಳ ನಾಶವಾದ ಮೇಲೆ ಬರತಕ್ಕದ್ದು ಎಂದು ದೈವದ ಪ್ರೇರಣೆ ನಾರದರಿಗೆ ಆಯಿತು. ಆ ಪ್ರಕಾರ ಬಂದರು. ಬಂದವರೇ ಕಂಸನ ಆತಿಥ್ಯವನ್ನು ಸ್ವೀಕರಿಸಿದರು. ಕಂಸನ ಜೊತೆ ಸಂಭಾಷಣೆಯನ್ನು ಬಹಳ ಎಚ್ಚರಿಕೆಯಿಂದ ನಡೆಸಿದರು. ಕಂಸಾದಿಗಳನ್ನು ನಿಂದಿಸಿದರು. ವಸುದೇವಾದಿಗಳನ್ನು ಹೊಗಳಿದರು. ಹೇ ಕಂಸ, ಈ ಉಗ್ರಸೇನನು ನಿಜವಾಗಿ ನಿನ್ನ ತಂದೆಯಲ್ಲ. ನಿನ್ನ ತಾಯಿ ಒಮ್ಮೆ ಉದ್ಯಾನದಲ್ಲಿ ಅಡ್ಡಾಡುತ್ತಿದ್ದಳು. ಆಗ ದ್ರಮಿಳ ಎಂಬ ಅಸುರನು ಉಗ್ರಸೇನನ ರೂಪ ತಾಳಿ ನಿನ್ನ ತಾಯಿ ಬಳಿಗೆ ಬಂದನು. ಇದನ್ನು ತಿಳಿಯದ ಆಕೆ ಆತನ ಜೊತೆ ಸೇರಿದಳು. ಆಗ ಹುಟ್ಟಿದವ ನೀನು. ಈ ರೀತಿಯಾಗಿ ನಿನ್ನ ಉತ್ಪತ್ತಿಗೆ ಕಾರಣವಾದ ಬೀಜವೇ ಸರಿ ಇಲ್ಲ.

**ತವಾನುಗಾ ಯೇ ಭುವಿ ದಾನವಾಸ್ತೇ ತ್ವಮಗ್ರಗಣ್ಯೋಽಸುರಸಂಚಯೇಷು ।**
**ಸುರೇಶ್ವರೋಽಸೌ ವಸುದೇವಸೂನುಃ ಸುರಾಶ್ಚ ತತ್ಪಕ್ಷಗತಾಃ ಸಮಸ್ತಾಃ ॥ ೧೭ ॥**

ತವ=ನಿನ್ನ; ಅನುಗಾಃ=ಸೇವಕರು; ಯೇ=ಯಾರು; ಭುವಿ=ಭೂಮಿಯಲ್ಲಿ; ದಾನವಾಃ= ದೈತ್ಯರು; ತೇ=ಅವರು; ತ್ವಂ=ನೀನು; ಅಗ್ರಗಣ್ಯಃ=ಉತ್ತಮನು; ಅಸುರ= ದೈತ್ಯರು; ಸಂಚಯೇಷು=ಗುಂಪುಗಳಲ್ಲಿ; ಸುರ=ದೇವತೆಗಳು; ಈಶ್ವರಃ=ಒಡೆಯನು; ಅಸೌ= ಅವನು; ವಸುದೇವ=ವಸುದೇವನು; ಸೂನುಃ=ಮಗನು; ಸುರಾಶ್ಚ=ದೇವತೆಗಳು; ತತ್= ಅದು; ಪಕ್ಷ=ಪಕ್ಷವು; ಗತಾಃ=ಇರುವವರು; ಸಮಸ್ತಾಃ=ಎಲ್ಲರೂ.

ಕೆಟ್ಟ ಬೀಜದಿಂದ ಹುಟ್ಟಿದ ನೀನು ಕೆಟ್ಟವನು. ನೀನು ಅಸುರನು. ನಿನ್ನ ಹಿಂಬಾಲಕರೂ ಅಸುರರೇ. ಒಂದು ಸಂತೋಷದ ವಿಷಯ ಅಂದರೆ ನೀನು ಅವರಿಗೆಲ್ಲಾ ನಾಯಕನು. ಬಹಳ ಬಲವುಳ್ಳವನು. ಇದರಿಂದ ಕಂಸನನ್ನು ನಾರದರು ಹೊಗಳಿದಂತೆಯೂ ಆಯಿತು. ತೆಗಳಿದಂತೆಯೂ ಆಯಿತು. ಇದು ಮಾತಿನ ಚಾಕಚಕ್ಯತೆ. ಮಥುರಾದಲ್ಲಿ ಬೆಳೆಯುವ ಕೃಷ್ಣನು ವಸುದೇವನ ಮಗನು. ದೇವೋತ್ತಮನು. ಆತನ ಜೊತೆ ವಿಹರಿಸುವ ಗೋಪರು, ಗೋಪಿಯರು ದೇವತೆಗಳು.

**ಧೃತಃ ಸ ಗರ್ಭೇ ವಸುದೇವಪತ್ನ್ಯಾ ತತಃ ಪ್ರಸೂತಸ್ತವ ಮಂದಿರೇಽಸ್ಮಿನ್ ।**
**ತ್ವದೀಯಭೀತ್ಯಾಽಽನಕದುಂದುಭಿಸ್ತಂ ನಿನಾಯ ಮಿತ್ರಾಲಯಮಾಲಯಾತ್ತೇ॥ ೧೮ ॥**

ಧೃತಃ=ಧರಿಸಲ್ಪಟ್ಟ; ಸಃ=ಆ; ಗರ್ಭೇ=ಗರ್ಭದಲ್ಲಿ; ವಸುದೇವ=ವಸುದೇವನು; ಪತ್ನ್ಯಾ=ಪತ್ನಿಯಿಂದ; ತತಃ=ಅನಂತರ; ಪ್ರಸೂತಃ=ಹುಟ್ಟಿದನು; ತವ=ನಿನ್ನ; ಮಂದಿರೇ=ಮನೆಯಲ್ಲಿ; ಅಸ್ಮಿನ್=ಈ; ತ್ವದೀಯ=ನಿನ್ನ ಸಂಬಂಧಿ; ಭೀತ್ಯಾ=ಭಯದಿಂದ; ಆನಕದುಂದುಭಿಃ=ವಸುದೇವನು; ತಂ=ಅವನನ್ನು; ನಿನಾಯ=ಒಯ್ದನು; ಮಿತ್ರ=ಗೆಳೆಯ; ಆಲಯಾತ್=ಮನೆಯಿಂದ; ತೇ=ನಿನ್ನ.

ಕೃಷ್ಣನು ವಸುದೇವನ ಮಗನಾದರೆ ನಂದನ ಮಗ ಎಂದು ಜನರು ಹೇಗೆ ಕರೆಯುತ್ತಾರೆ ಎಂಬ ಕಂಸನ ಕುತೂಹಲಕ್ಕೆ ನಾರದರು ಉತ್ತರಿಸುತ್ತಾರೆ: ಕೃಷ್ಣನು ವಸುದೇವನದ್ದೇ ಮಗನು. ದೇವಕಿಯೇ ಹಡೆದದ್ದು. ನಿನ್ನ ಮನೆಯಲ್ಲಿಯೇ. ಭದ್ರತೆಯ ಮಧ್ಯದಲ್ಲಿಯೇ. ಕೃಷ್ಣನು ಹುಟ್ಟಿದಾಗ ಈ ದಂಪತಿಗಳಿಗೆ ಭಯವಾಯಿತು. ಮೊದಲಿನ ಆರುಮಕ್ಕಳಂತೆ ಈ ಮಗುವನ್ನೂ ನೀನು ಕೊಲ್ಲುತ್ತಿ ಎಂದು. ಅದಕ್ಕಾಗಿ ವಸುದೇವನು ಹುಟ್ಟಿದ ಈ ಮಗುವನ್ನು ಅದೇ ರಾತ್ರಿ ಇಲ್ಲಿಂದ ಒಯ್ದು ತನ್ನ ಮಿತ್ರನಾದ ನಂದನ ಮನೆಯಲ್ಲಿ ಇರಿಸಿದನು. ತಾನು ರಾತ್ರಿಯೇ ಬಂದು ನಿನ್ನ ಸೆರೆಮನೆಯಲ್ಲಿ ಸೇರಿಕೊಂಡನು. ಇದು ನಿನಗೆ ತಿಳಿಯಲೇ ಇಲ್ಲ. ಹೀಗಿದೆ ನಿನ್ನ ರಾಜ್ಯಭಾರ ಎಂದು.

**ಸಂದೇಶ** : ನಾವು ಎಷ್ಟು ಎಚ್ಚರದಿಂದ ಇದ್ದರೂ ದೈವದ ಸಂಕಲ್ಪದಂತೆ ನಮಗೆ ತಿಳಿಯದೆ ಅನೇಕ ಕೆಲಸಗಳು ಜರಗುತ್ತವೆ.

**ಇತೀರಿತೇ ಶೌರಿವಧೋದ್ಯತಂ ತಂ**
**ನಿಷಿಧ್ಯ ಬುದ್ಧ್ಯಾ ಸ ತು ದೇವಯೋಗೀ ।**
**ನ ವಾರಯಾಮಾಸ ತದೀಯಬಂಧಂ**
**ಮತಂ ಮುಕುಂದಸ್ಯ ತದಾ ವಿಜಾನನ್ ॥ ೧೯ ॥**

ಇತಿ=ಈ ರೀತಿ; ಈರಿತೇ=ಹೇಳುತ್ತಿರಲು; ಶೌರಿ=ವಸುದೇವನು; ವಧಾ=ನಾಶವು; ಉದ್ಯತಂ=ತಯಾರು; ತಂ=ಆ; ನಿಷಿಧ್ಯ=ತಡೆದು; ಬುದ್ಧ್ಯಾ=ಬುದ್ಧಿಯಿಂದ; ಸ ತು=ಅವನಾದರೂ; ದೇವ=ದೇವತೆ; ಯೋಗಿ=ಸಂಬಂಧಿ; ನ ವಾರಯಾಮಾಸ=ತಡೆಯಲಿಲ್ಲ; ತದೀಯ=ಆತನ; ಬಂಧಂ=ಬಂಧನವು; ಮತಂ=ಇಷ್ಟವು; ಮುಕುಂದಸ್ಯ=ದೇವರ; ತದಾ=ಆಗ; ವಿಜಾನನ್=ತಿಳಿಯುತ್ತಾ.

ನಾರದರ ಈ ಮಾತನ್ನು ಕೇಳಿದ ಕಂಸನು ಸಿಟ್ಟಿಗೆದ್ದನು. ವಸುದೇವದಂಪತಿಗಳನ್ನು ಕೊಲ್ಲಲು ಅಣಿಯಾದನು. ಅದನ್ನು ನಾರದರು ತನ್ನ ಮಾತಿನ ಕುಶಲತೆಯಿಂದ ತಡೆದರು. ಅವರನ್ನು ಸೆರೆಮನೆಗೆ ತಳ್ಳುತ್ತೇನೆಂದು ಕಂಸನು ಹೇಳಿದಾಗ ನಾರದರು ಅದನ್ನು ತಡೆಯಲಿಲ್ಲ. ಯಾಕೆಂದರೆ ಕೃಷ್ಣನ ಸಂಕಲ್ಪವೂ ಹಾಗೆ ಇತ್ತು. ಇದೆಲ್ಲಾ ದೇವಕಾರ್ಯ. ಇದನ್ನು ನಡೆಸಲು ದೈವವು ಭೂಮಿಗೂ ಸ್ವರ್ಗಕ್ಕೂ ಸೇತುವೆಯಂತೆ ನಾರದರನ್ನು ನೇಮಕ ಮಾಡಿದೆ.

**ಸಂದೇಶ** : ಭಾಗವತರಿಗೂ ಕೆಲವೊಮ್ಮೆ ಕ್ಲೇಶಗಳು ಬರುತ್ತವೆ. ಇದು ದೈವಸಂಕಲ್ಪ ಎಂದು ನಮಗೆ ತಿಳಿದರೆ ನಾವು ಅದನ್ನು ಪ್ರತಿಭಟಿಸಬಾರದು.

**ಋಷಿಸ್ತಮೇವಂ ರಚಿತಾಪರಾಧಂ ವಿಧಾಯ ಕೃಷ್ಣಾಂತಿಕಮಾಜಗಾಮ ।**
**ಯಥಾಪರಾಧಂ ಖಲದಂಡಕರ್ತುಃ ಪುರಃ ಪುರಾರಿ ಪ್ರತಿಮಸ್ತಮೂಚೇ॥ ೨೦ ॥**

ಋಷಿಃ=ಋಷಿಯು; ತಂ=ಅವನನ್ನು; ಏವಂ=ಈ ರೀತಿಯಾಗಿ; ರಚಿತ=ಮಾಡಿದ; ಅಪರಾಧಂ=ತಪ್ಪನ್ನು; ವಿಧಾಯ=ಮಾಡಿ; ಕೃಷ್ಣ=ಕೃಷ್ಣನು; ಅಂತಿಕಂ=ಸಮೀಪ; ಆಜಗಾಮ= ಬಂದನು; ಯಥಾಪರಾಧಂ=ತಪ್ಪಿಗೆ ಅನುಗುಣವಾಗಿ; ಖಲ=ದುಷ್ಟ; ದಂಡ=ಶಿಕ್ಷೆ; ಕರ್ತುಃ= ಮಾಡುವ; ಪುರಃ=ಮುಂದೆ; ಪುರ=ಪಟ್ಟಣ; ಅರಿ=ಶತ್ರು; ಪ್ರತಿಮ=ಪ್ರತಿಬಿಂಬ; ತಂ=ಅವನನ್ನು; ಊಚೇ=ಹೇಳಿದನು.

ಈ ರೀತಿಯಾಗಿ ನಾರದರು ಕಂಸನನ್ನು ಅಪರಾಧಿಯನ್ನಾಗಿ ಮಾಡಿದರು. ಅಲ್ಲಿಂದ ನೇರವಾಗಿ ಕೃಷ್ಣನಲ್ಲಿಗೆ ಬಂದರು. ಕೃಷ್ಣನು ಭೂಮಿಗೆ ಬಂದದ್ದು ಅನ್ಯಾಯ ಮಾಡಿದವರಿಗೆ ಶಿಕ್ಷೆಯನ್ನು ಕೊಡಲು. ಶಿಕ್ಷೆಯ ಪ್ರಮಾಣ ಅಪರಾಧಕ್ಕೆ ಅನುಗುಣವಾಗಿ. ಇಂತಹ ಕೃಷ್ಣನಲ್ಲಿ ವಿಷಯವನ್ನು ತಿಳಿಸಿದರು.

ನಾರದರು ಯಾಕೆ ಈ ರೀತಿ ಮಾಡಿದರು. ಸಾಮಾನ್ಯವಾಗಿ ಲೋಕದಲ್ಲಿ ಈ ರೀತಿ ಮಾಡುವವರು ಸ್ವಾರ್ಥಿಗಳಾಗಿರುತ್ತಾರೆ. ಅವರ ಮಾತನ್ನು ಇವರಿಗೆ ಇವರ ಮಾತನ್ನು ಅವರಿಗೆ ಹೇಳಿ ಪರಸ್ಪರ ದ್ವೇಷವನ್ನು ಹೆಚ್ಚಿಸುತ್ತಾರೆ. ಈ ರೀತಿ ಚಾಡಿಮಾತು ಹೇಳಿ ಇಬ್ಬರಿಂದಲೂ ತಮ್ಮ ಕೆಲಸವನ್ನು ಮಾಡಿಸಿಕೊಳ್ಳುತ್ತಾರೆ. ಆದ್ದರಿಂದ ಇಷ್ಟು ಕೆಟ್ಟದಾದ ಈ ಕೆಲಸವನ್ನು ನಾರದರು ಯಾಕೆ ಮಾಡಿದರು? ಇದಕ್ಕೆ ಉತ್ತರ ರೂಪವಾಗಿ ರಾಜರು ನಾರದರನ್ನು ಪುರಾರಿ ಪ್ರತಿಮಃ ಎಂದಿದ್ದಾರೆ. ಪುರಾರಿ ಅಂದರೆ ರುದ್ರದೇವರು. ಪರಮ ವಿರಾಗಿಗಳು. ಅವರಿಗೆ ಜೀವನದಲ್ಲಿ ಸ್ವಾರ್ಥ ಎಂಬುದಿಲ್ಲ. ಅವರು ಏನು ಮಾಡುವುದಿದ್ದರೂ ದೇವರ ಪ್ರೀತಿಗಾಗಿ; ದೇವರ ಹಿತಕ್ಕಾಗಿ ಮಾಡುತ್ತಾರೆ. ಅಂತಹ ರುದ್ರನಿಗೆ ನಾರದರು ಪ್ರತಿಮೆ ಅಂದರೆ ಪ್ರತಿಬಿಂಬ ಎಂಬರ್ಥ. ಪ್ರತಿಬಿಂಬವೂ ಬಿಂಬದಂತೆಯೇ ಇರಬೇಕು ತಾನೆ. ಆದ್ದರಿಂದ ನಾರದರ ಈ ಕೆಲಸದಿಂದ ಇವರಿಗೆ ಲಾಭ ಇಲ್ಲ. ಆದರೆ ದೇವಪ್ರೀತಿ ಇದೆ. ದೇಶದ ಹಿತ ಇದೆ.

**ಸಂದೇಶ** : ಎಷ್ಟೋ ಕೆಲಸಗಳು ಮೇಲ್ನೋಟಕ್ಕೆ ಕೆಟ್ಟದಾಗಿ ತೋರುತ್ತದೆ. ಆದರೆ ವಿಮರ್ಶೆ ಮಾಡಿದಾಗ ಒಳ್ಳೆಯತನ ತಿಳಿಯುತ್ತದೆ.

**ತಥಾಪಿ ಪೂರ್ಣಸ್ಯ ನ ಕೃತ್ಯಮಸ್ತೀತ್ಯಸೌ ಭವಿಷ್ಯತ್ಸಕಲಂ ಬಭಾಷೇ ।**
**ಋತಂ ವಿಧಾತುಂ ವಚನಂ ಮದೀಯಮಪೀಹ ಕಾರ್ಯಾಣಿ ಕರಿಷ್ಯತೀತಿ ॥ ೨೧ ॥**

ತಥಾ ಅಪಿ=ಹಾಗಿದ್ದರೂ; ಪೂರ್ಣಸ್ಯ=ತುಂಬಿದ; ನ ಕೃತ್ಯಂ=ಕೆಲಸವಿಲ್ಲ; ಅಸ್ತಿ=ಇದೆ; ಇತಿ=ಎಂದು; ಅಸೌ=ಇವನು; ಭವಿಷ್ಯತ್=ಮುಂದಿನ; ಸಕಲಂ=ಎಲ್ಲವನ್ನೂ; ಬಭಾಷೇ=ಹೇಳಿದನು; ಋತಂ=ಸತ್ಯವನ್ನಾಗಿ; ವಿಧಾತುಂ=ಮಾಡಲು; ವಚನಂ=ಮಾತು; ಮದೀಯಂ=ನನ್ನ ಸಂಬಂಧಿ; ಅಪಿ=ಕೂಡಾ; ಇಹ=ಇಲ್ಲಿ; ಕಾರ್ಯಾಣಿ=ಕೆಲಸಗಳು; ಕರಿಷ್ಯತಿ=ಮಾಡುತ್ತಾನೆ; ಇತಿ=ಎಂದು.

ನಾರದರು ಕೃಷ್ಣನಲ್ಲಿ ಇಷ್ಟು ಹೇಳಿದರು. ಆದರೆ ಕೃಷ್ಣನು ಏನೂ ಮಾಡದೆ ಸುಮ್ಮನಿರಬಹುದು. ಯಾಕೆಂದರೆ ಆತನಿಗೆ ಕಂಸನನ್ನು ಶಿಕ್ಷಿಸುವುದರಿಂದ ಏನೂ ಲಾಭ ಇಲ್ಲ. ತಂದೆತಾಯಿಗಳನ್ನು ಸೆರೆಯಿಂದ ಬಿಡಿಸಿದ್ದರಿಂದ ಅವರಿಗೆ ಸಂತೋಷ ಆಗುತ್ತದೆ. ಮಾತಾಪಿತೃಗಳ ಸೇವೆಯಿಂದ ಕೃಷ್ಣನಿಗೆ ಪುಣ್ಯ ಬರುತ್ತದೆ ಎಂದು ಹೇಳುವಂತಿಲ್ಲ. ಯಾಕೆಂದರೆ ಆತನು ಸದಾ ಪೂರ್ಣನು. ಪುಣ್ಯದಿಂದ ಏನಾಗಬೇಕೋ ಅದೆಲ್ಲವೂ ಅವನಲ್ಲಿ ಮೊದಲೇ ತುಂಬಿದೆ. ಆದರೂ ನಾರದರು ಕಂಸಾದಿಗಳನ್ನು ಶಿಕ್ಷಿಸುವುದೇ ಮೊದಲಾದ ಕೆಲಸಗಳನ್ನು ಮಾಡಬೇಕೆಂದು ಹೇಳಿದರು. ಕೃಷ್ಣನು ಮಾಡುತ್ತಾನೆ ಕೂಡಾ. ದೇವರದ್ದೊಂದು ಮಾತಿದೆ– ಭಕ್ತನ ಮಾತನ್ನು ನಡೆಸಿಕೊಡುತ್ತೇನೆ ಎಂದು. ಆ ಮಾತಿಗೆ ಅನುಗುಣವಾಗಿ ಕೃಷ್ಣನು ಕಾರ್ಯಪ್ರವೃತ್ತನಾಗಲೇ ಬೇಕು.

**ಸಂದೇಶ** : ನಾವು ಸೋಮಾರಿಗಳಾಗದೆ ಪ್ರಯತ್ನಶೀಲರಾದಾಗ ದೈವವು ನಮ್ಮಲ್ಲಿ ಕೃಪೆ ತೋರುತ್ತದೆ.

**ಇತೀರಯಿತ್ವಾಽಬ್ಜಜನೇಃ ಸುತೇ ಗತೇ ವ್ಯದೃಶ್ಯತಾರಿಪ್ರಹಿತಃ ಶ್ವಫಲ್ಕಜಃ ।**
**ಮೃಗಾಧಿಪಗ್ರಸ್ತವಿಮುಕ್ತವೀಕ್ಷಿತಸ್ವವರ್ಗಹೃಷ್ಯನ್ಮೃಗಶಾವವಿಭ್ರಮಃ ॥ ೨೨ ॥**

ಇತಿ=ಈ ರೀತಿಯಾಗಿ; ಈರಯಿತ್ವಾ=ಹೇಳಿ; ಅಬ್ಜ=ಕಮಲ; ಜನೇಃ=ಉತ್ಪತ್ತಿಯ; ಸುತೇ=ಮಗನು; ಗತೇ=ಹೋಗುತ್ತಿರಲು; ವ್ಯದೃಶ್ಯತ=ಕಂಡನು; ಅರಿ=ಶತ್ರುವು; ಪ್ರಹಿತಃ=ಕಳುಹಿಸಲ್ಪಟ್ಟ; ಶ್ವಫಲ್ಕ=ಶ್ವಫಲ್ಕನು; ಜಃ=ಹುಟ್ಟಿದವನು; ಮೃಗ=ಪ್ರಾಣಿಗಳು; ಅಧಿಪ=ಒಡೆಯನು; ಗ್ರಸ್ತ=ತಿನ್ನುವುದು; ವಿಮುಕ್ತ=ಬಿಡುಗಡೆ ಹೊಂದಿದ; ವೀಕ್ಷಿತ=ನೋಡಲ್ಪಟ್ಟ; ಸ್ವ=ತಾನು; ವರ್ಗ=ಗುಂಪು; ಹೃಷ್ಯತ್=ಸಂತೋಷಗೊಂಡ; ಮೃಗ=ಜಿಂಕೆ; ಶಾವ=ಮರಿ; ವಿಭ್ರಮಃ=ಸಂಭ್ರಮ.

ನಾರದರು ಇಷ್ಟು ಹೇಳಿ ಹೊರಟರು. ಇತ್ತ ಶ್ವಫಲ್ಕನ ಮಗನಾದ ಅಕ್ರೂರನು ಕೃಷ್ಣನಲ್ಲಿಗೆ ಬಂದನು. ಶತ್ರುವಾದ ಕಂಸನು ಮಥುರಾದಿಂದ ಇವನನ್ನು ಕಳಿಸಿದ್ದನು. ಈ ಪ್ರಸಂಗದಲ್ಲಿ ಅಕ್ರೂರನು ಆನಂದತುಂದಿಲನಾಗಿದ್ದನು ಎನ್ನುವುದನ್ನು ರಾಜರು ಒಳ್ಳೆಯ ಉದಾಹರಣೆಯಿಂದ ವರ್ಣಿಸುತ್ತಾರೆ –ಒಂದು ಜಿಂಕೆಯ ಮರಿಯನ್ನು ಸಿಂಹವು ಹಿಡಿಯಿತು. ಆದರೆ ಅಕಸ್ಮಾತ್ ತಪ್ಪಿಸಿಕೊಂಡಿತು. ದೂರದಲ್ಲಿರುವ ತನ್ನ ಬಂಧುಗಳನ್ನು

ನೋಡಿತು. ಅತ್ತ ಓಡಿತು. ಆಗ ಅದು ಎಷ್ಟು ನೆಮ್ಮದಿಯಲ್ಲಿ ಆನಂದದಲ್ಲಿ ಇರುತ್ತೋ ಅಷ್ಟೇ ಆನಂದಭರಿತನಾಗಿ ಅಕ್ರೂರ ಕಂಡ.

**ಸಂದೇಶ** : ಋಷಿಗಳ ಮಾತಿನಿಂದ ಶಿಷ್ಟರಿಗೆ ದುಷ್ಟರ ಹಿಡಿತದಿಂದ ಬಿಡುಗಡೆ ಆರಂಭವಾಯಿತು.

**ವ್ರಜೇ ಸ ಗೋದೋಹನಕರ್ಮಣಿಸ್ಥಿತಂ**
**ನಿಜ ಪ್ರಭುಂ ನೀರದನೀಲವಿಗ್ರಹಮ್ ।**
**ದದರ್ಶ ಸಂದರ್ಶಯಿತುಂ ಸಮುದ್ಯತಂ**
**ಸ್ವಭಕ್ತಸರ್ವೇಪ್ಸಿತದೋಹದಕ್ಷತಾಮ್** ॥ ೨೩ ॥

ವ್ರಜೇ=ಗೋಕುಲದಲ್ಲಿ; ಸಃ=ಅವನು; ಗೋ=ಆಕಳು; ದೋಹನ=ಕರೆಯುವುದು; ಕರ್ಮಣಿ=ಕೆಲಸದಲ್ಲಿ; ಸ್ಥಿತಂ=ಇರುವ; ನಿಜಂ=ತನ್ನ; ಪ್ರಭುಂ=ಸ್ವಾಮಿಯನ್ನು; ನೀರ= ನೀರು; ದ=ಕೊಡುವುದು; ನೀಲ=ನೀಲವು; ವಿಗ್ರಹಂ=ದೇಹವನ್ನು; ದದರ್ಶ=ನೋಡಿದನು; ಸಂದರ್ಶಯಿತುಂ=ತೋರಿಸಲು; ಸಮುದ್ಯತಂ=ತಯಾರಾದ; ಸ್ವ=ತಾನು; ಭಕ್ತ=ಭಕ್ತನು; ಸರ್ವ=ಎಲ್ಲಾ; ಈಪ್ಸಿತ=ಇಷ್ಟ; ದೋಹ=ಕರೆಯುವುದು; ದಕ್ಷತಾಂ=ಸಾಮರ್ಥ್ಯವನ್ನು.

ಅಕ್ರೂರನು ಗೋಕುಲಕ್ಕೆ ಬಂದಾಗ ಕೃಷ್ಣನು ಹಟ್ಟಿಯಲ್ಲಿ ಹಾಲು ಕರೆಯುತ್ತಿದ್ದನು. ನೀರು ತುಂಬಿದ ಮೋಡದಂತೆ ಚಂದದ ದೇಹವುಳ್ಳವನಾಗಿದ್ದನು. ಇಂತಹ ತನ್ನ ಒಡೆಯನಾದ ಕೃಷ್ಣನನ್ನು ಅಕ್ರೂರನು ಕಂಡನು. ಈ ಸಂದರ್ಭದಲ್ಲಿ ಕೃಷ್ಣನು ಯಾಕೆ ಹಟ್ಟಿಯಲ್ಲಿ ಇದ್ದ ಅಂದರೆ ತನ್ನನ್ನು ನಂಬಿದ ಭಕ್ತರಿಗೆ ಸಾತ್ವಿಕ ಇಷ್ಟಗಳನ್ನು ಕರೆದು ಕೊಡಲೋಸುಗ ಭೂಮಿಗೆ ಬಂದಿದ್ದೇನೆ. ಆದ್ದರಿಂದ ಯಾರೂ ಭಯ ಪಡಬೇಕಾಗಿಲ್ಲ ಎಂದು ತಿಳಿಸಲು.

**ಸಂದೇಶ** : ಸಂಸಾರಕ್ಕೆ ಬೆನ್ನು ಹಾಕಿ ದೇವರಿಗೆ ಸಮ್ಮುಖನಾಗಿ ನಡೆದರೆ ನಮಗೆ ಶುಭಶಕುನಗಳನ್ನೇ ದೇವರು ತೋರಿಸುತ್ತಾನೆ.

**ನನಾಮ ನಾರಾಯಣಮಾದಿ ಪೂರುಷಂ**
**ನನರ್ತ ನವ್ಯೋತ್ಸವಜಾತಸಂಭ್ರಮಃ ।**
**ನನಾದ ನಾನಾದುರಿತೌಘಮರ್ದಯನ್–**
**ನನಂದ ನಂದಸ್ಯ ತಪಃ ಫಲೋದಯಮ್** ॥ ೨೪ ॥

ನನಾಮ=ನಮಿಸಿದನು; ನಾರಾಯಣಂ=ನಾರಾಯಣನನ್ನು; ಆದಿ=ಮೊದಲು; ಪೂರುಷಂ=ಪುರುಷನನ್ನು; ನನರ್ತ=ಕುಣಿದನು; ನವ್ಯ=ಹೊಸತು; ಉತ್ಸವ=ಉತ್ಸವವು; ಜಾತ=ಉಂಟಾದ; ಸಂಭ್ರಮಃ=ವೈಭವವು; ನನಾದ=ಶಬ್ದಮಾಡಿದನು; ನಾನಾ=ಬಹಳ;

ದುರಿತ=ಪಾಪಗಳು; ಓಘ=ಸಮೂಹವು; ಅರ್ದಯನ್=ನಾಶಮಾಡುತ್ತಾ; ನನಂದ=ತೃಪ್ತಿಪಟ್ಟನು; ನಂದಸ್ಯ=ನಂದನ; ತಪಃ=ತಪಸ್ಸು; ಫಲ=ಫಲವು; ಉದಯಂ= ಉದಯವನ್ನು.

ಕೃಷ್ಣನು ಎಲ್ಲಿದ್ದರೂ ಆತನು ನಾರಾಯಣನು ಅಂದರೆ ದೋಷದೂರನು. ಜಗತ್ತಿಗಿಂತ ಮೊದಲಿರುವ ಶಕ್ತಿ. ಇಂತಹ ಕೃಷ್ಣನನ್ನು ಕಂಡೊಡನೇ ನಮಸ್ಕರಿಸಿದನು. ಈ ತನಕ ಈತನಿಗೆ ಕೃಷ್ಣರೂಪದ ದರ್ಶನ ಆಗಿರಲಿಲ್ಲ. ತಾನು ಮನೆಯಲ್ಲಿ ದೇವರ ಪೂಜಾದಿಗಳನ್ನು ಮಾಡುವ ಮೂಲಕ ಒಂದೇ ರೀತಿಯ ಉತ್ಸವವನ್ನು ಆಚರಿಸುತ್ತಿದ್ದನು. ಅದರಿಂದ ಒಂದು ರೀತಿಯ ಆನಂದವೂ ಆಗುತ್ತಿತ್ತು. ಈ ದಿನ ಮಾತ್ರ ಹೊಸ ರೀತಿಯ ಉತ್ಸವ. ಆದ್ದರಿಂದ ವಿಶೇಷವಾದ ಆನಂದದಿಂದ ಕುಣಿದನು. ಕೃಷ್ಣದರ್ಶನದಿಂದ ಪಾಪಗಳೆಲ್ಲಾ ಸುಡುತ್ತಿವೆ. ಇದರಿಂದ ದೇವರ ಬಗ್ಗೆ ನಾನಾ ರೀತಿಯ ಉದ್ಗಾರವನ್ನು ಮಾಡುತ್ತಿದ್ದಾನೆ. ಇಂತಹ ಶಕ್ತಿಯನ್ನು ಸುತನನ್ನಾಗಿ ಪಡೆಯಬೇಕಾದರೆ ನಂದನು ಬಹಳ ಜನ್ಮದಲ್ಲಿ ಪುಣ್ಯವನ್ನು ಮಾಡಿರಬೇಕು. ಇಂತಹ ಪುಣ್ಯವಂತನಾದ ನಂದನನ್ನು ಕಂಡು ತಾನು ಅಸೂಯೆಪಡಲಿಲ್ಲ. ನಂದನೇ ಧನ್ಯನು ಎಂದು ಸಂತೋಷ ಪಟ್ಟನು.

**ಸಂದೇಶ** : ಭಕ್ತರು ಭಕ್ತರ ಅಭಿವೃದ್ಧಿಯನ್ನು ಕಂಡು ಅಸೂಯೆ ಪಡಬಾರದು. ಸಂತೋಷ ಪಡಬೇಕು.

**ತಮಾಲಿಲಿಂಗೇ ದೃಢಮಚ್ಯುತಃಪ್ರಿಯಂ ಸಶಂಕಮೇಣಾಂಕಶುಚಿಸ್ಮಿತಾನನಃ ।**
**ಅನಾದಿಸಿದ್ಧಂ ಭವರೂಪಬಂಧನಂ ತದಾಶ್ರಿತಂ ವಿಶ್ಲಥಯನ್ನಿವಾಂಜಸಾ ॥ ೨೫ ॥**

ತಂ=ಅವನನ್ನು; ಆಲಿಲಿಂಗೇ=ಆಲಿಂಗಿಸಿದನು; ದೃಢಂ=ಗಟ್ಟಿಯಾಗಿ; ಅಚ್ಯುತಃ=ಕೃಷ್ಣನು; ಪ್ರಿಯಂ=ಪ್ರಿಯನನ್ನು; ಸಶಂಕಂ=ಸಂಶಯದಿಂದ ಕೂಡಿದ; ಏಣ=ಜಿಂಕೆಯು; ಅಂಕ=ಚಿಹ್ನೆಯು; ಶುಚಿ=ನಿರ್ಮಲ; ಸ್ಮಿತ=ನಗು; ಆನನಃ=ಮುಖವುಳ್ಳ; ಅನಾದಿ=ಪುರಾತನ; ಸಿದ್ಧಂ=ಇರುವ; ಭವ=ಸಂಸಾರ; ರೂಪ=ಎಂಬ; ಬಂಧನಂ=ಬಂಧನ ವನ್ನು; ತತ್=ಅದು; ಆಶ್ರಿತಂ=ಇರುವ; ವಿಶ್ಲಥಯನ್=ಸಡಿಲಿಸುವುದು; ಇವ=ಅಂತೆ; ಅಂಜಸಾ=ಚೆನ್ನಾಗಿ.

ಕೃಷ್ಣನೂ ಅಕ್ರೂರನನ್ನು ನೋಡಿದನು. ಸಮೀಪಕ್ಕೆ ಕರೆದನು. ಆದರೆ ಅಕ್ರೂರನಿಗೆ ಭಯ. ಈ ತನಕ ಕಂಸನ ಬಳಿಯಲ್ಲಿ ಇದ್ದೆ. ಅದಕ್ಕಾಗಿ ಏನು ಶಿಕ್ಷೆ ಕಾದಿದಿಯೋ ಎಂದು. ಕೃಷ್ಣನು ನಗುತ್ತಾ ಆತನನ್ನು ಬಿಗಿದಪ್ಪಿದನು. ಈ ನಗು ಚಂದ್ರನ ಬೆಳದಿಂಗಳಂತೆ ತಂಪಾಗಿತ್ತು. ಸ್ವಚ್ಛವಾಗಿತ್ತು. ಹೊರತು ಶಿಕ್ಷೆಗೆ ಸೂಚಕವಾದ ನಗುವಿನಂತೆ ಇರಲಿಲ್ಲ. ಈ ಅಕ್ರೂರನಿಗೆ ಅನಾದಿಕಾಲದಿಂದ ಲಿಂಗದೇಹವೆಂಬ ಸಾಂಸಾರಿಕ ಬಂಧನವಿತ್ತು. ಈ ಬಂಧನದಲ್ಲಿ ಸಿಲುಕಿಕೊಂಡಿದ್ದ. ಅದರಿಂದ ಆತನನ್ನು ಬಿಡಿಸಲು ಕೃಷ್ಣನು ತನ್ನ ಕೈಗಳಿಂದ

ಆತನನ್ನು ಬಿಗಿಯಾಗಿ ಬಂಧಿಸಿದನು. ಒಂದು ವಸ್ತುವನ್ನು ನಾವು ಹಗ್ಗದ ಮೂಲಕ ಕಟ್ಟಿರುತ್ತೇವೆ. ಬಿಡಿಸಲು ಹೋದಾಗ ಅದು ಕಗ್ಗಂಟಾಯಿತು. ಆಗ ಅದನ್ನು ಬಿಡಿಸಲು ಅದರ ಪಕ್ಕದಲ್ಲಿ ಇನ್ನೊಂದು ಹಗ್ಗದಿಂದ ಇದಕ್ಕಿಂತಲೂ ಜೋರಾಗಿ ಬಿಗಿಯುತ್ತೇವೆ. ಆಗ ಮೊದಲಿನ ಕಗ್ಗಂಟು ಅಲ್ಲೇ ಸಡಿಲಾಗಿ ಜಾರುತ್ತದೆ. ಹೇಗೋ ಹಾಗೆಯೇ ಇಲ್ಲಿಯೂ ಕೂಡಾ.

**ಸಂದೇಶ** : ಮುಳ್ಳನ್ನು ಮುಳ್ಳನಿಂದ ತೆಗೆಯಬೇಕು.

**ಹೀನಂ ಮಹೀನಂ ಮಥಿತುಂ ನಿನೀಷು–**
**ಮಕ್ರೂರಮಕ್ರೂರ ಜನಪ್ರಿಯಃ ಸ್ವಮ್ ।**
**ಗೀರ್ವಾಣಗೀರ್ವಾಣಗಣಾತಿದೂರೋ**
**ರಕ್ಷೋಭರಕ್ಷೋಭಕೃದಿತ್ಯವೋಚತ್ ॥ ೨೬ ॥**

ಹೀನಂ=ನೀಚನನ್ನು; ಮಹಿ=ಭೂಮಿ; ಇನಂ=ಒಡೆಯನನ್ನು; ಮಥಿತುಂ=ಮರ್ದಿಸಲು; ನಿನೀಷುಂ=ಒಯ್ಯುವ ಇಚ್ಛೆವುಳ್ಳ; ಅಕ್ರೂರಂ=ಅಕ್ರೂರನನ್ನು; ಅಕ್ರೂರ=ಶಾಂತ; ಜನ=ಜನರು; ಪ್ರಿಯಃ=ಇಷ್ಟನು; ಸ್ವಂ=ತನ್ನನ್ನು; ಗೀರ್ವಾಣ=ದೇವತೆಗಳು; ಗೀಃ=ಮಾತು; ವಾಣ=ಬಾಣ; ಗಣ=ಗುಂಪು; ಅತಿದೂರ=ಬಹಳ ದೂರನು; ರಕ್ಷಃ=ರಾಕ್ಷಸರು; ಭರ=ಭಾರವು; ಕ್ಷೋಭ=ಕಳವಳ; ಕೃತ್=ಮಾಡುವ; ಇತಿ=ಈ ರೀತಿ; ಅವೋಚತ್=ಹೇಳದನು.

ಕೃಷ್ಣನು ಸಾತ್ವಿಕರಿಗೆ ಪ್ರಿಯನು. ರಾಕ್ಷಸರು ತಾಮಸರು. ಭೂಮಿಗೆ ಭಾರವಾಗಿರುವವರು. ಅವರಿಗೆ ಸದಾ ಮಾನಸಿಕವಾಗಿ ಕಳವಳವನ್ನು ಉಂಟುಮಾಡುವವನು. ಇಂತಹ ಕೃಷ್ಣನನ್ನು ಮಥುರೆಗೆ ಒಯ್ಯಲು ಅಕ್ರೂರನು ಬಂದಿದ್ದನು. ಉದ್ದೇಶ ದುಷ್ಟನಾದ ಕಂಸನ ಮರ್ದನ. ಇಂತಹ ಅಕ್ರೂರನನ್ನು ಕೃಷ್ಣನು ಮಾತನಾಡಿಸಿದನು. ಕೃಷ್ಣನು ಮಾತನಾಡಬೇಕಾದರೆ ಅಥವಾ ಕೃಷ್ಣನನ್ನು ಮಾತನಾಡಿಸಬೇಕಾದರೆ ಅಷ್ಟು ಸುಲಭವಲ್ಲ. ದೇವತೆಗಳು ಬಹಳ ವಾಕ್‌ಚತುರರು. ಅವರ ಮಾತುಗಳು ಬಾಣಗಳಂತೆ ನೇರ. ಮುಚ್ಚುಮರೆ ಇಲ್ಲದ ಮಾತು. ಇಂತಹ ಮಾತುಗಳಿಗೂ ಸಿಗದವನು. ಇನ್ನು ನಮ್ಮ ಮಾತಿಗೆ ಎಲ್ಲಿ ಸಿಗುವನು. ಹಾಗಿದ್ದರೂ ಈಗ ಅಕ್ರೂರನ ಜೊತೆ ಸಂಭಾಷಣೆಗೆ ತೊಡಗಿದ್ದಾನೆ ಎಂದರೆ ಅಕ್ರೂರನ ಸಾತ್ವಿಕತನವೇ ಕಾರಣ.

**ಸಂದೇಶ** : ಜೀವನದಲ್ಲಿ ನಮ್ಮ ಸಾತ್ವಿಕತನ ಹೆಚ್ಚಿದಷ್ಟು ದೇವರ ಜೊತೆ ಸಂಭಾಷಣೆಗೆ ನಾವು ಕಾಲತಃ ದೇಶತಃ ಸಮೀಪರಾಗುತ್ತೇವೆ.

**ಕ್ಷೇಮಃ ಕಿಂ ತವನಃ ಪಿತಾ ಚ ಕುಶಲೀ ಸ್ವಾಧ್ಯಾಯತೀರ್ಥಾಪ್ಲುತಿ–**
**ಸ್ವರ್ಗ್ಯಾರಾಧನ ಮುಖ್ಯ ಶೋಭನಕೃತಿರ್ವಿಘ್ನೋಜ್ಝಿತಾ ವರ್ತತೇ ।**

**ಕಿಂ ಸಂಸಾರವಿಮುಕ್ತಯೇ ಪ್ರಯತಸೇ ಕಂಸಸ್ಯ ಕಾವಾ ಸ್ಪೃಹಾ**
**ಸತ್ವಂ ವೇತ್ಸ್ಯಖಿಲಂ ಯದದ್ಯ ಹಿ ಮಯಾ ಕಾರ್ಯಂ ಚ ತಜ್ಞಾಪಯ ॥ ೨೭ ॥**

ಕ್ಷೇಮಃ=ಕ್ಷೇಮವು; ಕಿಂ=ಏನು; ತವ=ನಿನಗೆ; ನಃ=ನಮ್ಮ; ಪಿತಾ=ತಂದೆಯು; ಕುಶಲೀ=ಕ್ಷೇಮ; ಸ್ವಾಧ್ಯಾಯ=ಅಧ್ಯಯನವು; ತೀರ್ಥ=ತೀರ್ಥವು; ಆಪ್ಲುತಿ=ಸ್ನಾನವು; ಸ್ವರ್ಗ್ಯ=ಸ್ವರ್ಗದವರ; ಆರಾಧನ=ಪೂಜೆಯು; ಮುಖ್ಯ=ಮೊದಲು; ಶೋಭನ=ಒಳ್ಳೆದು; ಕೃತಿಃ=ಕೆಲಸವು; ವಿಘ್ನ=ತೊಂದರೆಯು; ಉಜ್ಜಿತಾ=ರಹಿತವು; ವರ್ತತೇ=ಇದೆ; ಕಿಂ=ಏನು; ಸಂಸಾರ=ಸಂಸಾರವು; ವಿಮುಕ್ತಯೇ=ಬಿಡುಗಡೆಗೋಸ್ಕರ; ಪ್ರಯತಸೇ=ಪ್ರಯತ್ನಿಸುತ್ತಿ; ಕಂಸಸ್ಯ=ಕಂಸನ; ಕಾ=ಏನು; ಸ್ಪೃಹಾ=ಇಚ್ಛೆಯು; ಸಃ=ಅವನು; ತ್ವಂ=ನೀನು; ವೇತ್ಸಿ= ತಿಳಿದಿದ್ದಿ; ಅಖಿಲಂ=ಎಲ್ಲವನ್ನೂ; ಯತ್=ಯಾವುದು; ಅದ್ಯ=ಈಗ; ಮಯಾ= ನನ್ನಿಂದ; ಕಾರ್ಯಂ=ಮಾಡಬೇಕಾದ್ದು; ತತ್=ಅದು; ಜ್ಞಾಪಯ=ತಿಳಿಸು.

ಅಕ್ರೂರ ಕ್ಷೇಮವೋ, ಕ್ಷೇಮ ಅಂದರೆ ಸ್ಥಿತಸ್ಯ ಪರಿಪಾಲನಂ –ನಮ್ಮಲ್ಲಿ ಇರುವುದನ್ನು ಉಳಿಸಿಕೊಳ್ಳುವುದು. ಹಿರಿಯರಿಂದ ಬಳುವಳಿಯಾಗಿ ಬಂದಿರುವ ಬಾಹ್ಯ ಹಾಗೂ ಆಂತರಿಕ ಪ್ರಪಂಚವನ್ನು ಅದೇ ರೀತಿ ಉಳಿಸಿಕೊಂಡಿದ್ದಿ ತಾನೆ. ಮಾತಾಪಿತೃಗಳು ಹೇಗಿದ್ದಾರೆ? ನಿನ್ನ ಕರ್ತವ್ಯಗಳಾದ ಅಧ್ಯಯನವು, ತೀರ್ಥಯಾತ್ರೆಯು, ಯಾಗಾದಿಗಳು ನಿರಂತರವಾಗಿ ನಡೆಯುತ್ತಿವೆಯಾ? ಮೇಲ್ನೋಟಕ್ಕೆ ಚಂದ ಕಾಣುವ ಸಂಸಾರದಲ್ಲಿಯೇ ಮುಳುಗಿದ್ದಿಯಾ? ಅಥವಾ ಸಂಸಾರದ ಇನ್ನೊಂದು ದಡವನ್ನು ಸೇರಲು ಪ್ರಯತ್ನಿಸುತ್ತಿದ್ದಿಯಾ? ನೀನು ಕಂಸನ ಬಳಿಯಿಂದ ಬಂದವನು. ಆತನ ಮಂತ್ರಿಯು. ನಿನ್ನನ್ನು ಯಾಕೆ ಇಲ್ಲಿಗೆ ಕಳಿಸಿದ್ದಾನೆ? ಆತನ ಮನಸ್ಸಿನಲ್ಲಿ ನನ್ನ ಬಗ್ಗೆ ಏನಿದೆ? ಲೋಕದ ದೃಷ್ಟಿಯಲ್ಲಿ ನೀನು ನನಗಿಂತ ಹಿರಿಯ. ಎಲ್ಲವನ್ನೂ ಬಲ್ಲವನಾದ ನೀನು ತಿಳಿಸು.

<u>**ಸಂದೇಶ**</u> : ಪರಿಚಯದ ವ್ಯಕ್ತಿಗಳು ಪರಸ್ಪರ ಭೇಟಿಯಾದಾಗ ಯೋಗಕ್ಷೇಮವನ್ನು ವಿಚಾರಿಸಬೇಕು.

**ಕ್ಷೇಮಸ್ತಾವದನಂತ ಹೃತ್ಸರಸಿಜೇ ಯಾವದ್ಭವಾನ್ವರ್ತತೇ**
**ಸ್ವೀಯಕ್ಲೇಶವನಾನಲೇ ತ್ವಯಿ ಸತಿ ಕ್ಲೇಶಃ ಕ್ವ ಪಿತ್ರೋಸ್ತವ ।**
**ಕಿಂತು ತ್ವತ್ಪಿತೃತಾಪವಾದ ಜನಿತಂ ತಚ್ಛೃಂಖಲಾಬಂಧನಂ**
**ಚಿಂತಾಸಂತತಿಹೇತುರೇವ ನ ತಯೋಃ ಸಂತಾಪಕಾರಿ ಪ್ರಭೋ ॥ ೨೮ ॥**

ಕ್ಷೇಮಃ ತಾವತ್=ಕ್ಷೇಮತಾನೆ; ಅನಂತ=ಅಂತ್ಯವಿಲ್ಲದ; ಹೃತ್=ಹೃದಯ; ಸರಸಿ= ಕೊಳದಲ್ಲಿ; ಜೇ=ಹುಟ್ಟಿದ; ಯಾವತ್=ಎಷ್ಟರವರೆಗೆ; ಭವಾನ್=ನೀನು; ವರ್ತತೇ=ಇರುತ್ತಿ; ಸ್ವೀಯ=ತನ್ನ; ಕ್ಲೇಶ=ದುಃಖವು; ವನ=ಕಾಡು; ಅನಲೇ=ಬೆಂಕಿಯು; ತ್ವಯಿ=ನಿನ್ನಲ್ಲಿ; ಸತಿ=

ಇರುತ್ತಿರಲು; ಕ್ಲೇಶಃ=ದುಃಖವು; ಕ್ವ=ಎಲ್ಲಿ; ಪಿತ್ರೋಃ=ತಂದೆತಾಯಿಗಳಿಗೆ; ತವ=ನಿನ್ನ; ಕಿಂತು=ಆದರೆ; ತ್ವತ್=ನೀನು; ಪಿತೃತಾ=ಪಿತೃತ್ವವು; ಅಪವಾದ=ಅಪವಾದವು; ಜನಿತಂ= ಉಂಟಾದ; ತತ್=ಅದು; ಶೃಂಖಲಾ=ಸಂಕೋಲೆಯು; ಬಂಧನಂ=ಬಂಧನವು; ಚಿಂತಾ= ಚಿಂತೆಯು; ಸಂತತಿ=ಸಮೂಹವು; ಹೇತುಃ=ಕಾರಣವು; ಏವ=ಅದೇ; ನ=ಅಲ್ಲ; ತಯೋಃ= ಅವರಿಗೆ; ಸಂತಾಪ=ದುಃಖವು; ಕಾರಿ=ಮಾಡತಕ್ಕದ್ದು; ಪ್ರಭೋ=ಒಡೆಯನೇ.

ಅಕ್ರೂರನು ಕೃಷ್ಣನಲ್ಲಿ ಪರಮಾತ್ಮತ್ವವನ್ನು ಕಂಡಿದ್ದಾನೆ. ಆದ್ದರಿಂದ ಶಾಸ್ತ್ರೀಯವಾದ ಉತ್ತರವನ್ನೇ ಕೊಡುತ್ತಿದ್ದಾನೆ –ಕೃಷ್ಣ, ನೀನು ಈ ದೇಹದಲ್ಲಿ ಇರುವಷ್ಟು ಸಮಯ ನಾನು ಕ್ಷೇಮದಲ್ಲಿ ಇರುತ್ತೇನೆ. ಶಾಸ್ತ್ರ ಒಂದು ಮಾತು ಹೇಳುತ್ತದೆ: "ಬ್ರಹ್ಮಣಾ ತ್ಯಕ್ತದೇಹಸ್ತು ಮೃತ ಇತ್ಯುಚ್ಯತೇ" ದೇವರು ಈ ದೇಹವನ್ನು ಬಿಟ್ಟರೆ ಈ ವ್ಯಕ್ತಿ ಸತ್ತವ ಎಂದು ಕರೆಯ ಲ್ಪಡುತ್ತಾನೆ ಎಂದು. ಆದ್ದರಿಂದ ನನ್ನ ಕ್ಷೇಮ ನಿನ್ನ ಕೈಯಲ್ಲಿದೆ. ನನ್ನ ಬಾಲ್ಯದಲ್ಲಿ ಎಲ್ಲಾ ಇಂದ್ರಿಯಗಳೂ ಚೆನ್ನಾಗಿದ್ದವು. ಯಾಕೆಂದರೆ ನೀನು ಅವುಗಳಲ್ಲಿ ಒಂದೊಂದು ಅಂಶದಿಂದ ಇದ್ದಿ. ಈಗಲೂ ಇಂದ್ರಿಯಗಳ ಸ್ಥಿತಿಯು ಮೊದಲಿನಂತೆಯೇ ಇದೆ. ನೀನು ನಿನ್ನ ರೂಪಗಳನ್ನು ಹಿಂದಕ್ಕೆ ಎಳೆದುಕೊಂಡರೆ ನನ್ನ ಕ್ಷೇಮ ಮುಗಿಯಿತು ಎಂದರ್ಥ. ಆದ್ದರಿಂದ ನಾನು ಕ್ಷೇಮವೋ ಎಂದು ನಿನ್ನಲ್ಲಿ ಕೇಳಬೇಕು ಹೊರತು ನನ್ನಲ್ಲಿ ಅಲ್ಲ.

ನಿನ್ನ ತಂದೆತಾಯಿಯವರು ಚೆನ್ನಾಗಿದ್ದಾರೆ. ಅವರು ನಿನ್ನ ಬಹಳ ಭಕ್ತರು. ನಿನ್ನ ಭಕ್ತರಿಗೆ ಬರುವ ಎಲ್ಲಾ ರೀತಿಯ ಕ್ಲೇಶಗಳಿಗೂ ನೀನು ಬೆಂಕಿಯಂತೆ ಇರುವವನು. ಬೆಂಕಿ ಮನೆಯಲ್ಲೇ ಇರುವಾಗ ಕತ್ತಲೆ ಎಲ್ಲಿಂದ. ಆದರೂ ಸೆರೆಮನೆಯಲ್ಲಿ ಇದ್ದಾರೆ. ಅವರನ್ನು ಸಂಕೋಲೆಯಿಂದ ಬಂಧಿಸಿ ಅಲ್ಲಿ ಇಟ್ಟಿದ್ದಾನೆ ಕಂಸನು. ಅದು ಸ್ವಯಂಕೃತ ಅಪರಾಧದಿಂದ ಬಂದ ಶಿಕ್ಷೆ. ಅವರು ಬೀದಿಯಲ್ಲಿ ಸಂಚರಿಸುವಾಗ ಜನರು ಅವರನ್ನು ನೋಡಿ ಇವರು ಕೃಷ್ಣನ ಮಾತಾಪಿತೃಗಳು ಎಂದು ಕಂಸನಿಗೆ ಕೇಳದಂತೆ ಆಡಿಕೊಳ್ಳುತ್ತಿದ್ದರು. ಆ ಮಾತಿಗೆ ಇವರು ಮೌನದ ಮೂಲಕ ಸಮ್ಮತಿಯನ್ನು ಸೂಚಿಸುತ್ತಿದ್ದರು. ಉತ್ಪತ್ತಿಯೇ ಇಲ್ಲದ ನಿನಗೆ ಜನನಿ ಜನಕರೆಲ್ಲಿಂದ ಬರಬೇಕು? ಆದರೂ ಈ ಶಿಕ್ಷೆಯು ಅವರಿಗೆ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಸಾಧನೆಯಾಗಿ ಪರಿಣಮಿಸಿದೆ. ಸೆರೆಮನೆಯಲ್ಲಿ ಇದ್ದುಕೊಂಡು ಸದಾ ನಿನ್ನ ಧ್ಯಾನದಲ್ಲೇ ತೊಡಗಿದ್ದಾರೆ. ಆದ್ದರಿಂದ ಈ ಶಿಕ್ಷೆಯಿಂದ ಅವರೇನೂ ನೊಂದುಕೊಂಡಿಲ್ಲ.

<u>**ಸಂದೇಶ**</u> : ಆಗುವುದೆಲ್ಲಾ ಒಳ್ಳೆಯದಕ್ಕೇ ಎಂಬ ಅನುಸಂಧಾನ ಇರಬೇಕು.

**ತೀರ್ಥಂ ಸೇವಿತಮೇವ ಯತ್ಪದರಜೋಜುಷ್ಟಂ ಸುರಾಃ ಸತ್ಕೃತಾಃ**
**ಯೇನಾಲಿಂಗಿತವಾನಹಂ ತವ ವಪುಶ್ಶೀರ್ಣಾ ಚ ಪುಣ್ಯಕ್ರಿಯಾ ।**
**ಯಲ್ಲಬ್ಧಂ ತವದರ್ಶನಂ ಪರಿಚಿತೋ ವೇದಶ್ಚ ಯತ್ತೇ ಶ್ರುತಮ್**
**ಕಲ್ಯಾಣಂ ವಚನಂ ಭವೋಽಪಿ ನ ಬವತ್ಸಾಮೀಪ್ಯಭಾಜೋ ಮಮ ॥ ೨೯ ॥**

ತೀರ್ಥಂ=ತೀರ್ಥವು; ಸೇವಿತಂ ಏವ=ಸೇವಿಸಲ್ಪಟ್ಟಿತು; ಯತ್=ಯಾವ; ಪದ=ಚರಣ; ರಜಃ=ಧೂಳು; ಜುಷ್ಟಂ=ಸೇವಿಸಲ್ಪಟ್ಟಿತು; ಸುರಾಃ=ದೇವತೆಗಳು; ಸತ್ಕೃತಾಃ=ಆದರಿಸ ಲ್ಪಟ್ಟರು; ಯೇನ=ಯಾರಿಂದ; ಆಲಿಂಗಿತವಾನ್=ಆಲಿಂಗಿಸಲ್ಪಡು; ಅಹಂ=ನಾನು; ತವ= ನಿನ್ನ; ವಪುಃ=ಶರೀರವು; ಚೀರ್ಣಾ=ಮಾಡಲ್ಪಟ್ಟಿತು; ಪುಣ್ಯ=ಒಳ್ಳೆದು; ಕ್ರಿಯಾ= ಕೆಲಸವು; ಯತ್=ಯಾವುದು; ಲಬ್ಧಂ=ಹೊಂದಲ್ಪಟ್ಟಿತು; ತವ=ನಿನ್ನ; ದರ್ಶನಂ= ದರ್ಶನವು; ಪರಿಚಿತಃ=ಪರಿಚಿತವಾಯಿತು; ವೇದಃ ಚ=ವೇದಗಳು; ಯತ್=ಯಾವ; ತೇ=ನಿನ್ನ; ಶ್ರುತಂ=ಶ್ರವಣವು; ಕಲ್ಯಾಣಂ=ಒಳ್ಳೆಯ; ವಚನಂ=ಮಾತು; ಭವಃ ಅಪಿ=ಸಂಸಾರವೂ ಕೂಡಾ; ನ=ಇಲ್ಲ; ಭವತ್=ನೀನು; ಸಾಮೀಪ್ಯ=ಸಮೀಪವು; ಭಾಜಃ=ಹೊಂದಿದ; ಮಮ=ನನಗೆ.

ಕೃಷ್ಣ, ತೀರ್ಥಯಾತ್ರೆ ಮಾಡಿದ್ದಿಯಾ? ಎಂದು ನನ್ನನ್ನು ಪ್ರಶ್ನಿಸಿದ್ದಿ. ಹೌದು, ಮಾಡಿದ್ದೇನೆ. ಮಾಡುತ್ತಾ ಬಂದಿದ್ದೇನೆ. ನಿನಗೆ 'ತೀರ್ಥಪಾದ' ಎಂಬ ಹೆಸರಿದೆ. ಎಲ್ಲಾ ಪುಣ್ಯ ನದಿಗಳೂ ನಿನ್ನ ಪಾದದಲ್ಲಿ ಇವೆ. ಅಂತಹ ನಿನ್ನ ಪಾದದ ಸಂಬಂಧ ಈ ಕಾಡಿನ ಧೂಳುಗಳಿಗೆ ಅಗಿದೆ. ಆ ಧೂಳುಗಳಲ್ಲಿ ನಾನು ಈಗ ಹೊರಳಾಡಿಕೊಂಡೇ ಬಂದೆನು. ಪುರುಷಸೂಕ್ತ ಹೇಳುವಂತೆ ಎಲ್ಲಾ ದೇವತೆಗಳೂ ನಿನ್ನ ದೇಹವನ್ನು ಮನೆಯನ್ನಾಗಿ ಮಾಡಿಕೊಂಡಿದ್ದಾರೆ. ಅಂತಹ ನಿನ್ನನ್ನು ನಾನು ಆಲಿಂಗಿಸಿದೆನು. ಆಗ ದೇವತೆಗಳನ್ನೂ ಆಲಿಂಗಿಸಿದಂತೆ ಆಯಿತು. ಆಲಿಂಗನೆಗಿಂತ ದೊಡ್ಡ ಸತ್ಕಾರ ಯಾವುದಿದೆ? ನಾನು ಯಾಗಾದಿಗಳನ್ನು ಮಾಡಿದ್ದೇನೆ ಎಂದು ಹೇಳುತ್ತೇನೆ. ಅದನ್ನು ನಂಬುವುದು ಹೇಗೆ ಎಂಬ ಪ್ರಶ್ನೆ ಬರಬಹುದು. ಶಾಸ್ತ್ರದಲ್ಲಿ ಒಂದು ನಿಯಮ ಇದೆ: "ಕಾರ್ಯದಿಂದ ಕಾರಣದ ಅನುಮಾನ". ಕಾರ್ಯ ಆಗಿದೆ ಎಂದರೆ ಕಾರಣ ಇರಲೇ ಬೇಕು ಎಂದು ಮಡಕೆ ಆಗಿದೆ ಎಂದರೆ ಕುಂಬಾರ ಇದ್ದಾನೆ. ಬಟ್ಟೆ ಆಗಿದೆ ಅಂದರೆ ನೇಕಾರ ಇದ್ದಾನೆ. ಮಡಕೆ, ಬಟ್ಟೆ ಕಾರ್ಯಗಳು. ಕುಂಬಾರ, ನೇಕಾರರು ಕಾರಣರು ಎಂದು. ಅದೇ ರೀತಿ ಸಾತ್ವಿಕರು ಯಾಗಾದಿಗಳನ್ನು ಮಾಡುವುದು ನಿನ್ನ ದರ್ಶನದ ಸಲುವಾಗಿ. ನಿನ್ನ ದರ್ಶನಕಾರ್ಯ ಯಾಗ ಕಾರಣ. ನನಗೆ ಈಗ ನಿನ್ನ ದರ್ಶನ ಆಯಿತು. ಆದ್ದರಿಂದ ಇದಕ್ಕೆ ಕಾರಣವಾದ ಯಾಗವನ್ನು ಮಾಡಿದ್ದೇನೆ ಎಂದು ನನ್ನ ಮಾತನ್ನು ನಂಬಬಹುದು.

ವೇದಾಧ್ಯಯನ ಈಗ ಆಗುತ್ತಿದೆ. ವೇದಗಳಿಗೆ ಶ್ರುತಿಗಳು ಎಂದು ಹೆಸರು. ವೇದಗಳು ನಿನ್ನ ಮಾತುಗಳು. ಹೊರತು ಅನ್ಯವಲ್ಲ. ನಿನ್ನ ಮಾತೇ ವೇದವಾಕ್ಯ. ನಿನ್ನ ಆಡುವ ಮಾತುಗಳನ್ನು ನಾನು ಈಗ ಶ್ರವಣ ಮಾಡುತ್ತಿದ್ದೇನೆ. ಆದ್ದರಿಂದ ವೇದಾಧ್ಯಯನ ನಡೆಯುತ್ತಿದೆ.

ಮೋಕ್ಷವು ನಾಲ್ಕು ವಿಧ: ಸಾಲೋಕ್ಯ, ಸಾಯುಜ್ಯ, ಸಾರೂಪ್ಯ, ಸಾಮೀಪ್ಯ ಎಂದು. ನಾನು ಈಗ ನಿನ್ನ ಸಮೀಪದಲ್ಲಿ ಇದ್ದೇನೆ. ನನಗೆ ಸಾಮೀಪ್ಯ ಎಂಬ ಮೋಕ್ಷವು

ಲಭಿಸಿದೆ. ಆದ್ದರಿಂದ ಸಂಸಾರ ಇಲ್ಲ. ಸಂಸಾರ ಇದ್ದರೆ ತಾನೆ ಅದರಿಂದ ಬಿಡುಗಡೆಗೆ ಪ್ರಯತ್ನ ಮಾಡುವುದು. ಇದು ಸಂಸಾರದಿಂದ ಬಿಡುಗಡೆಗೆ ಪ್ರಯತ್ನಿಸುತ್ತಿಯಾ ಎಂಬ ಪ್ರಶ್ನೆಗೆ ಉತ್ತರ.

**ಸಂದೇಶ** : ಸಾಧನಾನುಷ್ಠಾನ ಮಾಡುವಾಗ ಯಾವ ರೀತಿ ಅನುಸಂಧಾನ ಇರಬೇಕು ಎಂಬುದನ್ನು ಇಲ್ಲಿ ಚೆನ್ನಾಗಿ ನಿರೂಪಿಸಿದ್ದಾರೆ.

**ಕಿಂ ವಿಷ್ಣೋ ಬಹುನೋದಿತೇನ ವಿದಿತಂ ವಿಶ್ವಂ ಭವದ್ದರ್ಶನಾತ್**
**ಶತ್ರುರ್ಮಿತ್ರಮಭೂದ್ಭವೋಽಪಿ ಯದಹಂ ಕಂಸೇನ ಸಂಪ್ರೇಷಿತಃ ।**
**ಅದ್ರಾಕ್ಷಂ ತವ ಸುಂದರಂ ವಪುರಯಂ ಸರ್ವಜ್ಞಚೂಡಾಮಣೇ**
**ಪ್ರಶ್ನಸ್ತೇ ನೃವಿಡಂಬನಾಯ ಮಮ ಚ ಪ್ರತ್ಯುಕ್ತಿರೀಶೇದೃಶೀ ॥ ೩೦ ॥**

ಕಿಂ=ಏನು?; ವಿಷ್ಣೋ=ದೇವರೇ; ಬಹುನಾ=ಬಹಳ; ಉದಿತೇನ=ಹೇಳುವುದರಿಂದ; ವಿದಿತಂ=ತಿಳಿದಿದೆ; ವಿಶ್ವಂ=ಜಗತ್ತು; ಭವತ್=ನೀನು; ದರ್ಶನಾತ್=ದರ್ಶನದಿಂದ; ಶತ್ರುಃ=ಶತ್ರುವು; ಮಿತ್ರಂ=ಗೆಳೆಯನು; ಅಭೂತ್=ಆಯಿತು; ಭವ ಅಪಿ=ಸಂಸಾರವಾದರೂ; ಯತ್=ಯಾವ; ಅಹಂ=ನಾನು; ಕಂಸೇನ=ಕಂಸನಿಂದ; ಸಂಪ್ರೇಷಿತಃ=ಕಳುಹಿಸಲ್ಪಟ್ಟೆನು; ಅದ್ರಾಕ್ಷಂ=ನೋಡಿದೆನು; ತವ=ನಿನ್ನ; ಸುಂದರಂ=ಚಂದ; ವಪುಃ=ದೇಹವು; ಅಯಂ=ಇದು; ಸರ್ವ=ಎಲ್ಲಾ; ಜ್ಞ=ತಿಳಿಯುವುದು; ಚೂಡಾ=ಶಿಖಾ; ಮಣೇ=ಮಣಿಯೇ; ಪ್ರಶ್ನಃ=ಪ್ರಶ್ನೆಯು; ತೇ=ನಿನ್ನ; ನೃ=ಜನರು; ವಿಡಂಬನಾಯ=ನಟನೆಗೋಸ್ಕರ; ಮಮ=ನನ್ನ; ಪ್ರತ್ಯುಕ್ತಿಃ= ಉತ್ತರವು; ಈಶ=ಒಡೆಯನೇ; ಈದೃಶೀ=ಇಂತದ್ದೇ.

ಕೃಷ್ಣ, ಹೆಚ್ಚಿಗೆ ಏನು ಹೇಳಲಿ? ನಾನು ಇಡೀ ಜಗತ್ತನ್ನೇ ನೋಡಿದೆ. ಒಂದು ಊರಿನಲ್ಲಿ ಪ್ರಧಾನವಾದ ವಸ್ತುಗಳನ್ನು ನೋಡಿದರೆ ಇಡೀ ಊರನ್ನೇ ನೋಡಿದಂತೆ. ಅದೇ ರೀತಿ ಸಮಸ್ತ ವಿಶ್ವದಲ್ಲಿ ನೀನು ಪ್ರಧಾನ. ಅಂತಹ ನಿನ್ನನ್ನು ನಾನು ನೋಡುತ್ತಿದ್ದೇನೆ. ತಿಳಿಯುತ್ತಿದ್ದೇನೆ. ನೀನು ಎಲ್ಲಾ ತಿಳಿದಿದ್ದಿ ಎಂಬ ಕೃಷ್ಣನ ಮಾತಿಗೆ ಅಕ್ರೂರನ ಪ್ರತಿಕ್ರಿಯೆ ಈ ರೀತಿ.

ಸಂಸಾರದಿಂದ ಬಿಡುಗಡೆಗೆ ಪ್ರಯತ್ನಿಸುತ್ತಿದ್ದಿಯಾ? ಎಂಬ ಪ್ರಶ್ನೆಗೆ ಉತ್ತರ –ಈ ತನಕ ನಾನು ಸಂಸಾರವನ್ನು ಶತ್ರು ಎಂದು ಭಾವಿಸಿದ್ದೆ. ಇಲ್ಲಿ ಇರುವವರೆಲ್ಲಾ ನಮಗೆ ದುಃಖ ಕೊಡುವವರು ಎಂದು ಭಾವಿಸಿದ್ದೆ. ಆದರೆ ಈಗ ಅದೆಲ್ಲಾ ವಿರುದ್ಧವಾಯಿತು. ಶತ್ರು ಎಂದು ಭಾವಿಸಿರುವ ಕಂಸನು ನನ್ನನ್ನು ಪೀಡಿಸಲಿಲ್ಲ. ಬದಲಾಗಿ ನನಗೆ ಇಷ್ಟವನ್ನೇ ಮಾಡಿದ್ದಾನೆ. ಹೇಗೆಂದರೆ ನನ್ನನ್ನು ನಿನ್ನ ಬಳಿಗೆ ಕಳಿಸುವ ಮೂಲಕ ಸಂಸಾರದಲ್ಲಿ ಇರುವಂತೆಯೇ ನನಗೆ ನಿನ್ನ ದರ್ಶನ, ಸ್ಪರ್ಶನ, ಆಲಾಪಾದಿಗಳು ಲಭಿಸಿವೆ. ಇದು ನನಗೆ ಬಹಳ ಇಷ್ಟವಾದದ್ದು. ನನಗೆ ಇಷ್ಟವಾದದ್ದು ಇಲ್ಲೇ ಸಿಗುವಾಗ ಇಲ್ಲಿಂದ ಬಿಡುಗಡೆಗೆ ಯಾಕೆ ಪ್ರಯತ್ನಿಸಬೇಕು?

ಕೃಷ್ಣ, ನೀನು ಸರ್ವಜ್ಞರಲ್ಲಿ ಶಿರೋಭೂಷಣದಂತೆ ಇರುವವನು. ಲೋಕದಲ್ಲಿರುವ ಸರ್ವಜ್ಞರಿಗೂ ಸರ್ವಜ್ಞತ್ವವನ್ನು ಕೊಡುವವನು. ಆದರೂ ನೀನು ತಿಳಿಯದವರಂತೆ ನಟನೆ ಮಾಡುತ್ತಿ. ನಿನ್ನ ನಟನೆಗೆ ನಾನೂ ಹಾಗೆಯೇ ಪ್ರತಿಕ್ರಯಿಸಬೇಕಾಗುತ್ತದೆ. ಆದ್ದರಿಂದ ಆ ಧಾಟಿಯಲ್ಲೇ ಉತ್ತರಿಸಿದ್ದೇನೆ.

**ಸಂದೇಶ** : ಸಂಸಾರ ಎಂಬ ನಾಟಕಕಂಪೆನಿಯ ಸೂತ್ರಧಾರ ದೇವರು. ಒಮ್ಮೊಮ್ಮೆ ಸೂತ್ರಧಾರನೂ ಪಾತ್ರಧಾರಿಯಾಗುತ್ತಾನೆ. ಆಗ ಇತರ ಪಾತ್ರಧಾರಿಗಳಾದ ನಾವು ಆತನಿಗೆ ಸರಿಯಾಗಿ ಸ್ಪಂದಿಸಬೇಕು.

**ಕಂಸಃ ಸಂಪ್ರತಿ ಕಾರ್ಮುಕೋತ್ಸವ ಕಥಾ ವ್ಯಾಜೇನ ತೇ ವಿಪ್ರಿಯಂ**
**ಕರ್ತುಂ ವಾಂಛತಿ ತೇನ ಮಾತುಲಮಹಂ ಸಾರ್ಥಂ ವಿಧಾತುಂ ಭವಾನ್ ।**
**ಗತ್ವಾ ತತ್ರ ವಿಭುರ್ಧುನೋತು ಸಬಲಂ ಶತ್ರುಂ ಪುನಃ ಪ್ರಸ್ಫುರತ್–**
**ಭ್ರೂಚಾಪೋತ್ಸವಮಾರಚಯ್ಯ ಭಜತಾಮಾಧಿಂ ಸಮಾಧಿಪ್ರಿಯಃ ॥ ೩೧ ॥**

ಕಂಸಃ=ಕಂಸನು; ಸಂಪ್ರತಿ=ಈಗ; ಕಾರ್ಮುಕ=ಬಿಲ್ಲು; ಉತ್ಸವ=ಜಾತ್ರೆ; ಕಥಾ= ಘಟನೆ; ವ್ಯಾಜೇನ=ನಿಮಿತ್ತದಿಂದ; ತೇ=ನಿನಗೆ; ವಿಪ್ರಿಯ=ಅನಿಷ್ಟವನ್ನು; ಕರ್ತುಂ=ಮಾಡಲು; ವಾಂಛತಿ=ಇಚ್ಛಿಸುತ್ತಾನೆ; ತೇನ=ಆದ್ದರಿಂದ; ಮಾತುಲ=ಮಾವನು; ಮಹಂ=ಉತ್ಸವವನ್ನು; ಸಾರ್ಥಂ=ಸಾರ್ಥಕವನ್ನಾಗಿ; ವಿಧಾತುಂ=ಮಾಡಲು; ಭವಾನ್=ನೀನು; ಗತ್ವಾ=ಹೋಗಿ; ತತ್ರ=ಅಲ್ಲಿ; ವಿಭುಃ=ಶಕ್ತನು; ಧುನೋತು=ನಾಶ ಮಾಡು; ಸಬಲಂ=ಸೈನ್ಯಸಹಿತವಾದ; ಶತ್ರುಂ=ಶತ್ರುವನ್ನು; ಪುನಃ=ಮತ್ತು; ಪ್ರಸ್ಫುರತ್= ಹೊಳೆಯುವ; ಭ್ರೂ=ಹುಬ್ಬು; ಚಾಪ= ಧನುಸ್ಸು; ಉತ್ಸವಂ=ಜಾತ್ರೆಯನ್ನು; ಆರಚಯ್ಯ=ಮಾಡಿ; ಭಜತಾಂ=ಭಕ್ತರ; ಆಧಿಂ= ದುಃಖವನ್ನು; ಸಮಾಧಿ=ಧ್ಯಾನ; ಪ್ರಿಯಃ=ಇಷ್ಟನು.

ಮಾವನಾದ ಕಂಸ ಹೇಗಿದ್ದಾರೆ ಎಂಬ ಪ್ರಶ್ನೆಗೆ ಉತ್ತರ –ಕೃಷ್ಣ, ನೀನು ಮಥುರೆಗೆ ಬರಬೇಕಂತೆ. ಅಲ್ಲಿ ಮಾವ ನಿನಗಾಗಿ ಬಿಲ್ಲಹಬ್ಬವನ್ನು ವ್ಯವಸ್ಥೆ ಮಾಡಿದ್ದಾನೆ. ಬಿಲ್ಲಹಬ್ಬ ಒಂದು ನಿಮಿತ್ತಮಾತ್ರ, ನೀನು ಅಲ್ಲಿಗೆ ಬರುವುದು ಆತನ ಉದ್ದೇಶ. ಈ ಅಕ್ರೂರನು ಕೃಷ್ಣನ ಭಕ್ತನು. ಅತ್ತ ಕಂಸನ ಅನ್ನ ತಿಂದವನು. ಆದ್ದರಿಂದ ಲೌಕಿಕವಾಗಿ ಇಬ್ಬರಿಗೂ ಅನುಕೂಲವಾಗಬೇಕು. ಆ ರೀತಿಯ ಚಮತ್ಕಾರವನ್ನು ರಾಜರು ಇಲ್ಲಿ ಅಕ್ರೂರನ ಬಾಯಿಂದ ನುಡಿಸುತ್ತಾರೆ. ಕೃಷ್ಣ, ಕಂಸನು ನಿನಗೆ ವಿಪ್ರಿಯವನ್ನು ಮಾಡಲು ಇಚ್ಛಿಸಿದ್ದಾನೆ ಎಂದು ಹೇಳಿದನು. ವಿಪ್ರಿಯ ಶಬ್ದಕ್ಕೆ ವಿಶೇಷವಾಗಿ ಪ್ರಿಯ ವಿಜ್ಞಾನಿ ಎಂಬಂತೆ ಒಂದು ಅರ್ಥ ಇದೆ. ಇದು ಕಂಸನಿಗೆ ಅನುಕೂಲವಾಗುವ ಮಾತು. ಇನ್ನೊಂದು ಅರ್ಥ ಇಷ್ಟಕ್ಕೆ ವಿರುದ್ಧವಾದದ್ದು. ವಿಸ್ಮರಣೆ ಬಂದಂತೆ. ಕಂಸನು ನಿನ್ನನ್ನು ಕೊಲ್ಲಲು ಉಪಾಯ ಮಾಡುತ್ತಿದ್ದಾನೆ. ಇದು ಕೃಷ್ಣನಿಗೆ ಅನುಕೂಲವಾದದ್ದು. ನೀನು ಅಲ್ಲಿಗೆ ಬಂದು ನಿನ್ನ

ಮಾವನ ಉತ್ಸವವನ್ನು ನೆರವೇರಿಸು. ಆ ಉತ್ಸವದಿಂದ ಜನರಿಗೆ ಪ್ರಯೋಜನ ಸಿಗಲಿ. ಆ ಉತ್ಸವದಲ್ಲಿ ಎದುರಾಳಿಗಳನ್ನು ಸದೆ ಬಡಿ. ಮೇಲ್ನೋಟಕ್ಕೆ ಕಂಸನ ಎದುರಾಳಿಗಳು ಎಂದು ಭಾಸವಾಗುತ್ತದೆ. ಆದರೆ ಆಂತರಿಕ ಅರ್ಥ ಕಂಸನೆಂಬ ಎದುರಾಳಿಯನ್ನು ಎಂದು. ಅನಂತರ ನಿನ್ನನ್ನು ನಂಬಿದ ಬಹಳ ಮಂದಿ ಅಲ್ಲಿ ಇದ್ದಾರೆ. ಸದಾ ನಿನ್ನ ಧ್ಯಾನದಲ್ಲೇ ಇದ್ದಾರೆ. ಧ್ಯಾನಿಗಳೆಂದರೆ ನಿನಗೆ ಬಹಳ ಇಷ್ಟ. ಅವರು ಮಾನಸಿಕವಾಗಿ ತುಂಬಾ ನೊಂದಿದ್ದಾರೆ. ಅವರ ಕಡೆಗೆ ಒಮ್ಮೆ ನಿನ್ನ ಹುಬ್ಬುಗಳೆಂಬ ಧನುಸ್ಸನ್ನು ಠೇಂಕರಿಸು. ಇದರಿಂದ ಅವರ ಮನೋವ್ಯಥೆಯು ದೂರವಾಗಲಿ. ನೀನೇನು ಮಾಡಬೇಕೆಂದು ನನ್ನಲ್ಲಿ ಕೇಳಿದ್ದಕ್ಕೆ ಇದು ಉತ್ತರ ಎಂದು ಅಕ್ರೂರನು ಕೃಷ್ಣನಲ್ಲಿ ಭಿನ್ನೈಸಿದನು.

<u>**ಸಂದೇಶ**</u> : ಭಕ್ತರು ಪ್ರಾರ್ಥಿಸಿದ ಬಳಿಕವೇ ಭಗವಂತನು ಭೂಭಾರಹರಣ ಮಾಡುವುದು. ಮಗು ಅತ್ತ ಮೇಲೆಯೇ ತಾಯಿ ಮೊಲೆಯೂಡುವಂತೆ.

**ಮಥುರಾ ಮಧುರಾಕೇಶ ಮಹಸಾ ಮಹಸಾಧಿಕಾ ।**
**ಸಹಸಾ ಸಹಸಾಪ್ಯಾ ಸ್ವೈರ್ಭವತಾ ಭವತಾರಕ ॥ ೩೨ ॥**

ಮಥುರಾ=ಮಥುರೆಯು; ಮಧು=ಪುಷ್ಪರಸ; ರಾಕೇಶ=ಪೂರ್ಣಚಂದ್ರ; ಮಹಸಾ= ಕಾಂತಿಯಿಂದ; ಮಹ=ಉಲ್ಲಾಸ; ಸಾಧಿಕಾ=ಸಾಧಿಸುವ; ಸಹಸಾ=ಕೂಡಲೇ; ಸಹ=ಕೂಡಿ; ಸಾ=ಆ; ಆಪ್ಯಾ=ಹೊಂದಲ್ಪಡು; ಸ್ವೈಃ=ತನ್ನವರಿಂದ; ಭವತಾ=ನಿನ್ನಿಂದ; ಭವ=ಸಂಸಾರವು; ತಾರಕ=ದಾಟಿಸುವವನೇ.

ಮಥುರಾ ನಗರಿಯು ಬಹಳ ಚೆನ್ನಾಗಿದೆ. ನಾನಾ ರೀತಿಯ ಹೂಗಳು ಅರಳಿವೆ. ಪೂರ್ಣನಾದ ಚಂದ್ರನ ಬೆಳದಿಂಗಳು ಒಂದು ಕಡೆ. ಇದೆಲ್ಲಾ ಸೇರಿ ಮಥುರೆಯ ಕಳೆಯನ್ನು ಹೆಚ್ಚಿಸಿದೆ. ಮನಸ್ಸಿಗೂ ಬಹಳ ಮುದವೆನಿಸುವುದು. ಇಂತಹ ನಗರಿಯನ್ನು ನೀನು ಸಾಧ್ಯವಾದಷ್ಟು ಬೇಗ ಪ್ರವೇಶಿಸಬೇಕು. ನಿನಗೆ ಭವತಾರಕ ಎಂಬ ಹೆಸರಿದೆ. ಸಾತ್ವಿಕರನ್ನು ಸಂಸಾರದ ತಾಪದಿಂದ ದಾಟಿಸುವವ ಎಂದು. ಸಾತ್ವಿಕರು ಅಲ್ಲಿ ನಿನಗಾಗಿ ಕಾಯುತ್ತಿದ್ದಾರೆ. ಆದ್ದರಿಂದ ಅವರನ್ನು ನಿರಾಶೆಗೊಳಿಸಬೇಡ.

<u>**ಸಂದೇಶ**</u> : ದೇವರನ್ನು ನಮ್ಮ ಮನೆಗೆ ಆಮಂತ್ರಿಸುವ ಮೊದಲು ಮನೆಯನ್ನು ಅಂದರೆ ಮನವನ್ನು ಅಲಂಕಾರಗೊಳಿಸಬೇಕು.

**ಸ ತತಃ ಸತತಧ್ಯಾನ ಶುದ್ಧ ವೃದ್ಧ ಜನಾಶ್ರಿತಾಮ್ ।**
**ಮಥುರಾಂ ಮಧುರಾಂ ಕರ್ತುಂ ಗಮನಾಯೋಪಚಕ್ರಮೇ ॥ ೩೩ ॥**

ಸಃ=ಅವನು; ತತಃ=ಅನಂತರ; ಸತತ=ಸದಾ; ಧ್ಯಾನ=ಚಿಂತನೆ; ಶುದ್ಧ=ಶುದ್ಧವು; ವೃದ್ಧ=ದೊಡ್ಡ; ಜನ=ಜನರು; ಆಶ್ರಿತಾಂ=ಇರುವ; ಮಥುರಾಂ=ಮಥುರೆಯನ್ನು;

ಮಧುರಾಂ=ಚಂದವನ್ನು; ಕರ್ತುಂ=ಮಾಡಲು; ಗಮನಾಯ=ಹೊರಡಲು; ಉಪಚಕ್ರಮೇ= ತಯಾರಾದನು.

ಮಧುರೆಯಲ್ಲಿ ಜ್ಞಾನಿಗಳು ಬಹಳ ಮಂದಿ ಇದ್ದಾರೆ. ಅವರು ಸದಾ ದೇವರ ಧ್ಯಾನದಲ್ಲೇ ಇರುತ್ತಾರೆ. ಆದ್ದರಿಂದಲೇ ಬಹಳ ಪವಿತ್ರರು. ಇಂತಹ ನಗರಿಯು ಕಂಸಾದಿಗಳಿಂದ ಕಲುಷಿತವಾಗಿದೆ. ಈ ಕಶ್ಮಲವನ್ನು ಹೊರಹಾಕಬೇಕು. ಮಥುರೆಯನ್ನು ಚಂದ ಮಾಡಬೇಕು. ಅದಕ್ಕಾಗಿ ಕೃಷ್ಣನು ಹೊರಡಲು ಅಣಿಯಾದನು.

**ಸಂದೇಶ** : ಸಹಜವಾಗಿ ನಿರ್ಮಲವಾದ ಊರು ನೈಮಿತ್ತಿಕವಾಗಿ ಕಲುಷಿತವಾದರೆ ಅಂತಹ ಊರನ್ನು ದೇವರು ನಿರ್ಮಲೀಕರಿಸುತ್ತಾನೆ.

**ಹರಿಂ ಮಧುಪುರೀಂ ಯಾಂತಂ ವಿಲೋಕ್ಯ ವ್ರಜಯೋಷಿತಃ ।**
**ವಿಲೇಪುಃ ವಿವಿಧಾಲಾಪೈಃ ವಿನಿವರ್ತಯಿತುಂ ಧಿಯಾ ॥ ೩೪ ॥**

ಹರಿಂ=ದೇವರನ್ನು; ಮಧುಪುರೀಂ=ಮಧುರೆಯನ್ನು; ಯಾಂತಂ=ಹೊರಟಿರುವ; ವಿಲೋಕ್ಯ=ನೋಡಿ; ವ್ರಜ=ಗೋಕುಲವು; ಯೋಷಿತ=ನಾರಿಯರು; ವಿಲೇಪುಃ=ತಪಿಸಿದರು; ವಿವಿಧ=ನಾನಾರೀತಿ; ಆಲಾಪೈಃ=ದುಃಖಗಳಿಂದ; ವಿನಿವರ್ತಯಿತುಂ=ಹಿಂದಿರುಗಿಸಲು; ಧಿಯಾ=ಮನದಿಂದ.

ಕೃಷ್ಣನು ಮಧುರೆಗೆ ಹೊರಡುವ ವಿಷಯವು ಇಡೀ ಗೋಕುಲದಲ್ಲಿ ಹರಡಿತು. ನಾರಿಯರೆಲ್ಲಾ ಬಹಳವಾಗಿ ಗೋಳಿಟ್ಟರು. ಹೇಗಾದರೂ ಮಾಡಿ ಕೃಷ್ಣನನ್ನು ಹೋಗಗೊಡಬಾರದು ಎಂದು ಸಂಕಲ್ಪಿಸಿದರು.

**ಸಂದೇಶ** : ದೈವಸಂಕಲ್ಪ ತಿಳಿದಿದ್ದರೂ ಮಾನವನು ಕೆಲವೊಮ್ಮೆ ಅದಕ್ಕೆ ವ್ಯತಿರಿಕ್ತವಾಗಿ ವರ್ತಿಸುತ್ತಾನೆ.

**ರಮ್ಯಾಧರೋಷ್ಠಸುಧಯಾ ರಚಿತಾತ್ಮವೃತ್ತೀಃ**
**ನತ್ಯುಕ್ತುಮರ್ಹಸಿ ನವಾಂಬುದನೀಲಮೂರ್ತೇ ।**
**ತ್ವತ್ಸಂಗಭಂಗಕರಣೋದ್ಯತ ಪಾಪಮಂಗ**
**ಶಕ್ನೋತಿ ಹಿ ಕ್ಷಪಯಿತುಂ ತವ ಲೋಚನಾಂತಃ ॥ ೩೫ ॥**

ರಮ್ಯ=ಚಂದ; ಅಧರ=ಕೆಳಗಿನ; ಓಷ್ಠ=ತುಟಿಯು; ಸುಧಯಾ=ರಸದಿಂದ; ರಚಿತ= ನಿರ್ಮಿತ; ಆತ್ಮ=ನಾವು; ವೃತ್ತೀಃ=ಜೀವನ; ನ=ಇಲ್ಲ; ತ್ಯಕ್ತುಂ=ಬಿಡಲು; ಅರ್ಹಸಿ=ಯೋಗ್ಯ; ನವ=ಹೊಸತು; ಅಂಬು=ನೀರು; ದ=ಕೊಡುವುದು; ನೀಲ=ನೀಲವು; ಮೂರ್ತೇ=ಶರೀರನೇ; ತ್ವತ್=ನೀನು; ಸಂಗ=ಸಂಬಂಧ; ಭಂಗ=ನಾಶ; ಕರಣ=ಮಾಡುವಿಕೆ; ಉದ್ಯತ=ತಯಾರು;

ಪಾಪಂ=ಪಾಪವನ್ನು; ಅಂಗ=ಪ್ರಿಯನೇ; ಶಕ್ನೋತಿ=ಸಮರ್ಥ; ಹಿ=ನಿಶ್ಚಯ; ಕ್ಷಪಯಿತುಂ= ನಾಶಿಸಲು; ತವ=ನಿನ್ನ; ಲೋಚನ=ಕಣ್ಣು; ಅಂತಃ=ಕೊನೆಯು.

ಕೃಷ್ಣ, ನೀನು ಬಹಳ ಸುಂದರ. ನೀರು ತುಂಬಿದ ಮೋಡದಂತೆ ನಿನ್ನ ದೇಹ ಬಲು ಆಕರ್ಷಣೀಯವಾಗಿದೆ. ನಮ್ಮನ್ನು ಬಿಟ್ಟು ಹೋಗಬೇಡ. ನಾವು ಬದುಕಿರುವುದು ಈ ಹೊರಗಿನ ಯಾವ ಆಹಾರದಿಂದಲೂ ಅಲ್ಲ. ಕೇವಲ ನಿನ್ನ ತುಟಿಯ ರಸವೆಂಬ ಅಮೃತವನ್ನು ಕುಡಿದು. ನೀನು ಹೋದರೆ ಮತ್ತೆ ಯಾರೂ ಇಲ್ಲ ನಮಗೆ ಆಹಾರವನ್ನು ಒದಗಿಸುವ ಅಧಿಕಾರಿಗಳು.

ನಾವು ಪಾಪಿಗಳು. ಆದ್ದರಿಂದ ಹೋಗುತ್ತೇನೆ ಎಂದೂ ಹೇಳಬೇಡ. ನೀನು ನಮ್ಮನ್ನು ಸದಾ ನೋಡುತ್ತಿರಲು ಯಾವ ಪಾಪಕ್ಕೆ ಧೈರ್ಯ ಇದೆ ನಾಶವಾಗದೆ ಉಳಿಯಲು. ನಾವು ಸದಾ ನಿನ್ನ ಜೊತೆಯಲ್ಲೇ ಇರುವವರು. ಇದಕ್ಕೆ ಪ್ರತಿಬಂಧಕವಾದ ಯಾವ ಪಾಪವೂ ಉಳಿಯಲು ಸಾಧ್ಯವಿಲ್ಲ. ಆದ್ದರಿಂದ ನಾವು ಪಾಪಿಗಳೆಂಬ ನೆಪವೊಡ್ಡಿ ಹೋಗಬೇಡ.

ಇನ್ನು ಕಂಸನ ಧ್ವಂಸಕ್ಕೆ ಹೋಗುವಿಯಾ? ಅದಕ್ಕಾಗಿಯೇ ಹೋಗಬೇಕಾಗಿಲ್ಲ. ನಮ್ಮ ಸಂಬಂಧಕ್ಕೆ ಅಡ್ಡಿಯಾದ ಪಾಪಿಯಾದ ಕಂಸನ ನಾಶಕ್ಕೂ ನೀನು ಅಲ್ಲಿ ತನಕ ಹೋಗಬೇಕಾಗಿಲ್ಲ. ನಿನ್ನ ಒಂದು ಕಡೆಗಣ್ಣಿನ ನೋಟಕ್ಕೆ ಇಡೀ ಬ್ರಹ್ಮಾಂಡವನ್ನೇ ಸುಡುವ ಶಕ್ತಿ ಇದೆ. ಇನ್ನು ಕ್ಷುಲ್ಲಕ ಕಂಸ ಎಲ್ಲಿ?: ನೀನು ಇಲ್ಲೇ ಇದ್ದು ಕಂಸನನ್ನು ಸಂಹರಿಸು. ಆ ಮಧುರೆಗೆ ಪೋಗಲು ಬೇಡ.

<u>**ಸಂದೇಶ**</u> : ದೇವರು ನಮ್ಮ ಆಂತರಿಕ ಪ್ರೀತಿಯನ್ನು ಬಹಳ ಪರೀಕ್ಷೆ ಮಾಡುತ್ತಾನೆ. ಯಾವ ಪರೀಕ್ಷೆಯಲ್ಲಿಯೂ ನಾವು ಸೋಲಬಾರದು.

**ಯಿಯಾಸುಂ ತ್ವಾಂ ಸಮಾಲೋಕ್ಯ ಮಮ ಪ್ರಾಣೋಽಪಿ ಯಿಯಾಸತಿ ।**
**ಯುವಯೋರವಿನಾಭಾವಂ ಅಕ್ಷೈರೀಕ್ಷಾಮಹೇ ಅಧುನಾ ॥ ೩೬ ॥**

ಯಿಯಾಸುಂ=ಹೋಗಲು ಇಚ್ಛಿಸುವ; ತ್ವಾಂ=ನಿನ್ನನ್ನು; ಸಮಾಲೋಕ್ಯ=ನೋಡಿ; ಮಮ=ನನ್ನ; ಪ್ರಾಣಃ ಅಪಿ=ಪ್ರಾಣವೂ ಕೂಡಾ; ಯಿಯಾಸತಿ=ಹೋಗಲು ಇಚ್ಛಿಸುತ್ತಿದೆ. ಯುವಯೋಃ=ನಿಮ್ಮಿಬ್ಬರ; ಅವಿನಾಭಾವಂ=ಜೊತೆ ಇರುವಿಕೆಯನ್ನು; ಅಕ್ಷೈಃ=ಕಣ್ಣುಗಳಿಂದ; ಈಕ್ಷಾಮಹೇ=ನೋಡುತ್ತೇವೆ; ಅಧುನಾ=ಈಗ.

ಕೃಷ್ಣ, ವೇದದಲ್ಲಿ ಒಂದು ನಿನ್ನ ಮಾತು ಇದೆ. ನೀನು ಸೃಷ್ಟಿಯ ಆರಂಭದಲ್ಲಿ ಹೀಗೆ ಆಲೋಚನೆ ಮಾಡಿದಿಯಂತೆ –ನೀನು ಇರುವಲ್ಲಿ ಆತನೂ ಇರಬೇಕು. ಅಥವಾ ಆತನು ಇರುವಲ್ಲಿ. ಹಾಗೆಯೇ ನೀನು ಹೊರಡುವಾಗ ಅಥವಾ ಆತನು ಹೊರಡುವಾಗ

ಹೊರಡಬೇಕು. ಅಂತಹವನನ್ನು ಸೃಷ್ಟಿಮಾಡುತ್ತೇನೆ ಎಂದು. ಆ ಮಾತನ್ನು ನಾವು ಕೇಳಿದ್ದೆವು. ಆದರೆ ಈಗ ಅನುಭವಕ್ಕೆ ಬರುತ್ತಿದೆ. ಹೇಗೆಂದರೆ ನೀನು ಹೊರಟೆ ಎಂದಾಗ ನಮ್ಮ ದೇಹದಲ್ಲಿರುವ ಪ್ರಾಣವೂ ಹೊರಡಲು ತಯಾರಾಗಿದ್ದಾನೆ. ನೀನು ಈ ತನಕ ಇಲ್ಲೇ ಇದ್ದಿ. ಆದ್ದರಿಂದ ಪ್ರಾಣನೂ ನಮ್ಮಲ್ಲೇ ಇದ್ದ. ನಿನ್ನ ಮಾತು ಸತ್ಯವಾಗುತ್ತಿದೆ. ನೀವಿಬ್ಬರು ಬಹಳ ಅನ್ಯೋನ್ಯರು ಎಂದು ತಿಳಿಯಿತು. ಒಟ್ಟಭಿಪ್ರಾಯ ನೀನು ಹೋದರೆ ನಾವು ಸಾಯುತ್ತೇವೆ ಎಂದು.

**ಸಂದೇಶ** : ದೇವರನ್ನು ನಮ್ಮಲ್ಲಿ ಉಳಿಸಿಕೊಳ್ಳಬೇಕಾದರೆ ಮೊದಲು ಮುಖ್ಯಪ್ರಾಣನನ್ನು ಆತನ ಅವತಾರರಾದ ಮಧ್ವರನ್ನು ಉಳಿಸಿಕೊಳ್ಳಬೇಕು.

**ಕಿಮು ದುರಿತಮಕಾರಿ ಯೇನ ಕಂಸಪ್ರಕಟಿತ ಕಾರ್ಮುಕಸಂಭ್ರಮೇ ಶರಾಣಾಂ ।**
**ವಿಧಿರಕೃತ ಪದಂ ವಿವೇಕಹೀನೋ ಮೃದುಲಕಲೇವರಮಸ್ಮದೀಯಮಾದೌ ॥ ೩೭ ॥**

ಕಿಮು=ಏನು; ದುರಿತಂ=ಪಾಪವು; ಅಕಾರಿ=ಮಾಡಲ್ಪಟ್ಟಿತು; ಯೇನ=ಯಾವ ಕಾರಣದಿಂದ; ಕಂಸ=ಕಂಸನು; ಪ್ರಕಟಿತ=ಘೋಷಿಸಿದ; ಕಾರ್ಮುಕ=ಧನುಸ್ಸು; ಸಂಭ್ರಮೇ= ಉತ್ಸವದಲ್ಲಿ; ಶರಾಣಾಂ=ಬಾಣಗಳಿಗೆ; ವಿಧಿಃ=ಬ್ರಹ್ಮನು; ಅಕೃತ=ಮಾಡಿದನು; ಪದಂ=ಗುರಿ; ವಿವೇಕ=ಪ್ರಜ್ಞೆ; ಹೀನಃ=ರಹಿತ; ಮೃದುಲ=ಮೆತ್ತಗಿನ; ಕಲೇವರಂ=ಶರೀರವು; ಅಸ್ಮದೀಯಂ=ನಮ್ಮ; ಆದೌ=ಮೊದಲು.

ನಮ್ಮ ಗ್ರಹಚಾರ ಸರಿ ಇಲ್ಲ. ಯಾಕೆಂದರೆ ಬಿಲ್ಲಹಬ್ಬದ ಸಂಭ್ರಮ ಕಂಸನ ಮನೆ ಯಲ್ಲಿ. ಬಿಲ್ಲಿಗೆ ಹಗ್ಗವನ್ನು ಬಿಗಿದು ಬಾಣವನ್ನು ಜೋಡಿಸಿ ಅಲ್ಲೇ ಪಕ್ಕದಲ್ಲಿದ್ದ ಗುರಿಯನ್ನು ಹೊಡೆಯಬೇಕಾದ್ದು ಸಹಜ. ಆದರೆ ಬ್ರಹ್ಮ ನಮ್ಮ ಹಣೆಯಲ್ಲಿ, 'ಈ ಹೆಮ್ಮಕ್ಕಳೇ ಮೊದಲ ಗುರಿಯಾಗಲಿ' ಎಂದು ಬರೆದಿದ್ದಾನೆ ಕಾಣುತ್ತೆ. ಬ್ರಹ್ಮನಿಗೆ ಪ್ರಜ್ಞೆ ಇಲ್ಲ. ಇಲ್ಲದಿದ್ದರೆ ಎಲ್ಲೋ ಇರುವ ಬಿಲ್ಲುಬಾಣಗಳಿಗೆ, ಏನೂ ಸಂಬಂಧ ಇಲ್ಲದ ನಾವು ಹೇಗೆ ತಾನೇ ಗುರಿಯಾದೇವು? ಕಂಸನ ಈ ಬಿಲ್ಲಹಬ್ಬದಿಂದ ನಾವು ಬಹಳವಾಗಿ ನೊಂದುಕೊಂಡಿದ್ದೇವೆ. ಇದಕ್ಕೆಲ್ಲಾ ನಮ್ಮ ಜನ್ಮಾಂತರದ ಪಾಪವೇ ಕಾರಣ ಎಂದು ಗೋಪಿಯರು ಬಹಳವಾಗಿ ತಪಿಸಿದರು. ರಾಜರ ವರ್ಣನೆಯ ಚಮತ್ಕಾರ ಬಹಳ ಸೋಜಿಗ.

**ಸಂದೇಶ** : ದೇವರಿಂದ ನಮಗೆ ವಿಯೋಗವಾಗುವುದು ಸಹಜ. ಅಂದರೆ ಸಾಯುವುದು ಅಥವಾ ದುಃಖ ಅನುಭವಿಸುವುದು ಸಹಜ. ಆಗ ದೇವರನ್ನು ಹಳಿಯಬಾರದು. ನಮ್ಮ ಪ್ರಾರಬ್ಧ ಎಂದು ತಿಳಿಯಬೇಕು.

**ಅಹೋ ವಿಧೇ ತ್ವದ್ವಚಸಾತಿತೃಪ್ತಾ**
**ಯದೂದ್ವಹಾಲಿಂಗನಲುಬ್ಧಚಿತ್ತಾಃ ।**

ತದೀಕ್ಷಣೇನಾಪಿ ಕಥಂ ವಿಹೀನಾ
ದಯಾತಿದೂರಾದ್ಯ ಕರೋಷಿ ದೀನಾಃ ॥ ೩೮ ॥

ಅಹೋ=ಆಶ್ಚರ್ಯ; ವಿಧೇ=ಬ್ರಹ್ಮನೇ; ತ್ವತ್=ನೀನು; ವಚಸಾ=ಮಾತಿನಿಂದ; ಅತಿ=ಬಹಳ; ತೃಪ್ತಾಃ=ತೃಪ್ತರಾದ; ಯದು=ಯಾದವರು; ಉದ್ವಹ=ಉತ್ತಮ; ಆಲಿಂಗನ=ಆಲಿಂಗನೆಯು; ಲುಬ್ಧ=ಆಸೆಯುಳ್ಳ; ಚಿತ್ತಾಃ=ಮನಸ್ಸುಳ್ಳ; ತತ್=ಅವನು; ಈಕ್ಷಣೇನ=ನೋಟದಿಂದ; ಅಪಿ=ಕೂಡಾ; ಕಥಂ=ಹೇಗೆ; ವಿಹೀನಾ=ರಹಿತರು; ದಯಾ=ದಯೆಯು; ಅತಿದೂರ=ದೂರನು; ಅದ್ಯ=ಈಗ; ಕರೋಷಿ=ಮಾಡುತ್ತಿ; ದೀನಾ=ದುಃಖಿತರು.

ಎಲೋ ಬ್ರಹ್ಮನೇ, ನೀನೇ ನಮ್ಮ ಹಣೆಯಲ್ಲಿ ಈ ಕೃಷ್ಣನ ಆಲಿಂಗನಾದಿಗಳಿಂದ ನೀವು ಆನಂದಿಸಿರಿ. ಇನ್ನೂ ಬೇಕು ಎಂಬ ಆಸೆ ನಿಮ್ಮಲ್ಲಿ ಸದಾ ಇರಲಿ ಎಂದು ಬರೆದಿದ್ದಿ. ಈಗ ನೀನೇ ಕೃಷ್ಣನನ್ನು ನಮ್ಮಲ್ಲಿಂದ ಕರೆದುಕೊಂಡು ಹೋಗುವ ಮೂಲಕ ನಮಗೆ ಕೃಷ್ಣನ ದರ್ಶನವೂ ಆಗದಂತೆ ಮಾಡುತ್ತಿ. ಯಾಕೆ ಹೀಗೆ ಮಾಡುತ್ತಿ? ನಾವು ಈಗ ಬಹಳ ದೈನ್ಯಾವಸ್ಥೆಯಲ್ಲಿದ್ದೇವೆ. ನೀನು ಬಹಳ ಕಠಿಣ ಹೃದಯದವನು ಎಂದು ಅಕ್ರೂರನನ್ನು ನೋಡಿ ಬ್ರಹ್ಮನನ್ನು ನಿಂದಿಸುತ್ತಾರೆ. ಇದು ಸರಿ. ಯಾಕೆಂದರೆ ಅಕ್ರೂರನಲ್ಲಿ ಬ್ರಹ್ಮನ ಆವೇಶ ಇದೆ.

**ಸಂದೇಶ** : ಜೀವನದಲ್ಲಿ ನಮಗೆ ಒಬ್ಬ ಅನುಕೂಲವನ್ನು ಇನ್ನೊಬ್ಬ ಪ್ರತಿಕೂಲವನ್ನು ಮಾಡುತ್ತಾನೆಂದು ತಿಳಿಯುತ್ತೇವೆ. ಹಾಗೆಯೇ ಆ ವ್ಯಕ್ತಿಯನ್ನು ಹೊಗಳುತ್ತೇವೆ. ಯಾ ತೆಗಳುತ್ತೇವೆ. ಯದ್ಯಪಿ ಆ ವ್ಯಕ್ತಿ ಮಾಧ್ಯಮ ಮಾತ್ರ. ಮಾಡುವ ವಿಧಿ ಬೇರೆ ಇದೆ ಎಂದು ತಿಳಿಯಬೇಕು.

ಅಯಮಪಿ ಚ ವಿರುದ್ಧನಾಮಧೇಯೋ
ನಯತಿ ವಿಲಾಪಮುಪೇಕ್ಷ್ಯ ಕಾಮಿನೀನಾಂ ।
ಪ್ರಿಯಸರಸವಿಲಾಸಮಗ್ರ್ಯವೇಷಂ
ಕಮಲದೃಶಂ ಕಮನೀಯ ಚಾರುಹಾಸಮ್ ॥ ೩೯ ॥

ಅಯಂ ಅಪಿ=ಇವನಾದರೂ; ಚ=ಕೂಡಾ; ವಿರುದ್ಧ=ವಿರುದ್ಧವಾದ; ನಾಮಧೇಯಃ=ಹೆಸರಿನವನು; ನಯತಿ=ಒಯ್ಯುತ್ತಾನೆ; ವಿಲಾಪಂ=ದುಃಖವನ್ನು; ಉಪೇಕ್ಷ್ಯ= ಕಡೆಗಣಿಸಿ; ಕಾಮಿನೀನಾಂ=ನಾರಿಯರ; ಪ್ರಿಯ=ಇಷ್ಟ; ಸರಸ=ರಸದಿಂದ ಕೂಡಿದ; ವಿಲಾಸಂ=ವಿಲಾಸವನ್ನು; ಅಗ್ರ್ಯ=ಉತ್ತಮ; ವೇಷಂ=ರೂಪವನ್ನು; ಕಮಲ=ತಾವರೆಯು; ದೃಶಂ=ಕಣ್ಣನ್ನು; ಕಮನೀಯ=ಚಂದ; ಚಾರು=ಒಳ್ಳೆದು; ಹಾಸಂ=ನಗುವನ್ನು.

ಕೃಷ್ಣನು ನಮ್ಮ ಜೊತೆ ಆಡುತ್ತಾನೆ. ಆ ಆಟವು ನಮಗೆ ಇಷ್ಟವಾದದ್ದು. ಆಟದ ಜೊತೆ ನಮ್ಮಲ್ಲಿ ಪ್ರೀತಿಯನ್ನೂ ತೋರಿಸುತ್ತಾನೆ. ಸೌಂದರ್ಯದ ನಿಧಿಯಾಗಿದ್ದಾನೆ.

ತಾವರೆಯ ದಳದಂತೆ ವಿಶಾಲವಾದ ಕಣ್ಣುಗಳು ಮಂದಹಾಸ ಬೀರಿದರೆ ಎಂತಹವರೂ ಮರುಳಾಗುತ್ತಾರೆ. ಇಂತಹ ಕೃಷ್ಣನನ್ನು ಈ ಅಕ್ರೂರನು ಕರೆದುಕೊಂಡು ಹೋಗುತ್ತಿದ್ದಾನೆ. ನಾವು ಎಷ್ಟು ಅತ್ತು ಗೋಗರೆದರೂ ನಮ್ಮನ್ನು ನಿರ್ಲಕ್ಷಿಸುತ್ತಾನೆ. ಬಹಳ ಕ್ರೂರಿ ಇದ್ದಾನೆ ಇವನು. ಈತನಿಗೆ ಯಾರು ಅಕ್ರೂರ ಎಂಬ ಹೆಸರಿಟ್ಟರೋ? ಅಕ್ರೂರ ಎಂದರೆ ಸೌಮ್ಯದವನು. ಇನ್ನೊಬ್ಬರ ದುಃಖವನ್ನು ಅರ್ಥಮಾಡಿಕೊಳ್ಳುವವನು. ಈತನು ತನ್ನ ಹೆಸರಿಗೆ ವಿರುದ್ಧವಾಗಿ ಈಗ ವರ್ತಿಸುತ್ತಿದ್ದಾನೆ.

**ಸಂದೇಶ** : ದೇಹದ ಹೆಸರಿಗಿಂತ ದೇವರ ಹೆಸರು ಮುಖ್ಯ.

**ಭೃತ್ಯೋಽಯಂ ಕಿಮುಸಂತನೋತು ಸ ಪರಂ ಪ್ರತ್ಯರ್ಥಿಭೂತಃ ಸತಾಂ**
**ಕಂಸಸ್ತದ್ಧನುರುತ್ಸವೋಸ್ತು ನಿಹತೋ ಭಗ್ನಂ ಚ ಭೂಯಾದ್ಧನುಃ ॥**
**ಯೋಽಸ್ಮತ್ಪ್ರಾಣಸಮಂ ವಿಯೋಜಯತಿ ಹಾಸ್ಮೇರಾನನಂ ಶ್ರೀಪತಿಂ**
**ತಂ ಪ್ರಾಣೇನ ವಿಯೋಜಯತ್ವತಿಮದಂ ದೇವೋಽಸ್ಮದೀಯೋ ವಿಭುಃ ॥ ೪೦ ॥**

ಭೃತ್ಯಃ=ಸೇವಕನು; ಅಯಂ=ಇವನು; ಕಿಮು=ಏನನ್ನು; ಸಂತನೋತು=ಮಾಡಲಿ; ಸಃ=ಅವನು; ಪರಂ=ಮತ್ತು; ಪ್ರತ್ಯರ್ಥಿಭೂತಃ=ಶತ್ರುವು; ಸತಾಂ=ಸಜ್ಜನರಿಗೆ; ಕಂಸಃ=ಕಂಸನು; ತತ್=ಆ; ಧನುಃ=ಬಿಲ್ಲು; ಉತ್ಸವ=ಜಾತ್ರೆಯು; ಅಸ್ತು=ಆಗಲಿ; ನಿಹತಃ=ನಷ್ಟವು; ಭಗ್ನಂ=ತುಂಡು; ಚ=ಕೂಡಾ; ಭೂಯಾತ್=ಆಗಲಿ; ಧನುಃ=ಬಿಲ್ಲು; ಯಃ=ಯಾರು; ಅಸ್ಮತ್=ನಾವು; ಪ್ರಾಣ=ಜೀವವು; ಸಮಂ=ಸದೃಶ; ವಿಯೋಜಯತಿ=ದೂರಮಾಡುತ್ತಾನೆ; ಹಾ=ಕಷ್ಟವು; ಸ್ಮೇರ=ನಗು; ಆನನಂ=ಮುಖವು; ಶ್ರೀಪತಿಂ=ಲಕ್ಷ್ಮೀಪತಿಯನ್ನು; ತಂ=ಅವನನ್ನು; ಪ್ರಾಣೇನ=ಜೀವನಿಂದ; ವಿಯೋಜಯತು=ಬೇರ್ಪಡಿಸಲಿ; ಅತಿ=ಬಹಳ; ಮದಂ=ಅಹಂಕಾರವನ್ನು; ದೇವಃ=ದೇವನು; ಅಸ್ಮದೀಯಃ=ನಮ್ಮವನು; ವಿಭುಃ=ಒಡೆಯನು.

ಈ ಅಕ್ರೂರನನ್ನು ಜರಿದು ಏನೂ ಉಪಯೋಗವಿಲ್ಲ. ಈತನು ಕಂಸನ ಸೇವಕನು. ಯಜಮಾನ ಹೇಳಿದ ಕೆಲಸವನ್ನು ಮಾಡುವವನು. ಈತನದ್ದೇನೂ ತಪ್ಪಿಲ್ಲ. ಈತನು, ಅಕ್ರೂರನು ಅಂದರೆ ಸಾತ್ವಿಕನು. ವೈಷ್ಣವನು. ಈತನ ಮೇಲೆ ಸಿಟ್ಟಾಗಬಾರದು. ನಮಗೆಲ್ಲಾ ಶತ್ರುವಾದವನು ಆ ಕಂಸನು. ಆತನ ಬಿಲ್ಲಹಬ್ಬಕ್ಕೆ ಬಹಳ ವಿಘ್ನಗಳು ಬರಲಿ. ಬಿಲ್ಲಹಬ್ಬದ ಪ್ರಧಾನ ಅಂಗವಾದ ಬಿಲ್ಲು ಮುರಿದು ಬೀಳಲಿ. ಕೃಷ್ಣನು ನಮಗೆ ಪ್ರಾಣದಂತೆ ಇರುವವನು. ಅಂತಹ ಪ್ರಾಣವನ್ನು ಕಂಸನು ಈ ದೇಹದಿಂದ ಸೆಳೆಯುತ್ತಿದ್ದಾನೆ. ಇದು ಕಂಸನಿಗೇ ತಿರುಗಿ ಬೀಳಲಿ. ನಮ್ಮ ಸ್ವಾಮಿಯಾದ ಕೃಷ್ಣನು ಕಂಸನ ದೇಹದಿಂದ ಪ್ರಾಣವನ್ನು ಬೇರ್ಪಡಿಸಲಿ. ಅಂದರೆ ನಮ್ಮನ್ನು ಕೊಲ್ಲಬಯಸಿದ ಕಂಸನು ಸಾಯಲಿ ಎಂದು ಶಪಿಸಿದರು.

**ಸಂದೇಶ** : ಭಾಗವತರನ್ನು ನೋಯಿಸಬಾರದು. ಅವರು ನೊಂದು ಶಪಿಸಿದರೆ ಹಾಗೆಯೇ ಆಗುತ್ತದೆ.

**ಜಿಗಮಿಷಸಿ ಮುರಾರೇ ರಾಜಧಾನೀಂ ಯದೀತಃ**
**ಶ್ರುತಿತತಿಜಿತ ಯಾಹಿ ಶ್ರೀಶುಭಾ ತತ್ರ ತೇಽಸ್ತು ।**
**ಸುಖದ ತದುಪಸರ್ಗಂ ಸೌಮ್ಯ ಸಂದೇಹಿ ಶೀಘ್ರಂ**
**ಘಟಯ ಘಟಕ ನೋ ಚೇತ್ ನಸ್ತವೈವೋಪಸರ್ಗಮ್ ॥ ೪೧ ॥**

ಜಿಗಮಿಷಸಿ=ಹೋಗಲು ಇಚ್ಛಿಸುತ್ತಿ; ಮುರಾರೇ=ಕೃಷ್ಣನೇ; ರಾಜಧಾನೀಂ= ಮಥುರೆಯನ್ನು; ಯದಿ=ಒಂದುವೇಳೆ; ಇತಃ=ಇಲ್ಲಿಂದ; ಶ್ರುತಿ=ವೇದಗಳು; ತತಿ= ಸಮೂಹವು; ಜಿತ=ಗೆದ್ದ; ಯಾಹಿ=ಹೋಗು; ಶ್ರೀಃ=ಸಂಪತ್ತು; ಶುಭಾ=ಒಳ್ಳೆಯ; ತತ್ರ=ಅಲ್ಲಿ; ತೇ=ನಿನಗೆ; ಅಸ್ತು=ಆಗಲಿ; ಸುಖ=ಆನಂದ; ದ=ಕೊಡುವುದು; ತತ್=ಆ; ಉಪಸರ್ಗಂ= ಉಪಸರ್ಗವನ್ನು; ಸೌಮ್ಯ=ಶಾಂತನೆ; ಸಂದೇಹಿ=ಕೊಡು; ಶೀಘ್ರಂ=ಕೂಡಲೇ; ಘಟಯ= ಸೇರಿಸು; ಘಟಕ=ಕೂಡಿಸುವವನೇ; ನೋಚೇತ್=ಇಲ್ಲದಿದ್ದರೆ; ನಃ=ನಮಗೆ; ತವ=ನಿನ್ನ; ಉಪ=ಸಮೀಪ; ಸರ್ಗಂ=ಜನ್ಮವನ್ನು.

ಕೃಷ್ಣ, ಮಥುರೆಗೆ ಹೋಗಲು ಇಚ್ಛಿಸಿದ್ದಿಯಾ? ಹೋಗು, ನಿನಗೆ ಅಲ್ಲಿ ಮಂಗಳ ವಾಗಲಿ. ಹೋಗಬೇಡ ಎಂದು ತಡೆಯುವವರು ನಾವು ಯಾರು. ನೀನು ವೇದಗಳನ್ನು ಮೀರಿ ನಿಂತವ. ವೇದದ ಯಾವ ವಿಧಿನಿಷೇಧಗಳಿಗೂ ಒಳಗಾಗದವ. ಹೀಗಿರುವಾಗ ಕ್ಷುಲ್ಲಕರಾದ ನಮ್ಮ ಮಾತೆಲ್ಲಿ? ನಿನ್ನನ್ನು ನಂಬಿದವರು ಚೆನ್ನಾಗಿ ಇರಬೇಕೆಂದು ನಿನ್ನ ಆಸೆ. ನಾವು ಇಲ್ಲಿ ಚೆನ್ನಾಗಿಯೂ ಇರಬೇಕು. ನೀನು ಅಲ್ಲಿಗೆ ಹೋಗಲೂ ಬೇಕು. ಇದಕ್ಕೆ ಒಂದೇ ಉಪಾಯ. ಹೋಗು ಎಂದು ಅರ್ಥವನ್ನು ಕೊಡುವ 'ಯಾಹಿ' ಎಂಬ ಪದದ ಮೊದಲು 'ಆ' ಎಂಬ ಉಪಸರ್ಗವನ್ನು ಜೋಡಿಸು. ಆಗ 'ಆಯಾಹಿ' ಎಂದಾಗುತ್ತದೆ. ಅಂದರೆ ಅಲ್ಲಿ ದುಷ್ಟನಿಗ್ರಹ ಮಾಡಿ ತಿರುಗಿ ಬಾ ಎಂದರ್ಥ. ತಿರುಗಿ ಬರಲು ನಿನಗೆ ಇಷ್ಟವಿಲ್ಲದಿದ್ದರೆ ನಮ್ಮನ್ನು ನಿನ್ನ ಉಪಸರ್ಗವುಳ್ಳವರನ್ನಾಗಿ ಮಾಡು.

ಧಾತುವಿನ ಮೊದಲು ಧಾತುವಿನ ಜೊತೆಗೆ ಸೇರಿಸುವ ಕೆಲವು ಪದಗಳಿಗೆ ಉಪಸರ್ಗಗಳು ಎಂದು ಹೆಸರಿದೆ. ಅವುಗಳನ್ನು ಸೇರಿಸಿದಾಗ ಧಾತುವಿಗೆ ಬೇರೆಯೇ ಅರ್ಥ ಬರುತ್ತದೆ. ಉಪಸರ್ಗ ಎಂಬ ಪದಕ್ಕೆ ಉಪ ಸಮೀಪದಲ್ಲಿ ಸರ್ಗ=ಉತ್ಪತ್ತಿ ಎಂಬ ಅರ್ಥವೂ ಇದೆ. ನೀನು ತಿರುಗಿ ಬಾರದಿದ್ದರೆ ನಾವು ಇಲ್ಲಿ ಸಾಯುತ್ತೇವೆ. ಮುಂದಿನ ಜನ್ಮವನ್ನು ನಿನ್ನ ಬಳಿಯಲ್ಲಿ ಮಧುರೆಯಲ್ಲಿ ಕೊಡು ಎಂದು ಅಭಿಪ್ರಾಯ. ಇದು ನಿನ್ನಿಂದ ಮಾತ್ರ ಸಾಧ್ಯ. ಯಾಕೆಂದರೆ ನೀನು ಅಘಟಿತಘಟನಾಶಕ್ತಿ ಉಳ್ಳವನು.

**ಸಂದೇಶ** : ದೇವರು ಎಲ್ಲಿ ಅವತರಿಸುತ್ತಾನೋ ಅಲ್ಲೇ ನಮ್ಮ ಜನ್ಮವೂ ಆಗುವಂತಿರಬೇಕು. ಅದು ಯಾವ ಯೋನಿಯಾದರೂ ಅಡ್ಡಿಯಿಲ್ಲ.

ಪ್ರಿಯಂ ನಿನೀಷೋಃ ನನು ಯಸ್ಯ ಧಾತಾ
ಪಿಪರ್ತಿ ಕಾಂಕ್ಷಾಂ ನಿಜಸೌಖ್ಯದಾತಾ ।
ಸ ಏಷ ಗರ್ಭೀಕೃತಪದ್ಮಜನ್ಮಾ
ಜಿಘೃಕ್ಷತಿ ಶ್ರೀಶಪದಾಂಬುಜನ್ಮ ॥ ೪೨ ॥

ಪ್ರಿಯಂ=ಪ್ರಿಯನನ್ನು; ನಿನೀಷೋಃ=ಒಯ್ಯಲು ಇಚ್ಛಿಸುವ; ಯಸ್ಯ=ಯಾರಿಗೆ; ನಿಜಸೌಖ್ಯದಾತಾ=ತನ್ನವರಿಗೆ ನೆಮ್ಮದಿಯನ್ನು ಕೊಡುವ; ಧಾತಾ=ಬ್ರಹ್ಮನು; ಕಾಂಕ್ಷಾಂ= ಆಸೆಯನ್ನು; ಪಿಪರ್ತಿ ನನು=ಪೂರ್ಣ ಮಾಡುತ್ತಾನೆ; ಗರ್ಭೀಕೃತ=ಒಳಗೆ ಇಟ್ಟಿರುವ; ಪದ್ಮಜನ್ಮಾ=ಬ್ರಹ್ಮನುಳ್ಳ; ಸಃ=ಅಂತಹ; ಏಷ=ಈ ಅಕ್ರೂರನು; ಶ್ರೀಶ=ಕೃಷ್ಣನ; ಪದ=ಚರಣವೆಂಬ; ಅಂಬುಜನ್ಮ=ಕಮಲವನ್ನು; ಜಿಘೃಕ್ಷತಿ=ಸ್ವೀಕರಿಸಲು ಇಚ್ಛಿಸುತ್ತಾನೆ.

ನಮ್ಮ ಆಸೆಗಳನ್ನು ಪೂರ್ಣ–ಅಪೂರ್ಣ ಮಾಡುವವನು ಬ್ರಹ್ಮನು. ಆದ್ದರಿಂದಲೇ ನಾವು 'ವಿಧಿಬರಹ, ಬ್ರಹ್ಮಬರಹ, ಹಣೆಬರಹ' ಎಂದೆಲ್ಲಾ ಹೇಳುತ್ತೇವೆ. ಅಕ್ರೂರನೇ ಈಗ ಕೃಷ್ಣನನ್ನು ಕರಕೊಂಡು ಹೋಗುವ ಆಸೆಯಿಂದ ಬಂದಿದ್ದಾನೆ. ಇವನ ಆಸೆಯನ್ನು ಬ್ರಹ್ಮನು ಪೂರ್ಣ ಮಾಡುತ್ತಾನೆ. ಯಾಕೆಂದರೆ ಬ್ರಹ್ಮನು ತನ್ನವರ ಆಸೆಯನ್ನು ಎಂದೂ ಹುಸಿಗೊಳಿಸುವುದಿಲ್ಲ. ಈ ಅಕ್ರೂರನು ಬ್ರಹ್ಮನಿಗೆ ತನ್ನಲ್ಲಿ ಆಶ್ರಯ ಕೊಟ್ಟಿದ್ದಾನೆ (ಬ್ರಹ್ಮನ ಆವೇಶ ಅಕ್ರೂರನಲ್ಲಿದೆ). ಆದ್ದರಿಂದ ಬ್ರಹ್ಮನು ಇವನನ್ನು ತನ್ನವನನ್ನಾಗಿ ಮಾಡಿಕೊಂಡಿದ್ದಾನೆ. ಬ್ರಹ್ಮನ ಮನೆ ಕಮಲ. ಕೃಷ್ಣನ ಚರಣವು ಕಮಲ. ಆದ್ದರಿಂದ ಅಕ್ರೂರನ ಮೂಲಕ ಬ್ರಹ್ಮನು ಕೃಷ್ಣನ ಚರಣಕಮಲವನ್ನು ಹಿಡಿದು ಒಯ್ಯುವುದು ನಿಶ್ಚಿತ.

ಇತಿ ವಿರಹಜಭೀತ್ಯಾ ವೇಪಮಾನಾಃ ಕೃಶಾಂಗೀಃ
ಗಲಿತ ವಲಯ ಹಾರಾಶ್ಚಿತ್ರ ಲೇಖ್ಯಾನುಸಾರಾಃ ।
ಮುರಭಿದಮೃತಕಲ್ಪೈಃ ಪ್ರೀಣಯನ್ಪ್ರೇಮ ವಾಕ್ಯೈಃ
ಸಕರುಣಮಸಕೃತ್ತಾಃ ವೀಕ್ಷಮಾಣಃ ಪ್ರತಸ್ಥೇ ॥ ೪೩ ॥

ಇತಿ=ಈ ರೀತಿ; ವಿರಹ=ಅಗಲುವಿಕೆಯು; ಜ=ಉಂಟಾದ; ಭೀತ್ಯಾ=ಭಯದಿಂದ; ವೇಪಮಾನಾಃ=ನಡುಗುವ; ಕೃಶ=ಕ್ಷೀಣ; ಅಂಗೀಃ=ಶರೀರವು; ಗಲಿತ=ಉದುರಿದ; ವಲಯ=ಬಳೆ; ಹಾರಾ=ಮಾಲೆಗಳು; ಚಿತ್ರ=ಚಿತ್ರವು; ಲೇಖ್ಯ=ಬರವಣಿಗೆ; ಅನುಸಾರಾಃ= ಅನುಸರಣೆ; ಮುರ=ಮುರನು; ಭಿತ್=ಸೀಳುವುದು; ಅಮೃತ ಕಲ್ಪೈಃ=ಅಮೃತದಂತೆ; ಪ್ರೀಣಯನ್=ತೃಪ್ತಿಪಡಿಸುವುದು; ಪ್ರೇಮ=ಪ್ರೀತಿ; ವಾಕ್ಯೈಃ=ಮಾತುಗಳಿಂದ; ಸಕರುಣಂ=

ದಯೆಯಿಂದ ಕೂಡಿ; ಅಸಕೃತ್=ಪುನಃ ಪುನಃ; ತಾಃ=ಅವರನ್ನು; ವೀಕ್ಷಮಾಣಃ= ನೋಡುವುದು; ಪ್ರತಸ್ಥೇ=ಹೊರಟನು.

ಕೃಷ್ಣನು ಹೊರಡುವುದು ನಿಶ್ಚಿತ ಎಂದು ಈ ಗೋಪಿಯರಿಗೆ ಅರಿವಾಯಿತು. ಈತನ ವಿರಹ ಆಗುತ್ತಲ್ಲಾ ಎಂದು ಭಯವಾಯಿತು. ದೇಹದಲ್ಲಿ ನಡುಕ ಉಂಟಾಯಿತು. ತಡೆಯಲಾರದ ದುಃಖ ಉಂಟಾಯಿತು. ದುಃಖದ ಪರಿಣಾಮ ಕ್ಷೀಣಿಸುವುದು. ಅದು ಈ ನಾರಿಯರ ದೇಹದಲ್ಲಿ ಈಗಲೇ ಕಾಣಲು ಆರಂಭಿಸಿತು. ಬಳೆಗಳು, ಕೊರಳ ಹಾರಗಳು ಉದುರಲು ಆರಂಭಿಸಿದವು. ಸ್ತಬ್ಧರಾಗಿ ನಿಂತರು. ನಾರಿಯೋ ನಾರಿಯರ ಪ್ರತಿಮೆಗಳೋ ಎಂದು ಸಂಶಯ ಬರುವಂತೆ ನಿಂತಿದ್ದರು. ಇವರನ್ನು ಕೃಷ್ಣನು ತನ್ನ ಇಂಪಾದ ಮಾತುಗಳಿಂದ ಸಮಾಧಾನ ಮಾಡಿದನು. ಈ ಮಾತುಗಳು ಸಾಯುವ ವ್ಯಕ್ತಿಗೆ ಅಮೃತ ಸಿಕ್ಕಿದಂತೆ ಕೆಲಸ ಮಾಡತಕ್ಕವುಗಳು. ಇಂತಹ ಮಾತುಗಳನ್ನು ಆಡುತ್ತಾ ಪ್ರೀತಿಯಿಂದ ನೋಡುತ್ತಾ ಕೃಷ್ಣನು ಮಧುರೆಯ ಕಡೆಗೆ ಹೊರಟನು.

**ಸಂದೇಶ** : ಬಂಧುಗಳು ಹಾಗೂ ಕರ್ತವ್ಯ ಎರಡು ಎದುರಾದಾಗ ಕರ್ತವ್ಯ ಮುಖ್ಯ ಎಂಬುದನ್ನು ಕೃಷ್ಣನು ತೋರಿಸಿದನು.

**ಪಾದಸ್ಪರ್ಶಕರಗ್ರಹಪ್ರಿಯತಮಾಂಗಾಶ್ಲೇಷಕೇಶಗ್ರಹ**
**ಪ್ರೇಕ್ಷಾಧಃ ಕರಣೋಪರಿಸ್ಥಿತಿಮಿಥೋಮುಷ್ಟ್ಯಾದಿ ಜುಷ್ಟೇ ರತೇ ।**
**ಗೋಪೀನಾಂ ಕುಚಕುಂಭಮರ್ದನಕೃತಾ ಮಲ್ಲೇಂದ್ರವಿದ್ಯಾರ್ಜಿತಾ**
**ಯೇನೇಭಾರ್ದನ ವೈಖರೀ ಚ ಸ ಕಥಂ ತಾಸ್ತ್ಯಕ್ತುಮೀಷ್ಟೇ ಪ್ರಭುಃ ॥ ೪೪ ॥**

ಪಾದ=ಕಾಲು; ಸ್ಪರ್ಶ=ಮುಟ್ಟುವುದು; ಕರ=ಕೈಯು; ಗ್ರಹ=ಹಿಡಿಯುವುದು; ಪ್ರಿಯತಮ=ಬಹಳ ಪ್ರಿಯ; ಅಂಗ=ಭಾಗ; ಆಶ್ಲೇಷ=ಆಲಿಂಗನ; ಕೇಶ=ಕೂದಲು; ಗ್ರಹ=ಹಿಡಿಯುವುದು; ಪ್ರೇಕ್ಷಾ=ನೋಟ; ಅಧಃಕರಣ=ಕೆಳಗೆ ಮಾಡುವುದು; ಉಪರಿ=ಮೇಲೆ; ಸ್ಥಿತಿ=ಇರುವುದು; ಮಿಥಃ=ಪರಸ್ಪರವಾಗಿ; ಮುಷ್ಟಿ=ಮುಷ್ಟಿಯು; ಆದಿ=ಮೊದಲು; ಜುಷ್ಟೇ=ಕೂಡಿದ; ರತೇ=ಕ್ರೀಡೆಯಲ್ಲಿ; ಗೋಪೀನಾಂ=ಗೋಪಿಯರ; ಕುಚ=ಸ್ತನವು; ಕುಂಭ=ಕುಂಭಸ್ಥಳವು; ಮರ್ದನ=ಮರ್ದನವು; ಕೃತಾ=ಮಾಡುವ; ಮಲ್ಲ=ಮಲ್ಲರು; ಇಂದ್ರ=ಇಂದ್ರನು; ವಿದ್ಯಾ=ವಿದ್ಯೆಯು. ಆರ್ಜಿತಾ=ಸಂಪಾದಿತ; ಯೇನ=ಯಾರಿಂದ; ಇಭ=ಆನೆಯು; ಅರ್ದನ=ನಾಶವು; ವೈಖರೀ=ಕ್ರಮವು; ಚ=ಕೂಡಾ; ಸಃ=ಅವನು; ಕಥಂ= ಹೇಗೆ? ತಾಃ=ಅವರನ್ನು; ತ್ಯಕ್ತುಂ=ಬಿಡಲು; ಈಷ್ಟೇ=ಸಮರ್ಥನು; ಪ್ರಭುಃ= ಒಡೆಯನು.

ಕೃಷ್ಣನು ಮಥುರೆಯಲ್ಲಿ ಮಲ್ಲರ ಜೊತೆ ಕಾದಾಡುವ ಪ್ರಸಂಗ ಇದೆ. ಆಯುಧದ ಕ್ರಮಗಳನ್ನು ಕೃಷ್ಣನು ಈ ಕಾಡಲ್ಲಿ ಗೋಪಿಯರಿಂದ ಕಲಿತಿದ್ದನು. ಹೇಗೆಂದರೆ ಕೃಷ್ಣನು ಗೋಪಿಯರ ಜೊತೆ ಕ್ರೀಡಿಸುತ್ತಿದ್ದನು. ಕ್ರೀಡೆಯಲ್ಲಿ ಯುದ್ಧದ ಕ್ರಮಗಳೆಲ್ಲಾ ಇವೆ.

ಶತ್ರುವನ್ನು ನೆಲಕ್ಕೆ ಬಡಿಯಲು ಆತನ ಕಾಲನ್ನು ಹಿಡಿಯಬೇಕು. ಆತನ ಹೊಡೆತದಿಂದ ತಪ್ಪಿಸಲು ಆತನ ಕೈಯನ್ನು ಹಿಡಿಯುವುದಿದೆ. ದೇಹವನ್ನು ಗಟ್ಟಿಯಾಗಿ ಹಿಡಿಯುವುದು ಬಗ್ಗಿಸಲು ತಲೆಕೂದಲನ್ನು ಹಿಡಿಯುವುದು, ದುರುಗುಟ್ಟಿ ನೋಡುವುದು, ಕೆಳಗೆ ಬೀಳಿಸಿ ಆತನ ಮೇಲೆ ಇರುವುದು ಹಾಗೂ ಮುಷ್ಟಿಗಳಿಂದ ಹೊಡೆತ –ಇವೆಲ್ಲಾ ಕ್ರೀಡೆಯಲ್ಲೂ ಇವೆ. ಆಕೆಯನ್ನು ಒಪ್ಪಿಸುವ ಸಲುವಾಗಿ ಕಾಲುಹಿಡಿಯುವುದು. ದುರುಗುಟ್ಟಿ ನೋಡುವಿಕೆ ಇಲ್ಲದಿದ್ದರೂ ನೋಡುವಿಕೆ ಪರಸ್ಪರ ಇದೆ. ತಮಾಷೆಗಾಗಿ ಮುಷ್ಟಾಮುಷ್ಟಿಯೂ ನಡೆಯುತ್ತದೆ. ಕೆಲವೊಮ್ಮೆ ಆನೆಗಳ ಜೊತೆಯೂ ಕಾದಾಟ ಇರುತ್ತದೆ. ಆಗ ಅವುಗಳ ಕುಂಭಸ್ಥಳವನ್ನು ಮರ್ದಿಸಬೇಕು. ಆ ಪಾಠವನ್ನು ಗೋಪಿಯರ ಕುಂಭಗಳಂತಿರುವ ಕುಚಗಳ ಮರ್ದನದಿಂದ ಕಲಿತನು. ಇಂತಹ ಗುರುಗಳ ಅಗಲುವಿಕೆಯನ್ನು ಕೃಷ್ಣನು ಹೇಗೆ ತಾನೆ ಸಹಿಸಿಯಾನು? ಕ್ರೀಡೆಯನ್ನು ರಾಜರು ಮಲ್ಲಯುದ್ಧಕ್ಕೆ ಯಾಕೆ ಹೋಲಿಸಿದರು? ಉತ್ತರ –ಮಲ್ಲಯುದ್ಧದಲ್ಲಿ ಯಾವ ಪ್ರಕಾರವನ್ನು ತೋರಿಸುವಾಗಲೂ ಮಾನಸಿಕವಾಗಿ ಕಾಮದ ಉತ್ಪತ್ತಿಯಾಗಲೀ, ಸಂತತಿಗೆ ಕಾರಣವಾದ ದೇಹದ ಧಾತುವಿನ ಪಾತವಾಗಲೀ ಆಗುವುದಿಲ್ಲ. ಅದೇ ರೀತಿ ಈ ಗೋಪಿಯರ ಜೊತೆ ಕ್ರೀಡೆಯ ಸಮಯದಲ್ಲಿಯೂ ಆಗುವುದಿಲ್ಲ ಎಂದು ತಿಳಿಸಲು ಕೃಷ್ಣನು ಈ ಕಾಡಲ್ಲಿ ಇರುವಷ್ಟು ಕಾಲ ಆತನ ಸಂಕಲ್ಪಕ್ಕೆ ಅನುಗುಣವಾಗಿ ಸೇವಿಸಿದ ಗೋಪಿಯರನ್ನು ದಯಾಪೂರ್ಣ ದೃಷ್ಟಿಯಿಂದ ನೋಡಿದನು.

<u>**ಸಂದೇಶ**</u> : ಸಹಜ ಭಕ್ತನು ದೇವರ ವಿಷಯದಲ್ಲಿ ಏನು ಮಾಡಿದರೂ ದೇವರು ಅದನ್ನು ಒಳ್ಳೆಯದರಲ್ಲಿ ಪರ್ಯವಸಾನ ಮಾಡುತ್ತಾನೆ.

**ಸ ವಲ್ಲವೀನಾಂ ಪ್ರಣಯಾಖ್ಯದಾಮ್ನಾ**
**ನಿಬಧ್ಯಮಾನೋಪಿ ರಿಪೂನ್ ಜಿಘಾಂಸುಃ ।**
**ಜಗಾಮ ಶೌರಿರ್ನವಿಜೇತು ಕಾಮಃ**
**ನಿವಾರ್ಯಮಾಣೋಪಿ ನಿವರ್ತತೇ ಸ್ಮ ॥ ೪೫ ॥**

ಸಃ=ಅವನು; ವಲ್ಲವೀನಾಂ=ನಾರಿಯರ; ಪ್ರಣಯ=ಪ್ರೀತಿ; ಆಖ್ಯ=ಹೆಸರು; ದಾಮ್ನಾ= ಹಗ್ಗದಿಂದ; ನಿಬಧ್ಯಮಾನಃ=ಕಟ್ಟಲ್ಪಟ್ಟ; ಅಪಿ=ಕೂಡ; ರಿಪೂನ್=ಶತ್ರುಗಳನ್ನು; ಜಿಘಾಂಸುಃ= ಕೊಲ್ಲುವ ಇಚ್ಛೆವುಳ್ಳವನು; ಜಗಾಮ=ಹೊರಟನು; ಶೌರಿಃ=ಕೃಷ್ಣನು; ನ=ಇಲ್ಲ; ವಿಜೇತು= ಗೆಲ್ಲುವ; ಕಾಮಃ=ಇಚ್ಛೆಯು; ನಿವಾರ್ಯಮಾಣಃ=ತಡೆಯಲ್ಪಡು; ಅಪಿ=ಕೂಡಾ; ನಿವರ್ತತೇ=ಹಿಂದಿರುಗುವುದು; ಸ್ಮ=ಪ್ರಸಿದ್ಧ.

ಈ ನಾರಿಯರು ಪ್ರೀತಿ ಎಂಬ ಹಗ್ಗದಿಂದ ಕೃಷ್ಣನನ್ನು ಚೆನ್ನಾಗಿ ಕಟ್ಟಿದ್ದಾರೆ. ಆದರೂ ಕೃಷ್ಣನು ಹೊರಟನು. ಯಾಕೆಂದರೆ ಕ್ಷತ್ರಿಯರಿಗೆ ಶತ್ರುಗಳನ್ನು ನಾಶಮಾಡುವುದು ಮೊದಲಿನ ಕರ್ತವ್ಯ. ಸಂಸಾರ ಅನಂತರದ್ದು. ಈ ಕ್ರಮವು ಲೋಕದಲ್ಲಿಯೂ ಇದೆ.

ಸೈನ್ಯದಲ್ಲಿರುವ ನಿಜವಾದ ದೇಶಪ್ರೇಮಿಗಳು ಯುದ್ಧಪ್ರಸಂಗ ಒದಗಿದಾಗ ತಮ್ಮ ಮನೆಯ ಯಾವ ಕಾರ್ಯಕ್ರಮವನ್ನೂ ಲೆಕ್ಕಿಸುವುದಿಲ್ಲ.

**ಸಂದೇಶ** : ಸಂಸಾರಕ್ಕಿಂತ ಸಂಸ್ಕೃತಿ ಹೆಚ್ಚಿನದು.

ರಥೇನ ದೂರಂ ರಮಣಂ ವ್ರಜಂತಂ
ವ್ರಜಸ್ತ್ರಿಯಸ್ತಂ ಪರಿತೋಽನು ಜಗ್ಮುಃ ।
ದೃಗಶ್ವಭಾಜಾ ದೃಢಭಕ್ತಿದಾಮ್ನಾ
ಮನೋರಥೇನಾಮಲಬುದ್ಧಿಯನ್ತ್ರಾ ॥ ೪೬ ॥

ರಥೇನ=ರಥದಿಂದ; ದೂರಂ=ದೂರವು; ರಮಣಂ=ಕೃಷ್ಣನನ್ನು; ವ್ರಜಂತಂ= ಹೋಗುವ; ವ್ರಜ=ಗೋಕುಲವು; ಸ್ತ್ರಿಯಃ=ನಾರಿಯರು; ತಂ=ಅವನನ್ನು; ಪರಿತಃ=ಸುತ್ತಲೂ; ಅನುಜಗ್ಮುಃ=ಅನುಸರಿಸಿದರು; ದೃಕ್=ಕಣ್ಣು; ಅಶ್ವ=ಕುದುರೆಯು; ಭಾಜಾ=ಕೂಡಿದ; ದೃಢ=ಗಟ್ಟಿ; ಭಕ್ತಿ=ಭಕ್ತಿಯು; ದಾಮ್ನಾ=ಹಗ್ಗದಿಂದ; ಮನಃ=ಮನಸ್ಸು; ರಥೇನ=ರಥದಿಂದ; ಅಮಲ=ಸ್ವಚ್ಛ; ಬುದ್ಧಿ=ಬುದ್ಧಿಯು; ಯನ್ತ್ರಾ=ಸಾರಥಿಯಿಂದ.

ಬಹಳ ದೂರದ ಮಧುರೆಗೆ ಕೃಷ್ಣನು ಹೊರಟಿದ್ದಾನೆ. ಆದ್ದರಿಂದ ಸಾರಥಿ, ಕುದುರೆಗಳಿಂದ ಕೂಡಿದ ರಥವನ್ನು ಹತ್ತಿದ್ದಾನೆ. ಇಂತಹ ಕೃಷ್ಣನ ಜೊತೆ ಹೋಗಬೇಕಾದರೆ ನಾವೂ ರಥವನ್ನು ಹತ್ತಬೇಕು ಎಂದು ಭಾವಿಸಿದ ನಾರಿಯರು ತಮ್ಮ ಸ್ವಂತ ರಥವನ್ನು ಏರಿದರು. ಆ ರಥದ ಹೆಸರೇ ಮನೋರಥ ಎಂದು. ಕಣ್ಣುಗಳೇ ಕುದುರೆಗಳು. ದೃಢವಾದ ಭಕ್ತಿಯೇ ಹಗ್ಗ. ನಿರ್ಮಲವಾದ ಬುದ್ಧಿಯು ಸಾರಥಿಯು. ಕುದುರೆಗಳು ರಥವನ್ನು ಒಂದು ಊರಿನಿಂದ ಇನ್ನೊಂದು ಊರಿಗೆ ಒಯ್ಯುತ್ತವೆ. ಹಾಗೆಯೇ ಈ ಕಣ್ಣುಗಳು ಮೊದಲು ವಿಷಯಗಳ ಕಡೆಗೆ ಇದ್ದ ಮನಸ್ಸನ್ನು ದೇವರ ಕಡೆಗೆ ಎಳೆದವು. ಹಗ್ಗ ಇದ್ದರೆ ಎಳೆಯಲು ಬರುತ್ತದೆ. ಇಲ್ಲಿ ಪ್ರೀತಿ ಇದ್ದದ್ದಕ್ಕೆ ಮನಸ್ಸು ದೇವರ ಕಡೆಗೆ ಬಂತು. ಊರುಗಳ ಒಳಿತು ಕೆಡುಕುಗಳನ್ನು ವಿಮರ್ಶಿಸಿ ಒಳ್ಳೆಯ ಊರಿಗೆ ಒಯ್ಯಬೇಕಾದರೆ ಸಾರಥಿಯ ಪಾತ್ರ ಬಹಳ ಮುಖ್ಯ. ಸಾರಥಿಯ ಪಾತ್ರವನ್ನು ಒಳ್ಳೆಯ ಬುದ್ಧಿಯು ನಿರ್ವಹಿಸುತ್ತದೆ. ಬುದ್ಧಿ ಚೆನ್ನಾಗಿದ್ದರೆ ಮನಸ್ಸು ದೇವರ ಕಡೆ ಸಹಜವಾಗಿ ಹೋಗುತ್ತದೆ. ಈ ನಾರಿಯರು ಕಣ್ಣಿಗೆ ಕಾಣಿಸುವಷ್ಟು ದೂರ ಕೃಷ್ಣನನ್ನು ನೋಡಿದರು. ಅನಂತರ ಭಕ್ತಿಯಿಂದ ಧ್ಯಾನಿಸುತ್ತಾ ನಿಂತರು.

**ಸಂದೇಶ** : ದೇವರನ್ನು ಧ್ಯಾನಿಸುವ ಮೊದಲು ಸಾಧ್ಯವಾದಷ್ಟು ಆತನ ವಿಗ್ರಹಗಳ ದರ್ಶನ ಮಾಡಬೇಕು.

ನಯನ್ನಸೌ ನಂದಕಿಶೋರಮೀಶಂ
ಶ್ವಫಲ್ಕ ಸೂನುರ್ಯಮುನಾಂಬುಮಧ್ಯೇ ।

**ದದರ್ಶ ಸೇವಾಫಲರೂಪಮನ್ಯೈ-**
**ರದೃಶ್ಯಮಸ್ಯೈವ ವಿಚಿತ್ರರೂಪಮ್ ॥ ೪೭ ॥**

ನಯನ್=ಒಯ್ಯುತ್ತಾ; ಅಸೌ=ಇವನು; ನಂದ=ನಂದನು; ಕಿಶೋರಂ=ಮಗನನ್ನು; ಈಶಂ=ಒಡೆಯನನ್ನು; ಶ್ವಫಲ್ಕ=ಶ್ವಫಲ್ಕನು; ಸೂನು=ಮಗನು; ಯಮುನಾ=ಯಮುನೆಯು; ಅಂಬು=ನೀರು; ಮಧ್ಯೇ=ಮಧ್ಯದಲ್ಲಿ; ದದರ್ಶ=ನೋಡಿದನು; ಸೇವಾ=ಸೇವೆಯು; ಫಲ=ಫಲವು; ರೂಪಂ=ರೂಪವನ್ನು; ಅನ್ಯೈಃ=ಬೇರೆಯವರಿಂದ; ಅದೃಶ್ಯಂ=ಕಾಣದಿರುವ; ಅಸ್ಯ ಏವ=ಇವನ; ವಿಚಿತ್ರ=ನಾನಾ; ರೂಪಂ=ರೂಪವನ್ನು.

ಅಕ್ರೂರನ ತಂದೆಯ ಹೆಸರು ಶ್ವಫಲ್ಕ ಎಂದು. ಅಕ್ರೂರನು ಕೃಷ್ಣನನ್ನು ಕರೆದುಕೊಂಡು ಹೋಗುತ್ತಿದ್ದಾನೆ. ದಾರಿಯಲ್ಲಿ ಯಮುನೆಯು ಸಿಕ್ಕಿದಳು. ಅಕ್ರೂರನು ಸ್ನಾನಕ್ಕೆ ಇಳಿದನು. ಸ್ನಾನದ ಸಂದರ್ಭದಲ್ಲಿ ಈ ಕೃಷ್ಣನ ನಾನಾ ರೂಪಗಳನ್ನು ಆ ನೀರಿನಲ್ಲಿ ಕಂಡನು. ದೇವರನ್ನು ಮಧುರೆಗೆ ಒಯ್ಯುವಂತಹ ದೊಡ್ಡ ಸೇವೆಯನ್ನು ಅಕ್ರೂರನು ಮಾಡುತ್ತಿದ್ದಾನೆ. ಆ ಸೇವೆಯ ಫಲರೂಪವಾಗಿ ಈ ರೂಪಗಳ ದರ್ಶನವಾಯಿತು ಎಂದು ರಾಜರು ತಿಳಿಸುತ್ತಾರೆ.

**ಸಂದೇಶ** : ದೇವರ ಸೇವೆಯನ್ನು ಬಹಳ ಶ್ರದ್ಧೆಯಿಂದ ಮಾಡಿದರೆ ಫಲವು ಬಹಳ ಶೀಘ್ರದಲ್ಲೇ ಲಭಿಸುವುದು.

**ಪುಣ್ಯಕ್ಷೇತ್ರನಿವಾಸಿನಾಂ ಸುವಿಮಲ ಜ್ಞಾನಾನುರಕ್ತಾತ್ಮನಾಂ**
**ಪಾರಂಪರ್ಯ ಸಮಾಗತಂ ಪ್ರಭುಮಪಿ ಶ್ರೀಕೃಷ್ಣಪಕ್ಷಾ ಪ್ರಿಯಮ್ ।**
**ದೂರೇಣೋತ್ಸೃಜತಾಂ ಸುಶಾಂತಮನಸಾಂ ತೀರ್ಥಾಟನಂ ಕುರ್ವತಾಂ**
**ವೇದ್ಯಂ ಹೃದ್ಯಮಪಶ್ಯದಂಬುನಿ ಹರೇ ರೂಪಂ ಶ್ವಫಲ್ಕಾತ್ಮಜಃ ॥ ೪೮ ॥**

ಪುಣ್ಯಃ=ಪುಣ್ಯವು; ಕ್ಷೇತ್ರ=ಕ್ಷೇತ್ರವು; ನಿವಾಸಿನಾಂ=ವಾಸಿಸುವವರ; ಸು=ಒಳ್ಳೆಯ; ವಿಮಲ=ನಿರ್ಮಲ; ಜ್ಞಾನ=ತಿಳುವಳಿಕೆಯು; ಅನುರಕ್ತ=ಆಸಕ್ತವು; ಆತ್ಮನಾಂ=ಮನಸ್ಸುಗಳ; ಪಾರಂಪರ್ಯ=ಪರಂಪರೆಯಿಂದ; ಸಮಾಗತಂ=ಬಂದಿರುವ; ಪ್ರಭುಂ=ಒಡೆಯನನ್ನು; ಅಪಿ=ಕೂಡಾ; ಶ್ರೀಕೃಷ್ಣ=ಶ್ರೀಕೃಷ್ಣನು; ಪಕ್ಷ=ಪಕ್ಷವು; ಅಪ್ರಿಯಂ=ಅನಿಷ್ಟ; ದೂರೇಣ=ದೂರದಿಂದ; ಉತ್ಸೃಜತಾಂ=ಬಿಡುವವರ; ಸು=ಒಳ್ಳೆಯ; ಶಾಂತ=ಶಾಂತವು; ಮನಸಾಂ=ಮನಸ್ಸುಗಳ; ತೀರ್ಥ=ತೀರ್ಥಗಳು; ಅಟನಂ=ಸಂಚಾರವು; ಕುರ್ವತಾಂ=ಮಾಡುವವರ; ವೇದ್ಯಂ=ತಿಳಿಯಲು ಯೋಗ್ಯ; ಹೃದ್ಯಂ=ಚಂದ; ಅಪಶ್ಯತ್=ಕಂಡನು; ಅಂಬುನಿ=ನೀರಿನಲ್ಲಿ; ಹರೇಃ=ದೇವರ; ರೂಪಂ=ರೂಪವನ್ನು; ಶ್ವಫಲ್ಕ=ಶ್ವಫಲ್ಕನು; ಆತ್ಮಜಃ=ಮಗನು.

ದೇವರ ದರ್ಶನ ಆಗಬೇಕಾದರೆ ವ್ಯಕ್ತಿಯಲ್ಲಿ ಅನೇಕ ಗುಣಗಳು ಇರಬೇಕು.

ಶಾಸ್ತ್ರಗಳು ಅನೇಕ ಪುಣ್ಯಕ್ಷೇತ್ರಗಳನ್ನು ಉಲ್ಲೇಖ ಮಾಡಿರುತ್ತವೆ. ಅಂತಹ ಕ್ಷೇತ್ರಗಳಲ್ಲಿ ವಾಸಮಾಡುವವನಾಗಬೇಕು. ಅಲ್ಲಿ ವಾಸಮಾಡುವುದರಿಂದ ಅಂತಃಕರಣ ಶುದ್ಧವಾಗುತ್ತದೆ. ದೇವರ ಬಗ್ಗೆ ಯಾವುದಾದರೂ ತಿಳುವಳಿಕೆ ಆಗಬಹುದು. ಎಲ್ಲಾ ಆಚಾರ್ಯರು ಬೇರೆ ಬೇರೆ ಕ್ರಮಗಳಿಂದ ಹೇಳುತ್ತಾರೆ. ಅವರೆಲ್ಲರ ಗುರಿ ಒಂದೇ ಎಂಬ ಅಭಿಪ್ರಾಯ ಉಳ್ಳವನಾಗಬಾರದು. ಎಲ್ಲಾ ಆಚಾರ್ಯರ ಗ್ರಂಥಗಳನ್ನು ಓದಬೇಕು. ಅವುಗಳೆಲ್ಲಾ ಪರಸ್ಪರ ವಿರುದ್ಧವಾದ ಅಭಿಪ್ರಾಯವುಳ್ಳವುಗಳು ಎಂದು ತಿಳಿಯಬೇಕು. ಇವುಗಳಲ್ಲಿ ಯಾವುದು ಸರಿ ಎಂಬುದನ್ನು ವಿಮರ್ಶಿಸಬೇಕು. ಪೂರ್ವಾಗ್ರಹವನ್ನು ಬಿಡಬೇಕು. ಈ ರೀತಿಯಾಗಿ ತಿಳಿಯಾದ ತಿಳುವಳಿಕೆಯನ್ನು ಪಡೆಯುವ ಆಸಕ್ತಿಯನ್ನು ತೋರಬೇಕು. ತನ್ನ ತಂದೆಯೋ ಆತನ ತಂದೆಯೋ ಒಬ್ಬ ಭಗವದ್ವೇಷಿಯ ಒಡೆತನದಲ್ಲಿ ಇದ್ದರೂ ದೇವರ ದರ್ಶನಾಕಾಂಕ್ಷಿಯು ಧೈರ್ಯದಿಂದ ಆ ದುಷ್ಟನ ಒಡೆತನದಿಂದ ಹೊರಗೆ ಬರಬೇಕು. ಅಂತಹವರ ಸಂಗವನ್ನೇ ಮಾಡಬಾರದು. ಎಂತಹ ಪ್ರಸಂಗದಲ್ಲಿಯೂ ಸುಖದುಃಖಗಳನ್ನು ಸಮಾನವಾಗಿ ಸಹಿಸಬೇಕು. ಪದೇ ಪದೇ ತೀರ್ಥಕ್ಷೇತ್ರಗಳ ಯಾತ್ರೆಯನ್ನು ಮಾಡುತ್ತಿರಬೇಕು. ಈ ಎಲ್ಲಾ ಧರ್ಮಗಳೂ ಅಕ್ರೂರನಲ್ಲಿವೆ. ಮಧುರಾ ಎಂಬ ಪುಣ್ಯಕ್ಷೇತ್ರದಲ್ಲಿ ವಾಸುಮಾಡುತ್ತಿದ್ದಾನೆ. ಕೃಷ್ಣನಲ್ಲಿ ಸರ್ವೋತ್ತಮತ್ವದ ತಿಳುವಳಿಕೆ ಉಳ್ಳವನಾಗಿದ್ದಾನೆ. ತನ್ನ ಹಿಂದಿನವರು ಕಂಸನ ಮಂತ್ರಿಗಳಾಗಿದ್ದರೂ ತಾನು ಆತನನ್ನು ತ್ಯಜಿಸಿ ಕೃಷ್ಣನಲ್ಲಿಗೆ ಬಂದಿದ್ದಾನೆ. ತಾನು ಸ್ವಯಂ ಅಕ್ರೂರ. ಮನಸ್ಸಿನಲ್ಲಿ ಯಾವ ರೀತಿಯಾದ ಕ್ರೌರ್ಯವೂ ಇಲ್ಲ. ಎಲ್ಲವನ್ನೂ ಸಮಾನವಾಗಿ ನೋಡುತ್ತಿದ್ದಾನೆ. ತಾನು ಈಗ ಯಮುನೆಗೆ ಅಭಿಮುಖನಾಗಿ ಬರುತ್ತಿದ್ದಾನೆ. ಆದ್ದರಿಂದ ತೀರ್ಥಯಾತ್ರೆಯನ್ನು ಮಾಡಿದಂತೆಯೂ ಆಯಿತು. ಆದ್ದರಿಂದ ಈತನಿಗೆ ಯಮುನೆಯಲ್ಲಿ ಕೃಷ್ಣನ ರೂಪದ ದರ್ಶನವಾಯಿತು.

<u>**ಸಂದೇಶ**</u> : ದೇವರ ಸಾಕ್ಷಾತ್ಕಾರಕ್ಕೆ ಇಷ್ಟೆಲ್ಲಾ ಗುಣಗಳ ಆವಶ್ಯಕತೆ ಇದೆ.

**ಭಕ್ತೋ ನಾಮ ಸ ಏವ ಯಃ ಕರಗತೇ ಕೃಷ್ಣೇऽಪಿ ವೇದೋದಿತಂ**
**ತತ್ ಕರ್ಮಾಚರದೇತದೇವ ದುರಿತ ಪ್ರಧ್ವಂಸಿ ಕರ್ಮಕ್ಷಿತೌ ।**
**ತೀರ್ಥಂ ಚಾಪಿ ತದೇವ ಜಾತ್ವಪಿ ತಯೋಃ ಸಂಸೇವ್ಯಯಾ ಶ್ರಾವ್ಯಯಾ**
**ದೃಶ್ಯಂ ರೂಪಮದರ್ಶನ್ಮುರರಿಪುರ್ದಾಸ್ಯೈಕವಶ್ಯಃ ಪ್ರಭುಃ ॥ ೪೯ ॥**

ಭಕ್ತಃ=ಭಕ್ತನು; ನಾಮ=ಎಂಬವನು; ಸ ಏವ=ಅವನೇ; ಯಃ=ಯಾರು; ಕರ=ಕೈ; ಗತೇ=ಇರಲು; ಕೃಷ್ಣೇ=ಕೃಷ್ಣನಲ್ಲಿ; ಅಪಿ=ಕೂಡಾ; ವೇದ=ವೇದವು; ಉದಿತಂ=ಹೇಳಿದ್ದು; ತತ್=ಅದು; ಕರ್ಮ=ಕರ್ಮವು; ಆಚರತ್=ಮಾಡಿದನು; ಏತದ್ ಏವ=ಇದೇ; ದುರಿತ=ಪಾಪವು; ಪ್ರಧ್ವಂಸಿ=ನಾಶವು; ಕರ್ಮ=ಕೆಲಸವು; ಕ್ಷಿತೌ=ಭೂಮಿಯಲ್ಲಿ; ತೀರ್ಥಂ=

ತೀರ್ಥವು; ಚ ಅಪಿ=ಕೂಡಾ; ತತ್=ಅದು; ಜಾತು ಅಪಿ=ಎಂದೂ ಕೂಡಾ; ತಯೋಃ= ಅವುಗಳ; ಸಂಸೇವ್ಯಯಾ=ಸೇವೆಯಿಂದ; ಶ್ರಾವ್ಯಯಾ=ಕೇಳಲು ಯೋಗ್ಯ; ದೃಶ್ಯಂ= ನೋಡಲು ಯೋಗ್ಯ; ರೂಪಂ=ರೂಪವು; ಅದರ್ಶಯತ್=ತೋರಿಸಿದನು; ಮುರರಿಪುಃ= ಮುರನಿಗೆ ಶತ್ರುವು; ದಾಸ್ಯ=ಸೇವೆಯು; ಏಕ=ಮುಖ್ಯ; ವಶ್ಯಃ=ಅಧೀನಯೋಗ್ಯ; ಪ್ರಭುಃ=ಒಡೆಯನು.

ಶಾಸ್ತ್ರಗಳು ಸಾಧನಗಳನ್ನು ಉಪದೇಶಿಸುವುದು ದೇವರ ದರ್ಶನಕ್ಕೋಸ್ಕರ. ಹಾಗಾದರೆ ದೇವರ ದರ್ಶನ ಆದಮೇಲೆ ಜಪ, ದೇವರ ಪೂಜೆ ಇತ್ಯಾದಿ ಕರ್ಮಗಳನ್ನು ಮಾಡಬೇಕಾಗಿಲ್ಲವಾ? ಎಂದು ಪ್ರಶ್ನೆ ಬರುವುದು. ಇದಕ್ಕೆ ವೇದವೇ ಉತ್ತರಿಸುತ್ತದೆ – "ಅಹರಹಃ ಸಂಧ್ಯಾಂ ಉಪಾಸೀತ" ಪ್ರತಿದಿನವೂ ಜಪಾದಿಗಳನ್ನು ಮಾಡಬೇಕು. ಈ ವಿಷಯದಲ್ಲಿ ದೇವರ ದರ್ಶನ ಆದವರು ಆಗದವರು ಎಂಬ ವಿಭಾಗ ಇಲ್ಲ ಎಂದು. ನಿಜವಾದ ಭಕ್ತರು ಸಾಕ್ಷಾತ್ಕಾರ ಆದಮೇಲೂ ತಮ್ಮ ಕರ್ಮಾಚರಣೆಯನ್ನು ಬಿಡುವುದಿಲ್ಲ. ಈ ಅಕ್ರೂರನು ಕೃಷ್ಣನ ನಿಜವಾದ ಭಕ್ತನು. ದೇವರು ಈತನ ರಥದಲ್ಲಿ ಈತನಿಗೆ ದರ್ಶನ ಕೊಟ್ಟಿದ್ದಾರೆ. ರಥ ಎಂಬ ಶಬ್ದಕ್ಕೆ ಶರೀರ ಎಂಬ ಅರ್ಥವೂ ಇದೆ. ದೇವರ ಬಾಹ್ಯರೂಪಗಳ ದರ್ಶನ ಆದರೆ ಸಾಲದು. ಬಿಂಬರೂಪದ ದರ್ಶನವೇ ಆಗಬೇಕು. ಬಿಂಬರೂಪವು ಶರೀರದಲ್ಲಿ ಜೀವನ ಜೊತೆಗೇ ಇರುವುದು. ಅಕ್ರೂರನಿಗೆ ಬಿಂಬರೂಪದ ದರ್ಶನವೇ ಆಗಿದೆ ಎಂಬ ಅರ್ಥವೂ ಇಲ್ಲಿ ಧ್ವನಿತವಾಗುತ್ತದೆ. ಹಾಗೆಯೇ ನೀರಿನಲ್ಲಿ ಮುಳುಗಿ ಅಘಮರ್ಷಣ ಎಂಬ ಮಂತ್ರವನ್ನೂ ಜಪಿಸಿದನು. ಅಘ=ಪಾಪಗಳು; ಮರ್ಷಣ=ನಾಶ. ಈತನ ಎಲ್ಲಾ ಪ್ರಾರಬ್ಧಗಳೂ ನಷ್ಟವಾದವು. ಯಾವುದು ನಮ್ಮ ಪಾಪಗಳನ್ನು ನಾಶ ಮಾಡುತ್ತೋ ಅದನ್ನೇ ಕರ್ಮ ಎಂದು ಶಾಸ್ತ್ರಗಳು ಕರೆದವು. ದೇವರ ದರ್ಶನ ಮಾಡಿಸಿ ನಮ್ಮನ್ನು ಪಾಪಗಳಿಂದ ದಾಟಿಸುವ ನೀರಿಗೆ ತೀರ್ಥ ಎಂದು ಹೆಸರು. ಅಕ್ರೂರನು ಕೃಷ್ಣ–ಬಲರಾಮರನ್ನು ಕರೆದುಕೊಂಡು ಹೋಗುವಾಗ ದಾರಿಯಲ್ಲಿ ಸಿಕ್ಕಿದ ಯಮುನೆಯಲ್ಲಿ ಅಘಮರ್ಷಣವನ್ನು ಜಪಿಸಿದನು. ಅಲ್ಲಿಯೂ ಈತನಿಗೆ ದೇವರ ದರ್ಶನವಾಗಿದೆ. ಪಾಪಗಳಿಂದ ಬಿಡುಗಡೆಯೂ ಆಗಿದೆ. ಆದ್ದರಿಂದ ಯಮುನೆಯ ಮಡು ನಿಜವಾಗಿಯೂ ತೀರ್ಥ. ಇದೆಲ್ಲಾ ಅಕ್ರೂರನಿಗೆ ಕೃಷ್ಣನ ಸೇವಾಫಲರೂಪವಾಗಿ ಲಭಿಸಿದ್ದು. ದೇವರು ಕೈಂಕರ್ಯಕ್ಕೆ ಮಾತ್ರ ಲಭ್ಯ.

<u>**ಸಂದೇಶ**</u> : ನವವಿಧ ಭಕ್ತಿಗಳಲ್ಲಿ ಆತ್ಮನಿವೇದನೆಯು ಕೊನೆಯದ್ದು. ಅಂದರೆ ತನ್ನನ್ನು ದೇವರ ಸೇವೆಗೆ ಅರ್ಪಿಸಿಕೊಳ್ಳುವುದು. ಹೀಗಾದಾಗ ದೇವರು ಒಲಿಯುತ್ತಾನೆ.

**ಸ ಸಹಸ್ರಸಹಸ್ರಾಂಶು ಮರೀಚಿವ್ಯಾಪ್ತದಿಕ್ತಟಮ್ ।**
**ಕಮಲಾಕರಪದ್ಮಾರ್ಘ್ಯ ಚರಣಾರುಣ ಭಾಸ್ಕರಮ್ ॥ ೫೦ ॥**

ಸಃ=ಅವನು; ಸಹಸ್ರ=ಸಾವಿರ; ಅಂಶು=ಕಿರಣ; ಮರೀಚಿ=ಕಿರಣ; ವ್ಯಾಪ್ತ=ಹರಡು; ದಿಕ್=ದಿಕ್ಕು; ತಟಮ್=ಬದಿಯು; ಕಮಲಾ=ರಮೆಯು; ಕರ=ಕೈಯು; ಪದ್ಮ=ಕಮಲವು; ಅರ್ಥ್ಯ=ಅಪೇಕ್ಷಿಸುವ; ಚರಣ=ಕಾಲುಗಳು; ಅರುಣ=ಕೆಂಪು; ಭಾಸ್ಕರಂ=ಸೂರ್ಯನನ್ನು.

ಅಕ್ರೂರನು ಯಮುನೆಯಲ್ಲಿ ಅಘಮರ್ಷಣಮಂತ್ರವನ್ನು ಹೇಳುವಾಗ ಕಂಡ ದೇವರನ್ನು ರಾಜರು ಕೆಲವು ಶ್ಲೋಕಗಳಿಂದ ವರ್ಣಿಸುತ್ತಾರೆ– ಸಾವಿರಾರು ಸೂರ್ಯರು ಒಟ್ಟಿಗೆ ಉದಿಸಿದರೆ ಏನು ಕಾಂತಿಯೋ ಆ ರೀತಿಯ ಕಾಂತಿಯು ದೇವರ ದೇಹದಿಂದ ಹೊರಡುತ್ತಿದೆ. ಆ ಪ್ರಕಾಶಗಳು ಎಲ್ಲಾ ದಿಕ್ಕುಗಳಲ್ಲಿಯೂ ವ್ಯಾಪಿಸಿವೆ. ಪಾದದ ಬಳಿ ರಮೆ ಇದ್ದಾಳೆ. ಆಕೆ ತನ್ನ ಕರಗಳಿಂದ ಆತನ ಪಾದವನ್ನು ಒತ್ತುತ್ತಿದ್ದಾಳೆ. ಈಕೆಯ ಕೈಯು ಕಮಲದಂತೆ ಇದೆ. ಆತನ ಪಾದವು ಉದಿಸುವ ಸೂರ್ಯನಂತೆ ಕೆಂಪಗಿದೆ. ಕಮಲವು ಚೆನ್ನಾಗಿರಬೇಕಾದರೆ ಸೂರ್ಯನ ಸಂಪರ್ಕ ಆಗಬೇಕು. ಇಂತಹ ಕೃಷ್ಣನನ್ನು ಅಕ್ರೂರನು ಕಂಡನು.

**ವಜ್ರಾಂಕುಶಪತಾಕಾಬ್ಜ ಲಕ್ಷ್ಯ ಪಾದತಲೋಜ್ವಲಮ್ ।**
**ಭಿನ್ನಪ್ರವಾಲವಿಲಸದಂಗುಲೀದಲ ಮಂಡಿತಮ್ ॥ ೫೧ ॥**

ವಜ್ರ=ವಜ್ರಾಯುಧವು; ಅಂಕುಶ=ಅಂಕುಶವು; ಪತಾಕಾ=ಧ್ವಜವು; ಅಬ್ಜ=ತಾವರೆಯು; ಲಕ್ಷ್ಯ=ಚಿಹ್ನಿತ; ಪಾದತಲ=ಪಾದದ ಅಡಿಭಾಗ; ಉಜ್ವಲಂ=ಶೋಭಿಸುವ; ಭಿನ್ನ= ತುಂಡಾದ; ಪ್ರವಾಲ=ಹವಳವು; ವಿಲಸತ್=ಶೋಭಿಸುವ; ಅಂಗುಲೀ=ಬೆರಳು; ದಲ=ಎಲೆ; ಮಂಡಿತಂ=ಅಲಂಕೃತ.

ಕೃಷ್ಣನ ಪಾದದ ಅಡಿಭಾಗದಲ್ಲಿ ವಜ್ರಾಯುಧದ, ಅಂಕುಶದ, ಧ್ವಜದ, ಕಮಲದ ಚಿಹ್ನೆಗಳಿವೆ. ಇಷ್ಟು ಲಕ್ಷಣಗಳಿಂದ ಕೂಡಿದ ಉತ್ತಮವಾದ ಪಾದ ಕೃಷ್ಣನದ್ದು. ಹವಳದ ಹೊರಭಾಗದ ಕೆಂಪು ಸ್ವಲ್ಪ ಮಸುಕಾಗಿ ಇರುತ್ತದೆ. ಅದನ್ನು ಒಡೆದರೆ ಒಡೆದ ಜಾಗದಲ್ಲಿ ತುಂಬಾ ಕೆಂಪಿರುತ್ತದೆ. ಅಷ್ಟು ಕೆಂಪಾದ ಬೆರಳುಗಳು ಆ ಪಾದದಲ್ಲಿ ಎಲೆಗಳಂತೆ ಶೋಭಿಸುತ್ತವೆ.

**ಪುಷ್ಕಲೇಂದುಸಮ ಶ್ರೀಮನ್ನಿಷ್ಕಲಂಕನಖಾವಲಿಮ್ ।**
**ಉತ್ತುಂಗರತ್ನಖಚಿತನೂತ್ನನೂಪುರ ಶೋಭಿತಮ್ ॥ ೫೨ ॥**

ಪುಷ್ಕಲ=ಪೂರ್ಣ; ಇಂದು=ಚಂದ್ರ; ಸಮ=ಸಮಾನ; ಶ್ರೀಮತ್=ಕಾಂತಿವುಳ್ಳ; ನಿಷ್ಕಲಂಕ=ಕಲುಷಿತವಲ್ಲದ; ನಖ=ಉಗುರುಗಳು; ಆವಲಿಂ=ಸಮೂಹವುಳ್ಳ; ಉತ್ತುಂಗ= ಉತ್ತಮ; ರತ್ನ=ರತ್ನಗಳು; ಖಚಿತ=ಕೂಡಿದ್ದು; ನೂತ್ನ=ಹೊಸತು; ನೂಪುರ=ಕಾಲ್ಗೆಜ್ಜೆ; ಶೋಭಿತಂ=ಶೋಭಿಸುವ.

ಆ ಬೆರಳುಗಳಲ್ಲಿ ಬಿಳಿಯಾದ ಉಗುರುಗಳು ಪೂರಾ ಬಿಳಿಯಲ್ಲ. ಹುಣ್ಣಿಮೆಯ

ಚಂದ್ರನ ಪ್ರಕಾಶದಂತೆ ಹಳದಿಮಿಶ್ರಿತ ಬಿಳಿ. ಪಾದಗಳಲ್ಲಿ ಗೆಜ್ಜೆಗಳು. ಅವುಗಳಲ್ಲಿ ಉತ್ತಮ ಜಾತಿಯ ರತ್ನಗಳು ಕೂಡಿವೆ.

**ಲಕ್ಷ್ಮೀಕರಾಬ್ಜಸಂಸಕ್ತ ವೃತ್ತಜಂಘಂ ವೃಷಾಕಪಿಮ್ ।**
**ರತ್ನದರ್ಪಣಸಂಕಾಶ ಶಸ್ತಜಾನುದ್ವಯಂ ವಿಭುಮ್ ॥ ೫೩ ॥**

ಲಕ್ಷ್ಮೀ=ರಮೆಯು; ಕರ=ಕೈಯು; ಅಬ್ಜ=ಕಮಲ; ಸಂಸಕ್ತ=ಕೂಡಿದ್ದು; ವೃತ್ತ=ಉರುಟು; ಜಂಘಂ=ಮೊಣಕಾಲು; ವೃಷಾಕಪಿಂ=ಕೃಷ್ಣನನ್ನು; ರತ್ನ=ರತ್ನವು; ದರ್ಪಣ=ಕನ್ನಡಿಯು; ಸಂಕಾಶ=ಸಮಾನ; ಶಸ್ತ=ಯೋಗ್ಯ; ಜಾನು=ಕಾಲಗಂಟು; ದ್ವಯಂ=ಎರಡು; ವಿಭುಂ=ಉತ್ತಮನನ್ನು..

ಕೃಷ್ಣನ ಎರಡು ಕಾಲುಗಳನ್ನು ರಮೆಯು ತನ್ನ ಕೋಮಲವಾದ ಕರಗಳಿಂದ ಒತ್ತುತ್ತಿದ್ದಾಳೆ. ದೇವರ ಕಾಲಗಂಟುಗಳು ಬಹಳ ಉರುಟಾಗಿವೆ. ರತ್ನದಿಂದ ಕಟ್ಟಿದ ಉರುಟಾದ ಕನ್ನಡಿಯಂತೆ ಶೋಭಿಸುತ್ತದೆ.

**ಮೃದುವರ್ತುಲ ಸಂಭಾಸ್ವದ್ರಂಭಾಸ್ತಂಭೋರುಮವ್ಯಯಮ್ ।**
**ಕರಿಪೋತಲಸತ್ಕುಂಭಸಮರಮ್ಯ ಕಟಿದ್ವಯಮ್ ॥ ೫೪ ॥**

ಮೃದು=ಮೆತ್ತಗೆ; ವರ್ತುಲ=ಉರುಟು; ಸಂಭಾಸ್ವತ್=ಶೋಭೆ; ರಂಭಾ=ಬಾಳೆಗಿಡ; ಸ್ತಂಭ=ಕಂಬವು; ಉರುಂ=ಉತ್ತಮ; ಅವ್ಯಯಂ=ನಾಶವಿಲ್ಲದ; ಕರಿ=ಆನೆ; ಪೋತ=ಮರಿ; ಲಸತ್=ಶೋಭಿಸುವುದು; ಕುಂಭ=ತಲೆ; ಸಮ=ಸದೃಶ; ರಮ್ಯ=ಚಂದ; ಕಟಿ=ಸೊಂಟ; ದ್ವಯಂ=ಎರಡು.

ದೇವರ ತೊಡೆಗಳು ಬಹಳ ಮೃದು ಹಾಗೆಯೇ ಉರುಟು. ತುಂಬಾ ಹೊಳೆಯುತ್ತದೆ. ಬಾಳೆಗಿಡದ ಕಾಂಡದಂತೆ ಇದೆ. ಮರಿ ಆನೆಯ ಕುಂಭಸ್ಥಳದಂತೆ ಪುಷ್ಪವಾದ ಎರಡು ತೊಡೆಗಳು. ಬಹಳ ಆಕರ್ಷಣೀಯವಾಗಿದೆ. ದೇವರ ಎಲ್ಲಾ ಅವಯವಗಳೂ ಸದಾ ಇದೇ ರೀತಿ ಇರುತ್ತವೆ.

**ಉದ್ಯದರ್ಕ ಶತೋದ್ರಿಕ್ತ ಹೃದ್ಯಕೌಶೇಯ ವಾಸಸಮ್ ।**
**ವಿಚಿತ್ರರತ್ನಸಂಶೋಭಿ ಹೈಮಕಾಂಚೀಗುಣದ್ಯುತಿಮ್ ॥ ೫೫ ॥**

ಉದ್ಯತ್=ಉದಿಸುವ; ಅರ್ಕ=ಸೂರ್ಯನು; ಶತ=ನೂರು; ಉದ್ರಿಕ್ತ=ಹೆಚ್ಚು; ಹೃದ್ಯ=ಚಂದ; ಕೌಶೇಯ=ಚಿನ್ನ; ವಾಸಸಂ=ವಸ್ತ್ರವುಳ್ಳ; ವಿಚಿತ್ರ=ಆಶ್ಚರ್ಯ; ರತ್ನ=ರತ್ನಗಳು; ಸಂಶೋಭಿ=ಶೋಭಿಸುವುದು; ಹೈಮ=ಬಂಗಾರ; ಕಾಂಚೀಗುಣ=ಸೊಂಟಪಟ್ಟಿ; ದ್ಯುತಿಂ=ಕಾಂತಿವುಳ್ಳ.

ದೇವರು ಒಂದು ಪೀತಾಂಬರವನ್ನು ಧರಿಸಿದ್ದಾನೆ. ಅದು ಎಷ್ಟು ಹೊಳೆಯುತ್ತದೆ

ಅಂದರೆ ಸಾವಿರಾರು ಸೂರ್ಯರನ್ನು ಏಕತ್ರ ಸೇರಿಸಿದರೆ ಏನು ಬೆಳಕೋ ಅದಕ್ಕಿಂತಲೂ ಜಾಸ್ತಿ ಪ್ರಕಾಶ ಈ ಪೀತಾಂಬರದಲ್ಲಿದೆ. ಈ ಬಟ್ಟೆಯ ಮೇಲೆ ಸೊಂಟದಲ್ಲಿ ಒಂದು ಡಾಬು ಇದೆ. ಇದು ಚಿನ್ನದ್ದು. ಇದರಲ್ಲಿ ರತ್ನಗಳು ಪೋಣಿತವಾಗಿವೆ. ಇದರಿಂದಾಗಿ ದೇವರಿಗೆ ನಮ್ಮ ಲೌಕಿಕ ದೃಷ್ಟಿಯಿಂದ ಒಂದು ವಿಚಿತ್ರ ಶೋಭೆ ಬಂದಂತಿದೆ.

**ಅನೇಕ ಭುವನಾಧಾರ ತನೂದರ ವಲಿತ್ರಯಮ್ ।**
**ವಿರಿಂಚಿ ಭೃಂಗ ಶೋಭಾಬ್ಜಸ್ಫುರನ್ನಾಭಿ ಸರೋವರಮ್ ॥ ೫೬ ॥**

ಅನೇಕ=ಬಹಳ; ಭುವನ=ಲೋಕಗಳು; ಆಧಾರ=ಆಶ್ರಯ; ತನು=ಚಿಕ್ಕದು; ಉದರ=ಹೊಟ್ಟೆ; ವಲಿ=ರೇಖೆ; ತ್ರಯಮ್=ಮೂರು; ವಿರಿಂಚಿ=ಬ್ರಹ್ಮನು; ಭೃಂಗ=ದುಂಬಿ; ಶೋಭಾ=ಕಾಂತಿ; ಅಬ್ಜ=ಕಮಲ; ಸ್ಫುರತ್=ಶೋಭೆ; ನಾಭಿ=ಹೊಕ್ಕಳು; ಸರೋವರಂ= ಕೊಳವುಳ್ಳ.

ಹದಿನಾಲ್ಕು ಲೋಕಗಳೂ ದೇವರ ಉದರದಲ್ಲಿ ಇವೆ. ಆದರೂ ಬಹಳ ಪುಟ್ಟ ಉದರ. ಅದರಲ್ಲಿ ಮೂರು ಗೆರೆಗಳು. ಇಂತಹ ಉದರದಲ್ಲಿ ಒಂದು ನಾಭಿ. ಅದು ಕೊಳದಂತೆ ಆಳವಾಗಿದೆ. ಅದರಲ್ಲಿ ಒಂದು ಕಮಲ. ಕಮಲ ಅಂದರೆ ಅದರಲ್ಲಿ ದುಂಬಿ ಇರಲೇ ಬೇಕು. ಆಗಲೇ ಆ ಕಮಲದ ಉತ್ತಮತ್ವವು ತಿಳಿಯುವುದು. ಈ ಕಮಲದಲ್ಲಿ ಬ್ರಹ್ಮನು ಭ್ರಮರದಂತೆ ಇದ್ದಾನೆ.

**ವಲಿಪಲ್ಲವಸತ್ಕಾಂತ್ಯಾ ಜ್ವಲಿತೋದರಬಂಧನಮ್ ।**
**ಕೃಶಮಧ್ಯ ವಿಶಾಲೋರಃ ಸ್ಥಲ ಚರ್ಚಿತ ಚಂದನಮ್ ॥ ೫೭ ॥**

ವಲಿ=ರೇಖೆ; ಪಲ್ಲವ=ಚಿಗುರು; ಸತ್=ಒಳ್ಳೆದು; ಕಾಂತ್ಯಾ=ಬೆಳಕಿನಿಂದ; ಜ್ವಲಿತ= ಶೋಭಿಸುವ; ಉದರ=ಹೊಟ್ಟೆ; ಬಂಧನಮ್=ಕಟ್ಟುವಿಕೆ; ಕೃಶ=ತೆಳ್ಳಗೆ; ಮಧ್ಯ=ಮಧ್ಯವು; ವಿಶಾಲ=ವಿಸ್ತಾರ; ಉರಃ=ಎದೆಯು; ಸ್ಥಲ=ಜಾಗವು; ಚರ್ಚಿತ=ಲೇಪಿತ; ಚಂದನಂ= ಗಂಧವು.

ದೇವರು ತನ್ನ ಉದರದಲ್ಲಿ ಒಂದು ರೀತಿಯ ಆಭರಣವನ್ನು ಧರಿಸಿದ್ದಾನೆ. ಆ ಆಭರಣಕ್ಕೆ ಉದರದಿಂದಾಗಿ ಒಂದು ವಿಲಕ್ಷಣ ಕಾಂತಿ ಬಂದಿದೆ. ಚಿಗುರುಗಳಿಂದ ಕೂಡಿದ ಮರಗಳಿಂದ ಉದ್ಯಾನಕ್ಕೆ ಶೋಭೆ. ಹಾಗೆಯೇ ದೇವರ ಉದರದಲ್ಲಿ ಈ ಮೂರು ರೇಖೆಗಳು. ಚಿಗುರುಗಳಂತೆ ಇವೆ. ಇವುಗಳಿಂದ ಉದರಕ್ಕೆ ಮೆರಗು. ದೇವರ ಉದರ ಕೃಶ. ಅದರ ಮೇಲೆ ವಿಶಾಲವಾದ ಎದೆ. ಆ ಎದೆ ತುಂಬಾ ಗಂಧವು ಲೇಪಿತವಾಗಿದೆ.

**ಲಕ್ಷ್ಮೀಧರಾಶ್ಲಿಷ್ಟವುಷ್ಟಪಾರ್ಶ್ವಯುಗ್ಮಂ ಪರಾತ್ಪರಮ್ ।**
**ಅಂಕಸ್ಥಿತರಮಾವಕ್ಷಃ ಕುಂಕುಮಾಂಕೋಪಲಕ್ಷಿತಮ್ ॥ ೫೮ ॥**

ಲಕ್ಷ್ಮೀ=ರಮೆಯು; ಧರಾ=ಭೂಮಿಯು; ಆಶ್ಲಿಷ್ಟ=ಆಲಿಂಗಿಸಲ್ಪಟ್ಟ; ಪುಷ್ಟ=ದಪ್ಪ; ಪಾರ್ಶ್ವ=ಬದಿಯು; ಯುಗ್ಮಂ=ಎರಡು; ಪರಾತ್=ದೊಡ್ಡವರಿಗಿಂತ; ಪರಂ=ದೊಡ್ಡವ; ಅಂಕ=ತೊಡೆ; ಸ್ಥಿತ=ಇರುವ; ರಮಾ=ರಮೆಯು; ವಕ್ಷಃ=ಎದೆಯು; ಕುಂಕುಮ=ಕೇಸರಿ; ಅಂಕ=ಗುರುತು; ಉಪಲಕ್ಷಿತಂ=ಬೇರ್ಪಡುವಿಕೆ.

ಈ ದೇವರ ಎರಡು ಬದಿಯಲ್ಲಿ ಶ್ರೀ ಭೂ ಇದ್ದಾರೆ. ಇವರು ದೇವರ ಎರಡು ಬಾಹುಗಳನ್ನು ಆಲಿಂಗಿಸಿಕೊಂಡಿದ್ದಾರೆ. ಬಾಹುಗಳು ದಪ್ಪಪುಷ್ಟಗಳಾಗಿವೆ. ಈತನು ರಮಾ ಬ್ರಹ್ಮಾದಿಗಳಿಗಿಂತಲೂ ದೊಡ್ಡವನು. ಈತನ ಈ ದೊಡ್ಡತನ ತಿಳಿಯುವುದು ಹೇಗೆ? ಉತ್ತರ– ಈತನ ತೊಡೆಯಲ್ಲಿ ರಮೆಯು ಕುಳಿತಿದ್ದಾಳೆ. ಆಕೆ ತಾನು ಎದೆಯಲ್ಲಿ ಉತ್ತಮವಾದ ಗಂಧವನ್ನು ಹಚ್ಚಿಕೊಂಡಿದ್ದಾಳೆ. ಹಾಗೆಯೇ ಈತನನ್ನು ಆಲಿಂಗಿಸುತ್ತಾಳೆ. ಆಗ ಈಕೆಯ ಮೈಯ ಗಂಧವು ಆತನ ಎದೆಯಲ್ಲಿ ಕಾಣಿಸುತ್ತದೆ.

**ಸಂದೇಶ** : ರಮೆಯ ಆಲಿಂಗನವು ದೇವರಿಗಲ್ಲದೆ ಇನ್ನಾರಿಗೂ ಇಲ್ಲ. ರಮೆಯು ಬ್ರಹ್ಮಾದಿಗಳಗಿಂತ ದೊಡ್ಡವಳು ಎಂದು ಎಲ್ಲರೂ ಒಪ್ಪಿದ ವಿಷಯ. ಇಂತಹವಳ ಆಲಿಂಗನ ದೇವರಿಗೆ ಎಂದ ಮೇಲೆ ಆತನ ಸರ್ವೋತ್ತಮತ್ವವು ಸಿದ್ಧವಾಗುತ್ತದೆ.

**ಶ್ರೀವತ್ಸವಕ್ಷಸಂ ಶ್ರೀಮದ್ವನಮಾಲಾ ವಿಭೂಷಿತಮ್ ।**
**ಸ್ಫುರದಿಂದು ಸಮಾಮಂದ ವರಕೌಸ್ತುಭಮಂಡನಮ್ ॥ ೫೯ ॥**

ಶ್ರೀವತ್ಸ=ಶ್ರೀವತ್ಸವು; ವಕ್ಷಸಂ=ಎದೆಯನ್ನು; ಶ್ರೀಮತ್=ಶೋಭಿಸುವ; ವನಮಾಲಾ= ವನಮಾಲೆಯು; ವಿಭೂಷಿತಂ=ಶೋಭಿಸುವ; ಸ್ಫುರತ್=ಶೋಭೆ; ಇಂದು=ಚಂದ್ರನು; ಸಮ=ಸಮಾನವು; ಅಮಂದ=ಉತ್ತಮ; ವರ=ಉತ್ತಮ; ಕೌಸ್ತುಭ=ಕೌಸ್ತುಭವು; ಮಂಡನಂ=ಅಲಂಕಾರವು.

ದೇವರ ಎದೆಯಲ್ಲಿ ಶ್ರೀವತ್ಸ ಎಂಬ ಹೆಸರಿನ ಒಂದು ಚಿಹ್ನೆ ಇದೆ. ನಾನಾ ರೀತಿಯ ಹೂಗಳಿಂದ ಕೂಡಿದ ಆದ್ದರಿಂದಲೇ ವನಮಾಲೆ ಎಂದು ಕರೆಯಲ್ಪಡುವ ಹಾರವು ಕೊರಳಲ್ಲಿದೆ. ಕಂಠಾಭರಣವಾಗಿ ಕೌಸ್ತುಭ ಎಂದು ಹೆಸರಿನ ಆಭರಣ ಇದೆ. ಇದರ ಬೆಳಕು ಹುಣ್ಣಿಮೆಯ ಚಂದ್ರನಂತೆ ಇದೆ. ಈ ಆಭರಣವು ಉತ್ತಮವಾಗಿದೆ.

**ವಿಲಸದ್ರತ್ನಕಟಕಕಂಕಣೈರಂಗುಲೀಯಕೈಃ ।**
**ಶಂಖಚಕ್ರಗದಾಪದ್ಮೈಶ್ಚಾಂಕಿತಶ್ರೀಕರಾಂಬುಜಮ್ ॥ ೬೦ ॥**

ವಿಲಸತ್=ಶೋಭಿಸುವ; ರತ್ನ=ರತ್ನಗಳು; ಕಟಕ=ಒಂಕಿಗಳು; ಕಂಕಣೈಃ=ಬಳೆಗಳಿಂದ; ಅಂಗುಲೀಯಕೈಃ=ಉಂಗುರಗಳಿಂದ; ಶಂಖ=ಶಂಖವು; ಚಕ್ರ=ಚಕ್ರವು; ಗದಾ= ಗದೆಯು; ಪದ್ಮೈಃ=ಕಮಲಗಳಿಂದ; ಚ=ಕೂಡಾ; ಅಂಕಿತ=ಕೂಡಿದ; ಶ್ರೀ=ಕಾಂತಿ; ಕರ= ಕೈಯು; ಅಂಬುಜಂ=ಕಮಲವು.

ದೇವರ ಭುಜಗಳಲ್ಲಿ ಒಂಕಿಗಳು, ಕೈಗಳಲ್ಲಿ ಕಡಗಗಳು, ಬೆರಳುಗಳಲ್ಲಿ ಉಂಗುರಗಳು ಶೋಭಿಸುತ್ತಿವೆ. ಈತನ ಕೋಮಲವಾದ ಕೈಗಳಲ್ಲಿ ಶಂಖ, ಚಕ್ರ, ಗದಾ ಹಾಗೂ ಪದ್ಮಗಳು ಚೆನ್ನಾಗಿ ಪ್ರಕಾಶಿಸುತ್ತಿವೆ.

**ತ್ರಿರೇಖಕಂಬುಸಂಕಾಶಸ್ಫುರನ್ನಿಷ್ಕಶಿರೋಧರಮ್ ।**
**ಅಗಣ್ಯ ಲಾವಣ್ಯಪೂರ್ಣ ಪ್ರಸನ್ನ ಮುಖಸಾರಸಮ್ ॥ ೬೧ ॥**

ತ್ರಿ=ಮೂರು; ರೇಖ=ಗೆರೆ; ಕಂಬು=ಶಂಖ; ಸಂಕಾಶ=ಸಮಾನ; ಸ್ಫುರತ್=ಶೋಭೆ; ನಿಷ್ಕ=ಆಭರಣ; ಶಿರ=ತಲೆ; ಧರಂ=ಧರಿಸಿದ್ದು; ಅಗಣ್ಯ=ಲೆಕ್ಕ ಇಲ್ಲದ; ಲಾವಣ್ಯ= ಸೌಂದರ್ಯ; ಪೂರ್ಣ=ತುಂಬುವುದು; ಪ್ರಸನ್ನ=ಶಾಂತ; ಮುಖ=ಮುಖವು; ಸಾರಸಂ= ಕಮಲವು.

ದೇವರ ಕುತ್ತಿಗೆಯು ಶಂಖದಂತೆ ಇದೆ. ಶಂಖದಲ್ಲಿ ಮೂರು ರೇಖೆಗಳಿರುತ್ತವೆ. ಗಂಭೀರವಾದ ಧ್ವನಿ ಇರುತ್ತದೆ. ದೇವರ ಕುತ್ತಿಗೆಯಲ್ಲಿಯೂ ಮೂರು ರೇಖೆಗಳು ಹಾಗೂ ಗಂಭೀರವಾದ ಧ್ವನಿಯು ಇದೆ. ಆದ್ದರಿಂದ ಶಂಖದ ಹೋಲಿಕೆ. ಇಂತಹ ಕಂಠವು ನಿಷ್ಕ ಎಂದು ಹೆಸರಿನ ಆಭರಣದಿಂದ ಕೂಡಿದೆ. ದೇವರ ಮುಖ ಅರಳಿದ ಕಮಲದಂತೆ ಬಹಳ ಚಂದ. ಸದಾ ನಗುವಿನಿಂದ ಕೂಡಿದ್ದು.

**ಅತಿರಕ್ತಮೃದುಸ್ನಿಗ್ಧ ಪಕ್ವಬಿಂಬನಿಭಾಧರಮ್ ।**
**ಕುಂದ ಕುಡ್ಮಲ ಸಂಶೋಭಿದಂತಪಂಕ್ತಿ ದಯಾನಿಧಿಮ್ ॥ ೬೨ ॥**

ಅತಿ=ಬಹಳ; ರಕ್ತ=ಕೆಂಪು; ಮೃದು=ಮೆತ್ತಗೆ; ಸ್ನಿಗ್ಧ=ಚಂದ; ಪಕ್ವ=ಹಣ್ಣಾದ; ಬಿಂಬ= ತೊಂಡೆಹಣ್ಣು; ನಿಭ=ಸದೃಶ; ಅಧರಂ=ತುಟಿವುಳ್ಳ; ಕುಂದ=ಮಲ್ಲಿಗೆ; ಕುಡ್ಮಲ=ಮೊಗ್ಗು; ಸಂಶೋಭಿ=ಶೋಭಿಸುವ; ದಂತ=ಹಲ್ಲು; ಪಂಕ್ತಿ=ಸಾಲುಳ್ಳ; ದಯಾ=ದಯೆಯು; ನಿಧಿಂ=ಆಶ್ರಯನಾದ.

ತೊಂಡೆಕಾಯಿ ಹಣ್ಣಾದರೆ ತುಂಬಾ ಕೆಂಪಿರುತ್ತದೆ. ನೋಡಲೂ ಚಂದ. ತುಂಬಾ ಮೃದುವೂ ಹೌದು. ದೇವರ ಎರಡು ತುಟಿಗಳು ಹಾಗೆ ಇವೆ. ದುಂಡುಮಲ್ಲಿಗೆ ಬಹಳ ಬಿಳಿ. ಅದು ಮೊಗ್ಗು ಆಗಿದ್ದರೆ ಅದನ್ನು ಸಾಲಾಗಿ ಜೋಡಿಸಿದರೆ ಕಾಣುವಂತೆ ದೇವರ ಎರಡು ಹಲ್ಲುಗಳ ಸಾಲು ಅದಕ್ಕಿಂತಲೂ ಹೆಚ್ಚಾಗಿ ಚಂದ ಇದೆ. ಇಷ್ಟೆಲ್ಲಾ ಸೌಂದರ್ಯಗಳಿದ್ದರೂ ದೇವರು ಅಹಂಕಾರಪಡದೆ ಇನ್ನೊಬ್ಬರಲ್ಲಿ ದಯೆ ತೋರುತ್ತಾನೆ.

**ಚಂದ್ರಿಕಾ ಸೌಭಗಸ್ಪರ್ಧಿ ಮಂದಹಾಸಂ ಮನೋಹರಮ್ ।**
**ಹರಿನೀಲಜ್ವಲದ್ವಪ್ರವಿಲಸದ್ಗಂಡಮಂಡಲಮ್ ॥ ೬೩ ॥**

ಚಂದ್ರಿಕಾ=ಬೆಳದಿಂಗಳು; ಸೌಭಗ=ಸಂಪತ್ತು; ಸ್ಪರ್ಧಿ=ಸ್ಪರ್ಧೆಯು; ಮಂದಹಾಸಂ=

ಲಕ್ಷ್ಮೀ=ರಮೆಯು; ಧರಾ=ಭೂಮಿಯು; ಆಶ್ಲಿಷ್ಟ=ಆಲಿಂಗಿಸಲ್ಪಟ್ಟ; ಪುಷ್ಟ=ದಪ್ಪ; ಪಾರ್ಶ್ವ=ಬದಿಯು; ಯುಗ್ಮಂ=ಎರಡು; ಪರಾತ್=ದೊಡ್ಡವರಿಗಿಂತ; ಪರಂ=ದೊಡ್ಡವ; ಅಂಕ=ತೊಡೆ; ಸ್ಥಿತ=ಇರುವ; ರಮಾ=ರಮೆಯು; ವಕ್ಷಃ=ಎದೆಯು; ಕುಂಕುಮ=ಕೇಸರಿ; ಅಂಕ=ಗುರುತು; ಉಪಲಕ್ಷಿತಂ=ಬೇರ್ಪಡುವಿಕೆ.

ಈ ದೇವರ ಎರಡು ಬದಿಯಲ್ಲಿ ಶ್ರೀ ಭೂ ಇದ್ದಾರೆ. ಇವರು ದೇವರ ಎರಡು ಬಾಹುಗಳನ್ನು ಆಲಿಂಗಿಸಿಕೊಂಡಿದ್ದಾರೆ. ಬಾಹುಗಳು ದಪ್ಪಪುಷ್ಟಗಳಾಗಿವೆ. ಈತನು ರಮಾ ಬ್ರಹ್ಮಾದಿಗಳಿಗಿಂತಲೂ ದೊಡ್ಡವನು. ಈತನ ಈ ದೊಡ್ಡತನ ತಿಳಿಯುವುದು ಹೇಗೆ? ಉತ್ತರ– ಈತನ ತೊಡೆಯಲ್ಲಿ ರಮೆಯು ಕುಳಿತಿದ್ದಾಳೆ. ಆಕೆ ತಾನು ಎದೆಯಲ್ಲಿ ಉತ್ತಮವಾದ ಗಂಧವನ್ನು ಹಚ್ಚಿಕೊಂಡಿದ್ದಾಳೆ. ಹಾಗೆಯೇ ಈತನನ್ನು ಆಲಿಂಗಿಸುತ್ತಾಳೆ. ಆಗ ಈಕೆಯ ಮೈಯ ಗಂಧವು ಆತನ ಎದೆಯಲ್ಲಿ ಕಾಣಿಸುತ್ತದೆ.

<u>ಸಂದೇಶ</u> : ರಮೆಯ ಆಲಿಂಗನವು ದೇವರಿಗಲ್ಲದೆ ಇನ್ನಾರಿಗೂ ಇಲ್ಲ. ರಮೆಯು ಬ್ರಹ್ಮಾದಿಗಳಗಿಂತ ದೊಡ್ಡವಳು ಎಂದು ಎಲ್ಲರೂ ಒಪ್ಪಿದ ವಿಷಯ. ಇಂತಹವಳ ಆಲಿಂಗನ ದೇವರಿಗೆ ಎಂದ ಮೇಲೆ ಆತನ ಸರ್ವೋತ್ತಮತ್ವವು ಸಿದ್ಧವಾಗುತ್ತದೆ.

**ಶ್ರೀವತ್ಸವಕ್ಷಸಂ ಶ್ರೀಮದ್ವನಮಾಲಾ ವಿಭೂಷಿತಮ್ ।**
**ಸ್ಫುರದಿಂದು ಸಮಾಮಂದ ವರಕೌಸ್ತುಭಮಂಡನಮ್ ॥ ೫೯ ॥**

ಶ್ರೀವತ್ಸ=ಶ್ರೀವತ್ಸವು; ವಕ್ಷಸಂ=ಎದೆಯನ್ನು; ಶ್ರೀಮತ್=ಶೋಭಿಸುವ; ವನಮಾಲಾ= ವನಮಾಲೆಯು; ವಿಭೂಷಿತಂ=ಶೋಭಿಸುವ; ಸ್ಫುರತ್=ಶೋಭೆ; ಇಂದು=ಚಂದ್ರನು; ಸಮ=ಸಮಾನವು; ಅಮಂದ=ಉತ್ತಮ; ವರ=ಉತ್ತಮ; ಕೌಸ್ತುಭ=ಕೌಸ್ತುಭವು; ಮಂಡನಂ=ಅಲಂಕಾರವು.

ದೇವರ ಎದೆಯಲ್ಲಿ ಶ್ರೀವತ್ಸ ಎಂಬ ಹೆಸರಿನ ಒಂದು ಚಿಹ್ನೆ ಇದೆ. ನಾನಾ ರೀತಿಯ ಹೂಗಳಿಂದ ಕೂಡಿದ ಆದ್ದರಿಂದಲೇ ವನಮಾಲೆ ಎಂದು ಕರೆಯಲ್ಪಡುವ ಹಾರವು ಕೊರಳಲ್ಲಿದೆ. ಕಂಠಾಭರಣವಾಗಿ ಕೌಸ್ತುಭ ಎಂದು ಹೆಸರಿನ ಆಭರಣ ಇದೆ. ಇದರ ಬೆಳಕು ಹುಣ್ಣಿಮೆಯ ಚಂದ್ರನಂತೆ ಇದೆ. ಈ ಆಭರಣವು ಉತ್ತಮವಾಗಿದೆ.

**ವಿಲಸದ್ರತ್ನಕಟಕಕಂಕಣೈರಂಗುಲೀಯಕೈಃ ।**
**ಶಂಖಚಕ್ರಗದಾಪದ್ಮೈಶ್ಚಾಂಕಿತಶ್ರೀಕರಾಂಬುಜಮ್ ॥ ೬೦ ॥**

ವಿಲಸತ್=ಶೋಭಿಸುವ; ರತ್ನ=ರತ್ನಗಳು; ಕಟಕ=ಒಂಕಿಗಳು; ಕಂಕಣೈಃ=ಬಳೆಗಳಿಂದ; ಅಂಗುಲೀಯಕೈಃ=ಉಂಗುರಗಳಿಂದ; ಶಂಖ=ಶಂಖವು; ಚಕ್ರ=ಚಕ್ರವು; ಗದಾ= ಗದೆಯು; ಪದ್ಮೈಃ=ಕಮಲಗಳಿಂದ; ಚ=ಕೂಡಾ; ಅಂಕಿತ=ಕೂಡಿದ; ಶ್ರೀ=ಕಾಂತಿ; ಕರ= ಕೈಯು; ಅಂಬುಜಂ=ಕಮಲವು.

ದೇವರ ಭುಜಗಳಲ್ಲಿ ಒಂಕಿಗಳು, ಕೈಗಳಲ್ಲಿ ಕಡಗಗಳು, ಬೆರಳುಗಳಲ್ಲಿ ಉಂಗುರಗಳು ಶೋಭಿಸುತ್ತಿವೆ. ಈತನ ಕೋಮಲವಾದ ಕೈಗಳಲ್ಲಿ ಶಂಖ, ಚಕ್ರ, ಗದಾ ಹಾಗೂ ಪದ್ಮಗಳು ಚೆನ್ನಾಗಿ ಪ್ರಕಾಶಿಸುತ್ತಿವೆ.

**ತ್ರಿರೇಖಕಂಬುಸಂಕಾಶಸ್ಫುರನ್ನಿಷ್ಕಶಿರೋಧರಮ್ ।**
**ಅಗಣ್ಯ ಲಾವಣ್ಯಪೂರ್ಣ ಪ್ರಸನ್ನ ಮುಖಸಾರಸಮ್ ॥ ೬೧ ॥**

ತ್ರಿ=ಮೂರು; ರೇಖ=ಗೆರೆ; ಕಂಬು=ಶಂಖ; ಸಂಕಾಶ=ಸಮಾನ; ಸ್ಫುರತ್=ಶೋಭೆ; ನಿಷ್ಕ=ಆಭರಣ; ಶಿರ=ತಲೆ; ಧರಂ=ಧರಿಸಿದ್ದು; ಅಗಣ್ಯ=ಲೆಕ್ಕ ಇಲ್ಲದ; ಲಾವಣ್ಯ= ಸೌಂದರ್ಯ; ಪೂರ್ಣ=ತುಂಬುವುದು; ಪ್ರಸನ್ನ=ಶಾಂತ; ಮುಖ=ಮುಖವು; ಸಾರಸಂ= ಕಮಲವು.

ದೇವರ ಕುತ್ತಿಗೆಯು ಶಂಖದಂತೆ ಇದೆ. ಶಂಖದಲ್ಲಿ ಮೂರು ರೇಖೆಗಳಿರುತ್ತವೆ. ಗಂಭೀರವಾದ ಧ್ವನಿ ಇರುತ್ತದೆ. ದೇವರ ಕುತ್ತಿಗೆಯಲ್ಲಿಯೂ ಮೂರು ರೇಖೆಗಳು ಹಾಗೂ ಗಂಭೀರವಾದ ಧ್ವನಿಯು ಇದೆ. ಆದ್ದರಿಂದ ಶಂಖದ ಹೋಲಿಕೆ. ಇಂತಹ ಕಂಠವು ನಿಷ್ಕ ಎಂದು ಹೆಸರಿನ ಆಭರಣದಿಂದ ಕೂಡಿದೆ. ದೇವರ ಮುಖ ಅರಳಿದ ಕಮಲದಂತೆ ಬಹಳ ಚಂದ. ಸದಾ ನಗುವಿನಿಂದ ಕೂಡಿದ್ದು.

**ಅತಿರಕ್ತಮೃದುಸ್ನಿಗ್ಧ ಪಕ್ವಬಿಂಬನಿಭಾಧರಮ್ ।**
**ಕುಂದ ಕುಡ್ಮಲ ಸಂಶೋಭಿದಂತಪಂಕ್ತಿ ದಯಾನಿಧಿಮ್ ॥ ೬೨ ॥**

ಅತಿ=ಬಹಳ; ರಕ್ತ=ಕೆಂಪು; ಮೃದು=ಮೆತ್ತಗೆ; ಸ್ನಿಗ್ಧ=ಚಂದ; ಪಕ್ವ=ಹಣ್ಣಾದ; ಬಿಂಬ= ತೊಂಡೆಹಣ್ಣು; ನಿಭ=ಸದೃಶ; ಅಧರಂ=ತುಟಿವುಳ್ಳ; ಕುಂದ=ಮಲ್ಲಿಗೆ; ಕುಡ್ಮಲ=ಮೊಗ್ಗು; ಸಂಶೋಭಿ=ಶೋಭಿಸುವ; ದಂತ=ಹಲ್ಲು; ಪಂಕ್ತಿ=ಸಾಲುಳ್ಳ; ದಯಾ=ದಯೆಯು; ನಿಧಿಂ=ಆಶ್ರಯನಾದ.

ತೊಂಡೆಕಾಯಿ ಹಣ್ಣಾದರೆ ತುಂಬಾ ಕೆಂಪಿರುತ್ತದೆ. ನೋಡಲೂ ಚಂದ. ತುಂಬಾ ಮೃದುವೂ ಹೌದು. ದೇವರ ಎರಡು ತುಟಿಗಳು ಹಾಗೆ ಇವೆ. ದುಂಡುಮಲ್ಲಿಗೆ ಬಹಳ ಬಿಳಿ. ಅದು ಮೊಗ್ಗು ಆಗಿದ್ದರೆ ಅದನ್ನು ಸಾಲಾಗಿ ಜೋಡಿಸಿದರೆ ಕಾಣುವಂತೆ ದೇವರ ಎರಡು ಹಲ್ಲುಗಳ ಸಾಲು ಅದಕ್ಕಿಂತಲೂ ಹೆಚ್ಚಾಗಿ ಚಂದ ಇದೆ. ಇಷ್ಟೆಲ್ಲಾ ಸೌಂದರ್ಯಗಳಿದ್ದರೂ ದೇವರು ಅಹಂಕಾರಪಡದೆ ಇನ್ನೊಬ್ಬರಲ್ಲಿ ದಯೆ ತೋರುತ್ತಾನೆ.

**ಚಂದ್ರಿಕಾ ಸೌಭಗಸ್ಪರ್ಧಿ ಮಂದಹಾಸಂ ಮನೋಹರಮ್ ।**
**ಹರಿನೀಲಜ್ವಲದ್ವಪ್ರವಿಲಸದ್ಗಂಡಮಂಡಲಮ್ ॥ ೬೩ ॥**

ಚಂದ್ರಿಕಾ=ಬೆಳದಿಂಗಳು; ಸೌಭಗ=ಸಂಪತ್ತು; ಸ್ಪರ್ಧಿ=ಸ್ಪರ್ಧೆಯು; ಮಂದಹಾಸಂ=

ನಗುವು; ಮನೋಹರಂ=ಚಂದದ; ಹರಿನೀಲ=ಇಂದ್ರನೀಲಮಣಿಯು; ಜ್ವಲತ್=ಶೋಭೆ; ವಪ್ರ=ಗೋಡೆ; ವಿಲಸತ್=ಶೋಭಿಸುವ; ಗಂಡ=ಕಪೋಲ; ಮಂಡಲಂ=ಸಮೂಹ.

ದೇವರು ಒಂದು ಮಂದಹಾಸ ಬೀರಿದರೆ ಚಂದ್ರನ ಬೆಳದಿಂಗಳು ಪೂರಾ ತಿರಸ್ಕೃತವಾದಂತೆಯೆ. ನಮ್ಮ ಯಾರ ಮಂದಹಾಸವೂ ಚಂದ್ರನ ಬೆಳದಿಂಗಳ ಜೊತೆಗೆ ಸ್ಪರ್ಧಿಸುವುದಿಲ್ಲ. ಯಾಕೆಂದರೆ ನಮ್ಮ ಹಾಸವು ಅಷ್ಟು ಪ್ರಶಸ್ತವಲ್ಲ. ದೇವರ ಹಾಸ ಮಾತ್ರ ಈ ಬೆಳದಿಂಗಳನ್ನು ಸೋಲಿಸಲು ಸಮರ್ಥ. ಬಹಳ ಪುಷ್ಟವಾದ, ಎತ್ತರವಾದ ಎರಡು ಕಪೋಲಗಳು. ಪಕ್ಕನೆ ನೋಡುವಾಗ ಗೋಡೆಗಳಂತೆ ತೋರುತ್ತವೆ. ನೀಲಬಣ್ಣದಿಂದಲೂ ಕೂಡಿದೆ. ಆದ್ದರಿಂದ ಇಂದ್ರನೀಲಮಣಿಗಳ ಗೋಡೆಗಳಂತೆ ಇವೆ.

**ತರುಣಾದಿತ್ಯಸಂಕಾಶ ವರಕುಂಡಲಮಂಡಿತಮ್ ।**
**ಲಸನ್ನಾಸಾಪ್ರಭಾಮುಷ್ಟ ನವಚಂಪಕಸಂಪದಮ್ ॥ ೬೪ ॥**

ತರುಣ=ಯುವಕನು; ಆದಿತ್ಯ=ಸೂರ್ಯನು; ಸಂಕಾಶ=ಸಮಾನ; ವರ=ಉತ್ತಮ; ಕುಂಡಲ=ಆಭರಣ; ಮಂಡಿತಂ=ಅಲಂಕೃತ; ಲಸತ್=ಶೋಭೆ; ನಾಸಾ=ಮೂಗು; ಪ್ರಭಾ=ಕಾಂತಿ; ಮುಷ್ಟ=ಅಪಹೃತ; ನವ=ಹೊಸತು; ಚಂಪಕ=ಸಂಪಿಗೆ; ಸಂಪದಂ= ಸಂಪತ್ತುಳ್ಳ.

ಕಿವಿಯಲ್ಲಿ ಕುಂಡಲ ಇದೆ. ಅದರ ಪ್ರಕಾಶವು ಉದಿಸುವ ಸೂರ್ಯನಂತೆ ಪ್ರಖರವಾಗಿದೆ. ದೇವರ ಮೂಗು ಸಂಪಿಗೆಯಂತೆ ಇದೆ. ದೇವರ ಮೂಗಿನ ಮುಂದೆ ಎಂತಹ ಹೊಸ ಸಂಪಿಗೆಯೂ ತನ್ನ ಸತ್ವವನ್ನೇ ಕಳೆದುಕೊಳ್ಳುತ್ತದೆ.

**ಚಲನ್ಮಧುಕರಾಸಕ್ತ ಜಲಜೋಪಮಲೋಚನಮ್ ।**
**ಇಂದ್ರನೀಲೋತ್ಪಲಮಯ ಶಾರ್ಙ್ಗಸೌಂದರ್ಯಜಿದ್ಭ್ರುವಮ್ ॥ ೬೫ ॥**

ಚಲತ್=ಅಲುಗಾಡುವಿಕೆ; ಮಧು=ಜೇನು; ಕರ=ಮಾಡುವಿಕೆ; ಆಸಕ್ತ=ಅಪೇಕ್ಷೆ; ಜಲ=ನೀರು; ಜ=ಉತ್ಪತ್ತಿ; ಉಪಮ=ಸದೃಶ; ಲೋಚನಂ=ಕಣ್ಣು; ಇಂದ್ರನೀಲ=ಮಣಿಯು; ಉತ್ಪಲ=ನೈದಿಲೆ; ಮಯ=ಸಮಾನ; ಶಾರ್ಙ್ಗ=ಧನುಸ್ಸು; ಸೌಂದರ್ಯ=ಚಂದ; ಜಿತ್=ಗೆಲ್ಲು ವುದು; ಭ್ರುವಂ=ಹುಬ್ಬುಳ್ಳ.

ಕಮಲದ ದಳದಂತೆ ವಿಶಾಲವಾದ ಎರಡು ಕಣ್ಣುಗಳು. ಕಮಲಗಳಲ್ಲಿ ಹಾರಾಡುತ್ತಿರುವ ದುಂಬಿಗಳಂತೆ ಎರಡು ಬೊಂಬೆಗಳು ಆಚೀಚೆ ಅಡ್ಡಾಡುತ್ತಿವೆ. ಇಂದ್ರನೀಲಮಣಿಯಂತೆ ನೀಲವಾದ ನೈದಿಲೆ. ಅದರಂತೆ ಶೋಭಿಸುವ ದೇವರ ಧನುಸ್ಸು. ಅಂತಹ ಧನುಸ್ಸಿನ ಚಂದವನ್ನು ಮೀರಿಸುವ ಬಾಗಿದ ಎರಡು ಹುಬ್ಬುಗಳು.

**ಶ್ರೀಭೂಮುಖಾಂಬುಜಾಸಕ್ತಲೋಲಾಪಾಂಗಮಧುವ್ರತಮ್ ।**
**ಹೃದ್ಯೋರ್ಧ್ವಪುಂಡ್ರಮಧ್ಯಸ್ಥ ಸದ್ರತ್ನ ತಿಲಕೋಜ್ವಲಮ್ ॥ ೬೬ ॥**

ಶ್ರೀ=ಶ್ರೀಯು; ಭೂ=ಭೂಮಿಯು; ಮುಖ=ಮುಖವು; ಅಂಬುಜ=ಕಮಲವು; ಆಸಕ್ತ=ಅಪೇಕ್ಷೆಯು; ಲೋಲ=ಚಂಚಲ; ಅಪಾಂಗ=ಕಡೆಗಣ್ಣು; ಮಧುವ್ರತಂ=ದುಂಬಿಯಂತೆ; ಹೃದ್ಯ=ಚಂದ; ಊರ್ಧ್ವ=ಮೇಲ್ಮುಖ; ಪುಂಡ್ರ=ನಾಮವು; ಮಧ್ಯ=ಮಧ್ಯವು; ಸ್ಥ=ಇರುವುದು; ಸತ್=ಉತ್ತಮ; ರತ್ನ=ರತ್ನವು; ತಿಲಕ=ತಿಲಕವು; ಉಜ್ವಲಂ=ಶೋಭಿಸುವ.

ದೇವರ ಅಕ್ಕಪಕ್ಕದಲ್ಲಿ ಶ್ರೀ-ಭೂಮಿಯರು ಇದ್ದಾರೆ. ದೇವರು ತನ್ನ ಕಡೆಗಣ್ಣಿನಿಂದ ಅವರ ಮುಖಕಮಲವನ್ನು ನೋಡುತ್ತಿದ್ದಾನೆ. ಈ ದೃಶ್ಯವು ಕಮಲದಲ್ಲಿ ಆಸೆಪಡುವ ದುಂಬಿಯಂತೆ ಕಾಣುತ್ತಿತ್ತು. ಹಣೆಯಲ್ಲಿ ಒಂದು ಚಂದದ ನಾಮ, ನಾಮದ ಮಧ್ಯದಲ್ಲಿ ನವರತ್ನಗಳಿಂದ ನಿರ್ಮಿತವಾದ ಒಂದು ತಿಲಕ. ಇದರಿಂದ ದೇವರು ಶೋಭಿಸುತ್ತಿದ್ದಾನೆ.

**ಅಲಕಾಸಕ್ತವಿಲಸನ್ಮುಕುಟಾದ್ಭುತಭಾಸ್ಕರಮ್ ।**
**ಅನರ್ಘ್ಯಹಾರಕೈಯೂರನೂಪುರಾದ್ಯೈರ್ವಿರಾಜಿತಮ್ ॥ ೬೭ ॥**

ಅಲಕ=ಮುಂಗುರುಳು; ಆಸಕ್ತ=ಅಪೇಕ್ಷೆ; ವಿಲಸತ್=ಶೋಭಿಸುವ; ಮುಕುಟ=ಕಿರೀಟ; ಅದ್ಭುತ=ವಿಚಿತ್ರ; ಭಾಸ್ಕರಮ್=ಸೂರ್ಯನನ್ನು; ಅನರ್ಘ್ಯ=ಬೆಲೆಬಾಳುವ; ಹಾರ=ಮಾಲೆಗಳು; ಕೈಯೂರ=ವಂಕಿಯು; ನೂಪುರ=ಗೆಜ್ಜೆಗಳು; ಆದ್ಯೈಃ=ಮೊದಲಾದುವುಗಳಿಂದ; ವಿರಾಜಿತಂ=ಶೋಭಿಸುವ.

ಹಣೆಯಲ್ಲಿ ಹರಡಿದ ಮುಂಗುರುಳು. ತಲೆಯಲ್ಲಿ ಒಂದು ಕಿರೀಟ. ಇದು ಸೂರ್ಯನಂತೆ ಜ್ವಲಿಸುತ್ತಿದೆ. ಬೆಲೆಬಾಳುವ ಮುತ್ತಿನ ಸರಗಳು, ವಂಕಿಗಳು, ಕಾಲ್ಗೆಜ್ಜೆಗಳು ಇವುಗಳಿಂದ ದೇವರು ಬೆಳಗುತ್ತಿದ್ದಾನೆ.

**ಕಂದರ್ಪಕೋಟಿಲಾವಣ್ಯಮಂದಿರಾಕಾರಮಚ್ಯುತಮ್ ।**
**ಸುವರ್ಣಮಂಟಪಾಂತಸ್ಥಂ ಕಮಲಾಮಲವಿಷ್ಟರಮ್ ॥ ೬೮ ॥**

ಕಂದರ್ಪ=ಕಾಮನು; ಕೋಟಿ=ಕೋಟಿ ಸಂಖ್ಯೆಯು; ಲಾವಣ್ಯ=ಚಂದವು; ಮಂದಿರ=ಮನೆಯು; ಆಕಾರಂ=ರೂಪ; ಅಚ್ಯುತಂ=ದೋಷರಹಿತ; ಸುವರ್ಣ=ಚಿನ್ನ; ಮಂಟಪ=ಮಂಟಪವು; ಅಂತಃ=ಒಳಗೆ; ಸ್ಥಂ=ಇರುವ; ಕಮಲ=ತಾವರೆ; ಅಮಲ=ಸ್ವಚ್ಛ; ವಿಷ್ಟರಂ=ಆಸನ.

ಒಂದು ಮಂದಿರದಲ್ಲಿ ದೇವರು ಇದ್ದಾನೆ. ಕೋಟಿಗಿಂತಲೂ ಹೆಚ್ಚು ಮನ್ಮಥರು ಏಕತ್ರ ಸೇರಿದರೆ ಏನು ಚಂದವೋ ಅದಕ್ಕಿಂತಲೂ ಹೆಚ್ಚು ಚಂದ ಇದೆ ಈ ಮಂದಿರ. ಆ ಮನೆಯಲ್ಲಿ ಒಂದು ಚಿನ್ನದ ಮಂಟಪ. ಮಂಟಪದ ಮಧ್ಯದಲ್ಲಿ ಒಂದು ನಿರ್ಮಲವಾದ ಕಮಲ. ಆ ಕಮಲದಲ್ಲಿ ದೋಷರಹಿತನಾದ ದೇವರು ಇದ್ದಾನೆ.

**ವಿಶ್ವಸ್ಥೇಮಲಯೋತ್ಪತ್ತಿಮುಕ್ತ್ಯಾದೇರ್ಮುಖ್ಯಕಾರಣಮ್ ।**
**ಅಚ್ಛಶೇಷಫಣಾರತ್ನಛತ್ರಶೋಭಿತಮೈಕ್ಷತ ॥ ೬೯ ॥**

ವಿಶ್ವ=ಜಗತ್ತು; ಸ್ಥೇಮ=ಸ್ಥಿತಿ; ಲಯ=ನಾಶ; ಉತ್ಪತ್ತಿ=ಸೃಷ್ಟಿ; ಮುಕ್ತಿ=ಮೋಕ್ಷ; ಆದೇಃ= ಮೊದಲಾದ್ದು. ಮುಖ್ಯ=ಮುಖ್ಯ; ಕಾರಣಂ=ಕಾರಣವು; ಅಚ್ಛ=ನಿರ್ಮಲ; ಶೇಷ=ಶೇಷನು; ಫಣ=ಹೆಡೆಯು; ರತ್ನ=ರತ್ನವು; ಛತ್ರ=ಕೊಡೆಯು; ಶೋಭಿತಂ=ಬೆಳಗುವ; ಐಕ್ಷತ= ನೋಡಿದನು.

ಈ ದೇವರು ಜಗತ್ತಿನ ಉತ್ಪತ್ತಿ, ಪಾಲನೆ, ಲಯ, ಮೋಕ್ಷಾದಿಗಳಿಗೆ ಕಾರಣನಾಗಿದ್ದಾನೆ. ದೇವರ ಹಿಂಭಾಗದಲ್ಲಿ ಶೇಷನು ಹೆಡೆಯರಳಿಸಿ ಇದ್ದಾನೆ. ಹೆಡೆಗಳಲ್ಲಿ ರತ್ನಗಳು ಶೋಭಿಸುತ್ತವೆ. ಇದರಿಂದ ಈ ಹೆಡೆಗಳು ರತ್ನಗಳ ಕೊಡೆಗಳಂತೆ ತೋರುತ್ತಿವೆ. ಈ ಕೊಡೆಗಳ ಕೆಳಗೆ ದೇವರು ಶೋಭಿಸುತ್ತಿದ್ದಾನೆ. ಇಂತಹ ಕೃಷ್ಣನನ್ನು ಅಕ್ರೂರನು ಕಂಡನು.

**ವಿಧಿಮುಖ್ಯೈಃ ಸುರಗಣೈಃ ಮುದಿತೈಃ ಮುನಿಪುಂಗವೈಃ ।**
**ಗೀಯಮಾನಂ ದಯಾದೃಷ್ಟಿಕ್ಷಾಲಿತಾಶ್ರಿತ ಕಲ್ಮಷಮ್ ॥ ೭೦ ॥**

ವಿಧಿ=ಬ್ರಹ್ಮನು; ಮುಖ್ಯೈಃ=ಮೊದಲಾದವರಿಂದ; ಸುರ=ದೇವತೆಗಳು; ಗಣೈಃ= ಗುಂಪುಗಳಿಂದ; ಮುದಿತೈಃ=ಸಂತೋಷಗೊಂಡ; ಮುನಿ=ಋಷಿಗಳು; ಪುಂಗವೈಃ= ಗುಂಪುಗಳಿಂದ; ಗೀಯಮಾನಂ=ಹೊಗಳಲ್ಪಡುವ; ದಯಾ=ಕರುಣೆಯು; ದೃಷ್ಟಿ=ನೋಟವು; ಕ್ಷಾಲಿತ=ನಷ್ಟ; ಆಶ್ರಿತ=ಆಶ್ರಿತರು; ಕಲ್ಮಶಂ=ದೋಷವು.

ಈ ರೂಪವನ್ನು ಬ್ರಹ್ಮಾದಿದೇವತೆಗಳೂ ಮುನಿಶ್ರೇಷ್ಠರೂ ಹೊಗಳುತ್ತಿದ್ದಾರೆ. ಈ ರೂಪದ ದರ್ಶನದಿಂದ ತುಷ್ಟರೂ ಆಗಿದ್ದಾರೆ. ಈ ರೂಪವು ತನ್ನ ದಯಾಪೂರ್ಣ ನೋಟವನ್ನು ಇವರ ಮೇಲೆ ಬೀರಿದೆ. ಇದರಿಂದ ಇವರ ಪಾಪಗಳೆಲ್ಲಾ ತೊಳೆದು ಹೋಗಿವೆ.

**ದೃಷ್ಟ್ವಾ ತಮಂಬೋರುಹಪತ್ರನೇತ್ರಂ**
**ತುಷ್ಟಾವ ತುಷ್ಟಾಖಿಲಚಿತ್ತವೃತ್ತಿಃ ।**
**ಪಶ್ಚಾತ್ಸಿಷೇವೇ ರಥಸಂಸ್ಥಿತಂ ತಂ**
**ಮುಕ್ತೋಽಪಿ ನೈವೋಜ್ಝತಿ ಕೃಷ್ಣಸೇವಾಮ್ ॥ ೭೧ ॥**

ದೃಷ್ಟ್ವಾ=ನೋಡಿ; ತಂ=ಆ; ಅಂಬೋರುಹ=ತಾವರೆ; ಪತ್ರ=ಎಲೆ; ನೇತ್ರಂ=ಕಣ್ಣು; ತುಷ್ಟಾವ=ಹೊಗಳಿದನು; ತುಷ್ಟ=ತೋಷಗೊಂಡ; ಅಖಿಲ=ಎಲ್ಲಾ; ಚಿತ್ತ=ಮನಸ್ಸು; ವೃತ್ತಿಃ= ಕೆಲಸವು; ಪಶ್ಚಾತ್=ಅನಂತರ; ಸಿಷೇವೆ=ಸೇವಿಸಿದನು; ರಥ=ರಥವು; ಸಂಸ್ಥಿತಂ= ಇರುವ;

ತಂ=ಆ; ಮುಕ್ತಃ=ಮುಕ್ತನು; ಅಪಿ=ಕೂಡಾ; ನೈವ=ಇಲ್ಲ; ಉಜ್ಝತಿ=ಬಿಡುವುದು; ಕೃಷ್ಣ=ಕೃಷ್ಣನು; ಸೇವಾಂ=ಸೇವೆಯನ್ನು.

ಅಕ್ರೂರನು ನೀರಿನ ಒಳಗೆ ದೇವರನ್ನು ಈ ರೀತಿ ಕಂಡನು. ಎಲ್ಲಾ ರೀತಿಯಿಂದಲೂ ಮನಸ್ಸು ಉಲ್ಲಸಿತವಾಗಿದೆ. ದೇವರನ್ನು ತುಂಬಾ ಹೊಗಳಿದನು. ಅನಂತರ ರಥದ ಬಳಿಗೆ ಬಂದನು. ರಥ ಹತ್ತಿ ಹಗ್ಗ ಹಿಡಿದು ರಥವನ್ನು ಮುನ್ನಡೆಸುವ ಮೂಲಕ ಕೃಷ್ಣನ ಸೇವೆ ಮಾಡಿದನು. ಯದ್ಯಪಿ ಅಕ್ರೂರನು ಜೀವನ್ಮುಕ್ತನು. ಆದ್ದರಿಂದ ಈತನಿಗೆ ಏನೂ ಬೇಕಾಗಿಲ್ಲ. ಆದರೂ ತನ್ನ ಸ್ವಭಾವಬಲದಿಂದ ಕೃಷ್ಣಸೇವೆಯನ್ನು ಮುಂದುವರಿಸಿದನು.

**ಸಂದೇಶ** : ದೇವರ ದರ್ಶನಾದಿಗಳಿಂದ ತಾನು ಧನ್ಯನಾದರೂ ಅನಂತರವೂ ದೇವರ ಸೇವಾದಿಗಳನ್ನು ಮುಂದುವರಿಸಬೇಕು.

**ಯಮುನಾ ಸಾ ವಿಜಯತೇ ಯಮಿನಾಂ ಪರಮಪ್ರಿಯಾ ।**
**ಪ್ರದರ್ಶಯತಿ ಯಾ ಕೃಷ್ಣಂ ಸುಧಿಯಃ ಸ್ನಾನಮಾತ್ರತಃ ॥ ೭೨ ॥**

ಯಮುನಾ=ಯಮುನೆಯು; ಸಾ=ಆ; ವಿಜಯತೇ=ಜಯಿಸಿದ್ದಾಳೆ; ಯಮಿನಾಂ=ಸನ್ಯಾಸಿಗಳಿಗೆ; ಪರಮ=ಬಹಳ; ಪ್ರಿಯಾ=ಇಷ್ಟಳು; ಪ್ರದರ್ಶಯತಿ=ತೋರಿಸುತ್ತಾಳೆ; ಯಾ=ಯಾರು; ಕೃಷ್ಣಂ=ಕೃಷ್ಣನನ್ನು; ಸುಧಿಯಃ=ಜ್ಞಾನಿಗಳಿಗೆ; ಸ್ನಾನಮಾತ್ರತಃ=ಕೇವಲ ಸ್ನಾನದಿಂದ.

ಈ ಯಮುನೆಯನ್ನು ಸನ್ಯಾಸಿಗಳು ಬಹಳವಾಗಿ ಆದರಿಸುತ್ತಾರೆ. ಇವರೆಲ್ಲಾ ದೇವರ ದರ್ಶನಕ್ಕಾಗಿ ನಾನಾ ನದಿಗಳಲ್ಲಿ ಸ್ನಾನಮಾಡುತ್ತಾರೆ. ನಾನಾ ದೇವತೆಗಳನ್ನು ಆರಾಧಿಸುತ್ತಾರೆ. ಈ ರೀತಿಯಾಗಿ ತುಂಬಾ ಶ್ರಮಪಡುತ್ತಾರೆ. ಆದರೂ ದೇವರ ದರ್ಶನ ಆಗುವುದಿಲ್ಲ. ಆದರೆ ಈ ಯಮುನೆ ಹಾಗಲ್ಲ; ಇವಳಲ್ಲಿ ಸ್ನಾನ ಮಾತ್ರ ಮಾಡಿದರೂ ಸಾಕು ದೇವರ ದರ್ಶನ ಆಗುತ್ತದೆ ಎನ್ನುವುದಕ್ಕೆ ಅಕ್ರೂರನೇ ಸಾಕ್ಷಿ. ಆದ್ದರಿಂದ ಮುನಿಗಳ ಗೌರವಕ್ಕೆ ಪಾತ್ರಳಾಗಿದ್ದಾಳೆ.

**ಸಂದೇಶ** : ಮೋಕ್ಷಜ್ಞಾನ ಬಂದಮೇಲೆ ಅಪರೋಕ್ಷಜ್ಞಾನ ಆಗುವ ತನಕ ತೀರ್ಥ-ಯಾತ್ರಾದಿಗಳನ್ನು ಮಾಡಲೇ ಬೇಕು.

**ಮಧುರಾಮುಪಗಮ್ಯಾಥ ಕೃತಸ್ಥಾನಃ ಪುರಾದ್ಬಹಿಃ ।**
**ಪುರತಸ್ತ್ವಂ ಪುರಂ ಯಾಹೀತ್ಯವದತ್ಗಾಂದಿನೀಸುತಮ್ ॥ ೭೩ ॥**

ಮಧುರಾಂ=ಮಧುರೆಯನ್ನು; ಉಪಗಮ್ಯ=ಹೊಂದಿ; ಅಥ=ಅನಂತರ; ಕೃತ=ಮಾಡಿದ; ಸ್ಥಾನಃ=ಜಾಗವುಳ್ಳ; ಪುರಾತ್=ಊರಿನಿಂದ; ಬಹಿಃ=ಹೊರಗೆ; ಪುರತಃ=ಮೊದಲು;

ತ್ವಂ=ನೀನು; ಪುರಂ=ಮನೆಯನ್ನು; ಯಾಹಿ=ಹೋಗು; ಇತಿ=ಎಂದು; ಅವದತ್=ಹೇಳಿದನು; ಗಾಂದಿನೀ=ಗಾಂದಿನಿಯು; ಸುತಂ=ಮಗನನ್ನು.

ಅಕ್ರೂರನ ತಾಯಿಯ ಹೆಸರು ಗಾಂದಿನೀ ಎಂದು. ಅಕ್ರೂರನು ಕೃಷ್ಣನನ್ನು ಮಧುರೆಗೆ ಕರೆದುಕೊಂಡು ಹೋದನು. ಊರಿನ ಹೊರಗೆ ಒಂದು ಮನೆಯಲ್ಲಿ ಕೃಷ್ಣನು ಉಳಿದನು. ಅಕ್ರೂರ, ನೀನು ಮುಂದೆ ಹೋಗು, ನಾನು ಅನಂತರ ಊರೊಳಗೆ ಬರುವೆನು ಎಂದು ಕೃಷ್ಣನು ಹೇಳಿದನು.

ಸಂದೇಶ : ಪ್ರಾರಬ್ಧ ಬಲವಾಗಿದ್ದರೆ ಎಂತಹ ಜ್ಞಾನಿಯನ್ನೂ ದೇವರು ದೂರಮಾಡುತ್ತಾನೆ.

**ಸಂಸಾರಾಸಾರಸಿಂಧೋರ್ಜನಿಮರಣಜರಾದ್ಯೂರ್ಮಿಭಿರ್ಬಾಧಿತಾನಾಂ**
**ದಾರಾಗಾರಾದಿಭಾರಾಃ ಕಿಮಿಹ ಸುಖಕರಾಃ ಪ್ರೇಮಪಾಶೈರ್ನಿಬದ್ಧಾಃ ।**
**ಕೃಷ್ಣತ್ವತ್ಪಾದಪೋತಂ ಪ್ರದಿಶ ತದನಿಶಂ ಸತ್ಪತಾಕಂ ಸಕೇತುಂ**
**ರಮ್ಯಂ ಕರ್ಮಂದಿಗಮ್ಯಂ ಭವಜಲಧಿ ಭವತ್ಸ್ವೇದ ವಿಚ್ಛೇದಹೇತುಮ್ ॥ ೭೪ ॥**

ಸಂಸಾರ=ಸಂಸಾರವು; ಅಸಾರ=ಸತ್ವರಹಿತ; ಸಿಂಧೋಃ=ಸಮುದ್ರದ; ಜನಿ=ಉತ್ಪತ್ತಿ; ಮರಣ=ಸಾವು; ಜರಾ=ಮುದಿತನ; ಆದಿ=ಮೊದಲು; ಊರ್ಮಿಭಿಃ=ತೆರೆಗಳಿಂದ; ಬಾಧಿತಾನಾಂ=ಪೀಡಿತರ; ದಾರಾ=ಪತ್ನಿಯು; ಆಗಾರ=ಮನೆಯು; ಆದಿ=ಮೊದಲು; ಭಾರಾಃ=ಹೊರೆಯು; ಕಿಂ=ಏನು; ಇಹ=ಇಲ್ಲಿ; ಸುಖ=ನೆಮ್ಮದಿ; ಕರಾಃ=ಮಾಡುವಿಕೆ; ಪ್ರೇಮ=ಪ್ರೀತಿ; ಪಾಶೈಃ=ಹಗ್ಗದಿಂದ; ನಿಬದ್ಧಾಃ=ಕಟ್ಟಲ್ಪಟ್ಟ; ಕೃಷ್ಣ=ಕೃಷ್ಣನೇ; ತ್ವತ್=ನಿನ್ನ; ಪಾದ=ಕಾಲು; ಪೋತಂ=ದೋಣಿಯುನ್ನು; ಪ್ರದಿಶ=ಕೊಡು; ತತ್=ಅದು; ಅನಿಶಂ=ಯಾವಾಗಲೂ; ಸತ್=ಒಳ್ಳೆದು; ಪತಾಕಂ=ಪತಾಕೆವುಳ್ಳ; ಸಕೇತುಂ=ಧ್ವಜದಿಂದ ಕೂಡಿದ; ರಮ್ಯಂ=ಚಂದದ; ಕರ್ಮಂದಿ=ಸನ್ಯಾಸಿಗಳು; ಗಮ್ಯಂ=ಪಡೆಯಲು ಯೋಗ್ಯ; ಭವ=ಸಂಸಾರ; ಜಲಧಿ=ಸಮುದ್ರವು; ಭವತ್=ಉಂಟಾಗುವ; ಸ್ವೇದ=ಬೆವರು; ವಿಚ್ಛೇದ=ನಾಶ; ಹೇತುಂ=ಕಾರಣ.

ಕೃಷ್ಣ, ಈ ಸಂಸಾರ ಎಂಬುದು ಒಂದು ಸಮುದ್ರ, ಇದರ ಜಲವು ಉತ್ತಮವಲ್ಲ. ಹುಟ್ಟು, ಸಾವು, ಮುದಿತನ ಇವೇ ಮೊದಲಾದವುಗಳು ತೆರೆಗಳು. ನೀರು ಹೇಗೋ ತೆರೆಗಳೂ ಹಾಗೆಯೇ. ಆದ್ದರಿಂದ ಇಂತಹ ತೆರೆಗಳಿಂದ ಅನುಕೂಲಕ್ಕಿಂತ ಪ್ರತಿಕೂಲವೇ ಜಾಸ್ತಿ. ಈ ನೀರಿನಲ್ಲಿ ಪತ್ನಿ, ಪುತ್ರರು, ಬಂಧುಗಳೆಂಬ ಮೊಸಳೆಗಳು. ಇವುಗಳನ್ನು ನಾವು ಪ್ರೀತಿಸುತ್ತೇವೆ. ಇದಕ್ಕೆ ಪ್ರತಿಯಾಗಿ ಅವುಗಳು ಪ್ರೀತಿಯನ್ನು ತೋರಿಸುವುದಿಲ್ಲ. ನಮ್ಮ ಕಾಲೆಳೆದು ಮತ್ತಷ್ಟು ಈ ಸಮುದ್ರದಲ್ಲಿ ಮುಳುಗಿಸುತ್ತವೆ. ಈ ಸಮುದ್ರವನ್ನು ದಾಟಬೇಕಾಗಿದೆ. ನಿನ್ನ ಪಾದವನ್ನು ಹೊರತು ಬೇರೆ ಯಾವ ದೋಣಿಯೂ ದಾಟಿಸಲು ಸಮರ್ಥವಲ್ಲ. ನಿನ್ನ ಚರಣದಲ್ಲಿ ಪತಾಕೆಯ ಧ್ವಜದ ಗುರುತು ಇದೆ. ಇಂತಹ ನಿನ್ನ

ಚರಣದ ಆಶ್ರಯವನ್ನು ಕೊಡು. ನಿನ್ನ ಚರಣವು ಬಹಳ ಚಂದವೂ ಇದೆ. ಈ ತನಕ ಬಹಳಷ್ಟು ಜನ ಸನ್ಯಾಸಿಗಳು ಈ ದೋಣಿಯನ್ನು ಆಶ್ರಯಿಸಿ ಸಂಸಾರವನ್ನು ದಾಟಿದ್ದಾರೆ. ನಿನ್ನ ಚರಣವನ್ನು ಆಶ್ರಯಿಸಿ ಈ ಸಂಸಾರದಲ್ಲಿ ಪ್ರಯಾಣಿಸುತ್ತೇನೆ. ಆಗ ಬೀಸುವ ಒಳ್ಳೆಯ ಗಾಳಿಯಿಂದ ಸಂಸಾರತಾಪದಿಂದ ಉಂಟಾದ ಬೆವರೂ ಕೂಡಾ ಪರಿಹಾರವಾಗುತ್ತದೆ.

**ಸಂದೇಶ** : ಅಂಬಿಗ ನಾ ನಿನ್ನ ನಂಬಿದೆ । ಜಗದಂಬಾರಮಣ ನಿನ್ನ ನಂಬಿದೇ । ಈ ಸಾಂಸಾರಿಕ ದುಃಖ ನೀಗಲು ದೇವರ ಪಾದವೇ ಗತಿ.

**ಪ್ರಿಯಸಂಗಮವಿಚ್ಛೇದಭಯನಿರ್ವಿಣ್ಣಧೀರಸೌ ।**
**ಗೃಹಪುತ್ರಕಲತ್ರೇಚ್ಛಾರಹಿತೋ ವಕ್ತಿ ಮಾಧವಮ್** ॥ ೭೫ ॥

ಪ್ರಿಯ=ಇಷ್ಟ; ಸಂಗಮ=ಸಂಬಂಧ; ವಿಚ್ಛೇದ=ದೂರವಾಗುವಿಕೆ; ಭಯ=ಹೆದರಿಕೆ; ನಿರ್ವಿಣ್ಣ=ದುಃಖಿತ; ಧೀಃ=ಬುದ್ಧಿ; ಅಸೌ=ಇವನು; ಗೃಹ=ಮನೆಯು; ಪುತ್ರ=ಮಗನು; ಕಲತ್ರ=ಪತ್ನಿಯು; ಇಚ್ಛಾ=ಇಚ್ಛೆಯು; ರಹಿತ=ಇಲ್ಲದ; ವಕ್ತಿ=ಹೇಳುತ್ತಾನೆ; ಮಾಧವಂ= ದೇವರನ್ನು.

ಕೃಷ್ಣನ ಮಾತನ್ನು ಕೇಳಿದ ಅಕ್ರೂರನು ಭೀತನಾದನು. ಕೃಷ್ಣನ ಅಗಲುವಿಕೆ ಆಗುತ್ತದೆ ಎಂದು ಮನಸ್ಸು ವ್ಯಗ್ರವಾಯಿತು. ಈತನಿಗೆ ಮನೆ, ಮಠ, ಆಸ್ತಿ, ಪಾಸ್ತಿ, ಹೆಂಡತಿ, ಮಕ್ಕಳು ಇವುಗಳಲ್ಲಿ ಆಸಕ್ತಿ ಇಲ್ಲ. ಇಂತಹ ಅಕ್ರೂರನು ಕೃಷ್ಣನನ್ನು ಕುರಿತು ಈ ರೀತಿ ಹೇಳುತ್ತಾನೆ.

**ಸಂದೇಶ** : ನಿಜವಾದ ಭಕ್ತರು ತಮಗೆ ಬೇಕಾದ್ದು ಶಾಸ್ತ್ರಸಮ್ಮತವಾಗಿದ್ದರೆ ಅದನ್ನು ದೇವರಲ್ಲಿ ಧೈರ್ಯದಿಂದ ಕೇಳುತ್ತಾರೆ.

**ಪ್ರಾಯೋ ವ್ರಜಸ್ತ್ರೀಜನದತ್ತಶಾಪೋ**
**ಮಾಮಸ್ಪೃಶತ್ ಯೇನ ಭವಾನ್ ವಿಯುಂಕ್ತೇ ।**
**ಲಾವಣ್ಯವಾರಾಂ ನಿಧಿಪೂರ್ಣಮೂರ್ತಿಃ**
**ಶ್ರೇಯೋ ವಿನಾ ಪುಣ್ಯಮುಪಾರ್ಜಯೇತ್ ಕಃ** ॥ ೭೬ ॥

ಪ್ರಾಯಃ=ಪ್ರಾಯಶಃ; ವ್ರಜ=ಗೋಕುಲವು; ಸ್ತ್ರೀ=ನಾರಿಯರು; ಜನ=ಜನರು; ದತ್ತ=ಕೊಟ್ಟ; ಶಾಪಃ=ಶಾಪವು; ಮಾಂ=ನನ್ನನ್ನು; ಅಸ್ಪೃಶನ್=ತಟ್ಟಿತು; ಯೇನ= ಯಾವುದರಿಂದ; ಭವಾನ್=ನೀನು; ವಿಯುಂಕ್ತೇ=ಅಗಲುತ್ತಿ; ಲಾವಣ್ಯ=ಸೌಂದರ್ಯ; ವಾರಾಂ=ನೀರುಗಳ; ನಿಧಿ=ಸ್ಥಳವು; ಪೂರ್ಣ=ತುಂಬು; ಮೂರ್ತಿಃ=ಶರೀರವು; ಶ್ರೇಯಃ= ಒಳ್ಳೆದು; ವಿನಾ=ಹೊರತು; ಪುಣ್ಯಂ=ಪುಣ್ಯವನ್ನು; ಉಪಾರ್ಜಯೇತ್= ಸಂಪಾದಿಸುವುದು; ಕಃ=ಯಾರು?

ಅಕ್ರೂರನು ಮಾತನ್ನು ಮುಂದುವರಿಸುತ್ತಾನೆ. ಕೃಷ್ಣ ಗೋಕುಲದಿಂದ ನಿನ್ನನ್ನು ಕರೆದು ತಂದೆ. ಆಗ ಗೋಪಿಯರು ವಿರಹದುಃಖವನ್ನು ತಾಳದಾದರು. ಸಿಟ್ಟಿನಿಂದ ಒಂದು ಮಾತು ಹೇಳಿದ್ದರು –ನಮಗೂ ಕೃಷ್ಣನಿಗೂ ವಿಯೋಗವನ್ನು ಯಾರು ಮಾಡುತ್ತಾರೋ ಅವರಿಗೂ ಕೃಷ್ಣನ ವಿಯೋಗವಾಗಲಿ ಎಂದು. ಈ ಮಾತನ್ನು ಅವರು ಕಂಸನನ್ನು ಕುರಿತು ಹೇಳಿದ್ದು. ನಿನ್ನನ್ನು ಕರೆದುಕೊಂಡು ಹೋಗಲು ನಾನು ಬಂದದ್ದರಿಂದ ಗೋಪಿಯರ ಆ ಶಾಪವು ಪ್ರಾಯಶಃ ಮೊದಲು ನನಗೇ ತಟ್ಟಿರಬೇಕು. ಇಲ್ಲದಿದ್ದರೆ ನಿನ್ನಿಂದ ಈ ರೀತಿ ನಾನು ದೂರ ಹೋಗುವ ಪ್ರಸಂಗ ಬರುತ್ತಿರಲಿಕ್ಕಿಲ್ಲ. ನೀನು ಸಮುದ್ರದ ನೀರಿಗಿಂತಲೂ ಜಾಸ್ತಿಯಾದ ಚಂದದಿಂದ ಕೂಡಿದವ. ನಿನ್ನ ಜೊತೆಯಲ್ಲಿ ಇರಬೇಕಾದರೂ ಪೂರ್ವಪುಣ್ಯ ಬಹಳ ಬೇಕಾಗುತ್ತದೆ.

ಸಂದೇಶ : ಭಕ್ತರ ಮನಸ್ಸನ್ನು ನೋಯಿಸಿದರೆ ದೇವರು ನಮ್ಮಿಂದ ದೂರನಾಗುತ್ತಾನೆ.

**ಪುಣ್ಯಶ್ರೇಣ್ಯತಿದೂರಮಪ್ಯನುದಿನಂ ಮೂಕಂ ಸತಾ ದೂಷಣೇ–**
**ಷ್ವಂಧಂ ಮೀನದೃಗೀಕ್ಷಣೇಷು ಬಧಿರಂ ತ್ವದ್ಭಿನ್ನಗೋಷ್ಠೀಷುಮಾಮ್ ।**
**ಪಂಗುಂ ಪಾಪಕರಪ್ರಯಾಣಕರಣೇ ಪಾಣಿಂ ಚ ತತ್ಕರ್ಮಸು**
**ಕ್ಲೀಬಂ ಗ್ರಾಮ್ಯರತೌ ಮುಕುಂದ ಕುರು ಮಾಂ ಮೂಢಂ ತದೀಯಸ್ಮೃತೌ ॥ ೭೭ ॥**

ಪುಣ್ಯ=ಪುಣ್ಯವು; ಶ್ರೇಣಿ=ಗುಂಪು; ಅತಿದೂರಂ=ಬಹಳ ದೂರ; ಅಪಿ=ಕೂಡಾ; ಅನುದಿನಂ=ಪ್ರತಿದಿನವೂ; ಮೂಕಂ=ಮೂಕನನ್ನು; ಸತಾಂ=ಸಜ್ಜನರ; ದೂಷಣೇಷು= ದೂಷಣೆಯಲ್ಲಿ; ಅಂಧಂ=ಕುರುಡನನ್ನು; ಮೀನ=ಮೀನು; ದೃಕ್=ಕಣ್ಣು; ಈಕ್ಷಣೇಷು= ನೋಟದಲ್ಲಿ; ಬಧಿರಂ=ಕಿವಿ ಇಲ್ಲದವನನ್ನು; ತ್ವತ್=ನೀನು; ಭಿನ್ನ=ಬೇರೆ; ಗೋಷ್ಠೀಷು= ಸಭೆಗಳಲ್ಲಿ; ಮಾಂ=ನನ್ನನ್ನು; ಪಂಗುಂ=ಕಾಲಿಲ್ಲದವನನ್ನು; ಪಾಪ=ಪಾಪವು; ಕರ= ಮಾಡುವುದು; ಪ್ರಯಾಣ=ಯಾತ್ರೆಯು; ಕರಣೆ=ಕೆಲಸದಲ್ಲಿ; ಪಾಣಿಂ=ಕೈಯನ್ನು; ಚ=ಮತ್ತು; ತತ್=ಆ; ಕರ್ಮಸು=ಕೆಲಸಗಳಲ್ಲಿ; ಕ್ಲೀಬಂ=ನಪುಂಸಕನನ್ನು; ಗ್ರಾಮ್ಯ=ನೀಚ; ರತೌ= ಕ್ರೀಡೆಯಲ್ಲಿ; ಮುಕುಂದ=ಕೃಷ್ಣನು; ಕುರು=ಮಾಡು; ಮಾಂ=ನನ್ನನ್ನು; ಮೂಢಂ= ಮೂರ್ಖನನ್ನು; ತದೀಯ=ಅದರ ಸಂಬಂಧಿ; ಸ್ಮೃತೌ=ಸ್ಮರಣೆಯಲ್ಲಿ.

ಕೃಷ್ಣ, ನಾನು ನಿನ್ನಿಂದ ದೂರ ಹೋಗುತ್ತಿದ್ದೇನೆ. ನನಗೆ ನೀನು ಕೆಲವು ವರಗಳನ್ನು ಅನುಗ್ರಹಿಸಬೇಕು. ನನ್ನನ್ನು ಮೂಕನನ್ನಾಗಿ ಮಾಡು. ಸರ್ವಥಾ ಅಲ್ಲ. ನಿನ್ನಿಂದ ದೂರವಾದವರು ಲೋಕದ ಬಗ್ಗೆ ಹಾಳುಹರಟೆ ಮಾತನಾಡಿ ಸಮಯವನ್ನು ವ್ಯರ್ಥ ಮಾಡುತ್ತಾರೆ. ಅಥವಾ ಸಜ್ಜನರಾದ ನಿನ್ನ ಭಕ್ತರನ್ನು ದೂಷಿಸಿ ಪಾಪವನ್ನು ಸಂಪಾದಿಸುತ್ತಾರೆ. ಈ ಎರಡಕ್ಕೂ ಅವಕಾಶ ಕೊಡದಂತೆ ಈ ವಿಷಯದಲ್ಲಿ ಮಾತ್ರ ನನ್ನನ್ನು ಮೂಕನನ್ನಾಗಿ ಮಾಡು. ಕಾಮುಕತನದಿಂದ ಪರನಾರೀದರ್ಶನದ ಪ್ರಸಂಗದಲ್ಲಿ ನನ್ನನ್ನು ಕುರುಡನನ್ನಾಗಿ

ಮಾಡು. ನಿನ್ನ ವಿಷಯ ಹೊರತು ಬೇರೆ ಮಾತುಗಳು ಕಿವಿಗೆ ಬೀಳದಿರಲಿ. ಅಂತಹ ಪ್ರಸಂಗದಲ್ಲಿ ನನ್ನನ್ನು ಕಿವುಡನನ್ನಾಗಿ ಮಾಡು. ಕೆಟ್ಟ ಕೆಲಸವನ್ನು ಮಾಡಲು ಹೋಗುವ ಪ್ರಸಂಗ ಬಂದರೆ ನನ್ನನ್ನು ಕಾಲಿಲ್ಲದವನನ್ನಾಗಿ ಮಾಡು. ಅಂತಹ ಕೆಲಸಗಳನ್ನು ಮಾಡಲು ಯಾರಾದರೂ ಬಲಾತ್ಕರಿಸಿದರೆ ನನ್ನ ಕೈಗಳು ಮುರಿಯಲಿ. ಶಾಸ್ತ್ರವಿರುದ್ಧವಾದ ರತಿಕ್ರೀಡೆಯಲ್ಲಿ ಎನ್ನನ್ನು ನಪುಂಸಕನನ್ನಾಗಿ ಮಾಡು. ಕೆಲವುಸಲ ಅಂತಹ ಕೆಲಸಗಳನ್ನು ಮನಸ್ಸಿನಲ್ಲಿ ಎಣಿಸುವ ಸಂದರ್ಭ ಬರುತ್ತದೆ. ಆಗ ನನ್ನನ್ನು ಬುದ್ಧಿ ಇಲ್ಲದವನನ್ನಾಗಿ ಮಾಡು.

ಈ ರೀತಿಯಾದ ಮೂಕತನಾದಿಗಳು ಬರಬೇಕಾದರೆ ಜನ್ಮಾಂತರದ ಪುಣ್ಯ ಬಹಳ ಬೇಕು. ನನ್ನಲ್ಲಿ ಅಷ್ಟು ಪುಣ್ಯ ಇಲ್ಲ. ಆದರೂ ನೀನು ಕೊಡಬೇಕು. ವಸ್ತುತಃ ಕುರುಡುತನಾದಿಗಳು ಪಾಪದ ಫಲಗಳು. ನಾನು ನಿನ್ನಿಂದ ದೂರವಾಗುತ್ತಿದ್ದೇನೆ. ಆದ್ದರಿಂದ ಪಾಪಿ ಎಂದರ್ಥ. ಆದ್ದರಿಂದ ಅಂಧತ್ವಾದಿಗಳನ್ನು ಕೇಳಲು ನನಗೆ ಅಧಿಕಾರ ಇದೆ. ಸೀಮಿತವಾದ ಅಂಧತ್ವಾದಿಗಳನ್ನು ದಯಪಾಲಿಸು.

<u>**ಸಂದೇಶ**</u> : ದೇವರಲ್ಲಿ ಏನು ಬೇಡುವುದಾದರೂ ಅದಕ್ಕೆ ಒಂದು ಕಡಿವಾಣ ಬೇಕು.

**ಕಾಮಸ್ತೇಂಘ್ರಿಯುಗಾರ್ಚನೇಽಮಲಧಿಯಾಂ ಲೋಭಃ ಸುಪುಣ್ಯಾರ್ಜನೇ**
**ಮಾತ್ಸರ್ಯಂ ಚರಿತಾನುಕೀರ್ತನಸುಧಾಪಾನಾನ್ಮದಃ ಶತ್ರುಷು ।**
**ಕ್ರೋಧೋ ಭಕ್ತಜನೇಷು ರಾಗ ಉದಯಾಚ್ಛ್ರೀವಿಠ್ಠಲಾನ್ಯತ್ರನೋ**
**ಯಚ್ಛತ್ರುರ್ನಹಿ ಶತ್ರುರುಚ್ಚನಿಲಯಸ್ಯಾನ್ಯಸ್ಯ ಶತ್ರುರ್ಭವೇತ್ ॥ ೭೮ ॥**

ಕಾಮಃ=ಇಚ್ಛೆಯು; ತೇ=ನಿನ್ನ; ಅಂಘ್ರಿ=ಪಾದವು; ಯುಗ=ಎರಡು; ಅರ್ಚನೇ=ಪೂಜೆಯಲ್ಲಿ; ಅಮಲ=ಶುದ್ಧ; ಧಿಯಾಂ=ಬುದ್ಧಿಯವರಿಗೆ; ಲೋಭಃ=ಆಸೆಯು; ಸು=ಒಳ್ಳೆಯ; ಪುಣ್ಯ=ಪುಣ್ಯವು; ಆರ್ಜನೆ=ಸಂಪಾದನೆಯಲ್ಲಿ; ಮಾತ್ಸರ್ಯಂ=ಮತ್ಸರವು; ಚರಿತ=ಚರಿತ್ರೆಯು; ಅನುಕೀರ್ತನ=ಹೇಳುವುದು; ಸುಧಾ=ಅಮೃತ; ಪಾನಾತ್=ಕುಡಿಯುವುದರಿಂದ; ಮದಃ=ಅಹಂಕಾರವು; ಶತ್ರುಷು=ಶತ್ರುಗಳಲ್ಲಿ; ಕ್ರೋಧಃ=ಸಿಟ್ಟು; ಭಕ್ತ=ಭಕ್ತರು; ಜನೇಷು=ಜನರಲ್ಲಿ; ರಾಗಃ=ಮೋಹವು; ಉದಯಾತ್=ಉಂಬಾಗಲಿ; ಶ್ರೀ=ಕಾಂತಿಯು; ವಿಠ್ಠಲ=ದೇವರು; ಅನ್ಯತ್ರ=ಬೇರೆ ಕಡೆ; ನೋ=ಇಲ್ಲ; ಯತ್=ಯಾವ ಕಾರಣದಿಂದ; ಶತ್ರುಃ=ಶತ್ರುವು; ನಹಿ=ಅಲ್ಲ; ಶತ್ರುಃ=ಶತ್ರುವು; ಉಚ್ಚ=ದೊಡ್ಡ; ನಿಲಯಸ್ಯ=ಮನೆಯ; ಅನ್ಯತ್ರ=ಬೇರೆ ಕಡೆ; ಶತ್ರುಃ=ಶತ್ರುವು; ಭವೇತ್=ಆಗುತ್ತಾನೆ.

ಕೃಷ್ಣ, ನನ್ನಲ್ಲಿ ಕಾಮಕ್ರೋಧಾದಿಗಳೂ ಇರಲಿ. ಲೋಕದಲ್ಲಿ ಜನರಿಗೆ ವನಿತಾದಿ ವಿಷಯದಲ್ಲಿ ಆಸಕ್ತಿಯು ಇರುತ್ತದೆ. ನನಗೆ ಮಾತ್ರ ನಿನ್ನ ಪಾದಗಳ ಪೂಜೆಯಲ್ಲಿ ಆಸಕ್ತಿಯು ಇರಲಿ. ಒಳ್ಳೆಯ ಬುದ್ಧಿಯ ವಿಷಯದಲ್ಲಿ ಆಸೆ ಇರಲಿ. ಧನದ ವಿಷಯದಲ್ಲಿ ಆಸೆವುಳ್ಳವನು ನಾನಾ ಮುಖಗಳಿಂದ ಅದನ್ನು ಸಂಪಾದಿಸಲು ಪ್ರಯತ್ನಿಸುತ್ತಾನೆ. ಬಹು

ಶ್ರಮಪಟ್ಟು ರಕ್ಷಿಸುತ್ತಾನೆ. ಎಂತಹ ಸಂದರ್ಭದಲ್ಲಿಯೂ ಬಿಡುವುದಿಲ್ಲ. ಹಾಗೆಯೇ ಒಳ್ಳೆಯ ಬುದ್ಧಿಯನ್ನು ಸ್ವಂತ ಶ್ರಮದಿಂದಲೋ ಗುರುಮುಖದಿಂದಲೋ ಸಂಪಾದಿಸಬೇಕು. ಇದನ್ನು ನಿತ್ಯ ಮನನಾದಿಗಳಿಂದ ರಕ್ಷಿಸಬೇಕು. ಎಂತಹ ಪ್ರಸಂಗದಲ್ಲಿಯೂ ಈ ತಿಳುವಳಿಕೆಯು ಮಾಸದಂತೆ ನೋಡಿಕೊಳ್ಳಬೇಕು. ಪುಣ್ಯ ಸಂಪಾದನೆಯ ವಿಷಯದಲ್ಲಿ ಮಾತ್ಸರ್ಯ. ಮತ್ಸರಿಗಳು ಒಬ್ಬ ಶ್ರೀಮಂತನನ್ನು ಕಂಡರೆ ಆತನಿಗಿಂತ ತಾನು ಹೆಚ್ಚು ಶ್ರೀಮಂತನಾಗಬೇಕು ಎಂದು ಇಚ್ಛಿಸುತ್ತಾರೆ. ಹಾಗೆಯೇ ಒಬ್ಬ ನಾನಾ ರೀತಿಯಿಂದ ಪುಣ್ಯವನ್ನು ಸಂಪಾದಿಸುವುದನ್ನು ಕಂಡು ಆತನಿಗಿಂತ ಹೆಚ್ಚು ಪುಣ್ಯವಂತನಾಗಬೇಕೆಂದು ಬಹಳ ಸತ್ಕರ್ಮಗಳನ್ನು ಮಾಡುವಂತಾಗಲಿ. ನಿನ್ನ ಚರಿತ್ರೆಯನ್ನು ಸದಾ ಹೇಳಿಕೊಂಡು ಇರುವೆನು. ಇದೇ ಒಂದು ಅಮೃತಪಾನ. ಇದರಿಂದ ನನಗೆ ಮದ ಬರಲಿ. ಅಂದರೆ ಬೇರೆ ಎಲ್ಲಾ ವಿಷಯಗಳಲ್ಲಿಯೂ ತಿರಸ್ಕಾರ ಭಾವನೆ. ಲೋಕದಲ್ಲಿ ಮದಾಂಧರಿಗೆ ಬೇರೆ ಯಾವ ವಿಷಯವೂ ಗೋಚರಿಸುವುದಿಲ್ಲ. ನಿನ್ನ ಶತ್ರುಗಳ ವಿಷಯದ ಪ್ರಸ್ತಾವವಾದರೆ ಅದನ್ನು ಕೇಳಿದ ನನಗೆ ಕ್ರೋಧವು ಬರಲಿ. ಶತ್ರುಗಳನ್ನು ಕಂಡಾಗ ಅವರನ್ನು ಕೊಲ್ಲುವ ಇಚ್ಛೆಯು ಬರುವಂತೆ ನಿನ್ನ ನಿಂದಕರನ್ನು ಕಂಡಾಗಲೂ ಅವರನ್ನು ಬಡಿಯುವ ಅಪೇಕ್ಷೆಯು ಉಂಟಾಗಲಿ. ಬಂಧುಗಳಲ್ಲಿ ಅನುರಾಗ ಉಂಟಾಗುವಂತೆ ನಿನ್ನ ಭಕ್ತರಲ್ಲಿ ಎನಗೆ ರಾಗ ಉಂಟಾಗಲಿ. ಇಷ್ಟು ವಿಷಯಗಳನ್ನು ಬಿಟ್ಟು ಬೇರೆ ವಿಷಯಗಳಲ್ಲಿ ಕಾಮಾದಿಗಳು ಬಾರದಿರಲಿ. ಯದ್ಯಪಿ ಶಾಸ್ತ್ರದಲ್ಲಿ ಕಾಮಾದಿಗಳನ್ನು ಶತ್ರುಗಳನ್ನಾಗಿ ಚಿತ್ರಿಸಿದ್ದಾರೆ. ಹೀಗಿರುವಾಗ ಅಕ್ರೂರನು ಇವುಗಳನ್ನು ಹೇಗೆ ಪ್ರಾರ್ಥಿಸಿದನು? ಇದಕ್ಕೆ ಉತ್ತರ –ಲೋಕದಲ್ಲಿ ರಾಜನಿಗೆ ಪರಮ ಆಪ್ತನಾದ ಒಬ್ಬ ವ್ಯಕ್ತಿಗೆ ಯಾರೂ ಶತ್ರುಗಳಿರುವುದಿಲ್ಲ. ಯಾಕೆಂದರೆ ಆ ವ್ಯಕ್ತಿಯ ಶತ್ರುತ್ವವನ್ನು ಬೆಳೆಸಿದರೆ ಉಳಿಗಾಲವಿಲ್ಲ ಎಂಬ ವಿಷಯವು ತಿಳಿದಿರುತ್ತದೆ. ಅದೇ ರೀತಿ ನಾವು ರಾಜಾಧಿರಾಜನಾದ ದೇವರನ್ನು ಆಶ್ರಯಿಸಿದರೆ ಕಾಮಾದಿಗಳು ಯಾವುದೂ ನಮಗೆ ಶತ್ರುಗಳಾಗುವುದಿಲ್ಲ. ನಮ್ಮ ಶ್ರೇಯಸ್ಸಿಗೆ ಅನುಕೂಲವನ್ನೇ ಮಾಡುತ್ತವೆ. ರಾಜಾಶ್ರಯ ಇಲ್ಲದವರಿಗೆ ಶತ್ರುಗಳ ಕಾಟ ತಪ್ಪುವುದಿಲ್ಲ. ದೇವರನ್ನು ಆಶ್ರಯಿಸದವರಿಗೆ ಕಾಮಾದಿಗಳು ಶತ್ರುಗಳೇ ಆಗುತ್ತವೆ.

**ಸಂದೇಶ** : ಲೋಕದಲ್ಲಿರುವ ಯಾವುದೇ ಅಪಾಯಗಳನ್ನು ನಾವು ದೇವರಿಗಾಗಿ ಎಂದು ಸಂಕಲ್ಪಿಸಿ ಸ್ವೀಕರಿಸಿದರೆ ಅದುವೇ ಉಪಾಯವಾಗಿ ಮಾರ್ಪಾಡಾಗುತ್ತದೆ.

ರುದ್ರತ್ವಂ ಹಿ ಮನೋಭಿಮಾನ್ಯಸಿ ತತಸ್ತ್ವಚ್ಛತ್ರುಮಿತ್ರಂ ಮನೋ
ಮಾ ಕುರ್ವಚ್ಯುತಚಿಂತನಾರ್ಚನರತಂ ಕುರ್ವೀಶ ಹೇ ಭಾಸ್ಕರ ।
ಚಕ್ಷುರ್ಮಾನ್ಯಸಿ ತಚ್ಚ ವಿಠ್ಠಲವಪುಃ ಸಂದರ್ಶನೈಕಾಧ್ವರಂ
ಕೃತ್ವಾ ಮಾ ಕುರು ಕೈರವಾಕ್ಷ್ಯನುಚರಂ ಯತ್ವಾಃ ಸಪತ್ನಾಶ್ರಯಾಃ ॥ ೭೯ ॥

ರುದ್ರ=ರುದ್ರನೇ; ತ್ವಂ=ನೀನು; ಹಿ=ಪ್ರಸಿದ್ಧ; ಮನಃ=ಮನಸ್ಸು; ಅಭಿಮಾನಿ=ಅಭಿಮಾನಿಯು; ಅಸಿ=ಆಗಿದ್ದಿ; ತತಃ=ಆದ್ದರಿಂದ; ತ್ವತ್=ನೀನು; ಶತ್ರು=ಶತ್ರುವು; ಮಿತ್ರಂ=ಗೆಳೆಯ; ಮನಃ=ಮನಸ್ಸು; ಮಾ ಕುರು=ಬೇಡ; ಅಚ್ಯುತ=ದೇವರು; ಚಿಂತನ=ವಿಚಾರವು; ಅರ್ಚನ=ಪೂಜೆ; ರತಂ=ಆಸಕ್ತವು; ಕುರು=ಮಾಡು; ಈಶ=ಒಡೆಯನೇ; ಹೇ ಭಾಸ್ಕರ=ಎಲೋ ಸೂರ್ಯನೇ; ಚಕ್ಷುಃ=ಕಣ್ಣು; ಮಾನಿ=ಅಭಿಮಾನಿ; ಅಸಿ=ಆಗಿದ್ದಿ; ತತ್=ಅದು; ಚ=ಕೂಡ; ವಿಠ್ಠಲ=ದೇವರು; ವಪುಃ=ದೇಹವು; ಸಂದರ್ಶನ=ದರ್ಶನ; ಏಕ=ಮುಖ್ಯ; ಅಧ್ವರಂ=ಕೆಲಸ; ಕೃತ್ವಾ=ಮಾಡಿ; ಮಾಕುರು=ಬೇಡ; ಕೈರವ=ನೈದಿಲೆ; ಅಕ್ಷಿ=ಕಣ್ಣು; ಅನುಚರಂ=ಅನುಸರಿಸುವುದನ್ನು; ಯತ್=ಯಾವ ಕಾರಣದಿಂದ; ತಾಃ=ಅವುಗಳು; ಸಪತ್ನ=ಶತ್ರುಗಳು; ಆಶ್ರಯಾಃ=ಆಶ್ರಯಗಳು.

ಹೇ ರುದ್ರನೇ, ನೀನು ಮನೋನಿಯಾಮಕನು. ಕಾಮನು ನಿನ್ನ ಶತ್ರುವು. ನಿನ್ನ ಅಧೀನವಾದ ಮನಸ್ಸನ್ನು ನಿನ್ನ ಶತ್ರುವಿನ ಕೈಗೆ ಒಪ್ಪಿಸಬೇಡ. ಮನಸ್ಸು ಕಾಮುಕನಾಗದಂತೆ ಮಾಡು; ಲೋಕದಲ್ಲಿ ಯಾರೂ ತನ್ನ ಸೇವಕನನ್ನು ಶತ್ರುವಿನ ಕೈಗೆ ಒಪ್ಪಿಸುವುದಿಲ್ಲ. ದೇವರ ಸ್ಮರಣೆ, ಪೂಜೆ ಇತ್ಯಾದಿ ಸೇವೆಗಳಲ್ಲಿ ಆಸಕ್ತನನ್ನಾಗಿ ಮಾಡು. ನಿನ್ನ ತಂದೆ ಬ್ರಹ್ಮನು. ಆತನ ತಂದೆ ನಾರಾಯಣನು. ನಾರಾಯಣನು ನಿನಗೆ ಅಜ್ಜನು. ಮೊಮ್ಮಕ್ಕಳು ತಮ್ಮ ಜನರಿಂದ ಅಜ್ಜನ ಸೇವೆಯನ್ನು ಮಾಡಿಸುವುದು ಚಾಲ್ತಿಯಲ್ಲಿದೆ. ಎಲೋ, ಸೂರ್ಯನೇ, ನೀನು ಕಣ್ಣಿಗೆ ಅಭಿಮಾನಿಯು. ನಿನ್ನ ಮಧ್ಯದಲ್ಲಿ ದೇವರು ಇದ್ದಾನೆ ಎಂದು ಪುರಾಣಗಳು ಹೇಳುತ್ತಿವೆ. ಗಾಯತ್ರಿ ಮಾಡುವ ಪ್ರತಿಯೊಬ್ಬರೂ 'ಧ್ಯೇಯಃಸದಾ ಸವಿತೃಮಂಡಲಮಧ್ಯವರ್ತೀ' ಎಂದು ಹೇಳುತ್ತಾರೆ. ನಿನ್ನ ಹಿಡಿತದಲ್ಲಿರುವ ಈ ಕಣ್ಣನ್ನು ಸದಾ ದೇವರನ್ನು ನೋಡುತ್ತಿರುವಂತೆ ಮಾಡು. ಕುಮುದಾಕ್ಷಿಯರ ಹಿಂದೆ ಹೋಗದಂತೆ ಮಾಡು. ಅವರು ತಮ್ಮ ಕಣ್ಣುಗಳಲ್ಲಿ ನೈದಿಲೆಗಳನ್ನು ಧರಿಸಿದ್ದಾರೆ. ನೀನು ಉದಿಸುವಾಗ ನೈದಿಲೆಗಳು ಮುದುಡುತ್ತವೆ. ಅವುಗಳು ನಿನ್ನ ಶತ್ರುಗಳು. ಇಂತಹ ಶತ್ರುಗಳಿಗೆ ಪೋಷಕರಾದ್ದರಿಂದ ನಾರಿಯರನ್ನು ದ್ವೇಷಿಸುವಂತೆ ಮಾಡು.

ಮನಸ್ಸು ವಿಷಯಗಳ ಕಡೆಗೆ ಹೋಗದೆ, ಕಣ್ಣು ನಾರಿಯರ ಕಡೆಗೆ ಹೋಗದೆ ದೇವರ ಕಡೆಗೆ ಹೋಗುವಂತೆ ರುದ್ರದೇವರು ಸೂರ್ಯದೇವರು ಅನುಗ್ರಹಿಸಬೇಕು ಎಂದರ್ಥ.

**ಸಂದೇಶ** : ದೈಹಿಕವಾಗಿ ದೇವರಿಂದ ದೂರವಾದರೂ ಮಾನಸಿಕವಾಗಿ ದೇವರು ಸಮೀಪದಲ್ಲಿ ಇರಬೇಕು.

**ಸ್ವಾಮಿನ್ವಿಠ್ಠಲ ಸಜ್ಜನಶ್ವಶುರತಃ ಪ್ರಾಪ್ತಾಂ ದಿಗಂತಾಂಬರಾಂ**
**ಉತ್ಕ್ರಾಂತಾವಪಿ ಯೋಗಿನೀಂ ಮನನಸಜ್ಞಾನಾದಿಭಿರ್ಭೂಷಿತಾಮ್ ॥ ೮೦ ॥**

**ಮೋಕ್ಷಾಪತ್ಯವತೀಂ ವಿರಕ್ತಿರಮಣೀಂ ಸಂಶ್ಲಿಷ್ಯತೋಽಹರ್ನಿಶಂ**
**ಕಾಲೋ ಗಚ್ಛತು ನಾನ್ಯಥಾ ಕುರು ತದಾ ಕಾಮೋ ಯದಾಲಂಬತೇ ॥ ೮೧ ॥**

ಸ್ವಾಮಿನ್=ಸ್ವಾಮಿಯೇ; ವಿಠ್ಠಲ=ವಿಠಲನೇ; ಸಜ್ಜನ=ಸಜ್ಜನರು; ಶ್ವಶುರತಃ= ಮಾವನಿಂದ; ಪ್ರಾಪ್ತಾಂ=ಬಂದಿರುವ; ದಿಕ್=ದಿಕ್ಕು; ಅಂತ=ಕೊನೆ; ಅಂಬರಾಂ=ಬಟ್ಟೆವುಳ್ಳ; ಉತ್ಕ್ರಾಂತೌ=ಮರಣಕಾಲದಲ್ಲಿ; ಅಪಿ=ಕೂಡಾ; ಯೋಗಿನೀಂ=ಜೊತೆಗಿರುವ; ಮನನ= ಚಿಂತನೆಯು; ಸತ್=ಒಳ್ಳೆದು; ಜ್ಞಾನ=ಜ್ಞಾನವು; ಆದಿಭಿಃ=ಮೊದಲಾದವುಗಳಿಂದ; ಭೂಷಿತಾಂ=ಅಲಂಕೃತ; ಮೋಕ್ಷ=ಮೋಕ್ಷವು; ಅಪತ್ಯವತೀಂ=ಮಗುವುಳ್ಳ; ವಿರಕ್ತಿ= ವೈರಾಗ್ಯವು; ರಮಣೀಂ=ಪತ್ನಿವುಳ್ಳ; ಸಂಶ್ಲಿಷ್ಟತಃ=ಆಲಿಂಗಿಸುವ; ಅಹಃ=ಹಗಲು; ನಿಶಂ= ರಾತ್ರಿಯು; ಕಾಲಃ=ಸಮಯವು; ಗಚ್ಛತು=ಹೋಗಲಿ; ನ=ಇಲ್ಲ; ಅನ್ಯಥಾ=ಹೊರತು; ಕುರು=ಮಾಡು; ತದಾ=ಆಗ; ಕಾಮಃ=ಇಚ್ಛೆಯು; ಯದಾ=ಯಾವಾಗ; ಆಲಂಬತೇ= ಆಶ್ರಯಿಸುತ್ತಿ.

ಸನ್ಯಾಸಿಗಳಿಗೆ ನಾರೀಸುಖ ಹಾಗೂ ತಾಂಬೂಲಭಕ್ಷಣ ಇಲ್ಲ ಎಂದು ಕುಹಕಿಗಳು ಹೇಳುತ್ತಾರೆ. ರಾಜರು ಈ ಎರಡು ಶ್ಲೋಕಗಳಿಂದ ಆ ಸುಖಗಳೂ ಇವೆ ಎಂದು ಅಕ್ರೂರನ ಬಾಯಿಯಿಂದ ಹೇಳಿಸುತ್ತಾರೆ.

ಈ ಶ್ಲೋಕದಲ್ಲಿ ಲಗ್ನದ ಬಗ್ಗೆ ಹೇಳುತ್ತಾರೆ. ಅಕ್ರೂರನ ಮಾತು –ಕೃಷ್ಣ, ನಾನೊಂದು ಲಗ್ನ ಆಗಬೇಕೆಂದಿದ್ದೇನೆ. ಆಕೆಯ ಹೆಸರು ವಿರಕ್ತಿ ಎಂದು. ಆಕೆಯ ತಂದೆತಾಯಿಯ ಹೆಸರು ಸಜ್ಜನರು ಎಂದು. ಹುಡುಗಿಯ ತಂದೆತಾಯಿಯು ಅತ್ತೆಮಾವ ತಾನೆ. ಆದ್ದರಿಂದ ಸಜ್ಜನರೇ ಅತ್ತೆ ಮಾವ. ಸಂಸ್ಕೃತದಲ್ಲಿ ಶಬ್ದಗಳಿಗೆ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗ ಗಳಿವೆ. ಇದರಲ್ಲಿ ವಿರಕ್ತಿ ಶಬ್ದವು ಸ್ತ್ರೀಲಿಂಗ. ಈ ವಿರಕ್ತಿ ಹುಟ್ಟುವುದು ಸಜ್ಜನರ ಸಹವಾಸದಿಂದ. ಸಜ್ಜನರು ಅಂದರೆ ಒಳ್ಳೆಯ ವಂಶದವರೆಂದೇ ಅರ್ಥ. ತಥಾ ಚ ವಿರಕ್ತಿಯು ಸತ್‌ಕುಲ ಪ್ರಸೂತವಾಯಿತು. ನಾರಿಯು ತುಂಬಾ ವಸ್ತ್ರವನ್ನು ಧರಿಸಿದಾಗ ಎಲ್ಲರಿಂದಲೂ ಗೌರವಿಸಲ್ಪಡುತ್ತಾಳೆ. ಅಂಬರ ಅಂದರೆ ಆಕಾಶ ಹಾಗೂ ವಸ್ತ್ರಗಳು ಎಂದು ಅರ್ಥ. ವಿರಕ್ತಿಯನ್ನು ಹೊಂದಿದ ವ್ಯಕ್ತಿಯು ದೇಶದ ಮೂಲೆಮೂಲೆಗೂ ಸಂಚರಿಸುತ್ತಿರಬೇಕು. ಆಗ ವಿರಕ್ತಿಗೆ ಬೆಲೆ. ಇಲ್ಲಿ ವಿರಕ್ತಿಗೂ ನಾರಿಗೂ 'ದಿಗಂತಾಂಬರಾಂ' ಎಂಬ ಶಬ್ದದಿಂದ ಸಾಮ್ಯ ಇದೆ. ಲೋಕದಲ್ಲಿ ನಾರಿಯು ನಾವು ಸತ್ತಾಗ ನಮ್ಮ ಜೊತೆ ಬರುವುದಿಲ್ಲ. ಆದರೆ ವಿರಕ್ತಿಯು ಜನ್ಮಜನ್ಮಕ್ಕೂ ಜೊತೆಗೇ ಇರುತ್ತದೆ. ಆದ್ದರಿಂದ ಲೌಕಿಕಪತ್ನಿಗಿಂತ ವಿಶಿಷ್ಟಳು. ನಾರಿಗೆ ಆಭರಣಗಳಿಂದ ಅಲಂಕಾರ ಆಗಬೇಕು. ಇಲ್ಲದಿದ್ದರೆ ನಿರಾಭರಣ ಸುಂದರಿಯಾಗುತ್ತಾಳೆ. ವ್ಯಕ್ತಿಯಲ್ಲಿ ಕೇವಲ ವೈರಾಗ್ಯ ಇದ್ದರೆ ಅದು ಶುಷ್ಕವಾಗುತ್ತದೆ. ಅದರಿಂದ ಏನೂ ಲಾಭ ಇಲ್ಲ. ವಿರಕ್ತರಾದ ಮೇಲೆ ದೇವರ ವಿಚಾರ ಮಾಡಿ ಜ್ಞಾನ ಸಂಪಾದನೆ ಮಾಡಬೇಕು. ಇದೇ ವೈರಾಗ್ಯಕ್ಕೆ ಅಲಂಕಾರ. ಈ ದಾಂಪತ್ಯದ ಫಲವೇ ಮೋಕ್ಷ. ವ್ಯಕ್ತಿಯು ವಿರಕ್ತನಾಗಿ ಜ್ಞಾನಿಯಾದರೆ ಮೋಕ್ಷವು ಲಭಿಸುತ್ತದೆ. ಶಾಸ್ತ್ರದಲ್ಲಿ

ಒಂದು ಮಾತಿದೆ. ಸಂತತಿಯೇ ಆಗದಿದ್ದರೆ ಹತ್ತು ವರ್ಷದ ಅನಂತರ ಹೆಣ್ಣುಸಂತತಿಯಾದರೆ ಹನ್ನೆರಡು ವರ್ಷದ ಬಳಿಕ ಪತ್ನಿಯನ್ನು ತ್ಯಜಿಸಬೇಕು ಎಂದು. ಸದ್ಯ ಮೋಕ್ಷ ಎಂಬ ಪುಲ್ಲಿಂಗದ ಸಂತತಿಯಾದ್ದರಿಂದ ಈ ವಿರಕ್ತಿಯನ್ನು ತ್ಯಜಿಸಬೇಕಿಲ್ಲ. ಲೋಕದ ಪತ್ನಿಯರು ಅನ್ನವಸ್ತ್ರಾದಿಗಳನ್ನು ಬೇಡುವ ಮೂಲಕ ಪೀಡಿಸುತ್ತಾರೆ. ಆದ್ದರಿಂದ ಆಕೆ ಹೆಸರಿಗೆ ಮಾತ್ರ ಹೆಂಡತಿ. ನಿಜವಾಗಿಯಾದರೆ ಪ್ರಾಣಹಿಂಡುವವಳು. ಆದರೆ ಈ ವಿರಕ್ತಿರಮಣಿಯು ಯಾವುದರ ಆಸೆ ಉಳ್ಳವಳೂ ಅಲ್ಲ. ಆದ್ದರಿಂದ ನಿಜವಾಗಿಯೂ 'ರಮಯತಿ'. ಆದ್ದರಿಂದ ರಮಣೀ ಎಂಬ ಹೆಸರು ಸಾರ್ಥಕವಾಗಿದೆ. ವಿರಕ್ತರು ಯಾವುದನ್ನೂ ಆಶಿಸುವುದಿಲ್ಲ. ನಿಷಿದ್ಧ ದಿವಸಗಳನ್ನು ಹೊರತುಪಡಿಸಿಯೇ ಲೋಕದ ಪತ್ನಿಯನ್ನು ಆಲಿಂಗಿಸಬಹುದು. ಆದರೆ ಈ ರಮಣಿಯಲ್ಲಿ ರಮಿಸುವುದಕ್ಕೆ ನಿಷಿದ್ಧದಿನಗಳೇ ಇಲ್ಲ. ಈ ರೀತಿಯಾಗಿ ನನ್ನ ದಿನಗಳು ಕಳೆಯಲಿ. ಇವಳ ವಿಯೋಗವು ಎಂದೂ ಆಗದಂತೆ ಅನುಗ್ರಹಿಸು. ಸಾತ್ವಿಕರಿಗೆ ಇವಳ ವಿಯೋಗವಾದರೆ ಮನಸ್ಸಿಗೆ ಸ್ಥಿರತೆಯನ್ನು ತಂದುಕೊಡುವ ಕಾಮನೆಯು ಉಂಟಾಗುತ್ತದೆ. ಲೋಕದಲ್ಲಿ ರಮಣಿಯು ದೂರಳಾದರೆ ಅವಳ ಬಗ್ಗೆಯೇ ಕಾಮನೆಯು ಉಂಟಾಗುತ್ತದೆ. ಇದರಿಂದಾಗಿ ಮನಸ್ಸಿಗೆ ಕ್ಲೇಶವೇ ಉಂಟಾಗುತ್ತದೆ. ನಮ್ಮಕ್ಕಿಂತಲೂ ಎತ್ತರಮಟ್ಟದ ಮನೆಯ ಹುಡುಗಿಯು ನಮ್ಮ ಹಿಡಿತದಲ್ಲಿ ಇರದಿದ್ದರೆ ರಾಜಾದಿಗಳು ಅವರನ್ನು ನಿಯಂತ್ರಿಸಬೇಕು ಎಂದು ತಿಳಿಸಲು ದೇವರನ್ನು ಸ್ವಾಮಿನ್ ಎಂಬ ಶಬ್ದದಿಂದ ಉದ್ಧವನು ಕರೆದಿದ್ದಾನೆ.

**ಸ್ವಾಂತಂ ತದೇವ ಯತ್ತೇಂಘ್ರಿ ಕಮಲೇ ಚಂಚರೀಕತಿ ।**
**ಸ್ವಾಂತಕಾರೀತರನ್ಮನ್ಯೇ ಭ್ರಮದ್ಭುಜಗಸನ್ನಿಭಮ್ ॥ ೮೨ ॥**

ಸ್ವಾಂತಂ=ಒಳಗಿನದ್ದು; ತತ್ ಏವ=ಅದೇ; ಯತ್=ಯಾವುದು; ತೇ=ನಿನ್ನ; ಅಂಘ್ರಿ=ಚರಣವು; ಕಮಲೇ=ಕಮಲದಲ್ಲಿ; ಚಂಚರೀಕತಿ=ದುಂಬಿಯಂತೆ ಇದೆ; ಸ್ವ=ತನ್ನ; ಅಂತ=ನಾಶವನ್ನು; ಕಾರಿ=ಮಾಡುವ; ಇತರತ್=ಇನ್ನೊಂದು; ಮನ್ಯೇ=ತಿಳಿಯುತ್ತೇನೆ; ಭ್ರಮತ್=ತಿರುಗುವ; ಭುಜಗ=ಸರ್ಪವು; ಸನ್ನಿಭಂ=ಸಮಾನವು.

ಮನಸ್ಸಿಗೆ ಸ್ವಾಂತ ಎಂದು ಹೆಸರಿದೆ. ಅಂದರೆ ಒಳಗಿರುವಂತದ್ದು. ಅಂದರೆ ನಮಗೆ ಬಹಳ ಬೇಕಾದದ್ದು ಎಂದರ್ಥ. ನಮಗೆ ಬಹಳ ಬೇಕಾದವರನ್ನು 'ಇವರು ನಮಗೆ ಬಹಳ ಆಂತರಿಕರು' ಎನ್ನುತ್ತೇವೆ. ಒಟ್ಟಾರೆ ಮನಸ್ಸು ನಮಗೆ ಬಹಳ ಮಿತ್ರ ಎಂದರ್ಥ. ಇದು ಯಾವಾಗ ಕೂಡುತ್ತೆ ಅಂದರೆ ಈ ಮನಸ್ಸು ಯಾವಾಗ ದೇವರ ಚರಣಕಮಲದಲ್ಲಿ ಪರಾಗದ ಆಸಕ್ತಿಯಿಂದ ಅತ್ತಿತ್ತ ಓಡಾಡುತ್ತೋ ಅಂದರೆ ದೇವರ ಮನನಾದಿಗಳನ್ನು ಮಾಡುತ್ತೋ ಆಗ. ಹೊರತಾಗಿ ದೇವರಿಗೆ ವಿಮುಖವಾಗಿ ಹೋದರೆ 'ಸ್ವ'=ತನ್ನ; ಅಂತ=ನಾಶವನ್ನು; ಕಾರಿ=ಮಾಡತಕ್ಕದ್ದು. ಸರ್ಪವು ಏಕತ್ರ ಇರದೆ ತನಗೆ

ಅಯೋಗ್ಯ ಜಾಗದಲ್ಲಿ ತಾನು ಅಡ್ಡಾಡಿದರೆ ಅದರ ಸಾವು ನಿಶ್ಚಿತವೋ ಹಾಗೆ. ಅದು ತನಗೆ ಯೋಗ್ಯವಾದ ಕಾಡಲ್ಲೇ ಅಡ್ಡಾಡಬೇಕು.

<u>**ಸಂದೇಶ**</u> : ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಚೌಕಟ್ಟಿನಲ್ಲಿಯೇ ವ್ಯವಹರಿಸಬೇಕು. ಅದನ್ನು ಮೀರಿದರೆ ಅಪಾಯ ತಪ್ಪಿದ್ದಲ್ಲ.

**ಇತಿ ಬ್ರುವಂತಮಕ್ರೂರಮಾಶ್ವಾಸ್ಯ ಮಧುರೋಕ್ತಿಭಿಃ ।**
**ವಿಸಸರ್ಜ ಪ್ರಭೋರಾಜ್ಞಾಂ ವಿದಿತ್ಸುಃ ಸೋಽಪ್ಯಗಾತ್ ಗೃಹಮ್ ॥ ೮೩ ॥**

ಇತಿ=ಈ ರೀತಿಯಾಗಿ; ಬ್ರುವಂತಂ=ಹೇಳುವ; ಅಕ್ರೂರಂ=ಅಕ್ರೂರನನ್ನು; ಆಶ್ವಾಸ್ಯ= ಸಮಾಧಾನಿಸಿ; ಮಧುರ=ಒಳ್ಳೆಯ; ಉಕ್ತಿಭಿಃ=ಮಾತುಗಳಿಂದ; ವಿಸಸರ್ಜ=ಕಳಿಸಿದನು; ಪ್ರಭೋಃ=ಒಡೆಯನ; ಆಜ್ಞಾಂ=ಅಪ್ಪಣೆಯನ್ನು; ವಿಧಿತ್ಸುಃ=ಮಾಡುವವನಾಗಿ; ಅಪಿ=ಅವನಾದರೂ; ಅಗಾತ್=ಹೊರಟನು; ಗೃಹಂ=ಮನೆಯನ್ನು.

ಈ ರೀತಿ ಬಹುವಿಧದಿಂದ ಅಕ್ರೂರನು ಪ್ರಾರ್ಥಿಸಿದನು. ಕೃಷ್ಣನು ಇವನನ್ನು ಒಳ್ಳೆಯ ಮಾತುಗಳಿಂದ ಸಮಾಧಾನಪಡಿಸಿದನು. ಅನಂತರ ಆತನನ್ನು ಕಳಿಸಿದನು. ಅಕ್ರೂರನು ಕೃಷ್ಣನ ಅಪ್ಪಣೆಯನ್ನು ನೆರವೇರಿಸಲು ಹೊರಟನು. ಹೊರತು ತನ್ನ ಪತ್ನಿಪುತ್ರರಲ್ಲಿ ಸ್ನೇಹದಿಂದ ಅಲ್ಲ.

<u>**ಸಂದೇಶ**</u> : ದೊಡ್ಡವರು ನಮಗೆ ಯಾವ ರೀತಿ ಆಜ್ಞೆ ಮಾಡಿದರೂ ಅದನ್ನು ಪರಿಪಾಲಿಸುವುದು ನಮ್ಮ ಕರ್ತವ್ಯ.

**ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ದಶಮಃ ಸರ್ಗೋ ಮುದಾಂ ಸತ್ಕೃತಃ ॥ ೮೪ ॥**

**॥ ಇತಿ ದಶಮಃ ಸರ್ಗಃ ॥**

# ॥ ಅಥ ಏಕಾದಶಃ ಸರ್ಗಃ ॥

ಪ್ರವಿಶ್ಯ ವ್ರಜತಸ್ತಸ್ಯ ಹೃದಯಾಖ್ಯಪುರೀಂ ಹರಿಃ ।
ಇನೋದಯೇ ನಿರ್ವಿವಿಶೇ ಮಧುರಾಂ ಮಧುರಾಪುರೀಮ್ ॥ ೧ ॥

ಪ್ರವಿಶ್ಯ=ಪ್ರವೇಶಿಸಿ; ವ್ರಜತಃ=ಹೋಗುವ; ತಸ್ಯ=ಅವನ; ಹೃದಯ=ಮನಸ್ಸು; ಆಖ್ಯಾ=ಹೆಸರು; ಪುರೀಂ=ಪಟ್ಟಣವನ್ನು; ಹರಿಃ=ದೇವರು; ಇನ=ಸೂರ್ಯನು; ಉದಯೇ=ಉದಯದಲ್ಲಿ; ನಿರ್ವಿವಿಶೇ=ಪ್ರವೇಶಿಸಿದನು; ಮಧುರಾಂ=ಚಂದ; ಮಧುರಾ=ಮಧುರೆಯು; ಪುರೀಂ=ಊರನ್ನು.

ಕೃಷ್ಣನು ಮೊದಲೇ ಮಧುರೆಯನ್ನು ಪ್ರವೇಶಿಸಲಿಲ್ಲ. ಯಾಕೆಂದರೆ ಅದು ಕೆಟ್ಟವನ ಹಿಡಿತದಲ್ಲಿತ್ತು. ಅದಕ್ಕೋಸ್ಕರ ಮೊದಲು ಅಕ್ರೂರನ ಹೃದಯವೆಂಬ ಮಧುರವಾದ ಪಟ್ಟಣವನ್ನು ಪ್ರವೇಶಿಸಿದನು. ಅಂದರೆ ಅಕ್ರೂರನು ಹೋಗುವಾಗ ಕೃಷ್ಣನನ್ನು ಸ್ಮರಿಸುತ್ತಾ ಹೊರಟನು. ಅನಂತರ ಕೃಷ್ಣನು ಈ ಮಧುರೆಯನ್ನು ಪ್ರವೇಶಿಸಿದನು.

**ಸಂದೇಶ** : ಯಾವ ಕೆಲಸವನ್ನು ಆರಂಭಿಸುವಾಗಲೂ ದೇವತಾಪ್ರಾರ್ಥನೆಯಂತೆ ಒಳ್ಳೆಯದರಿಂದಲೇ ಆರಂಭಿಸಬೇಕು.

ದ್ವಾರಿ ದ್ವಾರಿ ಸ್ವಭಕ್ತಾಹೃತ ವಿವಿಧಬಲಿರ್ವಾಯುನೋದ್ಯಾನವಾಪೀ–
ಪ್ರೋತ್ಫುಲ್ಲಾಂಭೋಜಕುಂದ ಪ್ರಕರಸುರಭಿಣಾ ಸೇವ್ಯಮಾನೋಧಿವರ್ತ್ಮ ।
ಸಿಕ್ತಾಂ ಸನ್ಮಾರ್ಗನಾಡೀಮವಿಶದುರುಗುಣಃ ಪುಷ್ಪಪೀಯೂಷ ವೃಷ್ಟ್ಯಾ
ಪಾಪವ್ರಾತಂ ದಿಧಕ್ಷುಃ ಪ್ರಥಿತನಿಜಪುರೋ ಬ್ರಹ್ಮನಾಡೀಮಿವೇಶಃ ॥ ೨ ॥

ದ್ವಾರಿ=ಬಾಗಿಲಲ್ಲಿ; ದ್ವಾರಿ=ಬಾಗಿಲಲ್ಲಿ; ಸ್ವ=ತಾನು; ಭಕ್ತಃ=ಭಕ್ತರು; ಆಹೃತ=ತಂದದ್ದು; ವಿವಿಧ=ಬೇರೆಬೇರೆ; ಬಲಿಃ=ಪೂಜಾದ್ರವ್ಯಗಳು; ವಾಯುನಾ=ಗಾಳಿಯಿಂದ; ಉದ್ಯಾನ=ತೋಟವು; ವಾಪೀ=ಬಾವಿಯು; ಪ್ರೋತ್ಫುಲ್ಲ=ಅರಳುವುದು; ಅಂಭೋಜ= ಕಮಲವು; ಕುಂದ=ಮಲ್ಲಿಗೆಯು; ಪ್ರಕರ=ಸಮೂಹವು; ಸುರಭಿಣಾ=ಪರಿಮಳಿತವಾದ; ಸೇವ್ಯಮಾನಃ=ಸೇವಿಸಲ್ಪಡುವ; ಅಧಿವರ್ತ್ಮ=ಮಾರ್ಗದಲ್ಲಿ; ಸಿಕ್ತಾಂ=ಸಿಂಪಡಿಸಲ್ಪಟ್ಟ; ಸತ್=ಒಳ್ಳೆಯ; ಮಾರ್ಗ=ದಾರಿಯು; ನಾಡೀಂ=ನಾಡಿಯನ್ನು; ಅವಿಶತ್=ಪ್ರವೇಶಿಸಿದನು; ಉರು=ಬಹಳ; ಗುಣ=ಗುಣಗಳು; ಪುಷ್ಪ=ಹೂಗಳು; ಪೀಯೂಷ=ಅಮೃತವು; ವೃಷ್ಟ್ಯಾ=ಸಿಂಚನದಿಂದ; ಪಾಪ=ಪಾಪಗಳು; ವ್ರಾತಂ=ಸಮೂಹವು; ದಿಧಕ್ಷುಃ=ಸುಡುವ

ಇಚ್ಛೆ: ಪ್ರಥಿತ=ಪ್ರಸಿದ್ಧ: ನಿಜ=ತಾನು: ಪುರಃ=ಪಟ್ಟಣವು: ಬ್ರಹ್ಮನಾಡೀಂ=ಬ್ರಹ್ಮನಾಡಿಯನ್ನು: ಇವ=ಅಂತೆ: ಈಶಃ=ಸ್ವಾಮಿಯು,

ಮರುದಿನ ಸೂರ್ಯೋದಯಕ್ಕೆ ಕೃಷ್ಣನು ಮಧುರೆಯನ್ನು ಪ್ರವೇಶಿಸಿದನು. ಕೃಷ್ಣನ ದರ್ಶನಕ್ಕೆ ಪ್ರತಿಯೊಂದು ಮನೆಯ ಬಾಗಿಲಲ್ಲಿಯೂ ಭಕ್ತರು ಕಾಯುತ್ತಿದ್ದರು. ಕೈಯಲ್ಲಿ ಪೂಜಾಸಾಮಗ್ರಿಗಳನ್ನು ಹಿಡಿದಿದ್ದರು. ಅದರಿಂದ ಕೃಷ್ಣನನ್ನು ಅರ್ಚಿಸುತ್ತಿದ್ದರು. ಕೃಷ್ಣನು ಹೋಗುವ ದಾರಿಯಲ್ಲಿ ಇಕ್ಕೆಲಗಳಲ್ಲಿಯೂ ಉದ್ಯಾನಗಳು. ಅವುಗಳಲ್ಲಿ ಬಾವಿಗಳು. ಬಾವಿಗಳಲ್ಲಿ ಪರಿಮಳಿತವಾದ ಪುಷ್ಪಗಳು. ಇವುಗಳ ಮೇಲಿಂದ ಬೀಸುವ ಗಾಳಿಗಳು. ಆದ್ದರಿಂದ ಗಾಳಿಗಳೂ ಪರಿಮಳಿತಗಳು. ಈ ಗಾಳಿಗಳು ಕೃಷ್ಣನ ಮೇಲೆ ಎರಗುವ ಮೂಲಕ ಸೇವೆಮಾಡುತ್ತಿವೆ. ಕೃಷ್ಣನು ರಾಜಮಾರ್ಗದಲ್ಲಿ ಹೋಗುತ್ತಿದ್ದಾನೆ. ದಾರಿಯಲ್ಲಿ ಭಕ್ತರು ಪುಷ್ಪವೃಷ್ಟಿಯನ್ನು ಮಾಡುತ್ತಿದ್ದಾರೆ. ಈ ಪುಷ್ಪಗಳ ಪರಾಗಗಳು ದಾರಿಯನ್ನು ಒದ್ದೆಮಾಡಿವೆ. ಈ ಎಲ್ಲಾ ವೈಭವಗಳನ್ನು ತೆಗೆದುಕೊಳ್ಳುವ ಯೋಗ್ಯತೆ ಕೃಷ್ಣನಿಗೆ ಇದೆ. ಆತನು ಅನಂತಗುಣಗಳಿಂದ ಪೂರ್ಣನಾದವನು. ಕಂಸಾದಿ ದುಷ್ಟರ ಸಮೂಹವನ್ನು ನಾಶಮಾಡಲು ಹೋಗುತ್ತಿದ್ದಾನೆ.

ಕೃಷ್ಣನ ಈ ರೀತಿಯಾದ ಗಮನವು ಒಂದು ಆಧ್ಯಾತ್ಮಿಕ ವಿಷಯವನ್ನು ನೆನಪಿಸುತ್ತದೆ. ಜಪಮಾಡುವ ವ್ಯಕ್ತಿಯು ಮೊದಲು ತನ್ನ ದೇಹದಲ್ಲಿರುವ ಪಾಪಪುರುಷನ ನಾಶವನ್ನು ಚಿಂತಿಸಬೇಕು. ಮಾನವನು ಪ್ರತಿದಿನ ನಾನಾ ರೀತಿಯ ಪಾಪಗಳನ್ನು ಮಾಡುತ್ತಾನೆ. ಅವುಗಳನ್ನೆಲ್ಲಾ ಸೇರಿಸಿ ಒಂದು ಪುರುಷಾಕೃತಿಯನ್ನು ನಿರ್ಮಿಸಬೇಕು. ಅದಕ್ಕೆ ಪಾಪಪುರುಷನೆಂದು ಹೆಸರು. ಆತನನ್ನು ಎಡಹೊಟ್ಟೆಯಲ್ಲಿ ಅನುಸಂಧಾನ ಮಾಡಬೇಕು. ಅಲ್ಲಿಂದ ಆತನನ್ನು ಬ್ರಹ್ಮನಾಡಿಗೆ ತರಬೇಕು. ಬ್ರಹ್ಮನಾಡಿಯ ದೇಹದಲ್ಲಿ ಹೊಕ್ಕಳಿನ ಕೆಳಭಾಗದಿಂದ ಆರಂಭಿಸಿ ಶಿರಸ್ಸಿನ ತನಕ ನೇರವಾಗಿ ಇದೆ. ದಾರಿಯಲ್ಲಿ ಹೊಕ್ಕಳನ್ನು, ಹೃದಯವನ್ನು, ನಾಸಿಕಾವನ್ನು ಹಾದುಕೊಂಡು ಹೋಗುತ್ತಾನೆ. ಹೊಕ್ಕಳಲ್ಲಿ ಆ ಪಾಪಿಯನ್ನು ಅನುಸಂಧಾನ ಮಾಡಬೇಕು. ಅಲ್ಲಿ ಅನಿರುದ್ಧರೂಪೀ ದೇವರು ವಾಯುವಿನ ಮೂಲಕ ಆ ಪಾಪಿಯನ್ನು ಒಣಗಿಸುತ್ತಾನೆ. ಅನಂತರ ಹೃದಯಕ್ಕೆ ತರಬೇಕು. ಅಲ್ಲಿ ಪ್ರದ್ಯುಮ್ನನು ಆತನನ್ನು ಬೆಂಕಿಯಿಂದ ಸುಡುತ್ತಾನೆ. ಆತನ ಭಸ್ಮವನ್ನು ನಾಸಿಕಾದಲ್ಲಿರುವ ಸಂಕರ್ಷಣನು ಮೂಗಿನ ಮೂಲಕ ಹೊರಹಾಕುತ್ತಾನೆ. ಶಿರಸ್ಸಿನಲ್ಲಿರುವ ವಾಸುದೇವನು ಇಡೀ ದೇಹವನ್ನು ಅಮೃತವರ್ಷಣೆಯಿಂದ ಪವಿತ್ರೀಕರಿಸುತ್ತಾನೆ. ಅನಂತರ ಜಪವನ್ನು ಆರಂಭಿಸಬೇಕು. ಇದು ಕ್ರಮ. ಈ ದೇಹವೆಂಬ ಮಧುರೆಯಲ್ಲಿ ದೇವರು ಸಂಚಾರ ಮಾಡುವ ಮಾರ್ಗದ ಹೆಸರು ಬ್ರಹ್ಮನಾಡೀ ಎಂದು.

**ಸಂದೇಶ** : ಕೃಷ್ಣ ಬ್ರಹ್ಮಾಂಡದೊಳಗೆ ಮಾಡುವ ಪ್ರತಿಯೊಂದು ಕೆಲಸವನ್ನೂ ಪಿಂಡಾಂಡದೊಳಗೂ ಚಿಂತಿಸಬೇಕು.

**ರಜಕಂ ರಜಸಾಗ್ರಸ್ತಂ ದರ್ಶಯನ್ನಿವ ಸೋಧ್ವನಿ ।**
**ವಸನಂ ಪೀತವಸನಃ ಸಮಯಾಚತ ಸರ್ವವಿತ್ ॥ ೩ ॥**

ರಜಕಂ=ಮಡಿವಾಳನನ್ನು; ರಜಸಾ=ರಜೋಗುಣದಿಂದ; ಗ್ರಸ್ತಂ=ಕೂಡಿದ; ದರ್ಶಯನ್=ತೋರಿಸುತ್ತಾ; ಇವ=ಅಂತೆ; ಸ=ಅವನು; ಅಧ್ವನಿ=ದಾರಿಯಲ್ಲಿ; ವಸನಂ=ಬಟ್ಟೆಯನ್ನು; ಪೀತ=ಹಳದಿ; ವಸನಃ=ವಸ್ತ್ರವು; ಸಮಯಾಚತ=ಬೇಡಿದನು; ಸರ್ವ=ಎಲ್ಲಾ; ವಿತ್=ತಿಳಿಯುವುದು.

ಕೃಷ್ಣನು ರಾಜಬೀದಿಯಲ್ಲಿ ಹೋಗುತ್ತಿದ್ದಾನೆ. ಆಗ ಮಡಿವಾಳನು ಎದುರಾದನು. ಆತನು ಕಂಸನಿಗೆ ಪ್ರತಿದಿನ ಶುಭ್ರವಾದ ವಸ್ತ್ರಗಳನ್ನು ಒಪ್ಪಿಸುವವನು. ಕೃಷ್ಣನು ಆತನಲ್ಲಿ ಬಟ್ಟೆಗಳನ್ನು ಬೇಡಿದನು. ಕೃಷ್ಣನಲ್ಲಿ ಬಟ್ಟೆ ಇಲ್ಲ ಎಂದು ಬೇಡಿದ್ದಲ್ಲ. ದೇವರು ಸದಾ ಪೀತಾಂಬರಿ. ಚಿನ್ನದ ಬಣ್ಣದ ವಸ್ತ್ರವನ್ನು ಉಡುವವನು. ಶ್ರೀಪತಿಯೂ ಹೌದು. ಈ ರಜಕ ಕೊಡುವುದಿಲ್ಲ ಎಂದೂ ಕೃಷ್ಣನಿಗೆ ತಿಳಿದಿದೆ. ಕೃಷ್ಣನು ಸರ್ವಜ್ಞನು ತಾನೆ. ಹಾಗಾದರೆ ಯಾಕೆ ಬೇಡಿದ? ಅಂದರೆ –ಈತನು ತನ್ನ ಹೆಸರಿಗೆ ಸರಿಯಾಗಿ ರಜೋಗುಣದಿಂದ ಕೂಡಿದವನು. ದೇವರು ತಾನಾಗಿ ಬಂದು ಕೇಳಿದರೂ ಕೊಡುವವನಲ್ಲ ಎಂದು ಸಮಾಜಕ್ಕೆ ತಿಳಿಸಲು ಬೇಡಿದನು.

**<u>ಸಂದೇಶ</u>** : ತಮ್ಮಲ್ಲಿರುವ ವಸ್ತುಗಳನ್ನು ಒಳ್ಳೆಯವರಿಗೆ ತಾವಾಗಿಯೇ ದಾನಮಾಡಬೇಕು. ಇನ್ನೊಬ್ಬರು ಹೇಳದಾಗಲೂ ದಾನಮಾಡದವರು ರಾಜಸರು ಎಂದು ತಿಳಿಯಬೇಕು.

**ತತಸ್ತಸ್ಯ ದುರಾಲಾಪಂ ನಿಶಮ್ಯ ಸುದುರಾತ್ಮನಃ ।**
**ಶಿರೋ ಜಹಾರ ಕಿಂ ಕಾಯಂ ಕರೋತ್ವಕೃತಕಿಲ್ಬಿಷಮ್ ॥ ೪ ॥**

ತತಃ=ಅನಂತರ; ತಸ್ಯ=ಅವನ; ದುರ್=ಕೆಟ್ಟದ್ದು; ಆಲಾಪಂ=ಮಾತನ್ನು; ನಿಶಮ್ಯ=ಕೇಳಿ; ಸು=ತುಂಬಾ; ದುರ್=ಕೆಟ್ಟ; ಆತ್ಮನಃ=ಜೀವನ; ಶಿರಃ=ತಲೆಯನ್ನು; ಜಹಾರ=ಹಾರಿಸಿದನು; ಕಿಂ=ಏನು; ಕಾಯಂ=ಶರೀರವು; ಕರೋತು=ಮಾಡಲಿ; ಅಕೃತ=ಮಾಡದಿರುವ; ಕಿಲ್ಬಿಷಂ=ಪಾಪವು.

ಬಟ್ಟೆಯನ್ನು ಬೇಡಿದ ಕೃಷ್ಣನನ್ನು ಈ ರಜಕನು ಬಹಳ ಕಟುವಾಗಿ ನಿಂದಿಸಿದನು. ಸ್ವಯಂ ಈತನು ದುಷ್ಟನೇ ಆಗಿದ್ದಾನೆ. ಕೃಷ್ಣನು ಆತನ ತಲೆಯನ್ನು ಹಾರಿಸಿದನು. ರಾಜರು ಈ ಸಂದರ್ಭದಲ್ಲಿ ತಮಾಷೆಯ ಮೂಲಕ ಒಂದು ಸಂದೇಶವನ್ನು ಕೊಡುತ್ತಾರೆ. ಕೃಷ್ಣನು ರಜಕನ ತಲೆಯನ್ನು ಹಾರಿಸಿದ. ಶರೀರವನ್ನಲ್ಲ. ಯಾಕೆಂದರೆ ಕೃಷ್ಣನಿಗೆ ಅನ್ಯಾಯ ಮಾಡಿದ್ದು ರಜಕನ ಬಾಯಿ. ಬಾಯಿ ಇರುವುದು ಕುತ್ತಿಗೆಯ ಮೇಲೆ. ಕುತ್ತಿಗೆಯ ಮೇಲಿನ ಭಾಗಕ್ಕೆ ತಲೆ ಎಂದು ಹೆಸರು. ಕೆಟ್ಟ ಬಾಯಿಗೆ ಆಶ್ರಯವನ್ನು ಕೊಟ್ಟ ತಲೆಯನ್ನು ಹಾರಿಸಿದ. ಶರೀರ ಏನೂ ತಪ್ಪು ಮಾಡಿಲ್ಲ. ಅದನ್ನು ಅಲ್ಲೇ ಉಳಿಸಿದ. ಈತನು ಕೃಷ್ಣನನ್ನು ಹೊಡೆಯಲಿಲ್ಲ. ಬೈದದ್ದು ಮಾತ್ರ ಎಂದು ಅಭಿಪ್ರಾಯ.

**ಸಂದೇಶ** : ದುರ್ಮರಣವು ಪಾಪದ ಲಕ್ಷಣ. ಪಾಪವು ದೇವರನ್ನು ಹೊಡೆದಾಗ ಮಾತ್ರ ಬರಬೇಕಾಗಿಲ್ಲ. ಬೈದರೂ ಸಾಕಾಗುತ್ತದೆ. ಪಾಪವು ಸಂಚಿತವಾಗುತ್ತದೆ.

**ಪಥಿ ಪಥಿ ನವಸೌಧಾಂತಸ್ಥಮುಗ್ಧಾಂಗನಾಭಿಃ**
**ಕುಸುಮನಿಕರಲಾಜೈಃ ಕೀರ್ಯಮಾಣೋಽಪಿ ಕೃಷ್ಣಃ ।**
**ಅವಿದಿತ ಗುಣಕರ್ಮೋಽಪೇತ್ಯ ವವ್ರೇ ತ್ರಿವಕ್ರಾಂ**
**ಚತುರಪುರುಷಕಾಂಕ್ಷಾ ವಕ್ರಯೋಷಿತ್ಸು ನೂನಮ್** ॥ ೫ ॥

ಪಥಿ=ದಾರಿಯಲ್ಲಿ; ಪಥಿ=ದಾರಿಯಲ್ಲಿ; ನವ=ಹೊಸದು; ಸೌಧ=ಉಪ್ಪರಿಗೆಮನೆ; ಅಂತ=ಒಳಗೆ; ಸ್ಥ=ಇರುವುದು; ಮುಗ್ಧ=ಚಂದ; ಅಂಗನಾಭಿಃ=ನಾರಿಯರಿಂದ; ಕುಸುಮ=ಹೂಗಳು; ನಿಕರ=ಗುಂಪು; ಲಾಜೈಃ=ಅರಳುಗಳಿಂದ; ಕೀರ್ಯಮಾಣಃ=ಸಿಂಪಡಿಸಲ್ಪಡುವುದು; ಅಪಿ=ಕೂಡ; ಕೃಷ್ಣಃ=ಕೃಷ್ಣನು; ಅವಿದಿತ=ತಿಳಿಯ ದಿರುವ; ಗುಣ=ಗುಣಗಳು; ಕರ್ಮಾ=ಕೆಲಸವುಳ್ಳವನು; ಉಪೇತ್ಯ=ಬಂದು; ವವ್ರೇ=ಸ್ವೀಕರಿಸಿದನು; ತ್ರಿವಕ್ರಾಂ=ತ್ರಿವಕ್ರೆಯನ್ನು; ಚತುರ=ಚುರುಕು; ಪುರುಷ=ವ್ಯಕ್ತಿಯು; ಕಾಂಕ್ಷಾ=ಇಚ್ಛೆಯು; ವಕ್ರ=ವಕ್ರವು; ಯೋಷಿತ್ಸು=ನಾರಿಯರಲ್ಲಿ; ನೂನಂ=ನಿಶ್ಚಯ.

ಕೃಷ್ಣನು ರಾಜಬೀದಿಯಲ್ಲಿ ಹೋಗುತ್ತಿದ್ದಾನೆ. ಇಕ್ಕೆಲಗಳಲ್ಲಿ ಉಪ್ಪರಿಗೆಯ ಮನೆಗಳು. ಅಲ್ಲಿ ಚಂದದ ನೀರೆಯರು. ಅವರೆಲ್ಲಾ ಕೃಷ್ಣನ ಮೇಲೆ ಅರಳುಗಳನ್ನು ಹೂಗಳ ಎಸಳುಗಳನ್ನು ಚೆಲ್ಲುತ್ತಿದ್ದಾರೆ. ಆ ಮೂಲಕ ಕೃಷ್ಣನ ಚಂದವನ್ನು ಅನುಭವಿಸುತ್ತಿದ್ದಾರೆ. ಈ ದೃಶ್ಯವು ಕೃಷ್ಣನು ಹೋಗುವ ದಾರಿಯುದ್ದಕ್ಕೂ ಕಾಣಸಿಗುತ್ತಿತ್ತು. ಇಂತಹ ಸಂದರ್ಭದಲ್ಲಿ ಗೂನುಬೆನ್ನಿನ ಒಬ್ಬಳು ಕೃಷ್ಣನಿಗೆ ಎದುರಾದಳು. ಆಕೆಯ ಹೆಸರು ತ್ರಿವಕ್ರಾ. ಹೆಸರಿಗೆ ತಕ್ಕಂತೆ ದೇಹದಲ್ಲಿ ಮೂರು ಕಡೆ ಸೊಟ್ಟವಾದ ಭಾಗ ಇತ್ತು. ಇದರಿಂದಾಗಿ ಆಕೆ ಏನೂ ಚಂದ ಇಲ್ಲ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಆಕೆ ತನ್ನ ಪಾಡಿಗೆ ಹೋಗುತ್ತಿದ್ದಳು. ಕೃಷ್ಣನು ಒಮ್ಮೆಲೇ ಆಕೆಯ ಕಡೆಗೆ ತಿರುಗಿದನು. ಆಕೆಯನ್ನು ಮಾತನಾಡಿಸಿದನು. ಪ್ರೀತಿಸಿದನು. ಚಂದದ ನಾರಿಯರು ಇರುವಾಗ ಅವರನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ. ಯಾಕೆ ಕೃಷ್ಣ ಹೀಗೆ ಮಾಡಿದ? ಉತ್ತರ –ನಮ್ಮ ಈ ಭೌತಿಕ ಬುದ್ಧಿಗೆ ಹೊಳೆಯುವುದಿಲ್ಲ. ಸಾಮಾನ್ಯ ಜನರು ಕೃಷ್ಣ ಕಾಮುಕ ಎಂದು ಇಷ್ಟೇ ತಿಳಿಯುತ್ತಾರೆ. ದೇವತೆಗಳೇ ಆತನ ಗುಣಗಳನ್ನಾಗಲೀ ಕೆಲಸಗಳನ್ನಾಗಲೀ ತಿಳಿಯಲು ಸಮರ್ಥರಲ್ಲ. ಇನ್ನು ಮಾನವರ ಪಾಡೇನು? ಈಕೆ ಜನ್ಮಾಂತರದಲ್ಲಿ ಪಿಂಗಲಾ ಎಂಬ ಅಪ್ಸರ ಸ್ತ್ರೀಯಾಗಿದ್ದಳು. ತನ್ನ ಸೌಂದರ್ಯದ ಮದದಿಂದ ಮಾಡಿದ ತಪ್ಪಿಗಾಗಿ ಈ ಜನ್ಮದಲ್ಲಿ ಕುರೂಪಿಯಾಗಿ ಹುಟ್ಟಿದಳು. ಆದರೆ ಜನ್ಮಾಂತರದಲ್ಲಿ ಕೊನೆಗೆ ಮಾಡಿದ ತಪ್ಪಿಗಾಗಿ ತಾಪಪಟ್ಟು ದೇವರನ್ನು ಸ್ಮರಿಸಿದ್ದರಿಂದ ಈ ಜನ್ಮದಲ್ಲಿ ಕೃಷ್ಣನ ಭಕ್ತಳೂ ಆದಳು. ಆದ್ದರಿಂದ ಕೃಷ್ಣನು ಆಕೆಯನ್ನು ವರಿಸಿದನು.

ಈ ವಿಷಯವನ್ನು ರಾಜರು ಲೌಕಿಕವಾಗಿ ತಿಳಿಸುತ್ತಾರೆ– ತ್ರಿವಕ್ರೆ ಅಂದರೆ

ಮಾನಸಿಕವಾಗಿ ಮುನಿಸಿಕೊಂಡವಳು. ಒಬ್ಬಳು ಕಾಮಿನಿ ತಾನು ಮುನಿಸಿಕೊಂಡವಳಂತೆ ನಟಿಸುತ್ತಾಳೆ. ಕಾಮುಕನು ಆಕೆಯನ್ನು ಒಲಿಸಿಕೊಳ್ಳಲು ಇಲ್ಲದ ಪ್ರಯತ್ನವನ್ನು ಮಾಡುತ್ತಾನೆ. ಒಲಿಸಿಕೊಳ್ಳಲೂ ತುಂಬಾ ಚಾತುರ್ಯ ಬೇಕು. ತಥಾ ಚ –ಒಬ್ಬಳು ಹೆಣ್ಣು ಮುನಿಸಿ ಕೊಂಡಾಗ ಆಕೆಯನ್ನು ಒಲಿಸಲು ಕಾಮುಕನು ಎಲ್ಲವನ್ನೂ ತ್ಯಜಿಸಿ ಆಕೆಯ ಬಳಿಗೆ ಹೋಗುವಂತೆ ಕೃಷ್ಣನು ತ್ರಿವಕ್ರೆಯ ಬಳಿಗೆ ಹೋದನು ಎಂದು ಶೃಂಗಾರವಾಗಿ ವರ್ಣಿಸುತ್ತಾರೆ.

<u>ಸಂದೇಶ</u> : ದೇವರು ಶಾರೀರಿಕ ಋಜುತ್ವಕ್ಕಿಂತ ಮಾನಸಿಕ ಋಜುತ್ವಕ್ಕೆ ಮಹತ್ವವನ್ನು ಕೊಡುತ್ತಾರೆ.

**ಮುಷ್ಟಿಪ್ರಮಾಣತನುಮಧ್ಯವತೀಂ ಸ್ವಕರ್ಣ–**
**ವಿಶ್ರಾಂತನಿರ್ಮಲಗುಣಾಂ ರುಚಿರಾಂ ತ್ರಿವಕ್ರಾಮ್ ।**
**ವಿಶ್ವಕ್ಪ್ರಯುಕ್ತ ನಯನಾಂತಶರಾಂ ನಿರೀಕ್ಷ್ಯ**
**ಕೋದಂಡಮುದ್ಧವಕಥಾವಿಷಯಂ ಸ ಮೇನೇ** ॥ ೬ ॥

ಮುಷ್ಟಿ=ಮುಷ್ಟಿಯು; ಪ್ರಮಾಣ=ಅಳತೆಯು; ತನು=ಶರೀರವು; ಮಧ್ಯವತೀಂ= ನಡುವುಳ್ಳವಳನ್ನು; ಸ್ವ=ತಾನು; ಕರ್ಣ=ಕಿವಿಯು; ವಿಶ್ರಾಂತ=ವಿಶ್ರಾಂತಿ; ನಿರ್ಮಲ=ಒಳ್ಳೆದು; ಗುಣಾಂ=ಗುಣವುಳ್ಳ; ರುಚಿರಾಂ=ಚಂದದ; ತ್ರಿವಕ್ರಾಂ=ತ್ರಿವಕ್ರೆಯನ್ನು; ವಿಶ್ವಕ್=ಸುತ್ತಲೂ; ಪ್ರಯುಕ್ತ=ಹರಡಿದ; ನಯನ=ಕಣ್ಣು; ಅಂತ=ಕೊನೆ; ಶರಾಂ=ಬಾಣವುಳ್ಳ; ನಿರೀಕ್ಷ್ಯ=ನೋಡಿ; ಕೋದಂಡಂ=ಧನುಸ್ಸನ್ನು; ಉದ್ಧವ=ಉದ್ಧವನು; ಕಥಾ=ಕಥೆಯು; ವಿಷಯಂ=ವಿಷಯವನ್ನು; ಸಃ=ಅವನು; ಮೇನೇ=ತಿಳಿದನು.

ಈಕೆಯ ದೇಹವು ಲಕ್ಷಣಗಳಿಂದಲೂ ಕೂಡಿತ್ತು. ಹೆಣ್ಣಿನ ದೇಹದ ಸೊಂಟವು ತೆಳ್ಳಗಿರಬೇಕು. ಈಕೆಯ ಹೊಟ್ಟೆಯೂ ಹಾಗೇ ಇತ್ತು. ಈಕೆ ತುಂಬಾ ಗುಣವತೀ ಎಂಬ ವಿಷಯವನ್ನು ಕೃಷ್ಣನು ತನ್ನ ಕಿವಿಗಳಿಂದಲೇ ಕೇಳಿದ್ದನು. ಮೂರು ಕಡೆ ವಕ್ರತೆ ಇದ್ದರೂ ದೇಹದಲ್ಲಿ ಸೌಂದರ್ಯವೂ ಇತ್ತು. ಈಕೆಗೆ ಕೃಷ್ಣನನ್ನು ಮುಖಾಮುಖಿಯಾಗಿ ನೋಡಲು ನಾಚಿಕೆ. ಆದ್ದರಿಂದ ಆಚೆ ಈಚೆ ನೋಡುತ್ತಿದ್ದಾಳೆ. ಇಂತಹ ಇವಳನ್ನು ಕೃಷ್ಣನು ನೋಡಿದನು. ಕಂಸನ ಬಿಲ್ಲಹಬ್ಬಕ್ಕೆ ಈಕೆಯೇ ಒಂದು ಧನುಸ್ಸು ಎಂದು ಭಾವಿಸಿದನು.

<u>ಸಂದೇಶ</u> : ಈಕೆಯಲ್ಲಿರುವ ಎಲ್ಲಾ ಲಕ್ಷಣಗಳೂ ಧನುಸ್ಸಿನಲ್ಲೂ ಇವೆ. ಧನುಸ್ಸನ್ನು ಮಧ್ಯದಲ್ಲಿ ಹಿಡಿಯುವುದು. ಅಲ್ಲಿ ಅದು ಸಪೂರವಾಗಿರುತ್ತದೆ. ಗುಣ ಶಬ್ದಕ್ಕೆ ಹಗ್ಗ ಎಂಬ ಹೆಸರೂ ಇದೆ. ಬಾಣ ಹೊಡೆಯುವವನು ಆ ಬಿಲ್ಲಿನ ಹಗ್ಗವನ್ನು ತನ್ನ ಕಿವಿಯ ತನಕ ಎಳೆಯುತ್ತಾನೆ. ತ್ರಿವಕ್ರೆಯ ಗುಣಗಳಂತೆ ಹಗ್ಗವೂ ನಿರ್ಮಲವಾಗಿರಬೇಕು. ದುರ್ಬಲವಾಗಿರಬಾರದು. ಆಕೆಯ ಕಡೆಗಣ್ಣಿನ ಸ್ಥಾನದಲ್ಲಿ ಧನುಸ್ಸಿನಿಂದ ಹೊರಟ

ಬಾಣಗಳು. ಬಾಣಗಳನ್ನು ಒಂದೇ ಕಡೆ ಪ್ರಯೋಗಿಸುವುದಿಲ್ಲ. ಸುತ್ತಮುತ್ತ ಪ್ರಯೋಗಿಸುತ್ತಾರೆ. ಇಂತಹ ಧನುಸ್ಸು ಬಿಲ್ಲಹಬ್ಬದ ಕಥೆಗೆ ವಿಷಯವಾಯಿತು. ಹಬ್ಬ ಎಂಬುದಕ್ಕೆ ಸಂಸ್ಕೃತದಲ್ಲಿ ಉದ್ಧವ ಎಂದು ಹೆಸರು. ಬಿಲ್ಲಿನಂತಿರುವ ತ್ರಿವಕ್ರೆಯು ಉದ್ಧವನ ಕಥೆಗೆ ವಿಷಯವಾದಳು. ಅಂದರೆ ಮುಂದೆ ಉದ್ಧವನು ಗೋಕುಲಕ್ಕೆ ಹೋಗಿ ಅಲ್ಲಿ ಗೋಪಿಯರಿಗೆ ತ್ರಿವಕ್ರೆಯ ಚರಿತ್ರೆಯನ್ನು ಹೇಳುತ್ತಾನೆ.

**ಮಧುರವಚನಮಾತ್ರೇಣಾಂಗರಾಗಂ ದದೌ ಯಾ**
**ಪುಲಕಿತರುಚಿರಾಂಗೀ ಚಂಚಲಾಪಾಂಗ ಭೃಂಗೀ ।**
**ಅನುಚಿತಮಭಿಧಾನಂ ತ್ಯಾಜಯನ್ವಾಸುದೇವಃ**
**ಖಲಕುಲವನದಾವಸ್ತಾಂ ತತಾನರ್ಜುಗಾತ್ರೀಮ್ ॥ ೭ ॥**

ಮಧುರ=ಇಂಪು; ವಚನ=ಮಾತು; ಮಾತ್ರೇಣ=ಕೇವಲ; ಅಂಗ=ದೇಹ; ರಾಗಂ= ಬಣ್ಣವನ್ನು; ದದೌ=ಕೊಟ್ಟಳು; ಯಾ=ಯಾರು; ಪುಲಕಿತ=ರೋಮಾಂಚನ ಗೊಂಡ; ರುಚಿರ=ಚಂದ; ಅಂಗೀ=ದೇಹವುಳ್ಳ; ಚಂಚಲ=ಅಲುಗಾಡುವಿಕೆ; ಅಪಾಂಗ=ಕಡೆಗಣ್ಣು; ಭೃಂಗೀ=ಭ್ರಮರವುಳ್ಳ; ಅನುಚಿತಂ=ಅಯೋಗ್ಯ; ಅಭಿಧಾನಂ=ಹೆಸರು; ತ್ಯಾಜಯನ್= ಬಿಡಿಸುತ್ತಾ; ವಾಸುದೇವಃ=ಕೃಷ್ಣನು; ಖಲ=ದುಷ್ಟನು; ಕುಲ=ಗುಂಪು; ವನ=ಕಾಡು; ದಾವ=ಬೆಂಕಿ; ತಾಂ=ಅವಳನ್ನು; ತತಾನ=ಮಾಡಿದನು; ಋಜು=ನೇರ; ಗಾತ್ರೀಂ= ಶರೀರವುಳ್ಳವಳನ್ನು.

ಈ ತ್ರಿವಕ್ರೆಯು ಕಂಸನ ಸೇವಕಿಯು. ಆತನಿಗೆ ಮೈಗೆ ಹಚ್ಚಲು ಗಂಧವನ್ನು ಒಯ್ಯುತ್ತಿದ್ದಳು. ಕೃಷ್ಣನು ಆಕೆಯಲ್ಲಿ ವಿನೀತನಾಗಿ ಗಂಧವನ್ನು ಕೇಳಿದನು. ಆಕೆ ಏನೂ ಆಲೋಚಿಸದೆ ತತ್‌ಕ್ಷಣ ಗಂಧವನ್ನು ಕೃಷ್ಣನಿಗೆ ಅರ್ಪಿಸಿದಳು. ಕೃಷ್ಣನು ಆಕೆಯನ್ನು ಮಾತನಾಡಿಸಿದ್ದರಿಂದಲೇ ಆಕೆಯು ರೋಮಾಂಚಗೊಂಡಿದ್ದಳು. ಕಾಡಿಗೆ ಹಚ್ಚಿದ ಆಕೆಯ ಕಪ್ಪಾದ ಕಣ್ಣುಗಳು ಭ್ರಮರಗಳಂತೆ ಅತ್ತಿತ್ತ ಹೊರಳುತ್ತಿದ್ದವು. ಈ ರೀತಿಯಾಗಿ ಈಕೆಯಲ್ಲಿ ಉತ್ತಮ ಸೌಂದರ್ಯ ಇತ್ತು. ದೇವರಲ್ಲಿ ಭಕ್ತಿ ಇತ್ತು. ವಿನೀತರ ಮಾತುಗಳಿಗೆ ಸ್ಪಂದಿಸುವ ಶಕ್ತಿ ಇತ್ತು. ಇವೆಲ್ಲವೂ ಒಳ್ಳೆಯ ಗುಣಗಳೇ. ಯಾವ ರೀತಿಯ ವಕ್ರತೆಯೂ ಇರಲಿಲ್ಲ. ಹೀಗಿದ್ದರೂ ಈಕೆಗೆ ತ್ರಿವಕ್ರಾ ಎಂಬ ಹೆಸರು ತಪ್ಪಲಿಲ್ಲ. ಇವಳಿಗೆ ಈ ಹೆಸರು ಉಚಿತವಲ್ಲ. ಇವಳಿಂದ ಈ ಹೆಸರನ್ನು ಬಿಡಿಸಬೇಕು. ಇವಳಿಗೆ ಈ ಹೆಸರು ಉಚಿತವಲ್ಲ. ಇವಳಿಂದ ಈ ಹೆಸರನ್ನು ಬಿಡಿಸಬೇಕು ಎಂದು ಕೃಷ್ಣನು ಆಲೋಚಿಸಿದನು. ಆಕೆಯ ಬೆನ್ನಿನ ಗೂನನ್ನು ತೆಗೆದು ನೆಟ್ಟಗೆ ನಿಲ್ಲುವಂತೆ ಮಾಡಿದನು. ಕೃಷ್ಣನು ಅನುಚಿತವಾದ ರೂಪ, ನಾಮ, ಕ್ರಿಯೆಗಳಿಗೆ ಬೆಂಕಿಯಂತೆ ಇರುವವನು. ಯೋಗ್ಯ ವ್ಯಕ್ತಿಗಳಲ್ಲಿ ಈ ಮೂರರಲ್ಲಿ ಯಾವುದಾದರೂ ಒಂದು ಇದ್ದರೂ ಕೃಷ್ಣನು ಅದನ್ನು ಬಿಡಿಸುತ್ತಾನೆ.

**ಪ್ರಪದನಿಹಿತಪಾದಾಂ ಭೋಜ ಫುಲ್ಲಪ್ರಸೂನಃ**
**ವದನಮುಪಗತೇನ ದ್ವ್ಯಂಗುಲೋತ್ತಾನದೋಷ್ಣಾ ।**
**ಋಜುತನುಮತನೋತ್ತಾಮುನ್ನಮಯ್ಯ ತ್ರಿವಕ್ರಾಂ**
**ಚುಬುಕಗತಕರಾಣಾಮಂಚತಾಂ ಕ್ವಾಸ್ತಿ ವಕ್ರಾ ॥ ೮ ॥**

ಪ್ರಪದ=ಕಾಲಿನತುದಿ; ನಿಹಿತ=ಇಡುವುದು; ಪಾದ=ಕಾಲು; ಅಂಭೋಜ=ಕಮಲ; ಫುಲ್ಲ=ಅರಳುವುದು; ಪ್ರಸೂನಃ=ಪುಷ್ಪವುಳ್ಳ; ವದನಂ=ಮುಖವು; ಉಪಗತೇನ=ಇರುವ; ದ್ವಿ=ಎರಡು; ಅಂಗುಲ=ಬೆರಳು; ಉತ್ತಾನ=ಎತ್ತುವುದು; ದೋಷ್ಣಾ=ಕೈಯಿಂದ; ಋಜು= ನೇರ; ತನುಂ=ದೇಹವನ್ನು; ಅತನೋತ್=ಮಾಡಿದನು; ತಾಂ=ಅವಳನ್ನು; ಉನ್ನಮಯ್ಯ= ಎತ್ತಿ; ತ್ರಿವಕ್ರಾಂ=ತ್ರಿವಕ್ರೆಯನ್ನು; ಚುಬುಕ=ಗಲ್ಲವು; ಗತ=ಇರುವುದು; ಕರಾಣಾಂ=ಕೈಗಳ; ಅಂಚತಾಂ=ಪೂಜಿಸುವವರ; ಕ್ವ=ಎಲ್ಲಿ; ಅಸ್ತಿ=ಇದೆ; ವಕ್ರಾ=ವಕ್ರತೆಯು.

ಬೆನ್ನಿನ ಗೂನನ್ನು ತೆಗೆಯಬೇಕಾದರೆ ವ್ಯಕ್ತಿಯ ಕಾಲಿನ ಮೇಲೆ ನಮ್ಮ ಕಾಲನ್ನು ಇಡಬೇಕು. ಕೈಯಿಂದ ಗಲ್ಲವನ್ನು ಹಿಡಿದು ಎತ್ತಬೇಕು. ಆಗ ಬೆನ್ನಿನ ಗೂನು ಹೋಗುತ್ತದೆ. ಕೃಷ್ಣನು ತನ್ನ ಕಮಲದಂತಿರುವ ಪಾದವನ್ನು ಆಕೆಯ ಕಾಲಿನ ಮೇಲೆ ಇಟ್ಟನು. ತನ್ನ ಕೈಯಿಂದ ಆಕೆಯ ಗಲ್ಲವನ್ನು ಹಿಡಿದು ಎತ್ತಿ ಆಕೆಯನ್ನು ನೇರಗೊಳಿಸಿದನು.

ಇದನ್ನು ರಾಜರು ಶೃಂಗಾರಮಯವಾಗಿ ವರ್ಣಿಸುತ್ತಾರೆ– ತನಗೆ ಬೇಕಾದ ಒಂದು ಹುಡುಗಿಯು ಪ್ರಣಯಕಾಲದಲ್ಲಿ ಕೋಪವನ್ನು ಪ್ರದರ್ಶಿಸುತ್ತಾಳೆ. ವಿಮುಖಳಾಗುತ್ತಾಳೆ. ಆಗ ಕಾಮುಕನು ಆಕೆಯ ಕಾಲುಗಳನ್ನು ಪುಷ್ಪಗಳಿಂದ ಪೂಜಿಸುತ್ತಾನೆ. ಕೈಗಳಿಂದ ಮುಖವನ್ನು ನೇವರಿಸುತ್ತಾನೆ. ಆಗ ಎಂತಹ ಕೋಪಿಷ್ಠಳೂ ತನ್ನ ವಕ್ರತೆಯನ್ನು ಬಿಡುತ್ತಾಳೆ. ಹೆಣ್ಣು, ಹೂಗಳಿಗೆ ಬೇಗ ಮಾರುಹೋಗುತ್ತಾಳೆ. ಇದನ್ನು ತಿಳಿಸಲು ರಾಜರು ಕೃಷ್ಣನ ಕಾಲನ್ನು ಕಮಲಪುಷ್ಪ ಎಂದು ಹೇಳಿದರು.

**ಸಂದೇಶ** : ಕೃಷ್ಣನ ಹಸ್ತಪಾದಗಳ ಸಂಗ ನಮಗಾದಾಗ ಕಾಯಿಕ, ವಾಚಿಕ, ಮಾನಸಿಕವಾದ ತ್ರಿವಕ್ರತೆಗಳೂ ನಾಶವಾಗುತ್ತವೆ. ಅಷ್ಟೇ ಅಲ್ಲದೆ ನವಗ್ರಹರ ವಕ್ರಗತಿಯೂ ದೂರವಾಗಿ ಜೀವನವು ಋಜುಮಾರ್ಗದಲ್ಲಿ ಸಾಗುತ್ತದೆ.

**ವಕ್ರಾಮಪಿ ಚ ತಾಂ ತನ್ವೀಮೃಜ್ವೀಂ ಕೃಷ್ಣಕರೋಽಕರೋತ್ ।**
**ಅನುಕೂಲಯಿತುಂ ಬಾಲಾಂ ಕರ ಏವ ಹಿ ಕಾರಣಮ್ ॥ ೯ ॥**

ವಕ್ರಾಂ=ವಕ್ರಳನ್ನು; ಅಪಿ ಚ=ಕೂಡ; ತಾಂ=ಅವಳನ್ನು; ತನ್ವೀಂ=ಹುಡುಗಿಯನ್ನು; ಋಜ್ವೀಂ=ಋಜುವನ್ನು; ಕೃಷ್ಣ=ಕೃಷ್ಣನು; ಕರಃ=ಕೈಯು; ಅಕರೋತ್=ಮಾಡಿತು; ಅನುಕೂಲಯಿತುಂ=ಅನುಕೂಲಿಸಲು; ಬಾಲಾಂ=ಹುಡುಗಿಯನ್ನು; ಕರಃ=ಕರವು; ಏವ ಹಿ=ಮುಖ್ಯ; ಕಾರಣಂ=ಕಾರಣವು.

ಬಾಣಗಳು. ಬಾಣಗಳನ್ನು ಒಂದೇ ಕಡೆ ಪ್ರಯೋಗಿಸುವುದಿಲ್ಲ. ಸುತ್ತಮುತ್ತ ಪ್ರಯೋಗಿಸುತ್ತಾರೆ. ಇಂತಹ ಧನುಸ್ಸು ಬಿಲ್ಲಹಬ್ಬದ ಕಥೆಗೆ ವಿಷಯವಾಯಿತು. ಹಬ್ಬ ಎಂಬುದಕ್ಕೆ ಸಂಸ್ಕೃತದಲ್ಲಿ ಉದ್ಧವ ಎಂದು ಹೆಸರು. ಬಿಲ್ಲಿನಂತಿರುವ ತ್ರಿವಕ್ರೆಯು ಉದ್ಧವನ ಕಥೆಗೆ ವಿಷಯವಾದಳು. ಅಂದರೆ ಮುಂದೆ ಉದ್ಧವನು ಗೋಕುಲಕ್ಕೆ ಹೋಗಿ ಅಲ್ಲಿ ಗೋಪಿಯರಿಗೆ ತ್ರಿವಕ್ರೆಯ ಚರಿತ್ರೆಯನ್ನು ಹೇಳುತ್ತಾನೆ.

ಮಧುರವಚನಮಾತ್ರೇಣಾಂಗರಾಗಂ ದದೌ ಯಾ
ಪುಲಕಿತರುಚಿರಾಂಗೀ ಚಂಚಲಾಪಾಂಗ ಭೃಂಗೀ ।
ಅನುಚಿತಮಭಿಧಾನಂ ತ್ಯಾಜಯನ್ವಾಸುದೇವಃ
ಖಲಕುಲವನದಾವಸ್ತಾಂ ತತಾನರ್ಜುಗಾತ್ರೀಮ್ ॥ ೭ ॥

ಮಧುರ=ಇಂಪು; ವಚನ=ಮಾತು; ಮಾತ್ರೇಣ=ಕೇವಲ; ಅಂಗ=ದೇಹ; ರಾಗಂ=ಬಣ್ಣವನ್ನು; ದದೌ=ಕೊಟ್ಟಳು; ಯಾ=ಯಾರು; ಪುಲಕಿತ=ರೋಮಾಂಚನ ಗೊಂಡ; ರುಚಿರ=ಚಂದ; ಅಂಗೀ=ದೇಹವುಳ್ಳ; ಚಂಚಲ=ಅಲುಗಾಡುವಿಕೆ; ಅಪಾಂಗ=ಕಡೆಗಣ್ಣು; ಭೃಂಗೀ=ಭ್ರಮರವುಳ್ಳ; ಅನುಚಿತಂ=ಅಯೋಗ್ಯ; ಅಭಿಧಾನಂ=ಹೆಸರು; ತ್ಯಾಜಯನ್=ಬಿಡಿಸುತ್ತಾ; ವಾಸುದೇವಃ=ಕೃಷ್ಣನು; ಖಲ=ದುಷ್ಟನು; ಕುಲ=ಗುಂಪು; ವನ=ಕಾಡು; ದಾವ=ಬೆಂಕಿ; ತಾಂ=ಅವಳನ್ನು; ತತಾನ=ಮಾಡಿದನು; ಋಜು=ನೇರ; ಗಾತ್ರೀಂ=ಶರೀರವುಳ್ಳವಳನ್ನು.

ಈ ತ್ರಿವಕ್ರೆಯು ಕಂಸನ ಸೇವಕಿಯು. ಆತನಿಗೆ ಮೈಗೆ ಹಚ್ಚಲು ಗಂಧವನ್ನು ಒಯ್ಯುತ್ತಿದ್ದಳು. ಕೃಷ್ಣನು ಆಕೆಯಲ್ಲಿ ವಿನೀತನಾಗಿ ಗಂಧವನ್ನು ಕೇಳಿದನು. ಆಕೆ ಏನೂ ಆಲೋಚಿಸದೆ ತತ್‌ಕ್ಷಣ ಗಂಧವನ್ನು ಕೃಷ್ಣನಿಗೆ ಅರ್ಪಿಸಿದಳು. ಕೃಷ್ಣನು ಆಕೆಯನ್ನು ಮಾತನಾಡಿಸಿದ್ದರಿಂದಲೇ ಆಕೆಯು ರೋಮಾಂಚಗೊಂಡಿದ್ದಳು. ಕಾಡಿಗೆ ಹಚ್ಚಿದ ಆಕೆಯ ಕಪ್ಪಾದ ಕಣ್ಣುಗಳು ಭ್ರಮರಗಳಂತೆ ಅತ್ತಿತ್ತ ಹೊರಳುತ್ತಿದ್ದವು. ಈ ರೀತಿಯಾಗಿ ಈಕೆಯಲ್ಲಿ ಉತ್ತಮ ಸೌಂದರ್ಯ ಇತ್ತು. ದೇವರಲ್ಲಿ ಭಕ್ತಿ ಇತ್ತು. ವಿನೀತರ ಮಾತುಗಳಿಗೆ ಸ್ಪಂದಿಸುವ ಶಕ್ತಿ ಇತ್ತು. ಇವೆಲ್ಲವೂ ಒಳ್ಳೆಯ ಗುಣಗಳೇ. ಯಾವ ರೀತಿಯ ವಕ್ರತೆಯೂ ಇರಲಿಲ್ಲ. ಹೀಗಿದ್ದರೂ ಈಕೆಗೆ ತ್ರಿವಕ್ರಾ ಎಂಬ ಹೆಸರು ತಪ್ಪಲಿಲ್ಲ. ಇವಳಿಗೆ ಈ ಹೆಸರು ಉಚಿತವಲ್ಲ. ಇವಳಿಂದ ಈ ಹೆಸರನ್ನು ಬಿಡಿಸಬೇಕು. ಇವಳಿಗೆ ಈ ಹೆಸರು ಉಚಿತವಲ್ಲ. ಇವಳಿಂದ ಈ ಹೆಸರನ್ನು ಬಿಡಿಸಬೇಕು ಎಂದು ಕೃಷ್ಣನು ಆಲೋಚಿಸಿದನು. ಆಕೆಯ ಬೆನ್ನಿನ ಗೂನನ್ನು ತೆಗೆದು ನೆಟ್ಟಗೆ ನಿಲ್ಲುವಂತೆ ಮಾಡಿದನು. ಕೃಷ್ಣನು ಅನುಚಿತವಾದ ರೂಪ, ನಾಮ, ಕ್ರಿಯೆಗಳಿಗೆ ಬೆಂಕಿಯಂತೆ ಇರುವವನು. ಯೋಗ್ಯ ವ್ಯಕ್ತಿಗಳಲ್ಲಿ ಈ ಮೂರರಲ್ಲಿ ಯಾವುದಾದರೂ ಒಂದು ಇದ್ದರೂ ಕೃಷ್ಣನು ಅದನ್ನು ಬಿಡಿಸುತ್ತಾನೆ.

**ಪ್ರಪದನಿಹಿತಪಾದಾಂ ಭೋಜ ಫುಲ್ಲಪ್ರಸೂನಃ**
**ವದನಮುಪಗತೇನ ದ್ವಂಗುಲೋತ್ತಾನದೋಷ್ಣಾ ।**
**ಋಜುತನುಮತನೋತ್ತಾಮುನ್ನಮಯ್ಯ ತ್ರಿವಕ್ರಾಂ**
**ಚುಬುಕಗತಕರಾಣಾಮಂಚತಾಂ ಕ್ವಾಸ್ತಿ ವಕ್ರಾ ॥ ೮ ॥**

ಪ್ರಪದ=ಕಾಲಿನತುದಿ; ನಿಹಿತ=ಇಡುವುದು; ಪಾದ=ಕಾಲು; ಅಂಭೋಜ=ಕಮಲ; ಫುಲ್ಲ=ಅರಳುವುದು; ಪ್ರಸೂನಃ=ಪುಷ್ಪವುಳ್ಳ; ವದನಂ=ಮುಖವು; ಉಪಗತೇನ=ಇರುವ; ದ್ವಿ=ಎರಡು; ಅಂಗುಲ=ಬೆರಳು; ಉತ್ತಾನ=ಎತ್ತುವುದು; ದೋಷ್ಣಾ=ಕೈಯಿಂದ; ಋಜು= ನೇರ; ತನುಂ=ದೇಹವನ್ನು; ಅತನೋತ್=ಮಾಡಿದನು; ತಾಂ=ಅವಳನ್ನು; ಉನ್ನಮಯ್ಯ= ಎತ್ತಿ; ತ್ರಿವಕ್ರಾಂ=ತ್ರಿವಕ್ರೆಯನ್ನು; ಚುಬುಕ=ಗಲ್ಲವು; ಗತ=ಇರುವುದು; ಕರಾಣಾಂ=ಕೈಗಳ; ಅಂಚತಾಂ=ಪೂಜಿಸುವವರ; ಕ್ವ=ಎಲ್ಲಿ; ಅಸ್ತಿ=ಇದೆ; ವಕ್ರಾ=ವಕ್ರತೆಯು.

ಬೆನ್ನಿನ ಗೂನನ್ನು ತೆಗೆಯಬೇಕಾದರೆ ವ್ಯಕ್ತಿಯ ಕಾಲಿನ ಮೇಲೆ ನಮ್ಮ ಕಾಲನ್ನು ಇಡಬೇಕು. ಕೈಯಿಂದ ಗಲ್ಲವನ್ನು ಹಿಡಿದು ಎತ್ತಬೇಕು. ಆಗ ಬೆನ್ನಿನ ಗೂನು ಹೋಗುತ್ತದೆ. ಕೃಷ್ಣನು ತನ್ನ ಕಮಲದಂತಿರುವ ಪಾದವನ್ನು ಆಕೆಯ ಕಾಲಿನ ಮೇಲೆ ಇಟ್ಟನು. ತನ್ನ ಕೈಯಿಂದ ಆಕೆಯ ಗಲ್ಲವನ್ನು ಹಿಡಿದು ಎತ್ತಿ ಆಕೆಯನ್ನು ನೇರಗೊಳಿಸಿದನು.

ಇದನ್ನು ರಾಜರು ಶೃಂಗಾರಮಯವಾಗಿ ವರ್ಣಿಸುತ್ತಾರೆ– ತನಗೆ ಬೇಕಾದ ಒಂದು ಹುಡುಗಿಯು ಪ್ರಣಯಕಾಲದಲ್ಲಿ ಕೋಪವನ್ನು ಪ್ರದರ್ಶಿಸುತ್ತಾಳೆ. ವಿಮುಖಳಾಗುತ್ತಾಳೆ. ಆಗ ಕಾಮುಕನು ಆಕೆಯ ಕಾಲುಗಳನ್ನು ಪುಷ್ಪಗಳಿಂದ ಪೂಜಿಸುತ್ತಾನೆ. ಕೈಗಳಿಂದ ಮುಖವನ್ನು ನೇವರಿಸುತ್ತಾನೆ. ಆಗ ಎಂತಹ ಕೋಪಿಷ್ಠಳೂ ತನ್ನ ವಕ್ರತೆಯನ್ನು ಬಿಡುತ್ತಾಳೆ. ಹೆಣ್ಣು, ಹೂಗಳಿಗೆ ಬೇಗ ಮಾರುಹೋಗುತ್ತಾಳೆ. ಇದನ್ನು ತಿಳಿಸಲು ರಾಜರು ಕೃಷ್ಣನ ಕಾಲನ್ನು ಕಮಲಪುಷ್ಪ ಎಂದು ಹೇಳಿದರು.

**ಸಂದೇಶ** : ಕೃಷ್ಣನ ಹಸ್ತಪಾದಗಳ ಸಂಗ ನಮಗಾದಾಗ ಕಾಯಿಕ, ವಾಚಿಕ, ಮಾನಸಿಕವಾದ ತ್ರಿವಕ್ರತೆಗಳೂ ನಾಶವಾಗುತ್ತವೆ. ಅಷ್ಟೇ ಅಲ್ಲದೆ ನವಗ್ರಹರ ವಕ್ರಗತಿಯೂ ದೂರವಾಗಿ ಜೀವನವು ಋಜುಮಾರ್ಗದಲ್ಲಿ ಸಾಗುತ್ತದೆ.

**ವಕ್ರಾಮಪಿ ಚ ತಾಂ ತನ್ವೀಮೃಜ್ವೀಂ ಕೃಷ್ಣಕರೋಽಕರೋತ್ ।**
**ಅನುಕೂಲಯಿತುಂ ಬಾಲಾಂ ಕರ ಏವ ಹಿ ಕಾರಣಮ್ ॥ ೯ ॥**

ವಕ್ರಾಂ=ವಕ್ರಳನ್ನು; ಅಪಿ ಚ=ಕೂಡ; ತಾಂ=ಅವಳನ್ನು; ತನ್ವೀಂ=ಹುಡುಗಿಯನ್ನು; ಋಜ್ವೀಂ=ಋಜುವನ್ನು; ಕೃಷ್ಣ=ಕೃಷ್ಣನು; ಕರಃ=ಕೈಯು; ಅಕರೋತ್=ಮಾಡಿತು; ಅನುಕೂಲಯಿತುಂ=ಅನುಕೂಲಿಸಲು; ಬಾಲಾಂ=ಹುಡುಗಿಯನ್ನು; ಕರಃ=ಕರವು; ಏವ ಹಿ=ಮುಖ್ಯ; ಕಾರಣಂ=ಕಾರಣವು.

ಕೃಷ್ಣನ ಕರವು ಅಂದರೆ ಕೈಯು ಆಕೆಯ ವಕ್ರತೆಯನ್ನು ತೆಗೆಯಿತು. ನೇರವಾದ ಹುಡುಗಿಯನ್ನಾಗಿ ಮಾಡಿತು. ಕರ ಶಬ್ದಕ್ಕೆ ಕೈ ಎಂಬ ಅರ್ಥದಂತೆ ಹಣ, ವಸ್ತು ಎಂಬ ಅರ್ಥವೂ ಇದೆ. ಹುಡುಗಿಯು ನಮಗೆ ಸರಿಯಾಗಿ ಸ್ಪಂದಿಸದಿದ್ದರೆ, ಆಕೆಯನ್ನು ನಮಗೆ ಸಮ್ಮುಖಳನ್ನಾಗಿ ಮಾಡಲು ಆಕೆಗೆ ಕರವನ್ನು ಅಂದರೆ ಹಣವನ್ನೋ ಹೂ ಮೊದಲಾದ ವಸ್ತುಗಳನ್ನೋ ಕೊಟ್ಟರೆ ನಮ್ಮ ಜೊತೆ ನೇರವಾಗಿ ವ್ಯವಹರಿಸುತ್ತಾಳೆ. ಇದನ್ನು ತಿಳಿಸಲು ರಾಜರು 'ಕೃಷ್ಣಕರಃ' ಎಂಬ ಶಬ್ದವನ್ನು ಬಳಸಿದ್ದಾರೆ.

<u>**ಸಂದೇಶ**</u> : 'ನ ಇಹ ನಾನಾ ಅಸ್ತಿ (ಸ್ತಿ) ಕಿಂಚನ' ಎಂಬ ಶ್ರುತಿಯಂತೆ ದೇವರ ಅವಯವಗಳಗೂ ದೇವರಿಗೂ ಭೇದ ಇಲ್ಲ ಎಂಬುದನ್ನು ತಿಳಸುತ್ತಾರೆ.

**ಗಂಧಾರ್ಪಣಾದ್ರುಚಿರವೇಷಕೃತೇರ್ಮನೋಜ್ಞ**
**ಕುಂದಪ್ರಸೂನರಚಿತಾಮಲಮಾಲ್ಯದಾನಾತ್ ।**
**ಕುಬ್ಜಾದಯಸ್ತಮಲಬಂತ ಮಹಾಪ್ರಸಾದಂ**
**ಕಿಂ ನಾಮ ಸರ್ವವಿಧಿಭಿರ್ವಿಭುಮರ್ಚಯಂತಃ** ॥ ೧೦ ॥

ಗಂಧ=ಗಂಧವು; ಅರ್ಪಣಾತ್=ಅರ್ಪಣೆಯಿಂದ; ರುಚಿರ=ಚಂದ; ವೇಷ=ವೇಷವು; ಕೃತೇ=ಮಾಡುವುದರಿಂದ; ಮನೋಜ್ಞ=ಚಂದ; ಕುಂದ=ಗುಂಡುಮಲ್ಲಿಗೆ; ಪ್ರಸೂನ= ಹೂಗಳು; ರುಚಿತ=ಮಾಡಿದ; ಅಮಲ=ನಿರ್ಮಲ; ಮಾಲ್ಯ=ಮಾಲಿಕೆಯು; ದಾನಾತ್= ತೊಟ್ಟದ್ದರಿಂದ; ಕುಬ್ಜಾ=ತ್ರಿವಕ್ರೆಯು; ಆದಯಃ=ಮೊದಲಾದವರು; ತಂ=ಅವನನ್ನು; ಅಲಬಂತ= ಹೊಂದಿದರು; ಮಹಾ=ದೊಡ್ಡ; ಪ್ರಸಾದಂ=ಅನುಗ್ರಹವನ್ನು; ಕಿಂನಾಮ=ಏನು? ಸರ್ವ=ಎಲ್ಲಾ; ವಿಧಿಭಿ=ನಿಯಮಗಳಿಂದ; ವಿಭುಂ=ದೇವರನ್ನು; ಅರ್ಚಯಂತಃ= ಪೂಜಿಸುವವರು.

ತ್ರಿವಕ್ರೆಯು ಕೃಷ್ಣನಿಗೆ ಗಂಧವನ್ನು ಅರ್ಪಿಸಿದಳು. ಒಬ್ಬನು ಕೃಷ್ಣನ ಉಗುರುಗಳನ್ನು ತಲೆಕೂದಲನ್ನು ಕತ್ತರಿಸಿ ಅಲಂಕರಿಸಿದನು. ಇನ್ನೊಬ್ಬನು ಹಣೆಗೆ ತಿಲಕವನ್ನು ಇಟ್ಟನು. ಮತ್ತೊಬ್ಬನು ಗುಂಡುಮಲ್ಲಿಗೆಯ ಒಳ್ಳೆಯ ಮಾಲೆಯನ್ನು ಕೃಷ್ಣನ ಕೊರಳಿಗೆ ಹಾಕಿದನು. ಹೀಗೆ ಒಬ್ಬೊಬ್ಬರು ಒಂದೊಂದೇ ರೀತಿಯಿಂದ ದೇವರ ಸೇವೆಯನ್ನು ಮಾಡಿದರು. ಯಾವ ವೇದಮಂತ್ರಗಳನ್ನೂ ತಿಳಿದವರಲ್ಲ. ಹೀಗಿದ್ದರೂ ಇವರ ಮೇಲೆ ಕೃಷ್ಣನು ಮೋಕ್ಷಕ್ಕೆ ಕಾರಣವಾದ ಅನುಗ್ರಹವನ್ನೇ ಮಾಡಿದನು. ಹೀಗಿರುವಾಗ ವೇದಮಂತ್ರಗಳನ್ನು ಹೇಳುತ್ತಾ ಪ್ರೀತಿಪೂರ್ವಕವಾಗಿ ಶಾಸ್ತ್ರೀಯವಾಗಿ ಎಲ್ಲಾ ರೀತಿಯಿಂದಲೂ ಪೂಜಿಸುವವರು ದೇವರ ಮಹಾನುಗ್ರಹವನ್ನು ಪಡೆಯುತ್ತಾರೆ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

<u>**ಸಂದೇಶ**</u> : ಪತ್ರಂ ಪುಷ್ಪಂ ಫಲಂ ತೋಯಂ..... ಅಶ್ನಾಮಿ ಪ್ರಯತಾತ್ಮನಃ । –

ಎಂದು ಗೀತೆಯಲ್ಲಿ ಕೃಷ್ಣನ ಮಾತು. ಇದರಂತೆ ನಾವು ಮಾಡುವ ಅಲ್ಪ ಪೂಜೆಯೂ ಭಕ್ತಿಯಿಂದ ಕೂಡಿದ್ದರೆ ದೇವರು ಅದನ್ನು ಮಹತ್ತನ್ನಾಗಿ ಮಾಡಿ ಸ್ವೀಕರಿಸುತ್ತಾನೆ.

**ರಾಜಾಧ್ವನಾ ಸಮಧಿಗಮ್ಯ ಧನುರ್ನಿವಾಸಂ**
**ಕೋದಂಡಖಂಡನಮಥೋ ಚಕಮೇ ರಮೇಶಃ ।**
**ಯುಕ್ತಂ ಹಿ ತತ್ಸಕಲದೈವತ ಮುಖ್ಯದೇವಃ**
**ಕೃಷ್ಣಃ ಕಥಂ ಜಡತಮಸ್ಯ ಬಲಿಂ ಸಹೇತ** ॥ ೧೧ ॥

ರಾಜಾ=ರಾಜನು; ಅಧ್ವನಾ=ದಾರಿಯಿಂದ; ಸಮಧಿಗಮ್ಯ=ಬಂದು; ಧನುಃ=ಧನುಸ್ಸು; ನಿವಾಸಂ=ಸ್ಥಳವನ್ನು; ಕೋದಂಡ=ಕೋದಂಡವು; ಖಂಡನಂ=ನಾಶವು; ಅಥೋ=ಅನಂತರ; ಚಕಮೇ=ಇಚ್ಛಿಸಿದನು; ರಮಾ=ರಮೆಯು; ಈಶಃ=ಒಡೆಯನು; ಯುಕ್ತಂ ಹಿ=ಉಚಿತವು; ತತ್=ಅದು; ಸಕಲ=ಎಲ್ಲಾ; ದೈವತ=ದೇವತೆಗಳು; ಮುಖ್ಯ=ಪ್ರಧಾನವು; ದೇವಃ=ದೇವನು; ಕೃಷ್ಣಃ=ಕೃಷ್ಣನು; ಕಥಂ=ಹೇಗೆ; ಜಡತಮಸ್ಯ=ಬಹಳ ಜಡದ; ಬಲಿಂ=ಪೂಜೆಯನ್ನು; ಸಹೇತ=ಸಹಿಸಿಯಾನು.

ರಾಜ ಕಂಸನು ಹೋಗಿಬರುವ ಮಾರ್ಗದಲ್ಲಿಯೇ ಕೃಷ್ಣನು ಮುಂದೆ ಮುಂದೆ ಹೋದನು. ಒಂದು ಕಡೆ ಬಿಲ್ಲಹಬ್ಬದ ಧನುಸ್ಸನ್ನು ಇಟ್ಟಿದ್ದರು. ಆ ಧನುಸ್ಸನ್ನು ಕಂಸನು ಪ್ರತಿದಿನವೂ ರುದ್ರನೆಂದು ಆರಾಧಿಸುತ್ತಿದ್ದನು. ಇಂತಹ ಬಿಲ್ಲನ್ನು ಮುರಿಯಬೇಕೆಂದು ಕೃಷ್ಣನು ಸಂಕಲ್ಪಿಸಿದನು. ಕೃಷ್ಣನ ಈ ಸಂಕಲ್ಪವು ಬಹಳ ಉಚಿತವಾಗಿದೆ ಎಂದು ರಾಜರು ತಿಳಿಸುತ್ತಾರೆ –ರಮೆಯು ಎಲ್ಲರಿಗೂ ತಾಯಿಯ ಸ್ಥಾನದಲ್ಲಿ ಇರುವವಳು. ಅವಳಿಗೂ ಈತನು ಒಡೆಯ. ಇತರ ಎಲ್ಲಾ ದೇವತೆಗಳೂ ಈತನ ಮುಂದೆ ತುಚ್ಛರು. ಈ ಧನುಸ್ಸು ಜಡ. ಜಡ ಅಂದರೂ ಮೂರ್ಖ ಅಂದರೂ ಒಂದೇ. ದೊಡ್ಡವರನ್ನು ಬಿಟ್ಟು ಚಿಕ್ಕವರನ್ನು ಪೂಜಿಸಿದರೆ ಪೂಜ್ಯರೂ, ಪೂಜಕರೂ ಇಬ್ಬರೂ ಮೂರ್ಖರಾಗುತ್ತಾರೆ. ಇಷ್ಟೇ ಅಲ್ಲದೆ ಇಬ್ಬರಿಗೂ ಅನಿಷ್ಟ ಇದೆ.

**ಸದ್ವಂಶಜಾತೋಽಪಿ ಗುಣಾನ್ವಿತೋಽಪಿ**
**ಶಿಕ್ಷಾನುರೂಪೋಽಪಿ ಸ ತೇನ ಚಾಪಃ ।**
**ಭಗ್ನಃ ಶನೈಃ ವಕ್ರಹೃದೋ ಹಿ ಪುಂಸಃ**
**ಕೋ ವಾ ಗುಣಃ ಕೋವಿದ ಮಾನಯೋಗ್ಯಃ** ॥ ೧೨ ॥

ಸತ್=ಒಳ್ಳೆಯ; ವಂಶ=ವಂಶವು; ಜಾತ=ಹುಟ್ಟಿದ್ದು; ಅಪಿ=ಕೂಡಾ; ಗುಣ=ಗುಣಗಳು; ಅನ್ವಿತಃ=ಕೂಡಿದ್ದು; ಅಪಿ=ಕೂಡಾ; ಶಿಕ್ಷಾ=ಶಿಕ್ಷಣೆಯು; ಅನುರೂಪಃ=ಯೋಗ್ಯವು; ಸಃ=ಆ; ತೇನ=ಅವನಿಂದ; ಚಾಪ=ಬಿಲ್ಲು; ಭಗ್ನಃ=ಮುರಿಯಿತು; ಶನೈಃ=ಮೆಲ್ಲಗೆ; ವಕ್ರ=ವಕ್ರವು;

ಹೃದಃ=ಮನಸ್ಸಿನ; ಹಿ=ಪ್ರಸಿದ್ಧ; ಪುಂಸಃ=ವ್ಯಕ್ತಿಯ; ಕಃ=ಯಾವ; ವಾ=ಆದರೂ; ಗುಣಃ=ಗುಣವು; ಕೋವಿದ=ಜ್ಞಾನಿಯು; ಮಾನ=ಗೌರವ; ಯೋಗ್ಯಃ=ಯೋಗ್ಯವು.

ಧನುಸ್ಸನ್ನು ಒಳ್ಳೆಯ ಬಿದಿರಿನಿಂದ ಮಾಡುತ್ತಾರೆ. ಒಳ್ಳೆಯ ಬಿದಿರಿಗೆ ಸಂಸ್ಕೃತದಲ್ಲಿ 'ಸದ್ವಂಶ' ಎಂದು ಹೆಸರು. ಈ ಧನುಸ್ಸು ಸದ್ವಂಶದಿಂದ ಬಂದದ್ದು. ಈ ಧನುಸ್ಸನ್ನು ಹಗ್ಗದಿಂದ ಕಟ್ಟಿದ್ದಾರೆ. ಹಗ್ಗಕ್ಕೆ ಗುಣ ಎಂದು ಹೆಸರು. ತಥಾ ಚ ಈ ಬಿಲ್ಲು ಗುಣದಿಂದ ಕೂಡಿದೆ. ಹಗ್ಗ ಕಟ್ಟಬೇಕಾದರೆ ಧನುಸ್ಸನ್ನು ಎಳೆದು ಬಗ್ಗಿಸಬೇಕು. ಈ ಧನುಸ್ಸನ್ನು ನಮ್ಮತ್ತ ಎಳೆಯಲು, ಆಕರ್ಷಿಸಲು ಸಾಧ್ಯವಾಗಿತ್ತು. ಆದರೂ ಈ ಬಿಲ್ಲು ಕೃಷ್ಣನ ಕೈಗೆ ಸಿಕ್ಕಿ ಮುರಿಯಿತು. ಯಾಕೆಂದರೆ ಅದರ ಮಧ್ಯವು ವಕ್ರವಾಗಿತ್ತು. ಧನುಸ್ಸನ್ನು ಮಧ್ಯದಲ್ಲಿ ಹಿಡಿಯುತ್ತಾರೆ. ಆ ಜಾಗದಲ್ಲಿ ಅದು ಸ್ವಲ್ಪ ಸೊಟ್ಟವಾಗಿಯೇ ಇರಬೇಕು.

ಬಿಲ್ಲಿನ ಧರ್ಮಗಳನ್ನು ಬಳಸಿಕೊಂಡು ರಾಜರು ಲೋಕದ ಒಂದು ಉದಾಹರಣೆಯನ್ನು ತಿಳಿಸುತ್ತಾರೆ –ಲೋಕದಲ್ಲಿ ಒಬ್ಬ ವ್ಯಕ್ತಿಯು ಒಳ್ಳೆಯ ವಂಶದಲ್ಲಿ ಹುಟ್ಟಿರುತ್ತಾನೆ. ಗುಣಗಳಿಂದಲೂ ಕೂಡಿರುತ್ತಾನೆ. ಗುರುಗಳಿಂದ ತುಂಬಾ ಶಿಕ್ಷಿತನೂ ಆಗಿರುತ್ತಾನೆ. ಆದರೆ ತನ್ನ ಮನದ ವಕ್ರತೆಯನ್ನು ಬಿಟ್ಟಿಲ್ಲ. ಇಂತಹ ವ್ಯಕ್ತಿಯಲ್ಲಿ ಎಂತಹ ಗುಣಗಳಿದ್ದರೂ ಪಂಡಿತರು ಅದನ್ನು ಗಣಿಸುವುದಿಲ್ಲ. ಅಲ್ಲದೆ ಆ ವ್ಯಕ್ತಿಯನ್ನು ತುಚ್ಛೀಕರಿಸುತ್ತಾರೆ. ಹಾಗೆಯೇ ಕೃಷ್ಣನೂ ಈ ಬಿಲ್ಲನ್ನು ಮುರಿದನು.

ಸಂದೇಶ : ವ್ಯಕ್ತಿಯ ಎಲ್ಲಾ ಗುಣಗಳಗಿಂತ ಹೃದಯಶುದ್ಧಿಯು ಮುಖ್ಯ.

**ಕರೇಣೋದ್ಧೃತ್ಯ ಪ್ರಾಗ್ವ್ಯತನುತ ಗುಣಾವೇದನಮಸೌ**
**ಪ್ರಭುಃ ಪದಾಘಾತಂ ತದನು ವಿರಚಯ್ಯಾಶ್ವನಮಯತ್ ।**
**ಅಥೋ ಲೀಲಾಬಾಲಃ ಖಲಮಿವ ಧನುರ್ಭಗ್ನಮಕರೋತ್**
**ಬಲಾನ್ನಮ್ರೀಭೂತೇ ಕಿಮಿಹ ಕರುಣಾ ಶುಷ್ಕಹೃದಯೇ** ॥ ೧೩ ॥

ಕರೇಣ=ಕೈಯಿಂದ; ಉದ್ಧೃತ್ಯ=ಎತ್ತಿ; ಪ್ರಾಕ್=ಮೊದಲು; ವ್ಯತನುತ=ಮಾಡಿದನು; ಗುಣ=ಗುಣವು; ಆವೇದನಂ=ಸೇರಿಸುವಿಕೆಯನ್ನು; ಅಸೌ=ಇವನು; ಪ್ರಭುಃ=ಸಮರ್ಥನು; ಪದ=ಕಾಲು; ಆಘಾತಂ=ಹೊಡೆತವನ್ನು; ತದನು=ಅನಂತರ; ವಿರಚಯ್ಯ=ಮಾಡಿ; ಆಶು=ಕೂಡಲೇ; ಅನಮಯತ್=ಬಗ್ಗಿಸಿದನು; ಅಥೋ=ಅನಂತರ; ಲೀಲಾ=ಕ್ರೀಡೆಯು; ಬಾಲಃ=ಬಾಲಕನು; ಖಲಂ=ದುಷ್ಟನನ್ನು; ಇವ=ಅಂತೆ; ಧನುಃ=ಬಿಲ್ಲು; ಭಗ್ನಂ=ತುಂಡಾದದ್ದು; ಅಕರೋತ್=ಮಾಡಿದನು; ಬಲಾತ್=ಬಲಾತ್ಕಾರದಿಂದ; ನಮ್ರೀಭೂತೇ=ವಿನೀತರಾದ; ಕಿಂ=ಏನು; ಇಹ=ಇಲ್ಲಿ; ಕರುಣಾ=ದಯೆಯು; ಶುಷ್ಕ=ಒಣಗಿದ್ದು; ಹೃದಯೇ=ಎದೆಯಲ್ಲಿ.

ಕೃಷ್ಣನು ಕೈಯಿಂದ ಆ ಬಿಲ್ಲನ್ನು ಎತ್ತಿದನು. ಹಗ್ಗವನ್ನು ಕಟ್ಟುವ ಮೊದಲು ಅದನ್ನು

ಬಗ್ಗಿಸಿದನು. ಆ ಬಿಲ್ಲಿನ ಒಂದು ತುದಿಯ ಮೇಲೆ ತನ್ನ ಕಾಲನ್ನು ಇಟ್ಟು ಬಗ್ಗಿಸಿದನು. ಧನುಸ್ಸು ಬಗ್ಗಿತು. ಆದರೂ ಕೃಷ್ಣನು ಅದರ ಮೇಲೆ ದಯೆಯನ್ನು ತೋರದೆ ಅದನ್ನು ಮುರಿದನು. ದಯೆ ತೋರಲು ಬೇಕಾದ ಎಲ್ಲಾ ಲಕ್ಷಣಗಳೂ ಆ ಧನುಸ್ಸಿನಲ್ಲಿ ಇತ್ತು. ಕೃಷ್ಣನು ಸ್ವತಃ ತನ್ನ ಕೈಯಿಂದ ಉದ್ಧಾರ ಮಾಡಿದ್ದಾನೆ. ಹಗ್ಗವನ್ನು ಕಟ್ಟುವ ಮೂಲಕ ಗುಣವನ್ನು ತುಂಬಿಸಿದ್ದಾನೆ. ಕೃಷ್ಣನ ಮುಂದೆ ಬಗ್ಗಿದೆ. ಹೀಗಿರುವಾಗ ಧನುಸ್ಸನ್ನು ಮುರಿದದ್ದು ತಪ್ಪು ಎಂದು ಸಂಶಯ ಬರಬಹುದು. ಇದಕ್ಕೆ ಉತ್ತರವನ್ನು ರಾಜರು ಉದಾಹರಣೆಯ ಮೂಲಕ ತಿಳಿಸುತ್ತಾರೆ– ಹೃದಯ ಸ್ವಚ್ಛ ಇಲ್ಲದ, ಆದ್ದರಿಂದಲೇ ದುಷ್ಟನಾದ ಒಬ್ಬ ವ್ಯಕ್ತಿ ಇದ್ದಾನೆ ಎಂದು ತಿಳಿಯೋಣ. ಆತನು ತುಂಬಾ ದರಿದ್ರನು. ಆತನಿಗೆ ಹಣ ವಸ್ತ್ರಾದಿಗಳನ್ನು ಕೊಟ್ಟು ಜೀವನದಲ್ಲಿ ಮೇಲೆ ತಂದೆವು. ಆದರೂ ಆತನು ನಮಗೆ ವಿನೀತನಾಗಲಿಲ್ಲ. ಪಾದದಿಂದ ಆತನಿಗೆ ಒದೆದು ಬಗ್ಗಿಸಿದೆವು. ಆದರೂ ತಾನು ಮೃದುಸ್ವಭಾವವನ್ನು ಸಂಪಾದಿಸಲಿಲ್ಲ. ನಮ್ಮ ಮುಂದೆ ವಿನೀತನಾದದ್ದು ಬಲಾತ್ಕಾರದಿಂದ ಹೊರತು ಸಹಜವಾಗಿ ಅಲ್ಲ. ಆದ್ದರಿಂದ ಇಂತಹ ವ್ಯಕ್ತಿಗಳಲ್ಲಿ ಎಂದೂ ದಯೆ ತೋರಬಾರದು. ಈ ಧನುಸ್ಸೂ ಕೂಡಾ ಶುಷ್ಕವಾದ ಮಧ್ಯವುಳ್ಳದ್ದು. ಹಸಿಯಾದ ಬಿದಿರಿನಿಂದ ಬಿಲ್ಲನ್ನು ಮಾಡಲು ಸಾಧ್ಯವಿಲ್ಲ. ಆದ್ದರಿಂದ ಇಂತಹ ಬಿಲ್ಲನ್ನು ಮುರಿದದ್ದು ಉಚಿತವಾಗಿದೆ.

<u>**ಸಂದೇಶ**</u> : ವ್ಯಕ್ತಿಯ ಹೃದಯಶುದ್ಧಿಯಂತೆ ಮೃದುತ್ವವೂ ಅಗತ್ಯ.

**ಭಗ್ನಶ್ಚಾಪಃ ಸ್ವಭರ್ತುಃ ಪ್ರತಿಭಯನಿನದೈರ್ಧೈರ್ಯಚೌರ್ಯಂ ತತಾನ**
**ವ್ಯಗ್ರಸ್ವಾಂತಾನ್ ಸ್ವಪಾಲಾನ್ ದೃಢತರಶಕಲ ದ್ವಂದ್ವಘಾತೈರ್ಜಘಾನ ।**
**ಭಂಗೇನೈವೋಗ್ರಮಲ್ಲ ಪ್ರಕರ ಹೃದಿಭಯಂ ಭಲ್ಲಕಲ್ಪಂ ಚಖಾನ**
**ದ್ವೈದೀಭಾವಂ ವಿಪಕ್ಷೇ ವಿರಚಯತಿ ಬತ ಸ್ವೀಯ ಏವ ಸ್ವಶತ್ರುಃ ॥ ೧೪ ॥**

ಭಗ್ನಃ=ತುಂಡಾದ; ಚಾಪಃ=ಬಿಲ್ಲು; ಸ್ವ=ತಾನು; ಭರ್ತುಃ=ಪತಿಗೆ; ಪ್ರತಿಭಯ=ಭಯಂಕರ; ನಿನದೈಃ=ಶಬ್ದಗಳಿಂದ; ಧೈರ್ಯ=ಧೈರ್ಯವು; ಚೌರ್ಯ=ಕಳ್ಳತನ; ತತಾನ=ಉಂಟುಮಾಡಿತು; ವ್ಯಗ್ರ=ಕಳವಳ; ಸ್ವಾಂತಾನ್=ಮನಸ್ಸುಳ್ಳ; ಸ್ವ=ತಾನು; ಪಾಲಾನ್=ಪಾಲಕರನ್ನು; ದೃಢತರ=ಗಟ್ಟಿಯಾದ; ಶಕಲ=ತುಂಡು; ದ್ವಂದ್ವ=ಎರಡು; ಘಾತೈಃ=ಹೊಡೆತಗಳಿಂದ; ಜಘಾನ=ಹೊಡೆಯಿತು; ಭಂಗೇನ ಏವ=ಮುರಿಯು ವಿಕೆಯಿಂದಲೇ; ಉಗ್ರ=ಕ್ರೂರ; ಮಲ್ಲ=ಜಟ್ಟಿಗಳು; ಪ್ರಕರ=ಗುಂಪು; ಹೃದಿ=ಮನದಲ್ಲಿ; ಭಯಂ=ಭಯವು; ಭಲ್ಲ=ಬಾಣವು; ಕಲ್ಪಂ=ಸಮಾನವು; ಚಖಾನ=ಮಾಡಿತು; ದ್ವೈದೀಭಾವಂ=ಎರಡಾಗು ವಿಕೆಯನ್ನು; ವಿಪಕ್ಷೇ=ಶತ್ರುಗಳಲ್ಲಿ; ವಿರಚಯತಿ=ಉಂಟುಮಾಡುತ್ತದೆ; ಬತ=ದುಃಖವು; ಸ್ವೀಯ ಏವ=ತನ್ನವನೇ; ಸ್ವಃ=ತಾನು; ಶತ್ರು=ಶತ್ರುವು.

ಕೃಷ್ಣನ ಕೈಗೆ ಸಿಕ್ಕಿದ ಧನುಸ್ಸು ಶಬ್ದಮಾಡುತ್ತಾ ಮುರಿಯಿತು. ಈ ಶಬ್ದದಿಂದ ಕಂಸನು ಧೈರ್ಯಗುಂದಿದನು. ಎಲೋ ಕಂಸನೇ, ನಮ್ಮ ಶತ್ರುವಾದ ಕೃಷ್ಣನು ತುಂಬಾ ಬಲಿಷ್ಠನಿದ್ದಾನೆ. ಬದುಕಬೇಕಾದರೆ ನಾವು ಬೇರೆ ಕಡೆಗೆ ಹೋಗುವುದು ಒಳಿತು ಎಂದು ಹೇಳುವಂತಿತ್ತು ಆ ಶಬ್ದವು. ಬಿಲ್ಲಿನ ರಕ್ಷಣೆಗಾಗಿ ಕೆಲವರನ್ನು ಕಂಸನು ನೇಮಿಸಿದ್ದನು. ಕೃಷ್ಣನು ಆ ಧನುಸ್ಸಿನ ಎರಡು ತುಂಡುಗಳಿಂದ ರಕ್ಷಕರನ್ನು ಕೊಂದನು. ಆ ರಕ್ಷಕ ಭಟರೂ ಕಂಸನಂತೆಯೇ ಭಯಗೊಂಡಿದ್ದರು. ಸನ್ನಿವೇಶವು ಒಂದು ಅರ್ಥಕ್ಕೆ ಗಮಕವಾಯಿತು– ಬದುಕಬೇಕಾದರೆ ಬೇರೆಡೆಗೆ ಹೋಗುವ ಎಂದು ಹೇಳುವಾಗ ಈ ಹೇಳುವವನ ಕಡೆಯವರೇ ತಡೆಯುತ್ತಾರೆ. ಆಗ ಇವನು ತನ್ನ ಕೈಗಳಿಂದ ಹೊಡೆಯುತ್ತಾನೆ. ಅದೇ ರೀತಿ ಈ ಧನುಸ್ಸು ಕಂಸಾದಿಗಳಿಗೆ ಇಂತಹ ಮಾತನ್ನು ಹೇಳುವಾಗ ಕಂಸಭಟರು ತಡೆಯುವಂತೆ ಮುಂದೆ ಬಂದರು. ಆಗ ಧನುಸ್ಸು ತನ್ನ ಕೈಗಳಂತಿರುವ ಎರಡು ತುಂಡುಗಳಿಂದ ತನ್ನವರನ್ನೇ ಹೊಡೆಯಿತು. ಕಂಸನ ಆಸ್ಥಾನದಲ್ಲಿ ಪ್ರಚಂಡ ಮಲ್ಲರಿದ್ದರು. "ಇಷ್ಟು ಬಲಿಷ್ಠನಾದರೂ ನಾನು ಈ ಕೃಷ್ಣನಿಂದ ಭ್ರಷ್ಟನಾಗಿದ್ದೇನೆ. ನಿಮ್ಮ ಪಾಡೇನು ಎಂದು ಧನುಸ್ಸು ತನ್ನ ಧ್ವನಿಯ ಮೂಲಕ ಕಂಸನ ಮಲ್ಲರನ್ನು ನಡುಗಿಸಿತು.

**ಸಂದೇಶ** : ಲೋಕದಲ್ಲಿಯೂ ಇದೇ ರೀತಿ ನಡೆಯುತ್ತದೆ. ನಮ್ಮ ಶತ್ರುಗಳ ಮಧ್ಯ ದಲ್ಲಿ ನಾವು ಭಿನ್ನಾಭಿಪ್ರಾಯವನ್ನು ಉಂಟುಮಾಡುತ್ತೇವೆ. ಆಗ ಒಂದು ಗುಂಪಿನವರು ತಮ್ಮ ನಾಯಕರಲ್ಲಿ ನಮ್ಮ ಬಗ್ಗೆ ಭಯವನ್ನು ತುಂಬಿಸುತ್ತಾರೆ. ಆಗ ಶತ್ರುಗಳು ಸುಲಭವಾಗಿ ನಮ್ಮ ಅಧೀನರಾಗುತ್ತಾರೆ. ಶತ್ರುಗಳಲ್ಲಿ ಭೇದವನ್ನುಂಟುಮಾಡಬೇಕಾದರೆ ಅವರನ್ನು ಕರ(ಹಣ)ದಿಂದ ಗ್ರಹಣ(ಸ್ವೀಕಾರ) ಮಾಡಬೇಕು. ಆಗ ಅವರಲ್ಲಿ ಭೇದ ಉಂಟಾಗುತ್ತದೆ. ಕೃಷ್ಣನೂ ಇಲ್ಲಿ ಹಾಗೆಯೇ ಮಾಡಿದ. ಬಿಲ್ಲನ್ನು ಕರ(ಕೈ)ದಿಂದ ಗ್ರಹಣ(ಸ್ವೀಕಾರ)ಮಾಡಿದ. ಅನಂತರ ಭೇದವನ್ನು(ತುಂಡು)ಮಾಡಿದ.

**ಇತಿ ವಿವಿಧಚರಿತ್ರಂ ಶ್ರೀಪತೇಸ್ತದ್ವಿಚಿತ್ರಂ**
**ಕಥಯಿತುಮಿವ ಭಾನುಃ ಸಿದ್ಧವಿದ್ಯಾಧರಾಣಾಮ್ ।**
**ಅಗಮದಮಲಮೇರೋರ್ಭಾಗಮನ್ಯಂ ಮುಕುಂದಃ**
**ಅಪ್ಯಗಣಿತವಿಭವಃ ಸ್ವಂ ಜ್ಞಾತಿಜುಷ್ಟಂ ನಿವಾಸಮ್** ॥ ೧೫ ॥

ಇತಿ=ಈ ರೀತಿಯಾಗಿ; ವಿವಿಧ=ಬೇರೆ ಬೇರೆ; ಚರಿತ್ರಂ=ಕೆಲಸವನ್ನು; ಶ್ರೀ=ರಮೆಯು; ಪತೇಃ=ಪತಿಯ; ತತ್=ಅದು; ವಿಚಿತ್ರಂ=ಆಶ್ಚರ್ಯ; ಕಥಯಿತುಂ= ಹೇಳಲು; ಇವ=ಅಂತೆ; ಭಾನುಃ=ಸೂರ್ಯನು; ಸಿದ್ಧ=ಸಿದ್ಧರು; ವಿದ್ಯಾಧರಾಣಾಂ= ವಿದ್ಯಾಧರರಿಗೆ; ಅಗಮತ್=ಹೋದನು; ಅಮಲ=ಸ್ವಚ್ಛ; ಮೇರೋಃ=ಮೇರುವಿನ; ಭಾಗಂ=ಜಾಗವನ್ನು; ಅನ್ಯಂ=ಇನ್ನೊಂದು; ಮುಕುಂದಃ=ಕೃಷ್ಣನು; ಅಪಿ=ಕೂಡಾ; ಅಗಣಿತ=ಲೆಕ್ಕ ಇಲ್ಲದ; ವಿಭವಃ=ವೈಭವ; ಸ್ವಂ=ತಾನು; ಜ್ಞಾತಿ=ಬಂಧುಗಳು; ಜುಷ್ಟಂ=ಸೇವಿಸಿದ್ದು; ನಿವಾಸಂ= ಮನೆಯನ್ನು.

ಕೃಷ್ಣನು ಮಥುರೆಯನ್ನು ಪ್ರವೇಶಿಸಿ ಅದ್ಭುತವಾದ ಕೆಲಸಗಳನ್ನು ಮಾಡಿದನು. ಈ ಕೆಲಸವು ಮಾನವ ಪ್ರಯತ್ನಕ್ಕೆ ಮೀರಿದ್ದು. ಬಿಲ್ಲನ್ನು ಮುರಿದದ್ದು ಆ ಹಗಲಿನ ಕೊನೆಯ ಕೆಲಸ. ಇಷ್ಟಾಗುವಾಗ ಸೂರ್ಯನು ಅಸ್ತಮಿಸಿದನು. ಸೂರ್ಯನು ಮೇರುವಿಗೆ ಪ್ರದಕ್ಷಿಣೆ ಬರುವನೆಂದು ಶಾಸ್ತ್ರ ಹೇಳುತ್ತದೆ. ಮೇರುವಿನ ದಕ್ಷಿಣ ಭಾಗಕ್ಕೆ ಬಂದಾಗ ನಮಗೆ ಹಗಲು. ಉತ್ತರ ಭಾಗಕ್ಕೆ ಹೋದಾಗ ನಮಗೆ ರಾತ್ರಿ. ಸೂರ್ಯನು ಈಗ ಉತ್ತರ ಭಾಗಕ್ಕೆ ಹೊರಟಿದ್ದಾನೆ. ಯಾಕೆಂದರೆ ರಾಜರು ಈ ರೀತಿ ಉತ್ಪ್ರೇಕ್ಷಿಸುತ್ತಾರೆ– ಕೃಷ್ಣನ ಈ ಅದ್ಭುತ ಚರಿತ್ರೆಗಳನ್ನು ಸೂರ್ಯನು ಪ್ರತ್ಯಕ್ಷ ನೋಡಿದ್ದಾನೆ. ದೇವರ ಚರಿತ್ರೆಗಳನ್ನು ನೋಡಿದರೆ ಸಾಲದು. ಇನ್ನೊಬ್ಬರಿಗೆ ಹೇಳಲೂ ಬೇಕು. ಆಗ ದೇವರು ಪ್ರೀತನಾಗುತ್ತಾನೆ. ಮೇರುವಿನ ಉತ್ತರ ಭಾಗದಲ್ಲಿ ದೇವತೆಗಳು ಇರುತ್ತಾರೆ. ಅವರಿಗೆ ಈ ವಿಷಯವನ್ನು ತಿಳಿಸಲು ಸೂರ್ಯನು ಉತ್ತರಕ್ಕೆ ಹೋದನು ಎಂದು.

ನಂದಗೋಪಾದಿಗಳು ಮಥುರೆಯಲ್ಲಿ ಒಂದು ಮನೆಯಲ್ಲಿ ತಂಗಿದ್ದರು. ಕೃಷ್ಣನು ಧನುಸ್ಸನ್ನು ಮುರಿದು ಕಂಸನ ಮನೆಯೊಳಗೆ ಹೋಗದೆ ತಿರುಗಿ ತನ್ನವರು ತಂಗಿರುವ ಮನೆಗೆ ಬಂದನು.

**ಸಂದೇಶ : ತದ್ಧಿತಪಃ ತದ್ಧಿತಪಃ ಸ್ವಾಧ್ಯಾಯ ಪ್ರವಚನ ಏವೇತಿ ನಾಕೋ ಮೌದ್ಗಲ್ಯಃ।** ಪಾಠಪ್ರವಚನಗಳು ಅಧ್ಯಯನಗಳು ಇವುಗಳು ನಮ್ಮ ಜೀವನದಲ್ಲಿ ನಡೆಯುತ್ತಾ ಇರಬೇಕು.

**ತಮಃ ಸಮಂತಾತ್ ಕಾಷ್ಠಾಸು ಪುಪೂರ ಸ ಗತೋ ರವಿಃ ।**
**ಬಹಿರ್ಗತೋ ಮುಕುಂದೋಽಪಿ ಭಯಾಖ್ಯಂ ತತ್ಸ್ವಶತ್ರುಷು ॥ ೧೬ ॥**

ತಮಃ=ಕತ್ತಲೆಯು; ಸಮಂತಾತ್=ಸುತ್ತಲೂ; ಕಾಷ್ಠಾಸು=ದಿಕ್ಕುಗಳಲ್ಲಿ; ಪುಪೂರ= ತುಂಬಿಸಿದನು; ಸಃ=ಆ; ಗತಃ=ಹೋದ; ರವಿಃ=ಸೂರ್ಯನು; ಬಹಿಃ=ಹೊರಗೆ; ಗತಃ= ಇರುವ; ಮುಕುಂದೋಽಪಿ=ಕೃಷ್ಣನೂ ಕೂಡ; ಭಯ=ಭಯವು; ಆಖ್ಯಂ=ಹೆಸರು; ತತ್=ಆ; ಸ್ವ=ತಾನು; ಶತ್ರುಷು=ಶತ್ರುಗಳಲ್ಲಿ.

ಸೂರ್ಯನು ದಕ್ಷಿಣದಿಂದ ಉತ್ತರಕ್ಕೆ ಹೋಗುವಾಗ ದಕ್ಷಿಣದ ಎಲ್ಲಾ ಭಾಗದಲ್ಲಿಯೂ ಕತ್ತಲೆಯನ್ನು ತುಂಬಿಸಿದನು. ಕೃಷ್ಣನೂ ಕೂಡಾ ಧನುಸ್ಸನ್ನು ಮುರಿದು ಹೊರಗೆ ಬಂದಾಗ ಕಂಸಾದಿಗಳ ಮನದಲ್ಲಿ ಭಯವನ್ನು ತುಂಬಿಸಿದನು. ಕತ್ತಲು ಇದ್ದಾಗ ಹೇಗೆ ದಾರಿಯೇ ತೋರುವುದಿಲ್ಲವೋ ಹಾಗೆ ಭಯ ಇದ್ದಾಗಲೂ ಏನು ಮಾಡಬೇಕೆಂದೇ ತೋರುವುದಿಲ್ಲ.

**ಸಂದೇಶ** : ದೇವರಿಂದ ಭಯಪಡುವ ಯಾವ ಕೆಲಸವನ್ನೂ ಮಾಡಬಾರದು. ಹಾಗೆ ಮಾಡಿದರೆ ಜೀವನದಲ್ಲಿ ಮುಂದೆ ದಾರಿಯೇ ಕಾಣುವುದಿಲ್ಲ.

**ಔದಾರ್ಯ ಧೈರ್ಯ ಶೌರ್ಯಾಣಿ ಗರ್ಹಯನ್ ಸ ಭಯೋಚ್ಚಯಃ ।**
**ಮನೋ ಮಮರ್ದ ಕಂಸಸ್ಯ ಮಧುಸೂದನದೂತವತ್ ॥ ೧೭ ॥**

ಔದಾರ್ಯ=ಉದಾರತೆಯು; ಧೈರ್ಯ=ಧೈರ್ಯವು; ಶೌರ್ಯಾಣಿ=ಪರಾಕ್ರಮಗಳು; ಗರ್ಹಯನ್=ನಿಂದಿಸುತ್ತಾ; ಸಃ=ಆ; ಭಯ=ಭಯವು; ಉಚ್ಚಯಃ=ಸಮೂಹವು; ಮನಃ= ಮನಸ್ಸು; ಮಮರ್ದ=ಮರ್ದಿಸಿತು; ಕಂಸಸ್ಯ=ಕಂಸನ; ಮಧು=ಮಧುವು; ಸೂದನ= ನಾಶಕ; ದೂತವತ್=ಸೇವಕನಂತೆ.

ದೂತನ ವರ್ಣನೆಯೂ ಕಾವ್ಯದಲ್ಲಿ ಸೇರಿದೆ. ಆ ಕ್ರಮದಲ್ಲಿ ರಾಜರು ಭಯವನ್ನು ಕೃಷ್ಣನ ದೂತನನ್ನಾಗಿ ವರ್ಣಿಸುತ್ತಾರೆ. ಕಂಸನಲ್ಲಿ ಬಹಳ ಔದಾರ್ಯ, ಧೈರ್ಯ, ಶಕ್ತಿ ಇತ್ತು. ಈ ದೂತನು ಕಂಸನ ಆ ಗುಣಗಳನ್ನೆಲ್ಲಾ ತಿರಸ್ಕರಿಸಿತು. ಕಂಸನ ಮನಸ್ಸನ್ನು ಬಹಳವಾಗಿ ಪೀಡಿಸಿತು. ದೂತರ ಕೆಲಸವೇ ಇದು –ಶತ್ರುಗಳನ್ನು ಕುಗ್ಗಿಸಿ ಸ್ವಾಮಿಯನ್ನು ಮೆರೆಸುವುದು –ಅಂದರೆ ಕಂಸನು ಭಯದಿಂದ ತತ್ತರಿಸಿದನು.

<u>**ಸಂದೇಶ**</u> : ದೇವರಿಗೆ ವಿಮುಖನ ಯಾವ ಗುಣಗಳೂ ಕೆಲಸಕ್ಕೆ ಬರೋಲ್ಲ.

**ಕಸ್ತ್ವಂ ಸೋಽಹಮರೇ ತ್ವದಂತಕತಟಾದಭ್ಯಾಗತೋ ವೈ ಭಟಃ**
**ಪೃಥ್ವ್ಯಾಂ ಕ್ವಾಸ್ತಿ ಮಮಾಂತಕಃ ಸ ಭುವನೇಷ್ವಂತರ್ಬಹಿರ್ವರ್ತತೇ ।**
**ನಾಮಾಪ್ಯಸ್ಯ ನ ದೇವಕೀ ಸುತ ಇತಿ ಖ್ಯಾತಃ ಸ ತನ್ನಂದನೋ**
**ಧ್ವಸ್ತೋ ಹ್ಯಜ್ಞ ಮೃತಿರ್ನ ತಸ್ಯ ನಿಹತಾಸ್ತೇನ ತ್ವದೀಯಾಃ ಪರಮ್ ॥ ೧೮ ॥**

ಕಃ=ಯಾರು? ತ್ವಂ=ನೀನು; ಸಃ=ಅವನು; ಅಹಂ=ನಾನು; ಅರೇ=ಶತ್ರುವೇ; ತ್ವತ್= ನೀನು; ಅಂತಕ=ನಾಶಕ; ತಟಾತ್=ಸಮೀಪದಿಂದ; ಅಭ್ಯಾಗತಃ=ಬಂದವನು; ವೈ=ಪ್ರಸಿದ್ಧ; ಭಟಃ=ಸೇವಕನು; ಪೃಥ್ವ್ಯಾಂ=ಭೂಮಿಯಲ್ಲಿ; ಕ್ವ=ಎಲ್ಲಿ; ಅಸ್ತಿ=ಇದೆ; ಮಮ= ನನಗೆ; ಅಂತಕಃ=ನಾಶಕನು; ಸಃ=ಅವನು; ಭುವನೇಷು=ಜಗತ್ತಿನಲ್ಲಿ; ಅಂತಃ=ಒಳಗೆ; ಬಹಿಃ= ಹೊರಗೆ; ವರ್ತತೇ=ಇದ್ದಾನೆ; ನಾಮ ಅಪಿ=ಹೆಸರಾದರೂ; ಅಸ್ಯ=ಇವನ; ನ=ಇಲ್ಲ; ದೇವಕೀ=ದೇವಕಿಯು; ಸುತಃ=ಮಗನು; ಇತಿ=ಎಂದು; ಖ್ಯಾತಃ=ಪ್ರಸಿದ್ಧನು; ಸಃ=ಅವನು; ತತ್=ಆ; ನಂದನಃ=ಮಗನು; ಧ್ವಸ್ತಃ=ನಾಶವಾಗಿದ್ದಾನೆ; ಹಿ=ಪ್ರಸಿದ್ಧ; ಅಜ್ಞ=ಮೂರ್ಖನೆ; ಮೃತಿಃ=ಮರಣವು; ನ=ಇಲ್ಲ; ತಸ್ಯ=ಅವನಿಗೆ; ನಿಹತಾಃ=ಸತ್ತಿದ್ದಾರೆ; ತೇನ=ಅವನಿಂದ; ತ್ವದೀಯಾಃ=ನಿನ್ನವರು; ಪರಂ=ಕೇವಲ.

ಕೃಷ್ಣನಿಂದಾಗಿ ಕಂಸನಿಗೆ ಭಯವು ಮನದಲ್ಲಿ ಸೇರಿದೆ. ಈ ಭಯವನ್ನು ಕೃಷ್ಣನ ಸೇವಕನನ್ನಾಗಿ ರಾಜರು ಕಲ್ಪಿಸುತ್ತಾರೆ. ಈ ಸೇವಕನಿಗೂ ಕಂಸನಿಗೂ ನಡೆವ ಸಂಭಾಷಣೆಯನ್ನು ಈ ರೀತಿ ಚಿತ್ರಿಸುತ್ತಾರೆ: ಅನ್ಯಾಯ ಮಾಡಿದ ಕಂಸನ ವಿರುದ್ಧ ಯುದ್ಧಮಾಡುವ ಮೊದಲು ದೂತನನ್ನು ಕಳಿಸುವ ಕ್ರಮ ಇದೆ. ಅದರಂತೆ ಕೃಷ್ಣನು

ತನ್ನ ದೂತನಾದ ಭಯವನ್ನು ಕಂಸನ ಬಳಿಗೆ ಕಳಿಸಿದನು. ದೂತರ ಪರಿಚಯ ಇರುವುದಿಲ್ಲ. ಆದ್ದರಿಂದ ಆತನ ಪರಿಚಯ ಮಾಡಿಕೊಳ್ಳಲು 'ಯಾರು ನೀನು' ಎಂದು ಪ್ರಶ್ನಿಸಿದನು. ದುಷ್ಟರಿಗೆ ಒಳಗಿಂದ ಒಂದು ರೀತಿಯ ಪುಕ್ಕಲುತನ ಇರುತ್ತದೆ. ಆದರೆ ಅದು ದೇವರಿಂದ ಎಂಬ ತಿಳುವಳಿಕೆ ಇರುವುದಿಲ್ಲ. ಆದ್ದರಿಂದ ತಮ್ಮೊಳಗೇ ವಿಚಾರ ಮಾಡುತ್ತಾರೆ 'ಒಳಗಿಂದ ಏನೋ ಭಯದಂತೆ ಆಗುತ್ತದೆ. ಯಾಕೆ ಹೀಗೆ' ಎಂದು. ಇದಕ್ಕೆ ದೂತನ ಉತ್ತರ –ನಿನ್ನ ಶತ್ರುವಿನ ಬಳಿಯಿಂದ ಬಂದ ದೂತ ನಾನು. ಭೂಮಿಯಲ್ಲಿ ನನಗೆ ಶತ್ರುಗಳೇ ಇಲ್ಲ ಎಂದು ಕಂಸನ ಅಹಂಕಾರದ ಉತ್ತರ. ಅಂದರೆ ತಾನು ಬಹಳ ಬಲಿಷ್ಠ. ನನ್ನನ್ನು ವಿರೋಧಿಸುವವರಿಗೆ ಕ್ಷೇಮವಿಲ್ಲ ಎಂದು ಈತನ ಅಭಿಪ್ರಾಯ. ಇದಕ್ಕೆ ದೂತನ ಉತ್ತರ– ನಿನಗೆ ಶತ್ರು ಯಾಕಿಲ್ಲ? ಆತನು ಎಲ್ಲಾ ಕಡೆಯೂ ನಿನ್ನ ಒಳಹೊರಗೂ ಇದ್ದಾನೆ. ಆತನ ಹೆಸರೇನು ಎಂಬ ಕಂಸನ ಪ್ರಶ್ನೆಗೆ ದೇವಕೀನಂದನ ಎಂದು ದೂತನ ಉತ್ತರ. ದೇವಕಿಯ ಮಕ್ಕಳನ್ನೆಲ್ಲಾ ನಾನೇ ಕೈಯಾರೆ ಕೊಂದವ. ಆದ್ದರಿಂದ ಆ ಹೆಸರಿನ ಶತ್ರು ಇರಲು ಸಾಧ್ಯವೇ ಇಲ್ಲ. ನೀನು ಸುಳ್ಳು ಹೇಳುತ್ತಿ ಎಂದು ಕಂಸನು ಪ್ರತಿಯಾಡಿದ್ದಕ್ಕೆ– ಆತನ ಮರಣ ಇದ್ದರೆ ತಾನೆ ನೀನು ಕೊಲ್ಲುವುದು. ಆತನು ಸತ್ತೂ ಇಲ್ಲ; ಸಾಯುವುದೂ ಇಲ್ಲ ಎಂದು ದೂತನು ಉತ್ತರಿಸಿದನು. ನೀನು ಹೇಳುವುದನ್ನು ನಂಬಲು ಸಾಧ್ಯವಿಲ್ಲ ಎಂದನು ಕಂಸನು. ಕಂಸನೇ, ನೀನು ಊಹಿಸು. ನೀನು ಬಹಳ ಜನರನ್ನು ನಂದಗೋಕುಲಕ್ಕೋ, ವೃಂದಾವನಕ್ಕೋ ಕಳಿಸಿದ್ದಿ ಒಬ್ಬನನ್ನು ಕೊಲ್ಲುವ ಸಲುವಾಗಿ. ಆದರೆ ಹೋದವರು ಯಾರೂ ತಿರುಗಿ ಬರಲಿಲ್ಲ. ಅವರೆಲ್ಲರನ್ನೂ ಈ ದೇವಕೀಸುತನೇ ಇನ್ನೊಬ್ಬರ ಸಹಾಯ ಇಲ್ಲದೇನೇ ಕೊಂದನು ಎಂದು ದೂತನು ಯುಕ್ತಿಪೂರ್ವಕವಾಗಿ ಉತ್ತರಿಸಿದನು.

**ಸಂದೇಶ** : ಧರ್ಮವನ್ನು ನಿಂದಿಸುವ ನಾಸ್ತಿಕರಿಗೆ ಆಂತರಿಕವಾಗಿ ಒಂದು ರೀತಿಯ ಭಯವು ಇದ್ದೇ ಇರುತ್ತದೆ.

**ಮಲ್ಲಾಃ ಶೈಲಸಮಾ ಬಲಂ ಚ ಜಗತಿ ಪ್ರಖ್ಯಾತಮಸ್ತ್ಯೇವ ಮೇ**
**ಹಸ್ತೀ ಹಸ್ತಿಸಹಸ್ರಸಮ್ಮಿತ ಬಲಸ್ತತ್ಕ್ವಾಸ್ತಿ ಮೃತ್ಯುರ್ಮಮ ।**
**ರಾಜನ್ ಮೃತ್ಯುರಿವಾಹ ಮೇವ ಭವತಾಂ ಚಿತ್ತೇ ಸಮುಜ್ಜೃಂಭಿತೋ**
**ದೃಷ್ಟಂ ವಸ್ತು ಭಯಂಕರಂ ವಿರಚಯೇ ಶಂಕಾಸಹಸ್ರಾರ್ಪಕಃ ॥ ೧೯ ॥**

ಮಲ್ಲಾಃ=ಜಟ್ಟಿಗಳು; ಶೈಲ=ಬೆಟ್ಟವು; ಸಮಾಃ=ಸದೃಶವು; ಬಲಂ=ಸೈನ್ಯವು; ಜಗತಿ= ಲೋಕದಲ್ಲಿ; ಪ್ರಖ್ಯಾತಂ=ಪ್ರಸಿದ್ಧ; ಅಸ್ತಿ ಏವ=ಇದೆ; ಮೇ=ನನ್ನ; ಹಸ್ತೀ=ಆನೆಯು; ಹಸ್ತಿ=ಆನೆ; ಸಹಸ್ರ=ಸಾವಿರ; ಸಮ್ಮಿತ=ಸಮಾನ; ಬಲಃ=ಬಲವುಳ್ಳ; ತತ್=ಆದ್ದರಿಂದ; ಕ್ವ=ಎಲ್ಲಿ; ಅಸ್ತಿ= ಇದೆ; ಮೃತ್ಯುಃ=ಮರಣವು; ಮಮ=ನನಗೆ; ರಾಜನ್=ರಾಜನೇ; ಮೃತ್ಯುಃ= ಮರಣವು; ಇವ=ಅಂತೆ; ಅಹಂ=ನಾನು; ಏವ=ನಿಶ್ಚಯ; ಭವತಾಂ=ನಿಮ್ಮ; ಚಿತ್ತೇ=ಮನದಲ್ಲಿ;

ಸಮ್=ಚೆನ್ನಾಗಿ; ಉಜ್ಜೃಂಭಿತಃ=ಬೆಳದವನಾಗಿ; ದೃಷ್ಟಂ=ಕಂಡ; ವಸ್ತು=ವಸ್ತುವು; ಭಯಂಕರಂ=ಭಯಜನಕವು; ವಿರಚಯೇ=ಮಾಡುತ್ತೇನೆ; ಶಂಕಾ=ಸಂಶಯ; ಸಹಸ್ರ=ಸಾವಿರ; ಅರ್ಪಕಃ=ಕೊಡುವವನು.

ಕೃಷ್ಣನ ದೂತನಲ್ಲಿ ಕಂಸನು ಇನ್ನೂ ತನ್ನ ಸಂವಾದವನ್ನು ಮುಂದುವರಿಸುತ್ತಾನೆ –ದೊಡ್ಡ ಬೆಟ್ಟಗಳಂತೆ ಬಲಿಷ್ಠರಾದ ಬಹಳ ಜಟ್ಟಿಗಳು ನನ್ನ ಬಳಿ ಇದ್ದಾರೆ. ನನ್ನ ಬಲವಂತು ಜಗತ್ತಿನಲ್ಲಿ ಬಹಳ ಪ್ರಸಿದ್ಧವಾಗಿದೆ. ಕುವಲಯಾಪೀಡಾ ಎಂಬ ಒಂದು ಆನೆ ನನ್ನಲ್ಲಿದೆ. ಅದು ಹತ್ತುಸಾವಿರ ಆನೆಗಳ ಬಲವುಳ್ಳದ್ದು. ಇಷ್ಟೆಲ್ಲಾ ಭದ್ರತೆಗಳು ನನ್ನಲ್ಲಿ ಇರುವಾಗ ನನಗೆ ಮರಣ ಹೇಗೆ ತಾನೆ ಬರುತ್ತದೆ ಎಂದು.

ಕಂಸನೇ ನಿನ್ನಲ್ಲಿ ಇಷ್ಟೆಲ್ಲಾ ಇರುವಂತೆಯೇ ನಾನೇ ಮೃತ್ಯುವಿನಂತೆ ನಿನ್ನ ಮನದಲ್ಲಿ ಬೆಳೆಯುತ್ತಿದ್ದೇನೆ. ಆಕಾರವುಳ್ಳ ವಸ್ತುಗಳನ್ನು ತಡೆಯಲು ಈ ನಿನ್ನ ಪಡೆಗಳು ಶಕ್ತಗಳಾದಾವು. ಆದರೆ ನಾನು ನಿರಾಕಾರವ್ಯಕ್ತಿ. ಆದ್ದರಿಂದ ಯಾರಿಗೂ ಕಾಣಸದಂತೆ ಕಾರ್ಯ ಮಾಡುವವನು. ನಾನು ನಿನ್ನನ್ನು ಪ್ರವೇಶಿಸಿದಂದಿನಿಂದ ನೀನು ಯಾವುದನ್ನೆಲ್ಲಾ ನೋಡುತ್ತಿಯೋ ಅವೆಲ್ಲವೂ ನಿನಗೆ ಮಾರಕಗಳೋ ಎಂಬ ಸಂಶಯವುಳ್ಳವನಾಗಿದ್ದಿ. ಸಹಜವಾಗಿ ಸಾಯುವ ವ್ಯಕ್ತಿಗಳು ಒಮ್ಮೆಲೇ ಸಾಯುತ್ತಾರೆ. ಯಾವ ರೀತಿಯ ಒದ್ದಾಟವೂ ಇಲ್ಲ. ಆದರೆ ನಿನ್ನನ್ನು ನಾನು ಆ ರೀತಿ ಸಾಯಲು ಬಿಡುವುದಿಲ್ಲ. ಚಿತ್ರಹಿಂಸೆಯ ಮೂಲಕ ಸಾಯಿಸುತ್ತೇನೆ ಎಂದು ಭಯವು ಕಂಸನಿಗೆ ಉತ್ತರಿಸಿತು.

**ಸಂದೇಶ** : ಭಗವದ್ವೇಷಿಗಳಿಗೆ ಬಾಹ್ಯಸಂಪತ್ತು ಎಷ್ಟಿದ್ದರೂ ಮಾನಸಿಕಶಾಂತಿ ಇರುವುದಿಲ್ಲ.

**ಯಸ್ಮಿನ್ನುತ್ಸೃಜತಿ ಸ್ವಭಕ್ತನಿಕರೈಃ ಸಾಕಂ ಹೃದೋಕೋ ನೃಣಾಂ**
**ಪ್ರಾಗಂಧಾ ಬಧಿರಾ ವಿವೇಕರಹಿತಾ ಮೂಕಾಯಿತಾಶ್ಚ ಕ್ಷಣಾತ್ ।**
**ಅಂತೇ ಪ್ರೇತಪುರೀಂ ಪ್ರಯಾಂತಿ ಜಗತಾಮೀಶಸ್ಯ ತಸ್ಯಾಗ್ರತಃ**
**ಕಿಂ ಮಲ್ಲೈಃ ಕಿಮು ಹಸ್ತಿನಾಽತಿಬಲಿನಾ ಕಿಂ ವಾ ತ್ವಯಾ ಕಿಂ ಭಟೈಃ ॥ ೨೦ ॥**

ಸ್ವ=ತನ್ನ; ಭಕ್ತ=ಭಕ್ತರ; ನಿಕರೈಃ=ಸಮೂಹದಿಂದ; ಸಾಕಂ=ಕೂಡಿಕೊಂಡು; ನೃಣಾಂ=ಜನರ; ಹೃತ್=ಹೃದಯವೆಂಬ; ಓಕಃ=ಮನೆಯನ್ನು; ಯಸ್ಮಿನ್=ಯಾವ ಕೃಷ್ಣನು; ಉತ್ಸೃಜತಿ=ಬಿಡುತ್ತಿರಲು; ಪ್ರಾಕ್=ಮೊದಲು; ಕ್ಷಣಾತ್=ಒಂದು ಕ್ಷಣದಲ್ಲಿ; ಅಂಧಾಃ= ಕುರುಡರು; ಬಧಿರಾಃ=ಕಿವುಡರು; ವಿವೇಕ=ವಿಚಾರಶಕ್ತಿಯಿಂದ; ರಹಿತಾಃ=ರಹಿತರು; ಮೂಕಾಯಿತಾಃ ಚ=ಬಾಯಿ ಬಾರದವರೂ; ಅಂತೇ=ಕೊನೆಯಲ್ಲಿ; ಪ್ರೇತ=ಸತ್ತವರ; ಪುರೀಂ=ಊರನ್ನು; ಪ್ರಯಾಂತಿ=ಹೊಂದುತ್ತಾರೆ; ಜಗತಾಂ=ಜಗತ್ತಿಗೆ; ಈಶಸ್ಯ=ಒಡೆಯ ನಾದ; ತಸ್ಯ=ಕೃಷ್ಣನ; ಅಗ್ರತಃ=ಮುಂದೆ; ಮಲ್ಲೈಃ=ಜಟ್ಟಿಗಳಿಂದ; ಕಿಂ=ಏನು? ಹಸ್ತಿನಾ= ಆನೆಯಿಂದ; ಕಿಮು=ಏನು? ಅತಿಬಲಿನಾ=ಬಹಳ ಬಲವುಳ್ಳ; ತ್ವಯಾ=ನಿನ್ನಿಂದ; ಕಿಂ= ಏನು? ಭಟೈಃ=ಸೇವಕರಿಂದಲಾಗಲೀ; ಕಿಂ=ಏನು.

ಈ ತನಕ ಭಯವು ತನ್ನ ಶಕ್ತಿಯನ್ನು ಕಂಸನಿಗೆ ತಿಳಿಸಿತು. ಈಗ ತನ್ನ ಸ್ವಾಮಿಯಾದ ಕೃಷ್ಣನ ಸಾಮರ್ಥ್ಯವನ್ನು ತಿಳಿಸುತ್ತಿದೆ– ಎಲೋ ಕಂಸನೇ, ನೀನು ಹೇಳುತ್ತಿ– ನಿನ್ನಲ್ಲಿ ಜಟ್ಟಿಗಳಿದ್ದಾರೆ. ಬಲಿಷ್ಠವಾದ ಆನೆ ಇದೆ. ದೊಡ್ಡ ಸೈನ್ಯ ಇದೆ. ಸ್ವಯಂ ನೀನೇ ತುಂಬಾ ಬಲಶಾಲಿ ಎಂದು. ಆದರೆ ಇವೆಲ್ಲಾ ಕೆಲಸಕ್ಕೆ ಬರಬೇಕಾದರೆ ನನ್ನ ಸ್ವಾಮಿ ಇವುಗಳಲ್ಲಿ ಇರಬೇಕು. ಕೃಷ್ಣನು ಇವುಗಳ ಹೃದಯದಿಂದ ಹೊರಡುವ ಸಮಯ ಬಂದಾಗ ಯಾವ ಇಂದ್ರಿಯಗಳೂ ಕೆಲಸ ಮಾಡುವುದಿಲ್ಲ. ಜಡದಂತೆ ಆಗುತ್ತಾರೆ. ಕೊನೆಗೆ ಸಾಯುವುದೇ ಗತಿ. ನೀನು ಹಾಗೂ ನಿನ್ನವರು ಬದುಕಿದ್ದೇ ನನ್ನ ಸ್ವಾಮಿ ನಿಮ್ಮಲ್ಲಿ ಇರುವುದರಿಂದ. ಅಂತಹ ಕೃಷ್ಣನ ಜೊತೆ ನೀನು ವಿರೋಧ ಕಟ್ಟಿಕೊಂಡರೆ ಕೃಷ್ಣನು ನಿನ್ನ ಹಾಗೂ ನಿನ್ನವರ ದೇಹದಿಂದ ಹೊರಡುತ್ತಾನೆ. ಆಗ ನೀನೇ ಸಾಯುವುದು ಹೊರತು ಕೃಷ್ಣನಿಗೆ ಏನೂ ಆಗುವುದಿಲ್ಲ.

<u>**ಸಂದೇಶ**</u> : ದೇವರ ಅಸ್ತಿತ್ವದಿಂದಾಗಿಯೇ ಎಲ್ಲವೂ ಪ್ರಿಯವಾಗುವುದು.

**ಕಿಂ ಭ್ರಾಂತೋಽಸಿ ವಿರುದ್ಧಭಾಷಣಮಿದಂ ಮಾ ಬ್ರೂಹಿ ಭೋ ದುರ್ಮತೇ**
**ಭ್ರಾಂತಿಸ್ತೇ ವಿಪರೀತವಾಗಪಿ ಮನೋ ಯತ್ತೇ ಮಯಾ ನಿರ್ಜಿತಮ್ ।**
**ಮತ್ಖಡ್ಗಾಭಿಹತಿಂ ಕಿಮಿಚ್ಛಸಿ ಶನೈರ್ಹಸ್ತಾದ್ಗಲಂಶ್ಚಂಚಲಾತ್**
**ಸ ತ್ವಾಮೇವ ಹನಿಷ್ಯತೀಶ್ವರಭಟಂ ಮಾಂ ಹಂತುಮೀಶೋಽಸ್ತಿ ಕಃ ॥ ೨೧ ॥**

ಭೋ=ಎಲೋ; ದುರ್ಮತೇ=ಕೆಟ್ಟ ಬುದ್ಧಿಯ ದೂತನೇ; ಭ್ರಾಂತಃ=ಭ್ರಾಂತನು; ಅಸಿ ಕಿಂ=ಆಗಿದ್ದಿಯೇನು? ಇದಂ=ಈ; ವಿರುದ್ಧ=ವಿರುದ್ಧವಾದ; ಭಾಷಣಂ=ಮಾತನ್ನು; ಮಾ ಬ್ರೂಹಿ=ಹೇಳಬೇಡ; ಭ್ರಾಂತಿಃ=ಭ್ರಾಂತಿಯು; ವಿಪರೀತ=ವಿರುದ್ಧವಾದ; ವಾಕ್ ಅಪಿ=ಮಾತೂ ಕೂಡಾ; ತೇ=ನಿನಗೆ; ಯತ್=ಯಾವ ಕಾರಣದಿಂದ; ತೇ=ನಿನ್ನ; ಮನಃ=ಮನಸ್ಸು; ಮಯಾ=ನನ್ನಿಂದ; ನಿರ್ಜಿತಂ=ಸೋಲಿಸಲ್ಪಟ್ಟಿದೆ; ಮತ್=ನನ್ನ; ಖಡ್ಗ=ಕತ್ತಿಯ; ಅಭಿಹತಿಂ=ಹೊಡೆತವನ್ನು; ಇಚ್ಛಸಿ ಕಿಂ=ಇಚ್ಛಿಸುವಿಯಾ? ಚಂಚಲಾತ್=ನಡುಗುವ; ಹಸ್ತಾತ್=ಕೈಯಿಂದ; ಶನೈಃ=ಮೆಲ್ಲಗೆ; ಗಲನ್=ಜಾರುವ; ಸಃ=ಆ ಕತ್ತಿಯು; ತ್ವಾಂ ಏವ=ನಿನ್ನನ್ನೇ; ಹನಿಷ್ಯತಿ=ಕೊಲ್ಲುತ್ತದೆ; ಈಶ್ವರ=ದೇವರ; ಭಟಂ=ಸೇವಕನಾದ; ಮಾಂ=ನನ್ನನ್ನು; ಹಂತುಂ=ಕೊಲ್ಲಲು; ಕಃ=ಯಾರು? ಈಶಃ=ಸಮರ್ಥನು; ಅಸ್ತಿ=ಇದ್ದಾನೆ.

ಭಯಗೊಂಡವರು ಪರಸ್ಪರ ವಿರುದ್ಧವಾಗಿ ಮಾತನಾಡುತ್ತಾರೆ. ಅದೇ ರೀತಿ ಕಂಸನು, ತಾನೇ ಕೃಷ್ಣನನ್ನು ಕೊಲ್ಲುವವನೆಂದು ಮೊಂಡು ಧೈರ್ಯದಿಂದ ಆಲೋಚಿಸಿದರೂ ಇನ್ನೊಂದು ಕ್ಷಣದಲ್ಲಿ ತಾನೇ ಸಾಯುತ್ತೇನೋ ಏನೋ ಎಂದೂ ಆಲೋಚಿಸಿದನು. ಕಂಸನಲ್ಲಿ ಶುಭಜೀವದ ಪ್ರವೇಶವೂ ಇದೆ. ಆದ್ದರಿಂದ ಎರಡನೇ ಆಲೋಚನೆ ಬರುವುದು ಅಸಂಭಾವಿತವಲ್ಲ.

ಕಂಸನು ಎಷ್ಟು ಭಯಗೊಂಡಿದ್ದಾನೆಂದರೆ ವ್ಯಾಹತ ಮಾತನಾಡುವುದು ತಾನು ಎಂದು ತಿಳಿಯದೆ, ಭ್ರಮೆಯಿಂದ ಕೃಷ್ಣನ ದೂತನೇ ವ್ಯಾಹತ ಮಾತನಾಡುತ್ತಿದ್ದಾನೆ ಎಂದು ಜರೆಯುತ್ತಿದ್ದಾನೆ– ಎಲೋ ಮೂರ್ಖ, ಕೃಷ್ಣನ ದೂತನೇ ನೀನು ಭ್ರಾಂತಿವುಳ್ಳವನಾಗಿದ್ದಿ. ಪರಸ್ಪರ ವಿರುದ್ಧವಾಗಿ ಮಾತನಾಡುತ್ತಿದ್ದಿ ಎಂದು. ಕೃಷ್ಣದೂತನು ಇದಕ್ಕೆ ಪ್ರತಿಕ್ರಯಿಸುತ್ತಾನೆ– ಭ್ರಾಂತನು ನಾನಲ್ಲ; ನೀನು. ನಿನ್ನ ಮನಸ್ಸು ಪೂರ್ಣವಾಗಿ ನನ್ನ ಹಿಡಿತದಲ್ಲಿ ಇದೆ. ಆದ್ದರಿಂದ ಅಸಂಬದ್ಧವಾಗಿ ಮಾತನಾಡುವವನೂ ನೀನೆ.

ಕಂಸ:– ಎಲೋ ಭಯವೇ, ನನ್ನಿಂದ ಹೊಡೆತವನ್ನು ಅಪೇಕ್ಷಿಸುತ್ತೀಯಾ? ನನ್ನ ಖಡ್ಗದಿಂದ ಒಂದು ಹೊಡೆದರೆ ನಿನಗೆ ಮರಣವೇ ಗತಿ. ದೂತ– ನೀನು ಕತ್ತಿಯನ್ನು ಕೈಯಲ್ಲಿ ಹಿಡಿದರೆ ತಾನೆ ನನ್ನನ್ನು ಕೊಲ್ಲುವುದು. ನಾನು ನಿನ್ನ ಬಳಿಯಲ್ಲಿ ಇದ್ದರೆ ನಿನಗೆ ನಡುಕ ಉಂಟಾಗುತ್ತದೆ. ಆಗ ನಿನ್ನ ಕೈಯಲ್ಲಿ ಕತ್ತಿಯೂ ನಿಲ್ಲುವುದಿಲ್ಲ. ಆಗ ನಿನ್ನ ಶತ್ರುವು ಧೈರ್ಯದಿಂದ ಬಂದು ನಿನ್ನ ಕತ್ತಿಯಿಂದಲೇ ನಿನ್ನನ್ನೇ ಕೊಲ್ಲುತ್ತಾನೆ. ಸಮರ್ಥನಾದ ದೇವರ ಬಳಿಯಿಂದ ಬಂದಿರುವ ನನ್ನನ್ನು ಕೊಲ್ಲಲು ಯಾರೂ ಶಕ್ತರಲ್ಲ.

<u>**ಸಂದೇಶ**</u> : ಭಗವದ್ವೇಷಿಗಳಿಗೆ ದೇವರ ಭಯ ಸದಾ ಇರುತ್ತದೆ.

**ಕ್ಲೀಬಃ ಕಿಂ ಕುರುಷೇ ತ್ವಮಜ್ಞ ಭವತಃ ಕ್ಲೀಬೋಪಮಾಂ ದಿತ್ಸಯಾ**
**ತದ್ಭಾವಂ ಶಿರಸಾ ದಧಾಮಿ ಬಹುನಾ ಕಿಂ ಜಲ್ಪಿತೇನಾಧುನಾ ।**
**ನಿತ್ಯಂ ಮನ್ನಿಯತಃ ಸ ವಾತಿ ಪವನಃ ಪಾಕಂ ವಿಧತ್ತೇಽನಲಃ**
**ಸೂರ್ಯೋಽಸೌ ಸಮುದೇತಿ ತಂ ಹರಿಮೃತೇ ಸರ್ವಂ ಜಗನ್ಮದ್ವಶಮ್ ॥ ೨೨ ॥**

ಹೇ ಅಜ್ಞ, ಎಲೋ ತಿಳಿಗೇಡಿಯೇ; ಕ್ಲೀಬಃ=ನಪುಂಸಕನಾದ; ತ್ವಂ=ನೀನು; ಕಿಂ= ಏನನ್ನು; ಕುರುಷೇ=ಮಾಡುತ್ತಿ? ಭವತಃ=ನಿನಗೆ; ಕ್ಲೀಬ=ನಪುಂಸಕರ; ಉಪಮಾಂ= ಹೋಲಿಕೆಯನ್ನು; ದಿ ತ್ಸಯಾ=ಕೊಡುವ ಇಚ್ಛೆಯಿಂದ; ತತ್=ನಪುಂಸಕದ; ಭಾವಂ= ಧರ್ಮವನ್ನು; ಶಿರಸಾ=ತಲೆಯಿಂದ; ದಧಾಮಿ=ಧರಿಸುತ್ತೇನೆ; ಬಹುನಾ=ಬಹಳ; ಜಲ್ಪಿತೇನ= ಹೇಳುವುದರಿಂದ; ಕಿಂ=ಏನು? ಅಧುನಾ=ಈಗ; ಪವನಃ=ಗಾಳಿಯು; ನಿತ್ಯಂ=ಸದಾ; ಮತ=ನನ್ನಿಂದ; ನಿಯತಃ=ಪ್ರೇರಿಸಲ್ಪಟ್ಟು; ವಾತಿ=ಬೀಸುತ್ತಾನೆ; ಅನಲಃ=ಬೆಂಕಿಯು; ಪಾಕಂ=ಅಡಿಗೆಯನ್ನು; ವಿಧತ್ತೇ=ಮಾಡುತ್ತದೆ; ಅಸೌ=ಈ; ಸೂರ್ಯಃ=ಸೂರ್ಯನು; ಸಮುದೇತಿ=ಉದಿಸುತ್ತಾನೆ; ತಂ=ಆ; ಹರಿಂ=ಕೃಷ್ಣನನ್ನು; ಋತೇ=ಹೊರತಾಗಿ; ಸರ್ವಂ=ಎಲ್ಲಾ; ಜಗತ್=ಲೋಕವು; ಮತ್=ನನ್ನ; ವಶಂ=ಅಧೀನವು.

ಎಲೋ ಭಯವೇ, ನೀನು ನಪುಂಸಕನು. ನಪುಂಸಕರು ಏನು ಮಾಡಬಲ್ಲರು? ನೀನು ಅಷ್ಟೂ ತಿಳುವಳಿಕೆ ಇಲ್ಲದವನು. ರಾಜರು ಇಲ್ಲಿ ಶಬ್ದ ಚಮತ್ಕಾರವನ್ನು ತೋರಿಸುತ್ತಾರೆ– ಸಂಸ್ಕೃತದಲ್ಲಿ ಭಯ ಶಬ್ದವು ನಪುಂಸಕಲಿಂಗ. ಈ ಆಂತರ್ಯವನ್ನು ಇಟ್ಟುಕೊಂಡು ರಾಜರು ಕಂಸನ ಬಾಯಿಂದ ಭಯವನ್ನು ನಪುಂಸಕ ಎಂದು ಹೇಳಿಸಿದರು.

ಇದಕ್ಕೆ ಪ್ರತಿಯಾಗಿ ಭಯವು ಹೇಳುತ್ತದೆ: ನಾನು ನಪುಂಸಕನಾದದ್ದು ನನಗಾಗಿ ಅಲ್ಲ. ನಿನ್ನಂತಹ ಹರಿದ್ವೇಷಿಗಳಿಗೆ ಭಯವನ್ನು ಕೊಡುವುದಕ್ಕಾಗಿ. ಯದ್ಯಪಿ ನಪುಂಸಕತ್ವವು ದೋಷ. ಆದರೆ ಭಗವದ್ವೇಷಿಗಳಿಗೆ ನಪುಂಸಕತ್ವವನ್ನು ಅಪ್ರಯೋಜಕತ್ವವನ್ನು ಕೊಡುವುದಾದರೆ ಅದು ಗುಣವೇ ಆಗುತ್ತದೆ. ಅಂತಹ ಗುಣರೂಪವಾದ ನಪುಂಸಕತ್ವವನ್ನು ನಾನು ಗೌರವಿಸಿ ಸ್ವೀಕರಿಸುತ್ತೇನೆ. ಎಲೋ ಕಂಸನೇ, ಮೂರ್ಖನಾದ ನೀನು ನನ್ನ ಶಕ್ತಿಯನ್ನು ತಿಳಿದುಕೊಳ್ಳಲಿಲ್ಲ. ಲೋಕದಲ್ಲಿ ಸೂರ್ಯ, ಚಂದ್ರ, ಗಾಳಿಯೇ ಮೊದಲಾದ ಎಲ್ಲಾ ಶಕ್ತಿಗಳೂ ತಮ್ಮ ತಮ್ಮ ಕೆಲಸವನ್ನು ಮಾಡುವುದು ನನ್ನಿಂದಾಗಿ. 'ಭೀಷಾಸ್ಮಾತ್ ವಾತಃ ಪವತೇ' ಇತ್ಯಾದಿ ವೇದ ಮಾತುಗಳನ್ನು ನೀನು ಕೇಳಿದ್ದಿರಬಹುದು. ಹೀಗಿದ್ದರೂ ನೀನು ನನ್ನ ಜೊತೆ ಅಸಡ್ಡೆಯಿಂದ ವ್ಯವಹರಿಸುತ್ತಿ. ದೇವರು ಒಬ್ಬನನ್ನು ಬಿಟ್ಟು ಜಗತ್ತಿನ ಎಲ್ಲಾ ಶಕ್ತಿಗಳೂ ನನ್ನ ಹಿಡಿತದಲ್ಲಿವೆ.

ಭಯವು ಹೇಳುವಂತೆ ಬ್ರಹ್ಮಾಂಡದಲ್ಲಿ ಎಲ್ಲರೂ ತಮ್ಮ ತಮ್ಮ ಕೆಲಸಗಳನ್ನು ಮಾಡುವುದು ದೇವರ ಭಯದಿಂದ. ರಾಜರು ಕಂಸದೂತರ ಸಂಭಾಷಣೆಯನ್ನು ಕಲ್ಪಿಸಿಕೊಂಡು ಅದಕ್ಕೆ ವೈದಿಕ ಹಿನ್ನೆಲೆಯನ್ನು ಕೊಟ್ಟು ತಮ್ಮ ಅದ್ಭುತ ಕವಿತ್ವಶಕ್ತಿಯನ್ನು ಈ ಶ್ಲೋಕದಲ್ಲಿ ತೆರೆದಿಟ್ಟಿದ್ದಾರೆ.

**ಸಂದೇಶ** : ಸಮಾಜದಲ್ಲಿ ದೋಷತ್ವೇನ ಪರಿಗಣಿಸಲ್ಪಟ್ಟದ್ದು ಭಗವದ್ವೇಷಿಗಳಿಗೆ ತಾಪದಾಯಕವಾಗುವುದಾದರೆ ಅಂತಹ ದೋಷವನ್ನು ನಾವು ಗುಣತ್ವೇನ ಸ್ವೀಕರಿಸಬೇಕು.

**ಸತ್ವಂ ನಿಷ್ಫಲಮಾತನೋಮಿ ಮಲಿನಂ ಖಿನ್ನಂ ಮುಖಂ ವೇಪಥು-**
**ಗ್ರಸ್ತಂ ಗಾತ್ರಮಧೀರಮಕ್ಷಿಯುಗಲಂ ಚಿತ್ತಂ ಚ ಚಿಂತಾಕುಲಮ್ ।**
**ದೈನ್ಯಂ ವಾಚಿ ವಿರಕ್ತತಾಂ ಚ ವಿಭವೇ ತ್ಯಾಗಂ ಚ ಭೋಗಾವತೀಃ**
**ಲಜ್ಜಾಮಾನಯಶಶ್ಚ್ಯುತಿಂ ವಿರಚಯೇ ಚಿತ್ತೇಹಮುಜ್ಜೃಂಭಿತಃ ॥ ೨೩ ॥**

ಚಿತ್ತೇ=ಮನದಲ್ಲಿ; ಉಜ್ಜೃಂಭಿತಃ=ಬೆಳೆಯುವ; ಅಹಂ=ನಾನು; ಸತ್ವಂ=ಶಕ್ತಿಯನ್ನು; ನಿಷ್ಫಲಂ=ವ್ಯರ್ಥವನ್ನಾಗಿ; ಮುಖಂ=ಮುಖವನ್ನು; ಮಲಿನಂ=ಬಾಡಿದ್ದನ್ನಾಗಿ; ಖಿನ್ನಂ= ಬೆವರಿದ್ದನ್ನಾಗಿ; ಗಾತ್ರಂ=ಶರೀರವನ್ನು; ವೇಪಥುಃ=ನಡುಕದಿಂದ; ಗ್ರಸ್ತಂ=ಕೂಡಿದ್ದನ್ನಾಗಿ; ಅಕ್ಷಿಃ=ಕಣ್ಣುಗಳ; ಯುಗಲಂ=ಎರಡು; ಅಧೀರಂ=ಚಂಚಲವನ್ನಾಗಿ; ಚಿತ್ತಂ=ಮನವನ್ನು; ಚಿಂತಾ=ಚಿಂತೆಯಿಂದ; ಆಕುಲಂ=ಕೂಡಿದ್ದನ್ನಾಗಿ; ವಾಚಿ=ಮಾತಿನಲ್ಲಿ; ದೈನ್ಯಂ= ದೀನತೆಯನ್ನು; ವಿಭವೇ=ಸಂಪತ್ತಿನಲ್ಲಿ; ವಿರಕ್ತತಾಂ=ವೈರಾಗ್ಯವನ್ನು; ಭೋಗ=ಭೋಗ ವಸ್ತುಗಳ; ಆವತೀಃ=ಸಮೂಹದ; ತ್ಯಾಗಂ ಚ=ತ್ಯಾಗವನ್ನೂ; ಆತನೋಮಿ=ಮಾಡುವೆನು; ಲಜ್ಜಾ=ನಾಚಿಕೆಯ; ಮಾನ=ಮರ್ಯಾದೆಯ; ಯಶಃ=ಕೀರ್ತಿಯ; ಚ್ಯುತಿಂ=ನಾಶವನ್ನು; ವಿರಚಯೇ=ಮಾಡುತ್ತೇನೆ.

ಎಲೋ ಕಂಸನೇ, ದೇವರ ದ್ವೇಷಿಯ ಮನದಲ್ಲಿ ನಾನು ಬೆಳೆಯುತ್ತಾ ಇರುತ್ತೇನೆ. ಆಗ ಯಾವ ಚತುರಂಗಬಲವೂ ಉಪಯೋಗಕ್ಕೆ ಬರುವುದಿಲ್ಲ. ಭೀತನಾದವನು ಅದೆಲ್ಲವನ್ನೂ ಬಿಟ್ಟು ಓಡುತ್ತಾನೆ. ಮುಖವೂ ಬಾಡಿರುತ್ತೆ. ಇಡೀ ದೇಹವು ಬೆವರುತ್ತೆ. ಶರೀರವು ನಡುಗುತ್ತೆ. ಭಯದಿಂದ ಅತ್ತಿತ್ತ ನೋಡುತ್ತಾನೆ. ಏನಾಗುತ್ತೋ ಎಂದು ಮನಸ್ಸಿಗೆ ಚಿಂತೆಯು ಆವರಿಸುತ್ತೆ. ಬಹಳ ದೀನನಾಗಿ ಬದುಕುವ ಆಸೆಯಿಂದ ಶತ್ರುವನ್ನು ಅಂಗಲಾಚುತ್ತಾನೆ. ಭಯಗ್ರಸ್ತನಾದವನು ಯಾವ ಸುಖವನ್ನೂ ಅನುಭವಿಸದೆ ವಿರಕ್ತನಂತೆ ಇರುತ್ತಾನೆ. ನಾಚಿಕೆ ಮಾನ ಮರ್ಯಾದೆ ಇವೆಲ್ಲವನ್ನೂ ಬಿಡುತ್ತಾನೆ. ತನ್ನ ಸ್ಥಾನಮಾನಾದಿಗಳನ್ನು ಲೆಕ್ಕಿಸದೆ ಭೀತನು ಓಡುತ್ತಾನೆ.

<u>ಸಂದೇಶ</u> : ಲೋಕದಲ್ಲಿ ಸ್ಥಾನಮಾನಾದಿಗಳು ದೇವರಿಂದಾಗಿ.

**ರೇ ರೇ ಮಂದ ಬಹಿಃ ಪ್ರಯಾಹಿ ಯದಿ ಭೋ ಭೋಜೇಶ ಕೃಷ್ಣಾಶ್ರಿತಃ**
**ಭೂಯಾಸ್ತರ್ಹಿ ತಥಾ ಕರೋಮ್ಯಪರಥಾ ತ್ವಾಂ ನೋಭಯತ್ರೋತ್ಸೃಜೇ ।**
**ಧೈರ್ಯಸ್ಥೈರ್ಯಯುತಾಚ್ಯುತಪ್ರಿಯ ಮನೋ ಮಹ್ಯಂ ನವೈರೋಚತೇ**
**ಕ್ಷೇಮಾಯಾಭ್ಯುದಯಾಯ ಚ ಪ್ರತಿದಿನಂ ತದ್ವೈರಿಚೇತೋ ಮಮ ॥ ೨೪ ॥**

ರೇ ರೇ=ಎಲೋ; ಮಂದ=ಮೂರ್ಖನೇ; ಬಹಿಃ=ಹೊರಗೆ; ಪ್ರಯಾಹಿ=ಹೋಗು; ಭೋ=ಎಲೋ; ಭೋಜ=ಭೋಜವಂಶಕ್ಕೆ; ಈಶ=ರಾಜನಾದ ಕಂಸನೇ; ಯದಿ=ಒಂದು ವೇಳೆ; ಕೃಷ್ಣ=ಕೃಷ್ಣನನ್ನು; ಆಶ್ರಿತಃ=ಆಶ್ರಯಿಸಿದವನು; ಭೂಯಾಃ=ಆಗುವಿಯಾದರೆ; ತರ್ಹಿ=ಆಗ; ತಥಾ=ಹಾಗೆಯೇ; ಕರೋಮಿ=ಮಾಡುವೆನು; ಅಪರಥಾ=ಇಲ್ಲದಿದ್ದರೆ; ತ್ವಾಂ= ನಿನ್ನನ್ನು; ಉಭಯತ್ರ=ಎರಡೂ ಕಡೆಯೂ; ನ ಉತ್ಸೃಜೇ=ಬಿಡುವುದಿಲ್ಲ; ಧೈರ್ಯ= ಧೈರ್ಯವು; ಸ್ಥೈರ್ಯ=ದಾರ್ಢ್ಯವು ಇವುಗಳಿಂದ; ಯುತ=ಕೂಡಿದ; ಅಚ್ಯುತ=ಕೃಷ್ಣನ; ಪ್ರಿಯ=ಪ್ರಿಯರ; ಮನಃ=ಮನಸ್ಸು; ಮಹ್ಯಂ=ನನಗೆ; ನ ವೈ ರೋಚತೇ=ಹಿಡಿಸುವುದಿಲ್ಲ; ತತ್=ಕೃಷ್ಣನ; ವೈರಿ=ಶತ್ರುಗಳ; ಚೇತಃ=ಮನಸ್ಸು; ಪ್ರತಿದಿನಂ=ದಿನವೂ; ಮಮ=ನನ್ನ; ಕ್ಷೇಮಾಯ=ಇರುವಿಕೆಗೆ; ಅಭ್ಯುದಯಾಯ ಚ=ಅಭಿವೃದ್ಧಿಗೂ; ಭವತಿ=ಆಗುತ್ತದೆ.

ದೂತ– ಕಂಸನ ಸಂಭಾಷಣೆ ಮುಂದುವರಿಯುತ್ತದೆ– ಎಲೋ ದೂತನೇ ನನ್ನ ಮನದಿಂದ ಹೊರ ಹೋಗು. (ಕಂಸನು ಧೈರ್ಯವನ್ನು ತಾಳಲು ಪ್ರಯತ್ನಿಸುತ್ತಾನೆ) ದೂತ– ಎಲೋ ಕಂಸನೇ, ನೀನು ಕೃಷ್ಣನ ವಿರೋಧವನ್ನು ಮಾಡಬೇಡ. ಆತನಿಗೆ ಶರಣುಬಾ, ತಪ್ಪಾಯಿತು ಎಂದು ಹೇಳು. ಆಗ ಮಾತ್ರ ನಾನು ನಿನ್ನ ಮನದಿಂದ ಹೊರಹೋಗುತ್ತೇನೆ. (ಕಂಸನು ಮನದಲ್ಲಿ ಆಲೋಚಿಸುತ್ತಾನೆ. ನಾನು ಕೃಷ್ಣನನ್ನು ದ್ವೇಷಿಸದೆ ಆತನನ್ನು ಪ್ರೀತಿಸಿದರೆ ಆಗ ಮಾತ್ರ ನನಗೆ ಮಾನಸಿಕ ಧೈರ್ಯ ಬರಬಹುದು. ನಾನು ಜೀವನಪೂರ್ತಿ ಕೃಷ್ಣನನ್ನು ವಿರೋಧಿಸಿದರೆ ಇಲ್ಲಿ ಮಾತ್ರ ಭಯದ ಜೀವನ ಅಲ್ಲ. ಸತ್ತು ನರಕ ಸೇರಿದ ಮೇಲೂ ಭಯವು ಮುಂದುವರಿಯುತ್ತದೆ. ಆದ್ದರಿಂದ

ಸರ್ವತ್ರ ನಿರ್ಭೀತಿಯ ಜೀವನಕ್ಕಾಗಿ ಕೃಷ್ಣನನ್ನು ಆಶ್ರಯಿಸುತ್ತೇನೆ ಎಂದು). ಎಲೋ ಕಂಸನೇ, ಕೃಷ್ಣನು ಬಹಳ ಧೈರ್ಯಾದಿ ಗುಣಗಳಿಂದ ಕೂಡಿದವನು. ಅಂತಹ ದೇವರನ್ನು ಆಶ್ರಯಿಸಿದರೆ ನಮಗೂ ಮಾನಸಿಕ ಧೈರ್ಯಾದಿಗಳು ಲಭಿಸುವುವು. ಇಂತಹ ಜನರ ಮನಸ್ಸಿನಲ್ಲಿ ನಾನು ಇರಲು ಬಯಸುವುದಿಲ್ಲ. ಇದ್ದರೂ ದಿನದಿಂದ ದಿನಕ್ಕೆ ಕ್ಷೀಣಿಸುತ್ತ ಇರಬೇಕಾಗುತ್ತದೆ. ಅವರು ನನ್ನನ್ನು ಕಡೆಗಣಿಸುತ್ತಾರೆ. ನಾನು ದಷ್ಟಪುಷ್ಟನಾಗಿ ಬೆಳೆಯ ಬೇಕೆಂದು ಆಸೆವುಳ್ಳವನು. ಅದಕ್ಕಾಗಿ ಜಾಗವನ್ನು ಹುಡುಕುತ್ತಿದ್ದೇನೆ. ಹಾಗೇ ಹುಡುಕು ತ್ತಿರುವಾಗ ಕೃಷ್ಣದ್ವೇಷಿಯಾದ ನಿನ್ನ ಮನಸ್ಸು ಸಿಕ್ಕಿತು. ಇದು ಒಳ್ಳೆಯ ಮನೆ. ಇಲ್ಲಿ ನಾನು ಕ್ಷೇಮದಿಂದ ಇರಬಲ್ಲೆ. ಮಾತ್ರವಲ್ಲ ಬೆಳೆಯಲೂ ಬಲ್ಲೆ. ಆದ್ದರಿಂದ ನನ್ನನ್ನು ಹೊರಗೆ ಅಟ್ಟಬೇಡ. ನೀನು ಕೃಷ್ಣನನ್ನು ಆಶ್ರಯಿಸಿದರೆ ನಾನಾಗಿ ಈ ಮನೆಯನ್ನು ಬಿಡಬೇಕಾಗುತ್ತದೆ.

ರಾಜರು ತನ್ನ ಕಾವ್ಯದಲ್ಲಿ ಶಾಸ್ತ್ರದ ವಿಷಯವನ್ನು ಯಾವ ರೀತಿ ತುಂಬಿಸಿದ್ದಾರೆ ಎಂಬುದಕ್ಕೆ ಈ ಶ್ಲೋಕ ಉತ್ತಮ ಉದಾಹರಣೆ.

**ಸಂದೇಶ** : ಭಗವದ್ವೇಷಿಗಳಿಗೆ ಇಹಪರ ಎರಡು ಕಡೆಯೂ ಭಯ.

**ಶಂಭುಂ ಸಂಭಜ ಪದ್ಮಯೋನಿಮಥವಾ ಚಂದ್ರೇಂದ್ರವೀಂದ್ರಾದಿಕಾನ್**
**ಸ್ವರ್ಗಂ ಗಚ್ಛ ತಮೋ ವ್ರಜ ಪ್ರವಿಶ ವಾ ಪಾತಾಲಮತ್ರೈವ ವಾ ।**
**ರಕ್ಷಾಂ ಭಿತ್ತಿಸಹಸ್ರವಾರಿಧಿ ಮಹಾಶೈಲಜ್ವಲತ್ಪಾವಕೈಃ**
**ಕೃತ್ವಾತಿಷ್ಠ ತಥಾಪಿ ಕೃಷ್ಣ ವಿಮತಂ ತ್ಯಕ್ಷ್ಯಾಮಿ ನ ತ್ವಾಮಹಮ್ ॥ ೨೫ ॥**

ಶಂಭುಂ=ರುದ್ರನನ್ನು; ಪದ್ಮ=ಕಮಲವೇ; ಯೋನಿಂ=ಕಾರಣವಾಗಿ ಉಳ್ಳ ಬ್ರಹ್ಮನನ್ನು; ಅಥವಾ=ಇಲ್ಲದಿದ್ದರೆ; ಚಂದ್ರ=ಚಂದ್ರನು; ಇಂದ್ರ=ಇಂದ್ರನು; ವಿ=ಪಕ್ಷಿಗಳಿಗೆ; ಇಂದ್ರ= ಒಡೆಯನಾದ ಗರುಡನು; ಆದಿಕಾನ್=ಮೊದಲಾದವರನ್ನು; ಸಂಭಜ=ಸೇವಿಸು; ಸ್ವರ್ಗಂ= ಸ್ವರ್ಗವನ್ನು; ಗಚ್ಛ=ಹೋಗು; ತಮಃ=ನರಕವನ್ನು; ವ್ರಜ=ಸೇರು; ಪಾತಾಲಂ= ಪಾತಾಳವನ್ನು; ಪ್ರವಿಶ ವಾ=ಪ್ರವೇಶಿಸು; ಅತ್ರೈವ ವಾ=ಇಲ್ಲಿಯೇ ಆದರೂ; ಭಿತ್ತಿ= ಗೋಡೆಗಳ; ಸಹಸ್ರ=ಸಾವಿರದಿಂದ; ವಾರಿಧಿ=ಸಮುದ್ರಗಳಿಂದ; ಮಹಾ=ದೊಡ್ಡ; ಶೈಲ= ಬೆಟ್ಟಗಳಿಂದ; ಜ್ವಲತ್=ಉರಿಯುವ; ಪಾವಕೈಃ=ಬೆಂಕಿಗಳಿಂದ; ರಕ್ಷಾಂ=ರಕ್ಷಣೆಯನ್ನು; ಕೃತ್ವಾ=ಮಾಡಿ; ತಿಷ್ಠ=ಇರು; ತಥಾಪಿ=ಹಾಗಿದ್ದರೂ; ಕೃಷ್ಣ=ಕೃಷ್ಣನಿಗೆ; ವಿಮತಂ= ವಿರೋಧಿಯಾದ; ತ್ವಾಂ=ನಿನ್ನನ್ನು; ಅಹಂ=ನಾನು; ನ ತ್ಯಕ್ಷ್ಯಾಮಿ=ಬಿಡುವುದಿಲ್ಲ.

ಎಲೋ ಕಂಸನೇ, ಬ್ರಹ್ಮಾದಿ ಯಾವ ದೇವತೆಗಳೂ ನಿನ್ನನ್ನು ರಕ್ಷಿಸಲಾರರು. ಹಿರಣ್ಯಕಶಿಪು ಬ್ರಹ್ಮನನ್ನು ಆಶ್ರಯಿಸಿದ್ದ. ಬಾಣಾಸುರ ರುದ್ರನನ್ನು. ಹೀಗೆಯೇ ಇತರ ಕೆಲವು ಚಿಕ್ಕಪುಟ್ಟ ಅಸುರರು ಇಂದ್ರಾದಿಗಳನ್ನು ಆಶ್ರಯಿಸಿದ್ದರು. ಆದರೂ ಧೈರ್ಯದಿಂದ

ಇರಲು ನಾನು ಬಿಡಲಿಲ್ಲ. ಈ ದೇವತೆಗಳನ್ನು ಬಿಟ್ಟು ಸ್ವರ್ಗಾದಿ ಲೋಕಗಳನ್ನು ಆಶ್ರಯಿಸಿದರೂ ಜೊತೆಯಲ್ಲಿ ನಾನು ಇದ್ದೇ ಇರುವೆನು. ರಾವಣನು ಸ್ವರ್ಗ, ಕೈಲಾಸಗಳಿಗೆ ಲಗ್ಗೆ ಇಟ್ಟಿದ್ದ. ಹಿರಣ್ಯಾಕ್ಷ ಪಾತಾಳದಲ್ಲಿದ್ದ. ಇವರೆಲ್ಲಾ ಭಯಗ್ರಸ್ತರೇ ಆಗಿದ್ದರು. ನರಕದಲ್ಲಿರುವವರು ಭೀತರು ಎಂದು ಪ್ರತ್ಯೇಕ ಹೇಳಬೇಕಾಗಿಲ್ಲ.

ಬೇರೆ ಯಾವ ಜಾಗಕ್ಕೂ ಹೋಗದೆ ಈ ಭೂಮಿಯಲ್ಲಿಯೇ ಒಂದು ಮನೆ, ಅದಕ್ಕೆ ಬಹಳ ಸುತ್ತಿನ ಗೋಡೆಗಳ ಆವರಣ, ಆ ಗೋಡೆಗಳಿಗೆ ನೀರಿನ–ಬೆಟ್ಟಗಳ–ಬೆಂಕಿಯ ಆವರಣಗಳನ್ನು ರಚಿಸು. ಅಂತಹ ಮನೆಯಲ್ಲಿ ವಾಸಮಾಡು. ಇಷ್ಟೆಲ್ಲಾ ಮಾಡಿದರೂ ನಾನು ಮಾತ್ರ ನಿನ್ನನ್ನು ಎಂದೂ ಬಿಡೋಲ್ಲ. ಯಾಕೆಂದರೆ ನೀನು ಕೃಷ್ಣವಿರೋಧಿಯಾಗಿದ್ದಿ. ನನ್ನ ಸಹವಾಸದಿಂದ ನಿನಗೆ ಬೇಸರವಾಗಿದ್ದರೆ ನೀನು ಕೃಷ್ಣನನ್ನು ಆಶ್ರಯಿಸು. ಆತನ ಜೊತೆಗೆ ಇರಲು ಮನಸ್ಸು ಒಪ್ಪದಿದ್ದರೆ ಅನಿವಾರ್ಯವಾಗಿ ನಾನು ನಿನ್ನ ಜೊತೆ ಇರಬೇಕಾಗುತ್ತದೆ.

**ಸಂದೇಶ** : ದೇವರನ್ನು ಬಿಟ್ಟವನನ್ನು ಯಾವ ದೇವತೆಯಾಗಲೀ ಯಾವ ಲೋಕವೇ ಆಗಲಿ ರಕ್ಷಿಸುವುದಿಲ್ಲ.

**ಯುದ್ಧಾರ್ಥಂ ನ ಕದಾಪಿ ಗಚ್ಛತಿ ಗತೋಽಪ್ಯೋಜಸ್ವಿನಾಂ ಪೃಷ್ಠತಃ**
**ತಿಷ್ಠತ್ಯನ್ಯಮವೇಕ್ಷ್ಯ ಶಸ್ತ್ರನಿಕರಂ ಪೃಥ್ವ್ಯಾಂ ಕ್ಷಣೇನೋಜ್ಝತಿ ।**
**ಶತ್ರುಂ ಸ್ತೌತಿ ತೃಣಾಂಗುಲೀದಲಮದನ್ ಕಂಪೀ ಪತನ್ ಧಾವತಿ**
**ಸ್ತಬ್ಧೀತ್ಥಂ ಬಹುಲೋಕನಿಂದಿತದಶಾಂ ಸಂಪ್ರಾಪಯಿಷ್ಯಾಮ್ಯಹಮ್ ॥ ೨೬ ॥**

ಯುದ್ಧಾರ್ಥಂ=ಯುದ್ಧಕ್ಕಾಗಿ; ಕದಾಪಿ=ಎಂದೂ; ನ ಗಚ್ಛತಿ=ಹೋಗುವುದಿಲ್ಲ; ಗತಃ ಅಪಿ=ಹೋದರೂ; ಓಜಸ್ವಿನಾಂ=ಶೂರರ; ಪೃಷ್ಠತಃ=ಹಿಂದಿನಿಂದ; ತಿಷ್ಠತಿ=ನಿಲ್ಲುತ್ತಾನೆ; ಅನ್ಯಂ=ಶತ್ರುವನ್ನು; ಅವೇಕ್ಷ್ಯ=ನೋಡಿ; ಶಸ್ತ್ರ=ಆಯುಧಗಳ; ನಿಕರಂ=ಸಮೂಹವನ್ನು; ಪೃಥ್ವ್ಯಾಂ=ಭೂಮಿಯಲ್ಲಿ; ಕ್ಷಣೇನ=ಕೂಡಲೇ; ಉಜ್ಝತಿ=ತ್ಯಜಿಸುತ್ತಾನೆ; ತೃಣ=ಹುಲ್ಲು; ಅಂಗುಲೀ=ಬೆರಳಿನ; ದಲಂ=ಉಗುರನ್ನು; ಅದನ್=ಕಚ್ಚುತ್ತಾ; ಶತ್ರುಂ=ವೈರಿಯನ್ನು; ಸ್ತೌತಿ=ಹೊಗಳುತ್ತಾನೆ; ಕಂಪೀ=ನಡುಗುತ್ತಾ; ಪತನ್=ಬೀಳುತ್ತಾ; ಧಾವತಿ=ಓಡುತ್ತಾನೆ; ಸ್ತಬ್ಧಾ=ಜಡದಂತೆ ಆಗುತ್ತಾನೆ; ಇತ್ಥಂ=ಈ ರೀತಿಯಾಗಿ; ಬಹು=ಬಹಳ; ಲೋಕ=ಜನರಿಂದ; ನಿಂದಿತ=ತಿರಸ್ಕೃತವಾದ; ದಶಾಂ=ಅವಸ್ಥೆಯನ್ನು; ಅಹಂ=ನಾನು; ಸಂಪ್ರಾಪಯಿಷ್ಯಾಮಿ=ಹೊಂದಿಸುತ್ತೇನೆ.

ಎಲೋ ಕಂಸನೇ, ನೀನು ಹೇಳುವಿ– ನಾನು ಕೃಷ್ಣನ ಜೊತೆ ಹೋರಾಡಿ ಆತನನ್ನು ಕೊಲ್ಲುತ್ತೇನೆ ಎಂದು. ನೀನು ಹೋರಾಡುವುದು ದೂರ ಇರಲಿ. ನನ್ನಿಂದ ಕೂಡಿರುವ ನೀನು ಯುದ್ಧಕ್ಕೇ ಹೋಗುವುದಿಲ್ಲ. ಯಜಮಾನನ ಬಲಾತ್ಕಾರಕ್ಕೆ ಸಿಕ್ಕಿ ಹೋದರೂ

ಇನ್ನೊಬ್ಬನ ಹಿಂದೆಯೇ ನಿಂತಿರುವಿ. ನಿನ್ನನ್ನು ಯಾರಾದರೂ ಹಿಡಿದು ಶತ್ರುವಿನ ಮುಂದೆ ನಿಲ್ಲಿಸಿದರೆ ನೀನು ನಿನ್ನ ಕೈಯಲ್ಲಿರುವ ಆಯುಧವನ್ನು ಕೆಳ ಹಾಕುವಿ. ಯಾಕೆಂದರೆ ಕೈಯಲ್ಲಿ ಆಯುಧ ಇದ್ದರೆ ಶತ್ರುವು ನಿನ್ನನ್ನು ಹೊಡೆಯುತ್ತಾನೆ ಎಂಬ ಭಯ. ನಿನಗೇ ಅರಿವಿಲ್ಲದಂತೆಯೇ ಕೈಬೆರಳನ್ನು ಬಾಯಿಯಲ್ಲಿ ಇಟ್ಟು ಉಗುರು ಕಚ್ಚುತ್ತಿ. ಅಲ್ಲೇ ಸಮೀಪ ಇರುವ ಹುಲ್ಲನ್ನು ಎತ್ತಿ ತುಂಡು ಮಾಡುತ್ತಿ. ಎದುರಾಳಿಯನ್ನು ಹೊಗಳುತ್ತಿ. ದೇಹದಲ್ಲಿ ನಡುಕ ಉಂಟಾಗಿ ಬೀಳುತ್ತಾ ಏಳುತ್ತಾ ಓಡುತ್ತಿ. ಅಲ್ಲೇ ನಿಂತರೂ ಕಣ್ಣೂ ಮಿಟುಕಿಸದೆ ಜಡದಂತೆ ನಿಲ್ಲುವಿ. ಸುತ್ತಮುತ್ತ ಇರುವ ಜನರೆಲ್ಲಾ ನಿನ್ನ ಈ ಅವಸ್ಥೆಯನ್ನು ಕಂಡು ನಗುವರು. ಈ ರೀತಿ ಭಗವದ್ವೇಷಿಯು ಎಷ್ಟೇ ಪ್ರಬಲನಾಗಿದ್ದರೂ ನನ್ನಿಂದಾಗಿ ಇಂತಹ ನಗೆಪಾಟಲಿಗೆ ಒಳಗಾಗುತ್ತಾನೆ.

<u>ಸಂದೇಶ</u> : ಅಪಮಾನವಾಗುವುದೂ ಭಗವಂತನ ದ್ವೇಷದಿಂದಲೇ.

**ಗಾಥಾ ತಿಷ್ಠತು ಭೂಪ ಸಂಪ್ರತಿ ಭವಾನ್ ನಿದ್ರಾತಿ ಕಿಂ ನಿದ್ರಿತಃ**
**ಸ್ವಪ್ನಂ ಶೋಭನಮೇವ ಪಶ್ಯತಿ ರಿಪುಂ ಕಿಂ ನಾನಿಶಂ ಶಂಕತೇ ।**
**ಧೈರ್ಯಂ ಕಿಂ ಹೃದಿ ಸಂದಧಾತ್ಯನುಚರಾನ್ ಧೀರಾನ್ ಕಿಮುದ್ವೀಕ್ಷ್ಯ ತೇ**
**ಸ್ವೈರಂ ಮದ್ವಶಮಾನಸಸ್ಯ ಭವತಃ ಸೌಖ್ಯಂ ಕ್ವ ಸೌಖ್ಯಾರ್ಥಿನಃ ॥ ೨೭ ॥**

ಭೂಪ=ರಾಜನೇ; ಗಾಥಾ=ಲೋಕದ ವಿಚಾರವು; ತಿಷ್ಠತು=ಇರಲಿ; ಸಂಪ್ರತಿ=ಈಗ; ಭವಾನ್=ನೀನು; ನಿದ್ರಾತಿ ಕಿಂ=ನಿದ್ರಿಸುತ್ತಿಯಾ? ನಿದ್ರಿತಃ=ನಿದ್ರೆಗೊಂಡರೂ; ಶೋಭನಂ ಏವ=ಒಳ್ಳೆಯ; ಸ್ವಪ್ನಂ=ಕನಸನ್ನು; ಪಶ್ಯತಿ ಕಿಂ=ಕಾಣುತ್ತಿಯಾ? ರಿಪುಂ=ಶತ್ರುವನ್ನು; ಅನಿಶಂ=ಸದಾ; ನ ಶಂಕತೇ ಕಿಂ=ಎಣಿಸುವುದಿಲ್ಲವಾ? ಹೃದಿ=ಮನಸ್ಸಿನಲ್ಲಿ; ಧೈರ್ಯಂ= ಧೈರ್ಯವನ್ನು; ಸಂದಧಾತಿ ಕಿಂ=ಧರಿಸಿದ್ದಿಯಾ? ಅನುಚರಾನ್=ಭೃತ್ಯರನ್ನು; ಧೀರಾನ್= ಧೈರ್ಯವುಳ್ಳವರನ್ನಾಗಿ; ಉದ್ವೀಕ್ಷ್ಯತೇ ಕಿಂ=ನೋಡುತ್ತಿಯಾ? ಸ್ವೈರಂ=ಅನಾಯಾಸದಿಂದ; ಮತ್=ನನ್ನ; ವಶ=ಅಧೀನವಾದ; ಮಾನಸಸ್ಯ=ಮನಸ್ಸುಳ್ಳ; ಭವತಃ=ನಿನಗೆ; ಸೌಖ್ಯ=ಸುಖವನ್ನು; ಅರ್ಥಿನಃ=ಅಪೇಕ್ಷಿಸುವವನಿಗೆ; ಸೌಖ್ಯಂ=ಸುಖವು; ಕ್ವ=ಎಲ್ಲಿ?

ಎಲೋ ಕಂಸನೇ, ನನ್ನ ಈ ಶಕ್ತಿಯು ಲೋಕದ ಎಲ್ಲಾ ಜನರಿಗೂ ಪರಿಚಿತ. ಬೇರೆ ಜನರ ವಿಚಾರ ಬಿಟ್ಟುಬಿಡು. ನಿನ್ನ ವಿಚಾರವಾಗಿಯೇ ಹೇಳುವುದಾದರೆ ನಾನು ನಿನ್ನ ಜೊತೆ ಇರುವುದರಿಂದ ನೀನು ನಿದ್ರೆ ಮಾಡುತ್ತಿಯಾ? ಹೆದರಿದ ನಿನಗೆ ಎಲ್ಲಿ ನಿದ್ರೆ ಬರುತ್ತದೆ. ಅಕಸ್ಮಾತ್ ನಿದ್ರೆ ಬಂದರೂ ನಾನಾ ರೀತಿಯ ದುಃಸ್ವಪ್ನಗಳು ನಿನ್ನನ್ನು ಪೀಡಿಸುತ್ತವೆ. ಎಚ್ಚರದಲ್ಲಿ ಇರುವಾಗ ಆಲೋಚಿಸುತ್ತಿದ್ದ ಮರಣವು ಸ್ವಪ್ನದಲ್ಲಿ ಭಯಾನಕವಾಗಿ ತೋರುತ್ತದೆ. ಆಗ ಒಮ್ಮೆಲೇ ಎಚ್ಚರಿಕೆ ಆಗುತ್ತದೆ. ಆಗ ಶತ್ರುವೇ ಮುಂದೆ ಬಂದು ನಿಂತಂತೆ ಭಾಸವಾಗುತ್ತದೆ. ಯುದ್ಧದಲ್ಲಿ ಯಾರ್ಯಾರನ್ನೋ ಬಡಿದಿರುವ ನೀನು, ನಿನ್ನನ್ನು ಹಾಗೂ ನಿನ್ನ ಸೈನ್ಯವನ್ನು ಬಲಿಷ್ಠ ಎಂದು ಭಾವಿಸಿರಬಹುದು. ಅದು

ನಿನ್ನ ಭ್ರಾಂತಿ. ಕೃಷ್ಣನ ವಿರುದ್ಧ ಬಂಡೆದ್ದಿರುವ ನಿನ್ನ ಮನಸ್ಸು ಪೂರ್ಣವಾಗಿ ನನ್ನ ಹಿಡಿತದಲ್ಲಿದೆ. ನೀನೇನೋ ಕೃಷ್ಣನನ್ನು ಕೊಂದು ಜೀವನದಲ್ಲಿ ನೆಮ್ಮದಿಯಿಂದ ಇರೋಣ ಎಂದು ಭಾವಿಸಿರಬಹುದು. ಆದರೆ ನಾನಿರುವಾಗ ನಿನಗೆ ನೆಮ್ಮದಿಯು ಹೇಗೆ ತಾನೆ ಬರಬೇಕು.

<u>ಸಂದೇಶ</u> : ಭಗವದ್ವೇಷಿಗಳಿಗೆ ಇಹದಲ್ಲ ಯಾವ ರೀತಿಯಲ್ಲಿಯೂ ಸುಖವಿಲ್ಲ ಎಂಬುದು ಪ್ರತಿಯೊಬ್ಬನಿಗೂ ಅನುಭವಸಿದ್ಧ.

**ಇತ್ಥಂ ಸಾಧ್ವಸ ಸಂದಿಗ್ಧಬುದ್ಧಿರ್ನಿದ್ರಾಂ ನ ಸೋಽಧ್ಯಗಾತ್ ।**
**ಲಬ್ಧನಿದ್ರೋಽಪಿ ದುಃಸ್ವಪ್ನೈಃ ಸ್ಪರ್ಧೋನ್ನದ್ಧೋ ವ್ಯಬೋಧ್ಯತ ॥ ೨೮ ॥**

ಇತ್ಥಂ=ಈ ರೀತಿಯಾಗಿ; ಸಾಧ್ವಸ=ಭಯದಿಂದ; ಸಂದಿಗ್ಧ=ಸಂಶಯದಿಂದ ಕೂಡಿದ; ಬುದ್ಧಿಃ=ಮನಸ್ಸುಳ್ಳ; ಸಃ=ಆ ಕಂಸನು; ನಿದ್ರಾಂ=ನಿದ್ರೆಯನ್ನು; ನ ಅಧ್ಯಗಾತ್=ಹೊಂದಲಿಲ್ಲ; ಲಬ್ಧ=ಹೊಂದಿದ; ನಿದ್ರೋಽಪಿ-ನಿದ್ರೆವುಳ್ಳವನಾದರೂ; ದುಃಸ್ವಪ್ನೈಃ=ಕೆಟ್ಟ ಕನಸುಗಳಿಂದ; ಸ್ಪರ್ಧ=ಸ್ಪರ್ಧೆಯಿಂದ; ಉನ್ನದ್ಧಃ=ಉದ್ರಿಕ್ತನಾಗಿ; ವ್ಯಬೋಧ್ಯತ=ಎಚ್ಚರಗೊಂಡನು.

ಈ ರೀತಿಯಾಗಿ ಕಂಸನು ಬಹಳವಾಗಿ ಭಯಗೊಂಡಿದ್ದಾನೆ. ತನ್ನ ಉಳಿವು ಅಳಿವಿನ ಬಗ್ಗೆ ಸಂಶಯವುಳ್ಳವನಾಗಿದ್ದಾನೆ. ಆದ್ದರಿಂದ ದಿನದ ಇಪ್ಪತ್ತನಾಲ್ಕು ಗಂಟೆಯೂ ನಿದ್ರೆ ಇಲ್ಲದ ಪರಿಸ್ಥಿತಿ. ಭಯವನ್ನೂ ಮೀರಿದ ಶ್ರಮದಿಂದಾಗಿ ಒಮ್ಮೊಮ್ಮೆ ತೂಕಡಿಸುತ್ತಿದ್ದ. ಆ ಸಮಯದಲ್ಲಿ ನಾನಾ ರೀತಿಯ ದುಃಸ್ವಪ್ನಗಳು. ಇದರಿಂದಾಗಿ ಮಾನಸಿಕವಾದ ವ್ಯಗ್ರತೆ. ಫಲಿತಾಂಶ ಎಚ್ಚರಿಕೆ. ಎಚ್ಚರಿಕೆಯ ಅನಂತರ ಭಯ.

**ತತಸ್ತಮಿಸ್ರಂ ಪರಿಹರ್ತುಮರ್ಕಃ**
**ಸಮಾಸಸಾದಾಭ್ರಗರಾಜಮಾರ್ಗಮ್ ।**
**ಅಸತ್ತಮಿಸ್ರಂ ಸ್ವಕರೈರ್ಜಿಹೀರ್ಷು-**
**ರ್ಹರಿಶ್ಚ ಗೋಪೈಃ ಸಹ ರಾಜಮಾರ್ಗಮ್ ॥ ೨೯ ॥**

ತತಃ=ಅನಂತರ; ಅರ್ಕಃ=ಸೂರ್ಯನು; ತಮಿಸ್ರಂ=ಕತ್ತಲೆಯನ್ನು; ಪರಿಹರ್ತುಂ=ನಾಶಮಾಡಲು; ಅಭ್ರ=ಆಕಾಶದಲ್ಲಿ; ಗ=ಇರುವ; ರಾಜ=ಚಂದ್ರನ; ಮಾರ್ಗಂ=ದಾರಿಯನ್ನು; ಸಮಾಸಸಾದ=ಹೊಂದಿದನು. ಅಸತ್=ದುಷ್ಟರೆಂಬ; ತಮಿಸ್ರಂ= ಕತ್ತಲೆಯನ್ನು; ಸ್ವ=ತನ್ನ; ಕರೈಃ=ಕೈಗಳಿಂದ; ಜಿಹೀರ್ಷುಃ=ಪರಿಹರಿಸುವ ಇಚ್ಛೆವುಳ್ಳ; ಹರಿಃ ಚ=ಕೃಷ್ಣನಾದರೂ; ಗೋಪೈಃ=ಗೊಲ್ಲರಿಂದ; ಸಹ=ಕೂಡಿಕೊಂಡು; ರಾಜ=ಕಂಸನ; ಮಾರ್ಗಂ=ದಾರಿಯನ್ನು.

ಕೃಷ್ಣನು ಹಿಂದಿನ ದಿನ ಸಾಯಂಕಾಲ ಕಂಸನ ಬಿಲ್ಲನ್ನು ಮುರಿದಿದ್ದನು. ಇದರಿಂದ ಭಯಗೊಂಡ ಕಂಸನು ರಾತ್ರಿ ಪೂರ್ಣ ಪರಿತಪಿಸುತ್ತಿದ್ದನು. ಮರುದಿನ ಬೆಳಗಾಯಿತು. ಸೂರ್ಯನು ಉದಿಸಿದನು. ರಾತ್ರಿಯಲ್ಲಿ ಎಲ್ಲಾ ಕಡೆ ಹರಡಿದ ಕತ್ತಲೆಯನ್ನು ಪರಿಹರಿಸುವ

ಸಲುವಾಗಿ ಆಕಾಶಮಾರ್ಗವಾಗಿ ಬಂದನು. ರಾತ್ರಿಯಲ್ಲಿ ಆ ಮಾರ್ಗವಾಗಿ ಚಂದ್ರನು ಹೋಗಿದ್ದನು. ಚಂದ್ರನಿಗೆ ರಾಜನೆಂಬ ಹೆಸರಿದೆ. ಆದ್ದರಿಂದ ಸೂರ್ಯನು ರಾಜಮಾರ್ಗದಿಂದ ಬಂದನು ಎಂದು ಹೇಳುವುದು ಸೂಕ್ತವಾಗುತ್ತದೆ. ಇದೇ ಸಮಯಕ್ಕೆ ಕೃಷ್ಣನೂ ರಾಜಮಾರ್ಗದಲ್ಲಿ ಉದಿಸಿದನು. ಇಲ್ಲಿ ರಾಜನೆಂದರೆ ಕಂಸನು. ಕಂಸನು ಪ್ರತಿದಿನ ಸಂಚರಿಸುವ ಮಾರ್ಗಕ್ಕೆ ರಾಜಮಾರ್ಗ ಎಂದು ಹೆಸರು. ಈ ಮಧುರೆಯಲ್ಲಿ ದುಷ್ಟರು ಕತ್ತಲಿನಂತೆ ವ್ಯಾಪಿಸಿದ್ದರು. ಕತ್ತಲು ಜನರ ಓಡಾಟಕ್ಕೆ ಪ್ರತಿಬಂಧಕ. ಹಾಗೆಯೇ ಈ ದುಷ್ಟರೂ ಸಜ್ಜನರ ಸಾಧನೆಗೆ ಬಾಧಕವನ್ನು ಒಡ್ಡುತ್ತಿದ್ದರು. ಸೂರ್ಯನು ತನ್ನ ಕೈಗಳಂತಿರುವ ಕಿರಣಗಳಿಂದ ಕತ್ತಲನ್ನು ನಾಶಮಾಡುವಂತೆ ಕೃಷ್ಣನೂ ತನ್ನ ಕೈಗಳಿಂದ ಈ ದುಷ್ಟರನ್ನು ನಾಶಮಾಡಲು ರಾಜಮಾರ್ಗದಲ್ಲಿ ಕಾಣಿಸಿಕೊಂಡನು. ಜೊತೆಯಲ್ಲಿ ಗೋಪಾಲಕರೂ ಇದ್ದರು.

**ಸಂದೇಶ** : ದುಷ್ಟ ನಾಶಕ್ಕಾಗಿ ದೇವರು ಬಂದೇ ಬರುತ್ತಾನೆ. ಇದಕ್ಕೆ ಉದಾಹರಣೆ ಸೂರ್ಯನು ನಿಯಮೇನ ಉದಿಸುವಂತೆ.

**ಗಚ್ಛನ್ವಿಲೋಕ್ಯ ಗಜರಮ್ಯಗತಿಃ ಸ ರಂಗ–**
**ದ್ವಾರಿಸ್ಥಿತೇಭಮಥ ಹಸ್ತಿಪಮಿತ್ಯವೋಚತ್ ।**
**ಮಾರ್ಗಂ ಪ್ರದೇಹಿ ಕರಿಣಾ ಸಹ ದೂರಮೇಹಿ**
**ನೋ ಚೇ ತ್ಪ್ರಯಾಸ್ಯಸಿ ವಿದೂರಕೃತಾಂತ ಲೋಕಮ್** ॥ ೩೦ ॥

ಗಜ=ಆನೆಯಂತೆ; ರಮ್ಯ=ಚಂದದ; ಗತಿಃ=ನಡಿಗೆವುಳ್ಳ; ಸಃ=ಕೃಷ್ಣನು; ಗಚ್ಛನ್= ಹೋಗುತ್ತಾ; ರಂಗ=ಯುದ್ಧಸ್ಥಳದ; ದ್ವಾರಿ=ಬಾಗಿಲಲ್ಲಿ; ಸ್ಥಿತಂ=ಇರುವ; ಇಭಂ=ಆನೆಯನ್ನು; ವಿಲೋಕ್ಯ=ನೋಡಿ; ಅಥ=ಅನಂತರ; ಹಸ್ತಿಪಂ=ಮಾವುತನನ್ನು ಕುರಿತು; ಮಾರ್ಗಂ= ದಾರಿಯನ್ನು; ಪ್ರದೇಹಿ=ಕೊಡು; ಕರಿಣಾ=ಆನೆಯಿಂದ; ಸಹ=ಕೂಡಿ; ದೂರಂ=ದೂರಕ್ಕೆ; ಏಹಿ=ಹೋಗು; ನೋಚೇತ್=ಇಲ್ಲದಿದ್ದರೆ; ವಿದೂರ=ದೂರದಲ್ಲಿರುವ; ಕೃತಾಂತ=ಯಮನ; ಲೋಕಂ=ಮನೆಯನ್ನು; ಪ್ರಯಾಸ್ಯಸಿ=ಹೋಗುತ್ತಿ; ಇತಿ=ಎಂದು; ಅವೋಚತ್=ಹೇಳಿದನು.

ಕೃಷ್ಣನು ರಾಜಮಾರ್ಗದಲ್ಲಿ ಆನೆಯಂತೆ ಗಂಭೀರವಾಗಿ ಹೋಗುತ್ತಿದ್ದನು. ಮಲ್ಲಯುದ್ಧದ ಜಾಗಕ್ಕೆ ಹೋಗುವ ಉದ್ದೇಶ ಆತನದ್ದಾಗಿತ್ತು. ಆದರೆ ಯುದ್ಧರಂಗಸ್ಥಳದ ದಾರಿಯಲ್ಲಿ ಕಂಸನು ತನ್ನ ಕುವಲಯಾಪೀಡಾ ಎಂಬ ಆನೆಯನ್ನು ನಿಲ್ಲಿಸಿದ್ದನು. ಈ ಆನೆಯ ಮೂಲಕ ಕೃಷ್ಣನನ್ನು ಕೊಲ್ಲಿಸಲು ಸಂಕಲ್ಪಿಸಿದ್ದನು. ಕೃಷ್ಣನು ಮಾವುತನಲ್ಲಿ, ಆನೆಯನ್ನು ದಾರಿಯಿಂದ ಸರಿಸು. ದಾರಿಬಿಟ್ಟು ಸ್ವಲ್ಪ ದೂರ ನಿಲ್ಲು. ನೀನಾಗಿ ದಾರಿಬಿಟ್ಟರೆ ನೀನು ಇಲ್ಲೇ ಸ್ವಲ್ಪ ದೂರ ನಿಂತರೆ ಸಾಕು. ನಾನಾಗಿ ದಾರಿ ಮಾಡಿಕೊಳ್ಳುವುದಾದರೆ ನಿನ್ನನ್ನು ಬಹಳ ದೂರದ ಯಮಲೋಕಕ್ಕೆ ಕಳಿಸಬೇಕಾಗುವುದು ಎಂದು ಹೇಳಿದನು.

**ಸಂದೇಶ** : ದೇವರ ದಾರಿಗೆ ಅಡ್ಡ ಬರುವವರಿಗೆ ಕ್ಷೇಮವಿಲ್ಲ.

**ಭೋ ತಿಷ್ಠ ತಿಷ್ಠ ವನವಾಸಿ ಜನೈಕಮಾನ್ಯ**
**ಪ್ರೌಢಿರ್ಬಲಂ ಕುಶಲಮಸ್ತಿ ನ ತಾದೃಶಂ ತೇ ।**
**ಯಾದೃಗ್ವಿದಗ್ಧ ಪುರವಾಸಿ ಜನೇಷು ಶತ್ರು–**
**ಸಂದರ್ಭಕೇಸರಿ ಸಮೇಷು ಜಿತಶ್ರಮೇಷು ॥ ೩೧ ॥**

ಭೋ=ಎಲೋ. ವನ=ಕಾಡಲ್ಲಿ. ವಾಸಿ=ವಾಸಿಸುವ; ಜನ=ಜನರಿಂದ; ಏಕ= ಮುಖ್ಯವಾಗಿ; ಮಾನ್ಯ=ಆದೃತನೇ; ಶತ್ರು=ಶತ್ರುಗಳ; ಸಂದರ್ಭ=ಸಮೂಹಕ್ಕೆ; ಕೇಸರಿ= ಸಿಂಹಕ್ಕೆ; ಸಮೇಷು=ಸದೃಶರಾದ; ಜಿತ=ಗೆದ್ದ; ಶ್ರಮೇಷು=ಆಲಸ್ಯವುಳ್ಳ; ವಿದಗ್ಧ= ಚುರುಕಾದ; ಪುರ=ಊರಲ್ಲಿ; ವಾಸಿ=ಇರುವ; ಜನೇಷು=ಜನರಲ್ಲಿ; ಯಾದೃಕ್=ಎಂತಹ; ಪ್ರೌಢಿಃ=ಮಾತುಗಾರಿಕೆ; ಬಲಂ=ಶಕ್ತಿಯು; ಕುಶಲಂ=ಚಾತುರ್ಯವು; ಅಸ್ತಿ=ಇದೆಯೋ; ತಾದೃಶಂ=ಆ ರೀತಿಯಾದ್ದು; ತೇ=ನಿನಗೆ; ನ ಅಸ್ತಿ=ಇಲ್ಲ.

ಎಲೋ ಕೃಷ್ಣನೇ, ನೀನು ಕಾಡಲ್ಲಿ ಇರುವವನು. ಸಂಸ್ಕಾರ ಇಲ್ಲದವನು. ನಿನ್ನನ್ನು ಕಾಡುಮನುಷ್ಯರು ಮಾತ್ರ ಗೌರವಿಸುತ್ತಾರೆ. ಆದ್ದರಿಂದ ನಿನ್ನಿಂದ ಅರ್ಥಗರ್ಭಿತವಾದ ಮಾತನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ನೀನು ದನಮೇಯಿಸುವವನು. ಆದ್ದರಿಂದ ಅಂತಹ ಶಕ್ತಿಯಾಗಲೀ, ಚಾಕಚಕ್ಯತೆಯಾಗಲೀ ಇಲ್ಲ. ನಾವಾದರೂ ಪಟ್ಟಣದಲ್ಲಿ ಇರುವವರು. ಬಹಳ ಬುದ್ಧಿವಂತರು. ಶತ್ರುಗಳಿಗೆ ನಾವು ಸಿಂಹಸ್ವಪ್ನರು. ಹಳ್ಳಿಗರಿಗೆ ಇರುವ ಆಲಸ್ಯವೂ ನಮಗಿಲ್ಲ. ಹೀಗಿರುವಾಗ ನಮಗೂ ನಿನಗೂ ಎಲ್ಲಿಯ ಹೋಲಿಕೆ? ಮುಂದೆ ಬರಬೇಡ. ಬಂದ ದಾರಿಗೆ ಸುಂಕ ಇಲ್ಲವೆಂಬಂತೆ ಹಿಂದೆ ಹೋಗು ಎಂದು ಮಾವುತನು ಕೃಷ್ಣನನ್ನು ಜರೆದನು.

**ಸಂದೇಶ** : ದೇವರ ಮುಂದೆ ಎಲ್ಲರದ್ದೂ ತಮ್ಮ ತಮ್ಮ ಸ್ವಭಾವವು ಪ್ರಕಟವಾಗುತ್ತದೆ.

**ಪ್ರೌಢಿಂ ವಿಚಾರಯತ ಮಂದಮತೇಃ ಸ್ವ ಹಸ್ತಿ–**
**ವಿಧ್ವಂಸನೋದ್ಯತಕರಸ್ಯ ವನೇ ನಿವಾಸಃ ।**
**ಕಿಂ ದೂಷಣಂ ವಿಮತಕೇಸರಿ ಸಮ್ಮಿತಾನಾಂ**
**ಕಿಂ ಭೂಷಣಂ ಪ್ರತಿದಿನಂ ನಗರೇ ನಿವಾಸಃ ॥ ೩೨ ॥**

ಮಂದ=ಸ್ವಲ್ಪವಾದ; ಮತೇಃ=ಬುದ್ಧಿವುಳ್ಳ; ಪ್ರೌಢಿಂ=ಮಾತುಗಾರಿಕೆಯನ್ನು; ವಿಚಾರಯತ=ವಿಚಾರಿಸಿರಿ; ಸ್ವ=ತನ್ನ; ಹಸ್ತಿ=ಆನೆಯ; ವಿಧ್ವಂಸನ=ನಾಶದಲ್ಲಿ; ಉದ್ಯತ= ಎತ್ತಿದ; ಕರಸ್ಯ=ಕೈಯುಳ್ಳ; ವನೇ=ಕಾಡಲ್ಲಿ; ನಿವಾಸಃ=ವಾಸವು; ದೂಷಣಂ ಕಿಂ= ಕೆಟ್ಟದ್ದೇನು? ವಿಮತ=ಶತ್ರುಗಳಿಗೆ; ಕೇಸರಿ=ಸಿಂಹಕ್ಕೆ; ಸಮ್ಮಿತಾನಾಂ=ಸದೃಶರಿಗೆ;

ಪ್ರತಿದಿನಂ=ದಿವಸವೂ: ನಗರೇ=ಊರಲ್ಲಿ; ನಿವಾಸಃ=ವಾಸವು: ಭೂಷಣಂ ಕಿಂ= ಅಲಂಕಾರವೇನು?

ಈ ಮಾವುತನು ತನ್ನ ಮಾತಿನಿಂದ ಕೃಷ್ಣನನ್ನು ಆನೆಯನ್ನು ತಿವಿದಂತೆ ತಿವಿದನು. ಅಲ್ಲಿ ಸುತ್ತಮುತ್ತ ಬಹಳಷ್ಟು ಜನ ಸೇರಿದ್ದರು. ಇವರೆಲ್ಲಾ ನೋಡುವಂತೆ, ಕೇಳುವಂತೆ ಕೃಷ್ಣನು ಮಾವುತನ ಮಾತನ್ನು ಆತನಿಗೇ ತಿರುಗಿಸಿ ತಿವಿದನು. ಎಲೋ ಜನರೇ, ಈ ಮಾವುತನು ಹೇಳುತ್ತಾನೆ, ನಾನು ಕಾಡಾಡಿ; ನನ್ನ ಮಾತುಗಳು, ಬಲ, ಚಾಕಚಕ್ಯತೆ, ಯಾವುದೂ ಉತ್ತಮವಾಗಿಲ್ಲ ಎಂದು. ಈ ಮಾವುತನು ನನ್ನನ್ನು ಕೊಲ್ಲಲು ಪ್ರಯತ್ನಿಸುತ್ತಿದ್ದಾನೆ. ಆದ್ದರಿಂದ ನನಗೆ ಶತ್ರುವು. ಈ ಆನೆಯು ಈತನಿಗೆ ಸೇರಿದ್ದರಿಂದ ಆನೆಯೂ ನನಗೆ ಶತ್ರುವು. ಇಂತಹ ಆನೆಯನ್ನು ಕೊಲ್ಲಬೇಕಾಗಿದೆ. ಆನೆಯನ್ನು ಕೊಲ್ಲುವವುಗಳು ಸಿಂಹಗಳು. ಆದ್ದರಿಂದ ನಾನು ಸಿಂಹಸಮಾನನು. ಸಿಂಹಗಳು ಇರುವುದು ಕಾಡಿನಲ್ಲಿ. ಆದ್ದರಿಂದ ನನ್ನ ವನವಾಸವು ದೂಷಣವೋ? ಈ ಮಾವುತ ಮೊದಲಾದವರೆಲ್ಲಾ ನಮ್ಮಂತಹ ಶತ್ರುಗಳಿಗೆ ಸಿಂಹದಂತೆ ಇರುವವರಂತೆ. ಹಾಗೆಯೇ ನಗರವಾಸಿಗಳೆಂದೂ, ಮಾತಿನಲ್ಲಿ ತುಂಬಾ ಪ್ರೌಢರೆಂದೂ ಹೇಳುತ್ತಾನೆ. ಇವರೆಲ್ಲಾ ಸಿಂಹಗಳಾದರೆ ನಗರದಲ್ಲಿ ಬಹಳ ಸಮಯ ಇರಬಾರದು ತಾನೆ. ಕಾಡನ್ನು ಬಿಟ್ಟು ಊರಲ್ಲೇ ಇರುವ ಸಿಂಹಗಳನ್ನು ಸಿಂಹಗಳೆಂದು ಕರೆಯದೆ ಗ್ರಾಮಸಿಂಹಗಳೆಂದು (ನಾಯಿಗಳು) ಕರೆಯುತ್ತಾರೆ. ಆದ್ದರಿಂದ ಜನರೇ, ನೀವೇ ತೀರ್ಮಾನಿಸಿರಿ. ಯಾರ ಮಾತು ಪ್ರೌಢತ್ವವುಳ್ಳದ್ದೆಂದು.

**ಸಂದೇಶ** : ಆಕಾಶ ನೋಡಿ ಉಗುಳಿದರೆ ನಮ್ಮ ಮುಖದ ಮೇಲೆಯೇ ಬೀಳುವುದು.

**ಪ್ರೌಢಿಸ್ತಥಾಸ್ತು ಬಲಕೌಶಲಮಸ್ಮದೀಯಂ**
**ಪಶ್ಯೇತ್ಯುದೀರ್ಯ ತರಸಾ ಕರಿಣಂ ನಿಹತ್ಯ ।**
**ತಸ್ಯಾಂಘ್ರಿಮಧ್ಯ ಮಧಿಗಮ್ಯ ವಿಭುರ್ವಿಲಿಲ್ಯೇ**
**ಹಸ್ತೀ ವ್ಯಕಂಪತ ತದಾ ಜಗೃಹೇ ನ ಶೌರಿಮ್** ॥ ೩೩ ॥

ಪ್ರೌಢಿಃ=ಮಾತುಗಾರಿಕೆಯು: ತಥಾ=ಹಾಗೆಯೇ: ಅಸ್ತು=ಇರಲಿ: ಅಸ್ಮದೀಯಂ= ನಮ್ಮ: ಬಲ=ಬಲವನ್ನು: ಕೌಶಲಂ=ಚತುರತೆಯನ್ನು: ಪಶ್ಯ=ನೋಡು: ಇತಿ=ಎಂದು: ಉದೀರ್ಯ=ಹೇಳಿ: ತರಸಾ=ವೇಗದಿಂದ: ಕರಿಣಂ=ಆನೆಯನ್ನು: ನಿಹತ್ಯ=ಹೊಡೆದನು: ತಸ್ಯ=ಆನೆಯು: ಅಂಘ್ರಿ=ಕಾಲುಗಳ: ಮಧ್ಯಂ=ಮಧ್ಯವನ್ನು: ಅಧಿಗಮ್ಯ=ಹೊಂದಿ: ವಿಭುಃ=ಕೃಷ್ಣನು: ವಿಲಿಲ್ಯೇ=ಅಡಗಿದನು: ತದಾ=ಆಗ: ಹಸ್ತೀ=ಆನೆಯು: ವ್ಯಕಂಪತ= ನಡುಗಿತು: ಶೌರಿಂ=ಕೃಷ್ಣನನ್ನು: ನ ಜಗೃಹೇ=ಹಿಡಿಯಲಿಲ್ಲ.

ಎಲೋ ಮಾವುತನೇ, ಮಾತುಗಾರಿಕೆಯಿಂದ ಏನು ಲಾಭ? ಬುದ್ಧಿಗನುಸಾರವಾಗಿ ಮಾತು ಓಡುತ್ತೆ. ನಮ್ಮ ಬಲ ಎಷ್ಟು ಎಂಬುದನ್ನು ನೀನು ಸ್ವಯಂ ಅನುಭವಿಸು ಎಂದ

ಕೃಷ್ಣನು ತತ್‌ಕ್ಷಣ ಆನೆಯನ್ನು ಹೊಡೆದನು. ಆನೆ ನಡುಗಿತು. ಈ ತನಕ ಈ ಆನೆ ತಾನು ನಡುಗದೆ ಇನ್ನೊಬ್ಬರನ್ನು ನಡುಗಿಸುತ್ತಿತ್ತು. ಈ ರೀತಿ ಕೃಷ್ಣ ತನ್ನ ಶಕ್ತಿಯನ್ನು ತೋರಿಸಿದನು. ಆನೆ ಕೃಷ್ಣನನ್ನು ಹಿಡಿಯಲು ಬಂತು. ಆಗ ಕೃಷ್ಣನು ಆನೆಯ ಕಾಲುಗಳ ಮಧ್ಯದಲ್ಲಿ ಅಡಗಿದನು. ಕೃಷ್ಣನನ್ನು ಹಿಡಿಯಲು ಆನೆಗೆ ಸಾಧ್ಯವಾಗಲಿಲ್ಲ. ಇಲ್ಲಿ ಕೃಷ್ಣನು ಕೌಶಲ್ಯವನ್ನು ಮೆರೆದನು.

<u>**ಸಂದೇಶ**</u> : ದೊಡ್ಡವರು ಆಡಿದಂತೆ ಮಾಡಿ ತೋರಿಸುವರು.

**ಪುಚ್ಛೇ ಪ್ರಗೃಹ್ಯ ಪುರುಸತ್ವಮಮುಂ ಪುನಶ್ಚ**
**ಕೃಷ್ಣಶ್ಚಕರ್ಷ ಬಹುದೂರಮಪಾರ ಶಕ್ತಿಃ ।**
**ಧಾವನ್ವಿಭುರ್ನಿಜವಿಪಾತವಿಶಂಕಿನೋಽಸ್ಯ**
**ಭೂಲಗ್ನದಂತಯುಗಲಂ ಶಿಥಿಲೀ ಚಕಾರ ॥ ೩೪ ॥**

ಅಪಾರ=ಬಹಳವಾದ; ಶಕ್ತಿಃ=ಶಕ್ತಿವುಳ್ಳ ಕೃಷ್ಣನು; ಪುರು=ಬಹಳ; ಸತ್ವಂ=ಶಕ್ತಿವುಳ್ಳ; ಅಮುಂ=ಈ ಆನೆಯನ್ನು; ಪುಚ್ಛೇ=ಬಾಲದಲ್ಲಿ; ಪ್ರಗೃಹ್ಯ=ಹಿಡಿದು; ಕೃಷ್ಣಃ=ಕೃಷ್ಣನು; ಬಹುದೂರಂ=ಬಹಳ ದೂರ; ಚಕರ್ಷ=ಎಳೆದನು; ಧಾವನ್=ಓಡುತ್ತಾ; ವಿಭುಃ=ಕೃಷ್ಣನು; ನಿಜ=ತನ್ನ; ವಿಪಾತ=ಬೀಳುವಿಕೆಯ; ವಿಶಂಕಿನಃ=ಸಂಶಯಪಡುವ; ಅಸ್ಯ=ಆನೆಯ; ಭೂ=ಭೂಮಿಯಲ್ಲಿ; ಲಗ್ನ=ಸಂಬದ್ಧವಾದ; ದಂತ=ದಾಡೆಗಳ; ಯುಗಲಂ=ಎರಡನ್ನು; ಶಿಥಿಲೀಚಕಾರ=ಸಡಿಲಿಸಿದನು.

ಕೃಷ್ಣನು ಇನ್ನೊಂದು ರೀತಿಯಲ್ಲಿ ತನ್ನ ಬಲವನ್ನೂ ಕೌಶಲವನ್ನೂ ತೋರಿಸುತ್ತಾನೆ. ಈ ಆನೆಯು ಬಹಳ ಬಲವುಳ್ಳದ್ದು. ಇದರ ಬಾಲವನ್ನು ಹಿಡಿದು ಕೃಷ್ಣನು ಆನೆಯನ್ನು ಬಹಳ ದೂರ ಹಿಂದಕ್ಕೆ ಎಳೆದನು. ಇದರಿಂದ ಕೃಷ್ಣನ ಬಲವು ಅಪರಿಮಿತ ಎಂದು ಜನರಿಗೆ ಮನವರಿಕೆಯಾಯಿತು. ಆನೆಯನ್ನು ಹಿಂದಕ್ಕೆ ಎಳೆದು ಕೃಷ್ಣನು ಓಡುತ್ತ ಅದರ ಮುಂದೆ ಬಂದ. ಆಗ ಕೃಷ್ಣನು ಮುಗ್ಗರಿಸಿದಂತೆ ನಟಿಸಿದ. ಇದನ್ನು ಕಂಡ ಆನೆಯು ಕೃಷ್ಣನು ಬಿದ್ದನೆಂದು ಭ್ರಮಿಸಿತು. ಕೃಷ್ಣನನ್ನು ಕೊಲ್ಲಲು ತನ್ನ ದಂತಗಳಿಂದ ಕೂಡಿದ ತಲೆಯನ್ನು ನೆಲಕ್ಕೆ ತಾಗಿಸಿತು. ಕೃಷ್ಣನ ಸಮೀಪ ಬಂದಿತು. ಕೃಷ್ಣನು ತನ್ನ ಎರಡು ಕೈಗಳಿಂದ ಅದರ ದಂತಗಳನ್ನು ಹಿಡಿದು ರಭಸವಾಗಿ ಅಲುಗಾಡಿಸಿ ಸಡಿಲಿಸಿದನು.

<u>**ಸಂದೇಶ**</u> : ದೇವರ ಬಗ್ಗೆ ಭ್ರಾಂತನು ಸಂಪತ್ತಿನಿಂದ ಶಿಥಿಲನು.

**ಕೃಷ್ಣಂ ವಿಶಂಕ್ಯ ಪತಿತಂ ಭುವಿ ಸಂಹತಾತ್ಮ-**
**ದಂತಾನುಷಕ್ತ ಬಹುಧೂಲಿರಿಭೋ ವಿರೇಜೇ ।**
**ಸಿದ್ಧಾತ್ಮಬುಧ್ಯುಚಿತಸಿದ್ಧಿರಿವಾಂಬರಸ್ಥ-**
**ಸಿದ್ಧೇಶ್ವರಸ್ತುತಿಗಿರಾ ಪಥಿ ವರ್ಣ್ಯಮಾನಃ ॥ ೩೫ ॥**

ಕೃಷ್ಣಂ=ಕೃಷ್ಣನನ್ನು; ಭುವಿ=ಭೂಮಿಯಲ್ಲಿ; ಪತಿತಂ=ಬಿದ್ದದ್ದನ್ನಾಗಿ; ವಿಶಂಕ್ಯ= ಸಂಶಯಿಸಿ; ಸಂಹತ್=ಸಂಬದ್ಧವಾದ; ಆತ್ಮ=ತನ್ನ; ದಂತ=ದಾಡೆಗಳಲ್ಲಿ; ಅನುಷಕ್ತ= ಅಂಟಿದ; ಬಹು=ಬಹಳ; ಧೂಲಿಃ=ಧೂಳುಳ್ಳ; ಇಭ=ಆನೆಯು; ಸಿದ್ಧ=ಉಂಟಾದ; ಆತ್ಮ=ತನ್ನ; ಬುದ್ಧಿ=ಬುದ್ಧಿಗೆ; ಉಚಿತ=ಯೋಗ್ಯವಾದ; ಸಿದ್ಧಿಃ ಇವ=ಫಲದಂತೆ; ಅಂಬರ=ಗಗನದಲ್ಲಿ; ಸ್ಥ=ಇರುವ; ಸಿದ್ಧ=ಸಿದ್ಧರಿಗೆ; ಈಶ್ವರ=ಒಡೆಯರ; ಸ್ತುತಿ=ಸ್ತೋತ್ರದ; ಗಿರಾ=ಮಾತಿನಿಂದ; ಪಥಿ=ದಾರಿಯಲ್ಲಿ; ವರ್ಣ್ಯಮಾನಃ=ಹೇಳಲ್ಪಟ್ಟದ್ದಾಗಿ; ವಿರೇಜೇ=ಶೋಭಿಸಿತು.

ದೇವರು ಎಂದೂ ಬೀಳುವುದು ಇಲ್ಲ. ಈ ಆನೆಯು ದೇವರನ್ನು ಬಿದ್ದವನನ್ನಾಗಿ ತಿಳಿಯಿತು. ಕೃಷ್ಣನನ್ನು ತಿವಿಯಲು ತನ್ನ ದಂತವನ್ನು ನೆಲಕ್ಕೆ ಊರಿತು. ಆಗ ಅದರ ದಂತಗಳಲ್ಲಿ ಬಾಯಲ್ಲಿ ತುಂಬಾ ಮಣ್ಣು ಆಯಿತು. ಈ ದೃಶ್ಯವನ್ನು ಆಕಾಶದಲ್ಲಿ ದೇವತೆಗಳು ನೋಡಿದರು. ಕೃಷ್ಣನನ್ನು ಹೊಗಳುತ್ತಾ ಆನೆಯನ್ನು ಈ ರೀತಿ ತೆಗಳಿದರು – ಕೃಷ್ಣನು ಎಂದೂ ಬೀಳುವವನಲ್ಲ. ಈ ಆನೆಗೆ ದೇವರ ಬಗ್ಗೆ ವಿಪರೀತವಾದ ತಿಳುವಳಿಕೆ ಬಂದಿದೆ. ದೇವರ ಬಗ್ಗೆ ವಿಪರೀತತಿಳಿಯುವವರಿಗೆ ಬಾಯಿಗೆ ಮಣ್ಣು ಹೊರತು ಅನ್ನ ಅಲ್ಲ ಎಂದು.

<u>**ಸಂದೇಶ**</u> : ಭಗವನ್ನಿಂದಕರಿಗೆ ಇಹ–ಪರ ಎರಡರಲ್ಲೂ ಸುಖ ಇಲ್ಲ.

**ಇತ್ಥಂ ಪ್ರದರ್ಶ್ಯ ಬಲಕೌಶಲಮಂಬುಜಾಕ್ಷಃ**
**ಪದ್ಭ್ಯಾಂ ಪ್ರಪೀಡ್ಯ ತರಸಾ ಕರಿಣಂ ಮಮರ್ದ ।**
**ಉತ್ಖಾತ ತದ್ಧವಲದಂತಕರಃ ಕ್ಷಣೇನ**
**ತತ್ಸ್ವಾಮಿನಂ ತದನುಗಾಂಶ್ಚ ಸ ಲೀಲಯೈವ ॥ ೩೬ ॥**

ಅಂಬುಜ=ಕಮಲದಂತೆ; ಅಕ್ಷಃ=ಕಣ್ಣುಳ್ಳ; ಸಃ=ಕೃಷ್ಣನು; ಇತ್ಥಂ=ಈ ರೀತಿಯಾಗಿ; ಬಲಂ=ಬಲವನ್ನು; ಕೌಶಲಂ=ಚಾತುರ್ಯವನ್ನೂ; ಪ್ರದರ್ಶ್ಯ=ತೋರಿಸಿ; ಕರಿಣಂ= ಆನೆಯನ್ನು; ಪದ್ಭ್ಯಾಂ=ಕಾಲುಗಳಿಂದ; ತರಸಾ=ಚೆನ್ನಾಗಿ; ಪ್ರಪೀಡ್ಯ=ಹೊಡೆದು; ಮಮರ್ದ=ಪೀಡಿಸಿದನು; ಉತ್ಖಾತ=ಕೀಳಿದ; ತತ್=ಆನೆಯ; ಧವಲ=ಬಿಳಿಯ; ದಂತ= ದಂತಗಳು; ಕರಃ=ಕೈಯಲ್ಲಿ ಉಳ್ಳವನಾಗಿ; ಕ್ಷಣೇನ=ಕೂಡಲೇ; ತತ್=ಆನೆಯ; ಸ್ವಾಮಿನಂ=ಒಡೆಯನನ್ನು; ತತ್=ಆ ಒಡೆಯನ; ಅನುಗಾಂಶ್ಚ=ಸೇವಕರನ್ನು; ಲೀಲಯೈವ=ಅನಾಯಾಸದಿಂದಲೇ; ಮಮರ್ದ=ಪೀಡಿಸಿದನು.

ಈ ರೀತಿಯಾಗಿ ಕೃಷ್ಣನು ತನ್ನ ಶಕ್ತಿಯನ್ನೂ ಚಾತುರ್ಯವನ್ನೂ ತೋರಿಸಿದನು. ತನ್ನ ಕಾಲುಗಳಿಂದ ಆನೆಯನ್ನು ಚೆನ್ನಾಗಿ ಹೊಡೆದನು. ಅದರ ದಾಡೆಗಳನ್ನು ಕಿತ್ತು ಕೈಯಲ್ಲಿ ಹಿಡಿದುಕೊಂಡನು. ಆ ದಾಡೆಗಳಿಂದ ಮಾವುತನನ್ನೂ ಆತನ ಸೇವಕರನ್ನೂ ಹೊಡೆದನು. ಇದನ್ನೆಲ್ಲಾ ಕೃಷ್ಣನು ಅನಾಯಾಸವಾಗಿ ಮಾಡಿದನು.

**ಸಂದೇಶ** : ದುಷ್ಟರನ್ನು ಜೊತೆಗೆ ಇಟ್ಟುಕೊಂಡರೆ ಅವರೇ ನಮಗೆ ಮಾರಕರಾಗುವರು.

**ಪಾದಪ್ರಹಾರವಿವಶಃ ಕಿಲ ವಾರಣೋಽಸೌ**
**ಕುರ್ವನ್ ಪಪಾತ ಭುವಿ ನಾಮ ಗುಣಾನುಕೂಲಮ್ ।**
**ತಸ್ಯಾಂಘ್ರಿಸಂಗಿಸಹಜಾಂಕುಶರಮ್ಯರೇಖಾ**
**ಶಂಕೀವ ಕಂಪಿತಮಹೀಧರಭೂಪ್ರದೇಶಃ** ॥ ೩೭ ॥

ತಸ್ಯ=ಕೃಷ್ಣನ; ಅಂಘ್ರಿ=ಪಾದಗಳಲ್ಲಿ; ಸಂಗಿ=ಸಂಬದ್ಧವಾದ; ಸಹಜ=ಸ್ವಾಭಾವಿಕವಾದ; ಅಂಕುಶ=ಅಂಕುಶದ; ರೇಖಾ=ಗೆರೆಗಳ; ಶಂಕೀ ಇವ=ಸಂಶಯವುಳ್ಳಂತೆ; ಪಾದ=ಕಾಲುಗಳ; ಪ್ರಹಾರ=ಒದೆತಕ್ಕೆ; ವಿವಶಃ=ಅಧೀನವಾದ; ಅಸೌ=ಈ; ವಾರಣ=ಆನೆಯು; ಕಂಪಿತ=ಅಲುಗಾಡಿದ; ಮಹೀಧರ=ಬೆಟ್ಟಗಳು; ಭೂ=ಭೂಮಿಯ; ಪ್ರದೇಶಃ=ಜಾಗವುಳ್ಳದ್ದಾಗಿ; ನಾಮ=ತನ್ನ ಹೆಸರನ್ನು; ಗುಣ=ತನ್ನ ಧರ್ಮಕ್ಕೆ; ಅನುಕೂಲಂ=ಯೋಗ್ಯವನ್ನಾಗಿ; ಕುರ್ವನ್=ಮಾಡುತ್ತಾ; ಭುವಿ=ಭೂಮಿಯಲ್ಲಿ; ಪಪಾತ=ಬಿತ್ತು.

ಕೃಷ್ಣನ ಪಾದಗಳಲ್ಲಿ ಅಂಕುಶದ ರೇಖೆಗಳಿವೆ. ಇವುಗಳ ಸಂಬಂಧ ಈ ಆನೆಗೆ ಆಗಿದೆ. ಆನೆಯು ಅಂಕುಶಕ್ಕೆ ಬೇಗನೇ ಶರಣಾಗುತ್ತದೆ. ಕೃಷ್ಣನ ಪಾದದ ಅಂಕುಶ ರೇಖೆಗೆ ಶರಣಾಗಿಯೋ ಎಂಬಂತೆ ಆನೆಯು ಕೃಷ್ಣನ ಕಾಲಿನ ಒದೆತದಿಂದಾಗಿ ಭೂಮಿಗೆ ಬಿತ್ತು. ಬೀಳುವ ರಭಸಕ್ಕೆ ಬೆಟ್ಟಗಳಿಂದ ಕೂಡಿದ ಭೂಮಿಯು ನಡುಗಿತು. ಈ ಆನೆಗೆ ಕುವಲಯಾಪೀಡಾ ಎಂದು ಹೆಸರು. ಕು=ಭೂಮಿ; ವಲಯ=ಮಂಡಲ; ಆ=ಚೆನ್ನಾಗಿ; ಪೀಡಾ=ಪೀಡಿಸುವುದು. ಒಟ್ಟಾರೆ ಭೂಮಂಡಲವನ್ನು ಚೆನ್ನಾಗಿ ನಡುಗಿಸುವುದು ಎಂದು ಅರ್ಥ ಆಯಿತು. ಅಂತೂ ಆನೆ ಸಾಯುವಾಗ ತನ್ನ ಹೆಸರನ್ನು ಸಾರ್ಥಕಗೊಳಿಸಿತು.

**ಸಂದೇಶ** : ದೇವರ ಕೈಯಲ್ಲಿ ಸಾಯುವವರ ಧರ್ಮಗಳು ಮರಣಕಾಲಕ್ಕೆ ಪ್ರಕಟವಾಗುತ್ತವೆ.

**ಅಂಸಸ್ಥದಂತಪರಿಶೋಭಿತರಕ್ತಬಿಂದು-**
**ಸಂಸಕ್ತನಿರ್ಮಲತನುರ್ಹರಿರಾಬಭಾಸೇ ।**
**ರಕ್ಷೋವಿದಾರಣವಿಲಾಸಧೃತಾಂತ್ರಮಾಲಾ-**
**ವಕ್ಷಸ್ಥಲಾದ್ಭುತನೃಸಿಂಹ ಇವ ದ್ವಿಪಾರಿಃ** ॥ ೩೮ ॥

ಅಂಸ=ಹೆಗಲಲ್ಲಿ; ಸ್ಥ=ಇರುವ; ದಂತ=ದಾಡೆಯ; ಪರಿಶೋಭಿತ=ಚೆನ್ನಾಗಿ ಶೋಭಿಸುವ; ರಕ್ತ=ನೆತ್ತರಿನ; ಬಿಂದು=ಹನಿಗಳಿಂದ; ಸಂಸಕ್ತ=ಕೂಡಿದ; ನಿರ್ಮಲ=ಒಳ್ಳೆಯ; ತನುಃ=ದೇಹವುಳ್ಳ; ದ್ವಿಪ=ಆನೆಗೆ; ಅರಿಃ=ಶತ್ರುವಾದ; ಹರಿಃ=ಕೃಷ್ಣನು; ರಕ್ಷಃ=ಹಿರಣ್ಯಕನ; ವಿದಾರಣ=ನಾಶವೆಂಬ; ವಿಲಾಸ=ಆಟದಿಂದ; ಧೃತ=ಧರಿಸಿದ; ಆಂತ್ರ=ಕರುಳಿನ; ಮಲಾ=ಮಾಲೆವುಳ್ಳ; ವಕ್ಷಃಸ್ಥಲ=ಎದೆವುಳ್ಳ; ಅದ್ಭುತ=ವಿಲಕ್ಷಣನಾದ; ನೃಸಿಂಹ ಇವ=ನರಸಿಂಹನಂತೆ; ಆಬಭಾಸೆ=ಶೋಭಿಸಿದನು.

ದಾಡೆಯನ್ನು ಹೆಗಲಿಗೇರಿಸಿಕೊಂಡು ಕೃಷ್ಣನು ಹೊರಟನು. ದಾಡೆಯ ಬುಡದಲ್ಲಿ ರಕ್ತವು ಒಸರುತ್ತಿತ್ತು. ಅದು ಕೃಷ್ಣನ ಮೈಮೇಲೆ ಬೀಳುತ್ತಿತ್ತು. ಈ ಸಂದರ್ಭದಲ್ಲಿ ಕೃಷ್ಣನು ನರಸಿಂಹನಂತೆ ತೋರುತ್ತಿದ್ದನು. ನರಸಿಂಹನು ಹಿರಣ್ಯಕಶಿಪುವನ್ನು ಸಂಹರಿಸಿ ಆತನ ಕರುಳನ್ನು ತನ್ನ ಕೊರಳಿಗೆ ಹಾಕಿಕೊಂಡನು. ಆಗ ಕರುಳಿನ ರಕ್ತವು ನರಸಿಂಹನ ಎದೆ ಮೇಲೆ ಚೆಲ್ಲಿತ್ತು. ಹಿರಣ್ಯಕನೂ ಈ ಆನೆಯಂತೆ ಭೂಮಂಡಲವನ್ನು ಪೀಡಿಸುತ್ತಿದ್ದನು. ಕೃಷ್ಣನೂ ಈ ದುಷ್ಟರೆಂಬ ನರರಿಗೆ ಸಿಂಹದಂತೆ ಇದ್ದಾನೆ. ಆನೆಗೆ ಶತ್ರುವು ಸಿಂಹವೇ ತಾನೆ. ಆದ್ದರಿಂದಲೂ ಕೃಷ್ಣನು ಸಿಂಹನು.

**ಸಂದೇಶ** : ದೇವರಿಗೆ ಹೋಲಿಕೆ ಕೊಡುವುದಾದರೆ ಆತನ ರೂಪಾಂತರದಿಂದಲೇ ಕೊಡಬೇಕು ಹೊರತು ಬೇರೆ ರೀತಿಯಲ್ಲಿ ಸಾಧ್ಯವಿಲ್ಲ.

**ಲೋಕದ್ವಯಸುಖವ್ಯೂಹಪ್ರತ್ಯೂಹೌ ದ್ವಿಷತಾಮಿವ ।**
**ಏಕೈಕದಂತಾವಶ್ರಾಂತೌ ರಂಗಂ ವಿವಿಶತುರ್ವಿಭೂ** ॥ ೩೯ ॥

ದ್ವಿಷತಾಂ=ದ್ವೇಷಿಗಳಿಗೆ; ಲೋಕ=ಲೋಕಗಳ; ದ್ವಯ=ಎರಡರಲ್ಲಿ; ಸುಖ=ನೆಮ್ಮದಿಗಳ; ವ್ಯೂಹ=ಸಮೂಹಕ್ಕೆ; ಪ್ರತ್ಯೂಹೌ ಇವ=ತೊಂದರೆ ಮಾಡುವವರಂತೆ; ಏಕೈಕದಂತೌ= ಒಂದೊಂದು ದಾಡೆವುಳ್ಳವರಾಗಿ; ಅಶ್ರಾಂತೌ=ಆಯಾಸರಹಿತರಾಗಿ; ವಿಭೂ=ಸಮರ್ಥರು; ರಂಗಂ=ರಂಗಸ್ಥಳವನ್ನು; ವಿವಿಶತುಃ=ಪ್ರವೇಶಿಸಿದರು.

ಒಂದು ದಾಡೆಯನ್ನು ಕೃಷ್ಣನೂ ಇನ್ನೊಂದನ್ನು ಬಲರಾಮನೂ ಹಿಡಿದುಕೊಂಡು ಹೊರಟರು. ಇವರಿಬ್ಬರು ಈಗ ಏಕದಂತರಾದರು. ಏಕದಂತ ಎಂದು ಗಣಪತಿಗೆ ಹೆಸರಿದೆ. ಗಣಪತಿಯು ವಿಘ್ನವನ್ನು ಕೊಡಲೂ ತೆಗೆಯಲೂ ಸಮರ್ಥನು. ದುಷ್ಟರಿಗೆ ಇಹದಲ್ಲೂ ಪರದಲ್ಲೂ ಸುಖ ಸಿಗಬಾರದು. ಅಕಸ್ಮಾತ್ ಸುಖ ಸಿಗುವುದಾದರೆ ಅದಕ್ಕೆ ವಿಘ್ನಗಳನ್ನು ಮಾಡಲೋ ಎಂಬಂತೆ ಏಕದಂತರಾದರು. ಈ ಆನೆಯನ್ನು ಮಾವುತನನ್ನು ಹಾಗೆಯೇ ಇನ್ನುಳಿದವರನ್ನು ಕೊಂದರೂ ಇವರಿಗೆ ಯಾವ ಆಯಾಸವೂ ಆಗಿಲ್ಲ. ಹೀಗೆಯೇ ಮುಂದುವರಿಯುತ್ತಾ ಮಲ್ಲಯುದ್ಧ ನಡೆಯುವ ಜಾಗವನ್ನು ತಲುಪಿದರು.

**ಸಂದೇಶ** : ಗಣಪತಿಯ ಒಳಗೂ ಭಗವಂತನೇ ವಿಶ್ವಂಬರ ನಾಮಕದಿಂದ ಇದ್ದು ಗಣಪತಿಯ ಮೂಲಕ ವಿಘ್ನಗಳನ್ನು ಪರಿಹರಿಸುವವನು ಅಥವಾ ಕೊಡುವವನು.

**ತತಃ ಪ್ರವವೃತೇ ಯುದ್ಧಂ ಮಲ್ಲಾಭ್ಯಾಂ ರಾಮಕೃಷ್ಣಯೋಃ ।**
**ಗಜಾಭ್ಯಾಮಿವ ಮತ್ತಾಭ್ಯಾಂ ಖ್ಯಾತಯೋಃ ಸಿಂಹಯೋಸ್ತಯೋಃ** ॥ ೪೦ ॥

ತತಃ=ಅನಂತರ; ತಯೋಃ=ಆ; ರಾಮಕೃಷ್ಣಯೋಃ=ಬಲರಾಮಕೃಷ್ಣರಿಗೆ; ಖ್ಯಾತಯೋಃ=ಪ್ರಸಿದ್ಧಗಳಾದ; ಸಿಂಹಯೋಃ=ಸಿಂಹಗಳಿಗೆ; ಮತ್ತಾಭ್ಯಾಂ= ಮದಭರಿತ

ಗಳಾದ; ಗಜಾಭ್ಯಾಮಿವ=ಆನೆಗಳಂತೆ; ಮಲ್ಲಾಭ್ಯಾಂ=ಮಲ್ಲರಿಂದ; ಯುದ್ಧಂ=ಯುದ್ಧವು; ಪ್ರವವೃತೇ=ಆರಂಭವಾಯಿತು.

ಬಲರಾಮಕೃಷ್ಣರು ಆನೆಯನ್ನು ಮರ್ದಿಸಿ ಕುಸ್ತಿ ಆಡುವ ಸ್ಥಳವನ್ನು ಪ್ರವೇಶಿಸಿದರು. ಅಲ್ಲಿ ಮುಷ್ಟಿಕಚಾಣೂರರು ಸಿದ್ಧರಿದ್ದರು. ಇವರಿಗೆ ತಮ್ಮ ಬಲದ ಬಗ್ಗೆ ದುರಭಿಮಾನ ಬಹಳ ಇತ್ತು. ಇಂತಹವರನ್ನು ರಾಮಕೃಷ್ಣರು ಎದುರುಗೊಂಡರು– ಆನೆಗಳನ್ನು ಸಿಂಹಗಳು ಎದುರುಗೊಳ್ಳುವಂತೆ.

ಸ್ವಭಕ್ತಿರಿವ ಸಂಸಾರಂ ಕೃಷ್ಣಶ್ಚಾಣೂರಮಭ್ಯಗಾತ್ ।
ತಜ್ಞಾನಮಿವ ಪಾಪೌಘಂ ಮುಷ್ಟಿಕಂ ರೋಹಿಣೀಸುತಃ ॥ ೪೧ ॥

ಸ್ವ=ತನ್ನ; ಭಕ್ತಿರಿವ=ಭಕ್ತಿಯಂತೆ; ಕೃಷ್ಣಃ=ಕೃಷ್ಣನು; ಚಾಣೂರಂ=ಚಾಣೂರನನ್ನು; ಅಭ್ಯಗಾತ್=ಎದುರಿಸಿದನು; ತತ್=ಕೃಷ್ಣನ; ಜ್ಞಾನಂ=ಜ್ಞಾನವು; ಪಾಪ=ಪಾಪಗಳ; ಓಘಂ ಇವ=ಸಮೂಹದಂತೆ; ಮುಷ್ಟಿಕಂ=ಮುಷ್ಟಿಕನನ್ನು; ರೋಹಿಣೀ=ರೋಹಿಣಿಯ; ಸುತಃ=ಮಗನು.

ಕೃಷ್ಣನು ಚಾಣೂರನನ್ನು ಎದುರಿಸಿದನು. ಚಾಣೂರನು ಸಂಸಾರ ಸಮಾನನು. ಕೃಷ್ಣಭಕ್ತಿಯು ಸಂಸಾರವನ್ನು ನಾಶಮಾಡುತ್ತದೆ. ಕೃಷ್ಣನು ಭಕ್ತಿಯಂತೆ. ಭಕ್ತಿ ಎಂದರೆ ಪ್ರೀತಿ ಎಂಬ ಅರ್ಥವು ಸಾಮಾನ್ಯವಾಗಿ ಇದೆ. ಜೀವನ ಪ್ರೀತಿಯು ದೇವರಲ್ಲಿ ಇದೆ. ಆದ್ದರಿಂದ ಕೃಷ್ಣನನ್ನು ಭಕ್ತಿಗೆ ಹೋಲಿಸಿದ್ದು. ಮುಷ್ಟಿಕನು ಪಾಪಸದೃಶನು. ಜ್ಞಾನವು ಪಾಪವನ್ನು ಸುಡುತ್ತದೆ. ದೇವರ ವಿಷಯಕಜ್ಞಾನವು ಜೀವನಲ್ಲಿ ಇರುವುದು. ಬಲರಾಮನು ಜೀವನು. ಆದ್ದರಿಂದ ಆತನನ್ನು ಜ್ಞಾನಕ್ಕೆ ಹೋಲಿಸಿದರು. ಜ್ಞಾನ ಭಕ್ತಿಗಳು ಪಾಪವನ್ನೂ ಸಂಸಾರವನ್ನೂ ಸುಡುವಂತೆ ರಾಮಕೃಷ್ಣರು ಈ ದೈತ್ಯರನ್ನು ಎದುರಿಸಿದರು.

<u>ಸಂದೇಶ</u> : 'ಮಯಿ ಭಕ್ತಿರ್ಹಿ ಲೋಕಾನಾಂ ಅಮೃತತ್ವಾಯ ಕಲ್ಪತೇ' –ಇದು ದೇವರ ಮಾತು. ದೇವರಲ್ಲಿ ಭಕ್ತಿ ಮಾಡುವುದರಿಂದ ಜನರ ಸಂಸಾರ ನಷ್ಟವಾಗಿ ಮೋಕ್ಷವು ಲಭಿಸುತ್ತದೆ ಎಂದು. 'ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇರ್ಜುನ' –ಇದು ಕೃಷ್ಣನ ಮಾತು. ಜ್ಞಾನವೆಂಬ ಬೆಂಕಿಯು ಎಲ್ಲಾ ಕರ್ಮಗಳನ್ನೂ ನಾಶಮಾಡುತ್ತದೆ ಎಂದು.

ಅಪಿ ವಿವಿಧ ತದೀಯಾಭ್ಯಾಸಕೌಶಲ್ಯಮಾಸೀತ್
ಪಣಿಪತಿಯದುಪತ್ಯೋರಗ್ರತೋವ್ಯಗ್ರಮತ್ಯೋಃ ।
ಗತಫಲಮತಿಯತ್ನಾಭ್ಯಸ್ತವಿದ್ಯಾನವಸ್ಥಾ
ಫಲತಿ ಸಹಜತೇಜೋ ಬುದ್ಧಿಭಾಜಾಂ ಕಿಮಗ್ರೇ ॥ ೪೨ ॥

ವಿವಿಧ=ನಾನಾ ರೀತಿಯ; ತದೀಯ=ಅವರ ಸಂಬಂಧಿಯಾದ; ಅಭ್ಯಾಸ=ಅಭ್ಯಾಸದ; ಕೌಶಲ್ಯಂ ಅಪಿ=ಕುಶಲತ್ವವೂ; ಅವ್ಯಗ್ರ=ಸ್ಥಿರವಾದ; ಮತ್ಯೋಃ=ಬುದ್ಧಿವುಳ್ಳ; ಫಣಿ ಪತಿ=ಬಲರಾಮನ; ಯದುಪತ್ಯೋಃ=ಕೃಷ್ಣನ; ಅಗ್ರತಃ=ಮುಂದೆ; ಗತಫಲಂ=ವ್ಯರ್ಥವು; ಆಸೀತ್=ಆಯಿತು; ಅನವಸ್ಥಾ=ಸ್ಥಿರತೆ ಇಲ್ಲದ; ಅತಿ=ಬಹಳ; ಯತ್ನ=ಪ್ರಯತ್ನದಿಂದ; ಅಭ್ಯಸ್ತ=ಓದಿದ; ವಿದ್ಯಾ=ವಿದ್ಯೆಯು; ಸಹಜ=ಸ್ವಾಭಾವಿಕವಾದ; ತೇಜಃ=ಶಕ್ತಿಯು; ಬುದ್ಧಿ= ಬುದ್ಧಿಯು;ಭಾಜಾಂ=ಹೊಂದಿದವರ; ಅಗ್ರೇ=ಮುಂದೆ; ಫಲತಿ ಕಿಂ=ಫಲಿಸುತ್ತದೆಯೋ?

ಈ ಮಲ್ಲರು ಬಹಳ ವರ್ಷಗಳಿಂದ ಮಲ್ಲಯುದ್ಧವನ್ನು ಅಭ್ಯಾಸಮಾಡಿಕೊಂಡು ಬಂದಿದ್ದರು. ಇಂತಹವರು ಕೃಷ್ಣಬಲರಾಮರ ಜೊತೆ ಕಾದಾಡಲು ಆರಂಭಿಸಿದರು. ಕೃಷ್ಣಬಲರಾಮರಲ್ಲಿ ಅಭ್ಯಾಸ ಮಾಡಿ ಬಂದ ವಿದ್ಯೆ ಇರುವುದಲ್ಲ. ಸಹಜವಾಗಿಯೇ ಭುಜಬಲ ಬುದ್ಧಿಬಲ ಇದೆ. ಆದ್ದರಿಂದಲೇ ನಿಶ್ಚಿಂತೆಯಿಂದ ಇದ್ದರು. ಇಂತಹವರ ಜೊತೆ ಕಾದಾಡಿದ ಮಲ್ಲರ ಎಲ್ಲಾ ಬಲವೂ ವ್ಯರ್ಥವಾಯಿತು. ಇದು ಹೀಗೆ ಆದದ್ದೇ ಸರಿ ಎಂದು ರಾಜರು ಸಮರ್ಥಿಸುತ್ತಾರೆ. ಅಭ್ಯಾಸ ಮಾಡಿ ಸಂಪಾದಿಸಿದ ವಿದ್ಯೆಗೆ ಪರಿಮಿತಿ ಇದೆ. ಹಾಗೆಯೇ ಮರೆಯುವಿಕೆಯೂ ಬರಬಹುದು. ಆದರೆ ಸಹಜವಾದ ವಿದ್ಯೆಗೆ ಈ ಎರಡು ದೋಷಗಳೂ ಇಲ್ಲ.

**ಸಂದೇಶ** : ಹೇಳಿಕೊಟ್ಟ ಮಾತು, ಕಟ್ಟಿಕೊಟ್ಟ ಬುತ್ತಿ ಕೊನೆತನಕ ಬರುವುದಿಲ್ಲ.

**ಅಂಗಾಲಿಂಗನತತ್ಪರಸ್ಯ ಚರಣಸ್ಪರ್ಶೋದ್ಯತಸ್ಯಾಪ್ಯಲಂ**
**ನಮ್ರಸ್ಯ ಸ್ವಮುಪೇಯುಷೋऽಪಿ ಪರಿತಶ್ಚಾ ಊರನಾಮ್ನೋ ವಶೇ ।**
**ಕೃಷ್ಣೋऽಭೂನ್ನ ಚ ಮುಷ್ಟಿಕಸ್ಯ ಸಮರೇ ಸಂಕರ್ಷಣಃ ಸತ್ಕೃತಿಂ**
**ದುಷ್ಟೈರಾಚರಿತಾಂ ಕಿಮತ್ರ ಮತಿಮಾನ್ಮೃತ್ಯುಪ್ರದಾಂ ವಿಶ್ವಸೇತ್ ॥ ೪೩ ॥**

ಕೃಷ್ಣಃ=ಕೃಷ್ಣನು; ಸಮರೇ=ಯುದ್ಧದಲ್ಲಿ; ಅಂಗ=ದೇಹದ; ಆಲಿಂಗನ=ಆಲಿಂಗನವು; ತತ್=ಅದರಲ್ಲಿ; ಪರಸ್ಯ=ಆಸಕ್ತನಾದ; ಚರಣ=ಕಾಲುಗಳ; ಸ್ಪರ್ಶ=ಸ್ಪರ್ಶದಲ್ಲಿ; ಉದ್ಯತಸ್ಯ ಅಪಿ=ತಯಾರಾದ; ಅಲಂ=ಚೆನ್ನಾಗಿ; ನಮ್ರಸ್ಯ=ಬಗ್ಗಿದ; ಪರಿತಃ=ಸುತ್ತಲೂ; ಸ್ವಾಂ=ತನ್ನನ್ನು; ಉಪೇಯುಷಃ ಅಪಿ=ಹೊಂದಿದ್ದರೂ; ಚಾಣೂರ=ಚಾಣೂರ ಎಂದು; ನಾಮ್ನಃ=ಹೆಸರಿನವನ; ವಶೇ=ಅಧೀನದಲ್ಲಿ; ಸಂಕರ್ಷಣಃ=ಬಲರಾಮನು; ಮುಷ್ಟಿಕಸ್ಯ=ಮುಷ್ಟಿಕನ; ವಶೇ= ಅಧೀನದಲ್ಲಿ; ನ ಅಭೂತ್=ಆಗಲಿಲ್ಲ; ದುಷ್ಟೈಃ=ದುಷ್ಟರಿಂದ; ಆಚರಿತಾಂ=ಮಾಡಲ್ಪಟ್ಟ; ಮೃತ್ಯು=ಮರಣವನ್ನು; ಪ್ರದಾಂ=ಕೊಡುವ; ಸತ್ಕೃತಿಂ=ಆದರವನ್ನು; ಮತಿಮಾನ್= ಬುದ್ಧಿವಂತನು; ಅತ್ರ=ಇಲ್ಲಿ; ವಿಶ್ವಸೇತ್ ಕಿಂ=ನಂಬುತ್ತಾನೋ?

ಮುಷ್ಟಿಕ ಚಾಣೂರರು ಒಂದು ರೀತಿಯಲ್ಲಿ ಕೃಷ್ಣ ಬಲರಾಮರನ್ನು ಗೌರವಿಸುವಂತೆ ಮೇಲ್ನೋಟಕ್ಕೆ ತೋರುತ್ತದೆ –ಮಲ್ಲಯುದ್ಧದಲ್ಲಿ ಶತ್ರುಗಳನ್ನು ಮರ್ದಿಸಲು ಅನೇಕ

ಮಾರ್ಗಗಳು ಇವೆ. ಶತ್ರುವಿನ ದೇಹವನ್ನು ಮರ್ದಿಸಲು ಆತನನ್ನು ಗಟ್ಟಿಯಾಗಿ ಆಲಿಂಗಿಸುವುದು. ನೆಲಕ್ಕೆ ಬಡಿಯುವ ಸಲುವಾಗಿ ಕಾಲುಗಳನ್ನು ಹಿಡಿಯುವುದು. ತನ್ನನ್ನು ಹಿಡಿಯಲು ಬಂದಾಗ ತಪ್ಪಿಸಿಕೊಳ್ಳುವ ಸಲುವಾಗಿ ನೆಲಕ್ಕೆ ಬಾಗುವುದು. ಪರಸ್ಪರ ಹಿಡಿದುಕೊಳ್ಳುವ ಸಲುವಾಗಿ ಮಂಡಲಾಕಾರವಾಗಿ ಸುತ್ತುವುದು. ಇವೆಲ್ಲವೂ ಸತ್ಕಾರದಲ್ಲಿಯೂ ಇವೆ. ಮನೆಗೆ ಅತಿಥಿಗಳನ್ನು ಕರೆದು ಅವರನ್ನು ಆಲಿಂಗಿಸಿ, ನಮಸ್ಕರಿಸಿ, ವಿನೀತರಾಗಿ ಪ್ರದಕ್ಷಿಣೆ ಬರುವ ಮೂಲಕ ಆದರಿಸುವುದು ಲೋಕದ ವಾಡಿಕೆ. ಈ ಎಲ್ಲಾ ಕ್ರಮಗಳನ್ನು ಮುಷ್ಟಿಕಚಾಣೂರರು ಮಾಡಿದ್ದರೂ ಬಲರಾಮಕೃಷ್ಣರು ಅವರ ವಶರಾಗಲಿಲ್ಲ. ಕಾರಣ– ಇದು ದುಷ್ಟರು ಮಾಡಿದ್ದು. ವಿವೇಕಿಗಳು ದುಷ್ಟರು ಮಾಡುವ ಆದರಾದಿಗಳನ್ನು ನಂಬುವುದಿಲ್ಲ.

<u>**ಸಂದೇಶ**</u> : ಭಾರತದಲ್ಲಿ ಒಂದು ಮಾತಿದೆ– 'ನ ವಿಶ್ವಸೇತ್ ಅವಿಶ್ವಸ್ತೇ ವಿಶ್ವಸ್ತೇ ನಾತಿ ವಿಶ್ವಸೇತ್' –ಕೆಟ್ಟವರ ಮಾತಿಗೆ ಮರುಳಾಗಬಾರದು. ಒಳ್ಳೆಯವರ ಮಾತಿಗೂ ಅತಿಯಾಗಿ ಮರುಳಾಗಬಾರದು ಎಂದು. ದೇವರ ಬಗ್ಗೆ ನಾವು ಮಾಡುವ ಆದರ ಎಷ್ಟು ಎನ್ನುವುದಕ್ಕಿಂತಲೂ ಹೇಗೆ ಎನ್ನುವುದು ಮುಖ್ಯ.

**ಅಶನಿಸಮಕಠೋರಮಲ್ಲಘಾತೋ**
**ಮೃದುನಿ ಹರೇರಫಲಃ ಕಲೇವರೇ ಭೂತ್ ।**
**ಮೃದುಸರಸಕವೇಃ ಪುರಃ ಕಿಂ ಈಡ್ಯಾ**
**ಕಠಿನಪದಪ್ರಿಯಕಾವ್ಯಕಾರಶೀಲಾ** ॥ ೪೪ ॥

ಅಶನಿ=ಗುಡುಗಿಗೆ; ಸಮ=ಸದೃಶವಾದ; ಕಠೋರ=ಗಟ್ಟಿಯಾದ; ಮಲ್ಲ=ಮಲ್ಲನ; ಘಾತಃ=ಹೊಡೆತವು; ಹರೇಃ=ಕೃಷ್ಣನ; ಮೃದುನಿ=ಮೆತ್ತಗಿನ; ಕಲೇವರೇ=ಶರೀರದಲ್ಲಿ; ಅಫಲಃ=ವ್ಯರ್ಥವು; ಅಭೂತ್=ಆಯಿತು; ಮೃದು=ಮೆತ್ತಗಿನ; ಸರಸ=ರಸದಿಂದ ಕೂಡಿದ; ಕವೇಃ=ಕವಿಯ; ಪುರಃ=ಮುಂದೆ; ಕಠಿನ=ಕಷ್ಟವಾದ; ಪದ=ಶಬ್ದಗಳು; ಪ್ರಿಯ=ಇಷ್ಟವಾಗಿ; ಕಾವ್ಯ=ಕಾವ್ಯವನ್ನು; ಕಾರ=ಮಾಡುವವನ; ಶೀಲಾ=ಗುಣವು; ಈಡ್ಯಾ=ಸ್ತುತ್ಯವು; ಕಿಂ=ಏನು?

ಈ ಮಲ್ಲನು ಬಹಳ ಕಠಿಣಶರೀರದವನು. ಆತನ ಒಂದೊಂದು ಹೊಡೆತವೂ ಸಿಡಿಲಿನಂತೆ ಭಯಂಕರವಾಗಿತ್ತು. ಕೃಷ್ಣನದ್ದು ಮೆತ್ತಗಿನ ದೇಹ. ಈ ಮಲ್ಲನ ಹೊಡೆತವು ಎಷ್ಟೇ ಭಯಂಕರವಾಗಿದ್ದರೂ ಕೃಷ್ಣನ ದೇಹದ ಮುಂದೆ ಅದು ವ್ಯರ್ಥವೇ ಆಯಿತು. ಈ ವಿಷಯದಲ್ಲಿ ರಾಜರು ಒಂದು ಉದಾಹರಣೆಯನ್ನು ಕೊಡುತ್ತಾರೆ –ಇಬ್ಬರು ಕವಿಗಳಿದ್ದಾರೆ. ಒಬ್ಬನು ಸುಲಭವಾದ ಅಕ್ಷರಗಳನ್ನು ಜೋಡಿಸಿ, ಕಿವಿಗಳಿಗೆ ಇಂಪಾಗುವಂತೆ ಶೃಂಗಾರಾದಿ ರಸಗಳಿಂದ ಕೂಡಿದ ಕಾವ್ಯವನ್ನು ರಚಿಸುವವನು. ಇನ್ನೊಬ್ಬನು ಇದಕ್ಕೆ ವಿರುದ್ಧವಾಗಿ ಕಠಿಣವಾದ ಪದಗಳನ್ನು ಬಳಸುವವನು. ಕಾವ್ಯಪ್ರಿಯರು ಮೊದಲನೆಯದ್ದನ್ನು

ಸ್ವೀಕರಿಸುವರು. ಎರಡನೆಯವನ ಶ್ರಮವು ವ್ಯರ್ಥವೇ ಆಗುತ್ತದೆ. ಹಾಗೆಯೇ ಇಲ್ಲಿಯೂ ಕೂಡಾ.

ಸಂದೇಶ : ದೇವರ ಮುಂದೆ ನಾವು ಮೃದು ಸ್ವಭಾವದವರು ಆಗಬೇಕು.

**ತಲ್ಲಭ್ಯಾಂ ಜಯಕಾಮಿನೀಮಿವ ಲಷನ್ಪಾದೌ ಗೃಹೀತ್ವಾ ರಿಪೋಃ**
**ತತ್ಕಾಲಾರ್ಹಮಿವ ಭ್ರಮಂ ಪ್ರತಿದಿಶಸ್ತಂ ಭ್ರಾಮಯಿತ್ವಾ ಮುಹುಃ ।**
**ತನ್ಮೂರ್ಧಾನಮತಾಡಯತ್ಕ್ಷಿತಿತಲೇ ದುಷ್ಟೇ ಭಪಂಚಾನನಃ**
**ತಸ್ಯಾಭ್ಯಾಸಸಮೇಧಿತಾಂ ಕಠಿನತಾಂ ಪಶ್ಯನ್ನಿವಾಂಗೇ ದ್ವಿಷಃ ॥ ೪೫ ॥**

ದುಷ್ಟ=ಕೆಟ್ಟವರೆಂಬ; ಇಭ=ಆನೆಗಳಿಗೆ; ಪಂಚಾನನಃ=ಸಿಂಹದಂತಿರುವ ಕೃಷ್ಣನು; ತತ್=ಚಾಣೂರನಿಂದ; ಅಭ್ಯಾಂ=ಪಡೆಯುವ; ಜಯ=ಜಯವೆಂಬ; ಕಾಮಿನೀಂ=ಹುಡುಗಿಯನ್ನು; ಲಷನ್ನಿವ=ಅಪೇಕ್ಷಿಸುವವನಂತೆ; ರಿಪೋಃ=ಶತ್ರುವಿನ; ಪಾದೌ=ಕಾಲುಗಳನ್ನು; ಗೃಹೀತ್ವಾ=ಹಿಡಿದು; ತತ್=ಆ; ಕಾಲ=ಸಮಯಕ್ಕೆ; ಅರ್ಹಂ=ಯೋಗ್ಯವಾದ; ಭ್ರಮಂ=ಭ್ರಮೆಯನ್ನು; ಪ್ರತಿದಿಶನ್ ಇವ=ಕೊಡುವವನಂತೆ; ತಂ=ಚಾಣೂರನನ್ನು; ಮುಹುಃ=ಮತ್ತೂ ಮತ್ತೂ; ಭ್ರಾಮಯಿತ್ವಾ=ತಿರುಗಿಸಿ; ಅಭ್ಯಾಸ=ಅಭ್ಯಾಸದಿಂದ; ಸಮೇಧಿತಾಂ=ಸಂಪಾದಿಸಿದ; ಕಠಿನತಾಂ=ಕಾಠಿಣ್ಯವನ್ನು; ತಸ್ಯ=ಆ; ದ್ವಿಷಃ=ಶತ್ರುವಿನ; ಅಂಗೇ=ದೇಹದಲ್ಲಿ; ಪಶ್ಯನ್ನಿವ=ಕಾಣುವವನಂತೆ; ತತ್=ಅವನ; ಮೂರ್ಧಾನಂ= ತಲೆಯನ್ನು; ಕ್ಷಿತಿತತಿ=ಭೂಮಿಯಲ್ಲಿ; ಅತಾಡಯತ್=ಅಪ್ಪಳಿಸಿದನು.

ಕೃಷ್ಣನು ಚಾಣೂರನ ಕಾಲುಗಳಲ್ಲಿ ಹಿಡಿದನು. ಗಗನದಲ್ಲಿ ಆತನನ್ನು ತಿರುಗಿಸಿದನು. ಅನಂತರದಲ್ಲಿ ನೆಲಕ್ಕೆ ಅಪ್ಪಳಿಸಿದನು. ಇದು ಈ ಶ್ಲೋಕದ ಅಭಿಪ್ರಾಯ. ಇದನ್ನು ರಾಜರು ಒಂದು ಮದುವೆಯ ಸಂಭ್ರಮಕ್ಕೆ ಹೋಲಿಸುತ್ತಾರೆ– ಕೃಷ್ಣನಿಗೆ ಮದುವೆ ಆಗಬೇಕಿತ್ತು. ಅದಕ್ಕೋಸ್ಕರ ಮಧುರೆಗೆ ಬಂದನು. ಅಲ್ಲಿ ಕೃಷ್ಣನಿಗೆ ಬೇಕಾದ ಹುಡುಗಿಯು ಚಾಣೂರನಲ್ಲಿ ಇದ್ದಳು. ಅವಳ ಹೆಸರು ಜಯ ಎಂದು. ಅಂದರೆ ಚಾಣೂರನು ಈ ತನಕ ಬಹಳಷ್ಟು ಜನರನ್ನು ಯುದ್ಧದಲ್ಲಿ ಸೋಲಿಸಿ ಜಯವನ್ನು ಗಳಿಸಿದವನು ಎಂದು ಅರ್ಥ. ಆ ಜಯವನ್ನು ಈಗ ಕೃಷ್ಣನಿಗೆ ಪಡೆಯುವ ಆಸೆಯಾಗಿದೆ. ಹುಡುಗಿಯ ಅಪೇಕ್ಷೆ ಉಳ್ಳವರು ಇಷ್ಟವಾದ ಹುಡುಗಿಯ ತಂದೆಯ ಕಾಲನ್ನು ಹಿಡಿಯುವುದು ಸ್ವಾಭಾವಿಕ. ಅದರಂತೆ ಕೃಷ್ಣನು ಚಾಣೂರನ ಪಾದವನ್ನು ಹಿಡಿದನು. ಅಸುರರು ಸಾಯುವಾಗ ವಿಪರೀತ ಬುದ್ಧಿವುಳ್ಳವರಾಗುತ್ತಾರೆ. ಭ್ರಮಣ ಎನ್ನುವುದಕ್ಕೆ ಸುತ್ತುವುದೂ ಎಂಬರ್ಥವೂ ಇದೆ. ಹುಡುಗಿಯ ತಂದೆಯು ತನ್ನ ಮಗಳಿಗೆ ಯೋಗ್ಯ ವರನನ್ನು ಹುಡುಕುವ ಸಲುವಾಗಿ ಊರೂರು ಸುತ್ತುತ್ತಾನೆ. ಆ ದೃಷ್ಟಿಯಿಂದ ಕೃಷ್ಣನು ಈತನನ್ನು ಸುತ್ತಿಸಿದನೋ ಎಂಬಂತಿತ್ತು. ಈತನು ಮಲ್ಲಯುದ್ಧವನ್ನು ಬಾಲ್ಯದಿಂದ ಅಭ್ಯಸಿಸಿದ್ದಾನೆ. ಮಕ್ಕಳು ಅಧ್ಯಯನ ಮಾಡುತ್ತಿರುವಾಗ ಮಧ್ಯೆ ಮಧ್ಯೆ ಅವುಗಳನ್ನು ಪರೀಕ್ಷಿಸುತ್ತಾರೆ.

ಹಾಗೆಯೇ ಈತನು ಮಲ್ಲಯುದ್ಧದ ಅಭ್ಯಾಸದಿಂದ ತನ್ನ ದೇಹವನ್ನು ಎಷ್ಟು ಗಟ್ಟಿ ಮಾಡಿಕೊಂಡಿದ್ದಾನೆ ಎಂದು ಪರೀಕ್ಷಿಸಲೋ ಎಂಬಂತೆ ಕೃಷ್ಣನು ಈತನನ್ನು ನೆಲಕ್ಕೆ ಅಪ್ಪಳಿಸಿದನು. ವರ ಹುಡುಗಿಯ ತಂದೆಯನ್ನು ಆರ್ಥಿಕವಾಗಿ ಎಷ್ಟು ಗಟ್ಟಿ ಇದ್ದಾನೆ ಎಂದು ಪರೀಕ್ಷೆ ಮಾಡುವುದಿದೆ. ಕೃಷ್ಣನು ದುಷ್ಟರೆಂಬ ಆನೆಗಳಿಗೆ ಸಿಂಹದಂತೆ ಇರುವವನು. ಆನೆಗಳು ಎಂದೂ ಸಿಂಹದಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.

<u>ಸಂದೇಶ</u> : ದೇವರು ಎಲ್ಲವನ್ನು ಪರೀಕ್ಷಿಸಿಯೇ ಸ್ವೀಕರಿಸುತ್ತಾನೆ.

**ಬಾಲಮಲ್ಲಕರಚೂರ್ಣಿತಭಾಸ್ವನ್ನಾರಿಕೇಲತುಲನಾಂ ಸ ಜಗಾಮ ।**
**ಅನ್ಯಲೋಕಗಮನೋದ್ಯತಭೀತೋತ್ತಂಸಕಂಸಪರಿಪಂಥಿಸುಶಾಂತ್ಯೈ ॥ ೪೬ ॥**

ಸಃ=ಮಲ್ಲನ ತಲೆಯು; ಅನ್ಯ=ಬೇರೆ; ಲೋಕ=ಜಗತ್ತಿಗೆ; ಗಮನ=ಹೊರಡಲು; ಉದ್ಯತ=ತಯಾರಾದ; ಭೀತ=ಭೀತರಲ್ಲಿ; ಉತ್ತಂಸ=ಶ್ರೇಷ್ಠನಾದ; ಕಂಸ=ಕಂಸನ; ಪರಿಪಂಥಿ=ವಿಘ್ನಗಳ; ಸುಶಾಂತ್ಯೈ=ಪರಿಹಾರಕ್ಕೋಸ್ಕರ; ಬಾಲ=ಚಿಕ್ಕಮಲ್ಲನ; ಕರ= ಕೈಯಿಂದ; ಚೂರ್ಣಿತ=ಪುಡಿಯಾದ; ಭಾಸ್ವತ್=ಶೋಭಿಸುವ; ನಾರಿಕೇಲ= ತೆಂಗಿನ ಕಾಯಿಯ; ತುಲನಾಂ=ಹೋಲಿಕೆಯನ್ನು; ಜಗಾಮ=ಹೊಂದಿತು.

ಕೃಷ್ಣನು ಚಿಕ್ಕಮಲ್ಲನು. ಚಾಣೂರನು ಮಹಾಮಲ್ಲನು. ಆತನ ತಲೆಯನ್ನು ಕೃಷ್ಣನು ನೆಲಕ್ಕೆ ಅಪ್ಪಳಿಸಿದನು. ಈ ದೃಶ್ಯವು ದೇವಾಲಯಗಳಲ್ಲಿ ದೇವರ ರಥವು ಹೊರಡುವ ಮೊದಲು ಒಡೆಯುವ ತೆಂಗಿನಕಾಯಿಯಂತೆ ಇತ್ತು. ಕಾಯಿ ಒಡೆಯುವ ಉದ್ದೇಶ – ರಥವು ನಿರ್ವಘ್ನವಾಗಿ ಸಾಗುವುದು. ಅದೇ ರೀತಿ ಇಲ್ಲಿಯೂ ಮಲ್ಲರ ವಧೆಯ ಅನಂತರ ಕಂಸನ ವಧೆ ಆಗಬೇಕಿದೆ. ವಧೆ ಅಂದರೆ ಈ ಲೋಕದಿಂದ ಬೇರೆ ಲೋಕಕ್ಕೆ ಕಳಿಸುವುದು. ಕಂಸನಾದರೂ ತುಂಬಾ ಹೆದರಿದ್ದಾನೆ. ಆದ್ದರಿಂದ ಹೋಗಲು ಒಪ್ಪಲಿಕ್ಕಿಲ್ಲ. ಈ ಮಲ್ಲನೆಂಬ ಕಾಯಿಯನ್ನು ಒಡೆದರೆ ಕಂಸನಿಗೆ ಧೈರ್ಯ ಬರುವುದು. ಕಾಯಿಯನ್ನು ಒಡೆದಿದ್ದಾರೆ. ಆದ್ದರಿಂದ ದಾರಿಯಲ್ಲಿ ಯಾವ ತೊಂದರೆಗಳೂ ಬರಲಿಕ್ಕಿಲ್ಲ. ಆದ್ದರಿಂದ ಹೊರಡಬಹುದು ಎಂದು.

<u>ಸಂದೇಶ</u> : ದೇವರ ಒಂದೊಂದು ಕೆಲಸವೂ ನಮ್ಮ ಜೀವನದ ಒಂದೊಂದು ಸಂಪ್ರದಾಯಕ್ಕೆ ಗಮಕ.

**ಪದೋಃ ಪ್ರಗೃಹ್ಯ ಪ್ರಸಭಂ ನಿಪಾತ್ಯ ಸಂಚೂರ್ಣಯನ್ ಮಲ್ಲವರಂ ಧರಣ್ಯಾಮ್**
**ಸಹೋದರೋನ್ಮೂಲನಕರ್ಮಯೋಗ್ಯ ಪ್ರತಿಕ್ರಿಯಾಂ ಪ್ರೌಢಮತಿಃ ಪ್ರಚಕ್ರೇ॥ ೪೭ ॥**

ಮಲ್ಲವರಂ=ಮಲ್ಲ ಶ್ರೇಷ್ಠನನ್ನು; ಪದೋಃ=ಕಾಲುಗಳಲ್ಲಿ; ಪ್ರಗೃಹ್ಯ=ಹಿಡಿದು; ಧರಣ್ಯಾಂ=ಭೂಮಿಯಲ್ಲಿ; ಬಲಾತ್=ಬಲಾತ್ಕಾರದಿಂದ; ನಿಪಾತ್ಯ=ಬೀಳಿಸಿ;

ಸಂಚೂರ್ಣಯನ್=ಪುಡಿಮಾಡುತ್ತಾ; ಪ್ರೌಢ=ಬಹಳವಾದ; ಮತಿಃ=ಬುದ್ಧಿಯ ಕೃಷ್ಣನು; ಸಹೋದರ=ಅಣ್ಣಂದಿರ; ಉನ್ಮೂಲನ=ನಾಶವೆಂಬ; ಕರ್ಮ=ಕೆಲಸಕ್ಕೆ; ಯೋಗ್ಯ= ಉಚಿತವಾದ; ಪ್ರತಿಕ್ರಿಯಾಂ=ಪ್ರತಿಕ್ರಿಯೆಯನ್ನು; ಪ್ರಚಕ್ರೇ=ಮಾಡಿದನು.

ಕೃಷ್ಣನು ಈ ಮಲ್ಲನ ಕಾಲನ್ನು ಹಿಡಿದು ನೆಲಕ್ಕೆ ಅಪ್ಪಳಿಸಿ ಕೊಂದನು.

ಕಂಸನು ದೇವಕಿಯ ಆರು ಮಕ್ಕಳನ್ನು –ಕೃಷ್ಣನ ಅಣ್ಣಂದಿರನ್ನು ಕೊಂದಿದ್ದನು. ಅವರನ್ನು ಇದೇ ರೀತಿ ಕಾಲಲ್ಲಿ ಹಿಡಿದು ನೆಲಕ್ಕೆ ಅಪ್ಪಳಿಸಿದ್ದನು. ಶಾಸ್ತ್ರದಲ್ಲಿ ಒಂದು ಮಾತಿದೆ– 'ಅತ್ಯುತ್ಕಟೈಃ ಪುಣ್ಯಪಾಪೈಃ ಇಹೈವ ಫಲಮಶ್ನುತೇ' ಪುಣ್ಯ ಅಥವಾ ಪಾಪಗಳನ್ನು ಅತಿಯಾಗಿ ಮಾಡಿದರೆ ಈ ಜನ್ಮದಲ್ಲಿಯೇ ಫಲವನ್ನು ಉಣ್ಣಬೇಕಾಗುತ್ತದೆ ಎಂದು. ಕಂಸನು ತಾನು ಮಾಡಿದ ಮಹಾಪಾಪದ ಫಲವನ್ನು ಈ ಜನ್ಮದಲ್ಲಿಯೇ ಕಂಡನು.

**ಸಂದೇಶ** : ನಾವು ಇನ್ನೊಬ್ಬರಿಗೆ ಏನು ಮಾಡುತ್ತೇವೋ ದೇವರು ಅದನ್ನೇ ನಮಗೆ ತಿರುಗಿಸುತ್ತಾನೆ.

> ಬಲಸ್ಯ ತಲಘಾತೇನ ನಷ್ಟಂ ಮುಷ್ಟಿಕಮೀಕ್ಷಿತುಮ್ ।
> ಹ್ರಿಯೇವ ಚೂರ್ಣಿತಂ ರೇಜೇ ಚಾಣೂರಸ್ಯ ಶಿರಃ ಪುರಾ ॥ ೪೮ ॥

ಬಲಸ್ಯ=ಬಲರಾಮನ; ತಲ=ಕೈಯ; ಘಾತೇನ=ಹೊಡೆತದಿಂದ; ನಷ್ಟಂ=ಸತ್ತ; ಮುಷ್ಟಿಕಂ=ಮುಷ್ಟಿಕನನ್ನು; ಈಕ್ಷಿತುಂ=ನೋಡಲು; ಹ್ರಿಯಾ ಇವ=ನಾಚಿಕೆಯಿಂದಲೋ ಎಂಬಂತೆ; ಪುರಾ=ಮೊದಲೇ; ಚೂರ್ಣಿತಂ=ಪುಡಿಯಾದ; ಚಾಣೂರಸ್ಯ=ಚಾಣೂರನ; ಶಿರಃ=ತಲೆಯು; ರೇಜೇ=ಶೋಭಿಸಿತು.

ಬಲರಾಮನ ಕೈಯ ಹೊಡೆತದಿಂದಲೇ ಮುಷ್ಟಿಕನು ಬಿದ್ದನು. ಈತನೂ ಚಾಣೂರನಂತೆಯೇ ಬಲಿಷ್ಠನು. ನನ್ನಂತೆಯೇ ಬಲಿಷ್ಠನಾದ ಈತನನ್ನು ಬಲರಾಮನು ಯಾವ ಆಯುಧದ ಸಹಾಯವೂ ಇಲ್ಲದೇ ಕೇವಲ ಕೈಯಿಂದಲೇ ಬೀಳಿಸಿದನು. ಇದು ಮಲ್ಲರ ಕುಲಕ್ಕೇ ಅಪಮಾನ. ಆದ್ದರಿಂದ ಇನ್ನು ಬದುಕಿದ್ದರೂ ನಾಚಿಕೆ ಬಿಟ್ಟವರಂತೆ ಇರಬೇಕು. ಜನಗಳಿಗೆ ಹೇಗೆ ಮುಖ ತೋರಿಸುವುದು ಎಂಬ ಭಾವನೆಯಿಂದಲೋ ಎಂಬಂತೆ ಚಾಣೂರನು ಮುಷ್ಟಿಕನಿಗಿಂತ ಮೊದಲೇ ಸತ್ತನು.

**ಸಂದೇಶ** : ದೇವರ ಜೊತೆಗಿದ್ದರೆ ಯಾವ ಕಾರ್ಯವೂ ಅಸಾಧ್ಯವಲ್ಲ.

> ನಮೇ ಮುಷ್ಟಿಪ್ರಹಾರಸ್ಯ ಲಕ್ಷ್ಯೋಽಯಮಿತಿ ಲಕ್ಷಯನ್ ।
> ರಾಮಸ್ತಂ ತಲಘಾತೇನ ಜಘಾನಾಪಾರ್ಥನಾಮಕಮ್ ॥ ೪೯ ॥

ರಾಮಃ=ಬಲರಾಮನು; ಮೇ=ನನ್ನ; ಮುಷ್ಟಿ=ಮುಷ್ಟಿಯ; ಪ್ರಹಾರಸ್ಯ=ಹೊಡೆತಕ್ಕೆ; ಅಯಂ=ಈ ಮಲ್ಲನು; ನ ಲಕ್ಷ್ಯಃ=ಯೋಗ್ಯನಲ್ಲ; ಇತಿ=ಎಂದು; ಲಕ್ಷಯನ್=ತಿಳಿಯುತ್ತಾ;

ಅಪಾರ್ಥ=ಅಯೋಗ್ಯವಾದ; ನಾಮಕಂ=ಹೆಸರುಳ್ಳ; ತಂ=ಮುಷ್ಟಿಕನನ್ನು; ತಲ=ಕೈಯ; ಘಾತೇನ=ಹೊಡೆತದಿಂದ; ಜಘಾನ=ಹೊಡೆದನು.

ಈ ಮಲ್ಲನ ಹೆಸರು ಮುಷ್ಟಿಕ ಎಂದು. 'ಮುಷ್ಟಿ' ಅಂದರೆ ಹಸ್ತದ ಮುಷ್ಟಿಯು. 'ಕ' ಅಂದರೆ ತಲೆ. ತಲೆಯಲ್ಲಿ ಮುಷ್ಟಿ ಎಂದು ಒಟ್ಟಭಿಪ್ರಾಯ. ಬಲರಾಮನು ಆಲೋಚಿಸುತ್ತಾನೆ– ಈ ಮಲ್ಲನು ಬಹಳ ದುರ್ಬಲನು. ಇವನನ್ನು ನನ್ನ ಮುಷ್ಟಿಯಿಂದ ಹೊಡೆದರೆ ಈತನ ಬಲಕ್ಕೆ ಗೌರವ ಕೊಟ್ಟಂತೆ ಆಗುತ್ತದೆ. ಹಾಗೆಯೇ ನನ್ನ ಮುಷ್ಟಿಯಿಂದ ಈತನ ತಲೆಯನ್ನು ಹೊಡೆದರೆ ಈತನ ಹೆಸರೂ ಸಾರ್ಥಕವಾಗುತ್ತದೆ. ಇದು ಎರಡೂ ಆಗಬಾರದು; ಅದಕ್ಕಾಗಿ ಈತನನ್ನು ಅಂಗೈಯಿಂದ ಹೊಡೆಯುತ್ತೇನೆ ಎಂದು. ಹಾಗೆಯೇ ಹೊಡೆದು ಕೊಂದನು.

**<u>ಸಂದೇಶ</u> : ದೇವರ ವಿರೋಧಿಗಳಿಗೆ ಯಾವ ರೀತಿಯಲ್ಲಿಯೂ ಗೌರವ ಕೊಡಬಾರದು.**

**ಕೃಷ್ಣಂ ಮನ್ನಗರಾತ್ ಬಹಿಷ್ಕುರುತ ತತ್ಪಕ್ಷ್ಯೈಃ ಸಮಂ ಮದ್ಭಟಾ**
**ನಂದಂ ಮಾರಯತಾಶು ಮರ್ದಯತ ತಂ ಹೀನೋಗ್ರಸೇನಂ ಭುವಿ ।**
**ಕಂಸೇನೇತ್ಥಮುದೀರಿತೇಽಖಿಲಖಲಶ್ರೇಣೀವನೋಗ್ರಾನಲ–**
**ತಸ್ಯಾಜ್ಞಾಧರವಜ್ಜಗಾಮ ಸುಜನಸ್ತೋಮಾಂತಕಸ್ಯಾಂತಿಕಮ್ ॥ ೫೦ ॥**

ಹೇ. ಮತ್=ನನ್ನ; ಭಟಾಃ=ಸೇವಕರೇ; ಕೃಷ್ಣಂ=ಕೃಷ್ಣನನ್ನು; ಮತ್=ನನ್ನ; ನಗರಾತ್=ಊರಿಂದ; ಬಹಿಃ=ಹೊರಗೆ; ಕುರುತ=ಮಾಡಿರಿ; ತತ್=ಅವನ; ಪಕ್ಷ್ಯೈಃ= ಸಹಾಯಕರಿಂದ; ಸಮಂ=ಕೂಡಿ; ನಂದಂ=ನಂದಗೋಪನನ್ನು; ಆಶು=ಕೂಡಲೇ; ಮಾರಯತ=ಕೊಲ್ಲಿರಿ; ಹೀನ=ಕೆಟ್ಟ; ಉಗ್ರಸೇನಂ=ಉಗ್ರಸೇನನನ್ನು; ಭುವಿ=ಇಲ್ಲಿ; ಮರ್ದಯತ=ನಾಶಮಾಡಿರಿ; ಕಂಸೇನ=ಕಂಸನಿಂದ; ಇತ್ಥಂ=ಈ ರೀತಿಯಾಗಿ; ಉದೀರಿತೇ=ಹೇಳಲ್ಪಡುತ್ತಿರಲು; ಅಖಿಲ=ಎಲ್ಲಾ; ಖಲ=ದುಷ್ಟರ; ಶ್ರೇಣೀ=ಸಮೂಹವೆಂಬ; ವನ=ಕಾಡಿಗೆ; ಉಗ್ರ=ತೀಕ್ಷ್ಣವಾದ; ಅನಲಃ=ಬೆಂಕಿಯಾದ ಕೃಷ್ಣನು; ಸುಜನ=ಒಳ್ಳೆಯವರ; ಸ್ತೋಮ=ಗುಂಪಿಗೆ; ಅಂತಕಸ್ಯ=ಮಾರಕನಾದ; ತಸ್ಯ=ಕಂಸನ; ಆಜ್ಞಾ=ಅಪ್ಪಣೆಯನ್ನು; ಧರವತ್=ಧರಿಸಿದವನಂತೆ; ಜಗಾಮ=ಹೋದನು.

ಮಲ್ಲರ ನಾಶವಾಯಿತು. ಕಂಸನು ಇನ್ನಷ್ಟು ಹೆದರಿದನು. ತಾನು ಬೊಬ್ಬಿಡುತ್ತಿದ್ದಾನೆ –ಕೃಷ್ಣನನ್ನು ನನ್ನ ಊರಿನಿಂದ ಹೊರಗೆ ಕಳಿಸಿರಿ. ಆತನ ಬಂಧುಗಳೋ ಬಳಗದವರೋ ಸೇವಕರೋ ಅವರನ್ನೂ ಹೊರಗೆ ಮಾಡಿರಿ. ಕೃಷ್ಣನನ್ನು ಸಾಕಿದ ನಂದನನ್ನೂ ಕೊಲ್ಲಿರಿ. ಇವರಿಗೆ ಸಹಾಯಕನಾಗಿ ಉಗ್ರಸೇನನಿದ್ದಾನೆ. ಆತನು ಬಹಳ ಕೆಟ್ಟವನು. ಆತನನ್ನು ದಮನ ಮಾಡಿರಿ ಎಂದು. ಆದರೆ ಈತನ ಮಾತನ್ನು ನಡೆಸಿಕೊಡುವವರು ಯಾರೂ ಅಲ್ಲಿ ಇಲ್ಲ. ಇದ್ದ ಭಟರೆಲ್ಲಾ ಮೊದಲೇ ಕೃಷ್ಣನಿಂದ ಹತರಾಗಿದ್ದಾರೆ. ಕಂಸನು ರಾಜನು.

ಕೃಷ್ಣ ಕಂಸನ ರಾಜ್ಯದಲ್ಲೇ ಇರುವವನು. ನಂದನು ಕಂಸನಿಗೆ ತೆರಿಗೆ ಕೊಡುವವನು. ಆದ್ದರಿಂದ ಕೃಷ್ಣನು ಒಂದು ರೀತಿಯಲ್ಲಿ ಕಂಸನ ಸೇವಕನಂತೆ ಇದ್ದಾನೆ. ರಾಜನ ಮಾತನ್ನು ಪಾಲಿಸುವುದು ಸೇವಕನ ಕರ್ತವ್ಯವೋ ಎಂಬಂತೆ ಕೃಷ್ಣನು ಕಂಸನ ಬಳಿಗೆ ಬಂದನು. ಬರುವಾಗ ಕೃಷ್ಣನು ಪ್ರಳಯಕಾಲದ ಅಗ್ನಿಯಂತೆ ಕಂಡನು. ಕಾರಣ– ಈ ಕಂಸನು ಸಜ್ಜನರ ಪಾಲಿಗೆ ಯಮನಂತಿದ್ದನು. ಸದಾ ಋಷಿಮುನಿಗಳನ್ನು ಪೀಡಿಸುತ್ತಿದ್ದನು. ಅಂತಹ ಕಂಸನನ್ನು ಕೊಲ್ಲಬೇಕಾಗಿದೆ. ಯಮನು ನಮಗೆಲ್ಲಾ ಮಾರಕನು. ಪ್ರಳಯಾಗ್ನಿಯ ಮುಂದೆ ಯಮನೂ ಉಳಿಯುವುದಿಲ್ಲ.

ಇದೇ ಶ್ಲೋಕವನ್ನು ರಾಜರು ಆಧ್ಯಾತ್ಮಿಕ ಪರವಾಗಿ ಸ್ವರಸವಾಗಿ ಕೂಡಿಸುತ್ತಾರೆ. ಕಂಸನಲ್ಲಿ ಭೃಗುಮುನಿಯೂ ಇದ್ದಾನೆ. ಆದ್ದರಿಂದ ಕಂಸನ ಬಾಯಿಂದ ಆಧ್ಯಾತ್ಮಿಕಾರ್ಥ ಬರುವುದು ಸಹಜವಾಗುತ್ತದೆ. ತಾನು ಸಾಯುತ್ತೇನೆಂದು ಕಂಸನಿಗೆ ದೃಢವಾಗಿದೆ. ಸಾಯುವುದು ಅಂದರೆ ಶರೀರದಿಂದ ದೇವರು ಹೊರಡುವುದು. ಕಂಸನು ಹೇಳುತ್ತಾನೆ –ನನ್ನ ನಗರದಿಂದ ಕೃಷ್ಣನನ್ನು ಹೊರಹಾಕಿ ಎಂದು. ಇಲ್ಲಿ ನಗರ ಅಂದರೆ ಕಂಸನ ಶರೀರ. ಪರಿವಾರದಿಂದ ಕೂಡಿಕೊಂಡು ಹೊರ ಹಾಕಿ ಎಂದಿದ್ದ. ಕೃಷ್ಣನ ಪರಿವಾರ ಅಂದರೆ ತತ್ವಾಭಿಮಾನಿದೇವತೆಗಳು. ದೇವರು ಶರೀರದಿಂದ ಹೊರಡುವಾಗ ಎಲ್ಲಾ ತತ್ವಾಭಿಮಾನಿಗಳೂ ಆತನ ಜೊತೆ ಹೊರಡುತ್ತಾರೆ. ಕಂಸನ ಭಟರು ಸತ್ತಿದ್ದಾರೆ. ಅವರು ನರಕಕ್ಕೆ ಹೋಗಿದ್ದಾರೆ. ಅಲ್ಲಿ ಅವರಿಗೆ ಸುಖ ಸಿಗದಂತೆ ಮಾಡಬೇಕು ಎಂಬ ಅಭಿಪ್ರಾಯವು 'ಮತ್ ಭಟಾನಂದಂ ಮಾರಯತ್' ಎಂಬುದರಿಂದ ವ್ಯಕ್ತವಾಗುತ್ತದೆ. ಇದು ಸರಿ. ಯಾಕೆಂದರೆ ಕಂಸನ ಭಟರು ಬದುಕಿರುವಾಗ ಕೃಷ್ಣನನ್ನು ದ್ವೇಷಿಸುತ್ತಿದ್ದರು. ದೇವರ ದ್ವೇಷಿಗಳಿಗೆ ನರಕದಲ್ಲಿ ಸುಖ ಇರಬಾರದು. ಕಂಸನ ಪರಿವಾರದವರು ಪೂತನಾದಿಗಳು. ಬಹಳ ಕೆಟ್ಟವರಾಗಿದ್ದರು. ಅಂತಹವರನ್ನು ಅವರು ಬದುಕಿರುವಾಗ ತನ್ನ ಜೊತೆಗೆ ಇಟ್ಟುಕೊಂಡಿದ್ದನು ಕಂಸನು. ಅಂತಹ ಕಂಸನು ಭೂಮಿಯಲ್ಲಿ ಇರಕೂಡದು. ದೇವರ ದ್ವೇಷಿಗಳಿಗೆ ಭೂಮಿಯಲ್ಲಿ ಕಾಲೂರಲೂ ಅವಕಾಶ ಕೊಡಬಾರದು ಎಂದು 'ಹೀನೋ–ರಸೇನಂ ತಂ ಮರ್ದಯತ' ಎಂಬುದಕ್ಕೆ ಅರ್ಥ. ಪ್ರತಿಯೊಂದು ಪ್ರಾಣಿಯ ಜನ್ಮಾದಿಗಳು ದೇವರ ಅಧೀನ. ಆದ್ದರಿಂದ ಕೃಷ್ಣನು ಕಂಸನ ಮಾತನ್ನು ನಡೆಸಿಕೊಡಲು ಬಂದನು.

**ಸಂದೇಶ** : ಸಾಧನೆ ಪೂರ್ತಿಯಾದಮೇಲೆ ಅಥವಾ ಈ ಜನ್ಮದ ಪ್ರಾರಬ್ಧವು ಮುಗಿದಮೇಲೆ ನಮಗೆ ಸಾವು ದೇವರಿಂದಲೇ ಅಂದರೆ ಸಹಜವಾಗಿಯೇ ಬರಬೇಕು. ದುರ್ಮರಣಾದಿಗಳು ಕೂಡದು. ಇದಕ್ಕಾಗಿ ದೇವರನ್ನೇ ಮೊರೆಹೊಗಬೇಕು.

ತದಾ ಮದಾಂಧಾಃ ಪರಿವವ್ರುರೇನಂ
ಚಮೂಭಿರನ್ಯೇ ಚತುರಂಗಿಣೀಭಿಃ ।
ಯಥಾ ಪತಂಗಾ ಜ್ವಲನಂ ಜ್ವಲಂತಂ
ತಮಃ ಸಮೂಹಸ್ತರಣಿಂ ಯಥಾ ವಾ ॥ ೫೧ ॥

ತದಾ=ಆಗ; ಮದ=ಅಹಂಕಾರದಿಂದ; ಅಂಧಾಃ=ಕುರುಡರಾದ; ಅನ್ಯೇ=ಇತರರು; ಚತುರ್=ನಾಲ್ಕು; ಅಂಗಿಣೀಭಿಃ=ಅವಯವವುಳ್ಳ; ಚಮೂಭಿಃ=ಸೈನ್ಯಗಳಿಂದ; ಏನಂ= ಕೃಷ್ಣನನ್ನು; ಜ್ವಲಂತಂ=ಉರಿಯುವ; ಜ್ವಲನಂ=ಬೆಂಕಿಯನ್ನು; ಪತಂಗಾ ಯಥಾ= ಹಾತೆಗಳಂತೆ; ತಮಃ=ಕತ್ತಲೆಗಳ; ಸಮೂಹಃ=ಗುಂಪು; ತರಣಿಂ ಯಥಾವಾ= ಸೂರ್ಯನನ್ನೆಂಬಂತೆ; ಪರಿವವ್ರುಃ=ಸುತ್ತುವರಿದರು.

ಕೃಷ್ಣನು ಕಂಸನ ಬಳಿಗೆ ಬಂದನು. ಆಗ ಕಂಸನ ಅಳಿದುಳಿದ ಕೆಲವು ಸೇವಕರು ಚತುರಂಗ ಸೈನ್ಯದಿಂದ ಕೂಡಿಕೊಂಡು ಕೃಷ್ಣನನ್ನು ಮುತ್ತಿದರು. ಕೀಟಗಳಿಗೆ ಬೆಂಕಿಯ ಮಹತ್ವ ಗೊತ್ತಿರುವುದಿಲ್ಲ. ಅಂತಹ ಬೆಂಕಿಯನ್ನು ಸುತ್ತುವರಿದು ತಾವೇ ಸಾಯುತ್ತವೆ. ಸೂರ್ಯನು ಉದಿಸಿದಾಗ ಕತ್ತಲೆಯು ಕರಗುತ್ತದೆ. ಅದೇ ಅವಸ್ಥೆಯು ಈ ಸೈನ್ಯಕ್ಕೆ ಆಯಿತು.

ಈ ವಿಷಯದಲ್ಲಿ ರಾಜರು ಎರಡು ಉದಾಹರಣೆಗಳನ್ನು ಕೊಟ್ಟಿದ್ದಾರೆ. ಈ ರೀತಿ ವ್ಯತ್ಯಾಸವು ಈ ಉದಾಹರಣೆಗಳಲ್ಲಿ ಇದೆ –ಪತಂಗವು ತಾನು ಸತ್ತನಂತರ ಚೇತನವು ಉಳಿಯುತ್ತದೆ. ಒಳ್ಳೆಯ ಚೇತನವಾಗಿದ್ದರೆ ಸ್ವರ್ಗದಲ್ಲಿ ಸುಖವನ್ನು ಅನುಭವಿಸುತ್ತದೆ. ಕತ್ತಲೆಯು ಮಾತ್ರ ಸರ್ವಾತ್ಮನಾ ನಾಶವಾಗುತ್ತದೆ. ಏನೂ ಉಳಿಯುವುದಿಲ್ಲ. ಅದೇ ರೀತಿ ಈ ಸೈನ್ಯವು ಸತ್ತಮೇಲೂ ಉಳಿಯುವುದಿಲ್ಲ. ಯದ್ಯಪಿ ಪತಂಗದಂತೆ ಚೇತನವು ನಿತ್ಯ. ಆದರೆ ಸತ್ತನಂತರ ನರಕ ದುಃಖ ಇವರಿಗೆ ನಿತ್ಯ. ದುಃಖಾನುಭವವು ಒಂದು ರೀತಿಯ ಮರಣವೇ. ಆದ್ದರಿಂದ ಸರ್ವಾತ್ಮನಾ ಮರಣ.

**ಸಂದೇಶ** : ಗೋಡೆಗೆ ತಲೆ ತಾಗಿಸಿದರೆ ತಲೆಗೇ ನೋವಾಗುತ್ತದೆ.

**ರಣೇ ಪದಾಭ್ಯಾಂ ಚರತೋ ಮುರಾರೇಃ**
**ರಥಂ ಸಸೂತಂ ಸ ಸಹಸ್ರನೇತ್ರಃ ।**
**ಸಮಾದಿಶತ್ಸ್ವಾಭ್ಯುದಯಪ್ರದಸ್ಯ**
**ಪರಸ್ಯ ಸೇವಾಂ ಭುವಿ ಕರ್ತುಕಾಮಃ** ॥ ೫೨ ॥

ರಣೇ=ಯುದ್ಧದಲ್ಲಿ; ಪದಾಭ್ಯಾಂ=ಕಾಲುಗಳಿಂದ; ಚರತಃ=ಸಂಚರಿಸುವ; ಸ್ವ=ತನಗೆ; ಅಭ್ಯುದಯ=ಒಳ್ಳೆದನ್ನು; ಪ್ರದಸ್ಯ=ಕೊಡುವ; ಮುರಾರೇಃ=ಕೃಷ್ಣನ; ಪರಸ್ಯ=ಉತ್ತಮನ; ಸೇವಾಂ=ಸೇವೆಯನ್ನು; ಭುವಿ=ಭೂಮಿಯಲ್ಲಿ; ಕರ್ತುಕಾಮಃ=ಮಾಡುವ ಅಪೇಕ್ಷೆ ಉಳ್ಳ; ಸಃ ಸಹಸ್ರನೇತ್ರಃ=ಇಂದ್ರನು; ಸಸೂತಂ=ಸಾರಥಿಯಿಂದ ಕೂಡಿದ; ರಥಂ=ರಥವನ್ನು; ಸಮಾದಿಶತ=ಆಜ್ಞಾಪಿಸಿದನು.

ಕಂಸನ ಸೈನಿಕರು ರಥಾದಿಗಳಿಂದ ಕೃಷ್ಣನ ಬಳಿಗೆ ಬರುತ್ತಿದ್ದಾರೆ. ಕೃಷ್ಣನಾದರೂ ಕಾಲ್ನಡಿಗೆಯಲ್ಲೇ ಇದ್ದಾನೆ. ತನ್ನ ಕಾಡಾಡಿಗಳ ವೇಷವನ್ನು ಕಳಚಿಲ್ಲ. ಇಂದ್ರನು ಇದನ್ನು

ಕಂಡನು. ಆತನಿಗೆ ಸಾವಿರ ಕಣ್ಣುಗಳು. ಒಂದೊಂದು ಕಣ್ಣಿನಿಂದ ಕೃಷ್ಣನನ್ನು ಒಂದೊಂದು ರೀತಿಯಿಂದ ನೋಡುತ್ತಿದ್ದಾನೆ. ಕೃಷ್ಣನನ್ನು ಈ ರೂಪದ ಜೊತೆಗೇ ದೇವತ್ವವನ್ನು ಕಂಡನು. ಈ ಕೃಷ್ಣನು ಭೂಮಿಯಲ್ಲಿ ಅವತರಿಸಿದ್ದು ತನಗಾಗಿ ಅಲ್ಲ. ತಾನು ಪರಿಪೂರ್ಣ; ನಮಗಾಗಿ ಅವತರಿಸಿದ್ದು. ಕಂಸಾದಿಗಳನ್ನು ನಿಗ್ರಹಿಸಿ ಭೂಮಿಯೇ ಮೊದಲಾದ ಲೋಕಗಳಿಗೆ ನೆಮ್ಮದಿ ಕೊಡಲು. ಇಂತಹ ಕೃಷ್ಣನ ಸೇವೆಯನ್ನು ಈಗ ಮಾಡುವುದು ಬಹು ಉಚಿತ. ಭೂಮಿಯು ಕರ್ಮಾಚರಣೆಗೆ ಇದ್ದದ್ದು. ದೇವರು ಇಲ್ಲಿ ಇರುವಾಗ ಆತನ ಸೇವೆ ಮಾಡಿದರೆ ಕರ್ತವ್ಯವನ್ನು ಮಾಡಿದಂತೆ ಆಗುತ್ತದೆ. ಪುಣ್ಯದ ಲಾಭ ಮಾತ್ರವಲ್ಲದೆ ಲೌಕಿಕ ಲಾಭವೂ ಇದೆ ಎಂದು ಮನಗಂಡ ಇಂದ್ರನು ತನ್ನ ರಥವನ್ನು ಸಾರಥಿ ಸಹಿತವಾಗಿ ಕಳಿಸಿದನು. ಆ ದೃಷ್ಟಿಯಿಂದ ರಾಜರು ಇಂದ್ರನನ್ನು 'ಸಹಸ್ರನೇತ್ರ' ಎಂದು ಕರೆದರು. ಹಾಗೆಯೇ 'ಭುವಿ' ಎಂಬ ಶಬ್ದವನ್ನು ಪ್ರಯೋಗಿಸಿದರು.

**ಸಂದೇಶ** : ಕರ್ಮಭೂಮಿ ಎಂದು ಹೆಸರುಳ್ಳ ಭರತಖಂಡದಲ್ಲಿಯೇ ಮಾಡಿದ ಕರ್ಮಗಳು ಸಾರ್ಥಕಗಳಾಗುವುವು.

ಇಂದ್ರಾದಿ ದೇವತೆಗಳು ತಾಯಿಯ ಗರ್ಭದಲ್ಲಿ ಶರೀರ ಎಂಬ ರಥವನ್ನು ನಿರ್ಮಿಸುತ್ತಾರೆ. ಅದರಲ್ಲಿ ಜೀವನೆಂಬ ರಥಿಕನನ್ನು ಇಡುತ್ತಾರೆ. ತಾವೇ ಸಾರಥಿಗಳಾಗಿ ಇದ್ದು ಈ ಜೀವನಿಂದ ದೇವರ ಸೇವೆಯನ್ನು ಮಾಡಿಸುತ್ತಾರೆ. ತನ್ಮೂಲಕ ತಾವೂ ಕರ್ಮಿಗಳಾಗಿ ದೇವರನ್ನು ತೃಪ್ತಿಪಡಿಸುತ್ತಾರೆ. ಜೀವನಿಗೆ ಬಂದ ಫಲದಲ್ಲಿ ತಾವೂ ಭಾಗಿಗಳಾಗುತ್ತಾರೆ.

> **ಅಥೋ ರಥಾಗ್ರ್ಯೋವತತಾರ ತಾರಾ–**
> **ವೃತಃ ಶಶೀವಾತಿವಿಚಿತ್ರರತ್ನಃ ।**
> **ಮುಕುಂದ ಸಂದರ್ಶನ ಧೂತಪಾಪಂ**
> **ಮುನಿಂ ಖಲಾನ್ನೇತುಮಿವೋರ್ಧ್ವಲೋಕಮ್** ॥ ೫೩ ॥

ಅಥ=ಅನಂತರ; ಅತಿ=ಬಹಳ; ವಿಚಿತ್ರ=ವಿಚಿತ್ರವಾದ; ರತ್ನಃ=ರತ್ನಗಳುಳ್ಳ; ರಥಾಗ್ರ್ಯಃ=ರಥಶ್ರೇಷ್ಠವು.; ತಾರಾ=ನಕ್ಷತ್ರಗಳಿಂದ; ಆವೃತಃ=ಕೂಡಿದ; ಶಶೀ ಇವ=ಚಂದ್ರನಂತೆ; ಅವತತಾರ=ಇಳಿಯಿತು; ಮುಕುಂದ=ಕೃಷ್ಣನ; ಸಂದರ್ಶನ=ದರ್ಶನದಿಂದ; ಧೂತ=ನಷ್ಟವಾದ; ಪಾಪಂ=ಪಾಪವುಳ್ಳ; ಮುನಿಂ=ಋಷಿಯನ್ನು; ಖಲಾತ್=ದುಷ್ಟನಿಂದ; ಊರ್ಧ್ವ=ಮೇಲಿನ; ಲೋಕಂ=ಲೋಕವನ್ನು; ನೇತುಂ ಇವ=ಒಯ್ಯುವಂತೆ.

ಇಂದ್ರ ಕಳಿಸಿದ ರಥವು ನವರತ್ನಗಳಿಂದ ಖಚಿತವಾಗಿತ್ತು. ತುಂಬಾ ಪ್ರಕಾಶಮಾನವೂ ಆಗಿತ್ತು. ಆದ್ದರಿಂದ ನಕ್ಷತ್ರಗಳಿಂದ ಕೂಡಿದ ಚಂದ್ರನು ಧರೆಗೆ ಇಳಿದಂತೆ ತೋರಿತು. ಕೃಷ್ಣನ ಸಹಾಯಕ್ಕಾಗಿ ಬಂತು ಎಂದು ಹೇಳುವುದು ಬಾಲಿಶವಾದೀತು. ಹಾಗಾದರೆ

ಬಂದ ಉದ್ದೇಶ? ಒಂದು ಕಾರಣವನ್ನು ತೋರಿಸಿದ ರಾಜರು ಇನ್ನೊಂದನ್ನು ತಿಳಿಸುತ್ತಾರೆ –ಈ ಕಂಸನ ಶರೀರದಲ್ಲಿ ಭೃಗುಋಷಿಯು ಪ್ರಾರಬ್ಧವಶಾತ್ ಸೇರಿಕೊಂಡಿದ್ದಾನೆ. ಕೃಷ್ಣದರ್ಶನದಿಂದಾಗಿ ಆತನ ಪಾಪವು ಪರಿಹೃತವಾಗಿದೆ. ಪ್ರಾರಬ್ಧ ಇರುವ ತನಕ ಕಂಸನ ಜೊತೆಗೆ ಒಂದೇ ಶರೀರದಲ್ಲಿ ಇರಬೇಕಾಗಿತ್ತು. ಇಂತಹ ಋಷಿಯನ್ನು ಪುಕ್ಕಟೆ ಯಾಗಿ ಆತನ ಲೋಕಕ್ಕೆ ಕಳಿಸುವುದು ತರವಲ್ಲ. ಈತನು ಬಹಳ ಬ್ರಹ್ಮಚಾರಿ. ಈತನನ್ನು ವೈಭವದಿಂದ ಕರೆದುಕೊಂಡು ಹೋಗಲೋ ಎಂಬಂತೆ ರಥವನ್ನು ಇಂದ್ರನು ಕಳಿಸಿದನು.

**ಸಂದೇಶ** : ಬ್ರಹ್ಮಜ್ಞಾನಿಗಳು ಇರುವಲ್ಲೆಲ್ಲಾ ವೈಭವವೇ ಇರುತ್ತದೆ.

**ಸಹಸ್ರನೇತ್ರೋಽನಿಮಿಷ ಪ್ರಭುಃ ಸಃ**
**ಶತಕ್ರತು ವಜ್ರಧರೋ ಹಿ ಲೋಕೇ ।**
**ಸುಪಾವನೀಂ ಯಃ ಶತಧಾರಧುರ್ಯಾಂ**
**ಹರೇಃ ಸಪರ್ಯಾಂ ಕ್ಷಣಶಃ ಕರೋತಿ ॥ ೫೪ ॥**

ಯಃ=ಯಾರು; ಸುಪಾವನೀಂ=ಪವಿತ್ರವಾದ; ಶತಧಾರಃ=ವಜ್ರದ; ಧುರ್ಯಾಂ= ಭಾರವುಳ್ಳ; ಸಪರ್ಯಾಂ=ಪೂಜೆಯನ್ನು; ಹರೇಃ=ದೇವರಿಗೆ; ಸಹಸ್ರನೇತ್ರಃ=ಸಾವಿರ ಕಣ್ಣುಗಳುಳ್ಳ; ಅನಿಮಿಷಪ್ರಭುಃ=ದೇವತೆಗಳಿಗೆ ಒಡೆಯನಾದ; ಶತಕ್ರತುಃ=ನೂರು ಯಾಗವನ್ನು ಮಾಡಿದ; ವಜ್ರಧರಃ=ವಜ್ರಾಯುಧವನ್ನು ಧರಿಸಿದ; ಸಃ=ಇಂದ್ರನು; ಕ್ಷಣಶಃ= ಪ್ರತಿ ಕ್ಷಣವೂ; ಕರೋತಿ=ಮಾಡುತ್ತಾನೆ.

ಇಂದ್ರನನ್ನು ಜನರು ನಾನಾ ಹೆಸರುಗಳಿಂದ ಕರೆಯುತ್ತಾರೆ. ಸಹಸ್ರನೇತ್ರ=ಸಾವಿರ ಕಣ್ಣುಗಳುಳ್ಳವ; ಅನಿಮಿಷ ಪ್ರಭುಃ=ಅನಿಮಿಷರು ಅಂದರೆ ದೇವತೆಗಳು. ದೇವತೆಗಳು ಎಂದೂ ಮಾನವರಂತೆ ಆಗಾಗ ರೆಪ್ಪೆ ಮುಚ್ಚುವವರಲ್ಲ. ಅವರಿಗೆ ಇಂದ್ರನು ಒಡೆಯ. ಆದ್ದರಿಂದ ಈತನೂ ಅನಿಮಿಷನೇ. ನೂರು ಯಾಗಗಳನ್ನು ಮಾಡಿದ್ದರಿಂದ ಶತಕ್ರತು ಎಂಬ ಹೆಸರು. ಸದಾ ಕಾಲ ವಜ್ರಾಯುಧವನ್ನು ಧರಿಸಿಕೊಂಡಿರುತ್ತಾನೆ. ಆದ್ದರಿಂದ ವಜ್ರಧರ. ಇದೇ ರೀತಿ ಅನ್ವರ್ಥಕವಾದ ಹೆಸರುಗಳು ಬಹಳ ಇವೆ. ಆದರೂ ರಾಜರು ಆಯ್ದು ಕೆಲವು ಹೆಸರುಗಳನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಕಾರಣವನ್ನೂ ತಿಳಿಸುತ್ತಾರೆ. ದೇವರು ಹೆಜ್ಜೆ ಹೆಜ್ಜೆಗೂ ನಮ್ಮನ್ನು ರಕ್ಷಿಸುತ್ತಾನೆ. ಆದ್ದರಿಂದ ಕ್ಷಣಕ್ಷಣಕ್ಕೂ ಆತನನ್ನು ನಾವು ಪೂಜಿಸಬೇಕು. ಹೇಗೆ ರಕ್ಷಿಸಿದ ಎನ್ನುವುದನ್ನು ತಿಳಿಯಲು ನಮಗೆ ಎಷ್ಟು ಕಣ್ಣುಗಳಿದ್ದರೂ ಸಾಲದು. ಸದ್ಯ ಇಂದ್ರನು ಸಹಸ್ರನೇತ್ರನಾಗಿದ್ದಾನೆ. ಆದ್ದರಿಂದ ಕೃಷ್ಣನು ಮಾಡುವ ರಕ್ಷಣೆಯನ್ನು ಯಥಾಶಕ್ತಿ ನೋಡಿ ಕ್ಷಣಕ್ಷಣವೂ ಪೂಜಿಸುತ್ತಿದ್ದಾನೆ. ಕಣ್ಣುಗಳು ಬಹಳ ಇರಬಹುದು. ಆದರೆ ರೆಪ್ಪೆ ಮುಚ್ಚುವ ಸಮಯದಲ್ಲಿ ದೇವರು ಮಾಡುವ ರಕ್ಷಣೆಯ ದರ್ಶನವು ತಪ್ಪಿದರೆ..... ಅದಕ್ಕಾಗಿ ಇಂದ್ರನು ರೆಪ್ಪೆಗಳನ್ನೂ ಮುಚ್ಚುವುದಿಲ್ಲ. ದೇವರ ಪೂಜೆಗೆ ಈ ಧರ್ಮವೂ ಬೇಕು.

ದೇವರ ಪೂಜೆ ಮಾಡುವವನು ಆಂತರಬಾಹ್ಯದಿಂದ ಶುದ್ಧನಾಗಿರಬೇಕು. ಯಾಗಾದಿಗಳಿಂದ ಎರಡು ಶುದ್ಧಿಯೂ ಉಂಟಾಗುವುದು. ಇಂದ್ರನು ನೂರು ಯಾಗಗಳನ್ನು ಮಾಡಿದವನು. ಆದ್ದರಿಂದ ದೇವರ ಪೂಜೆಗೆ ಬೇಕಾದ ಪಾವಿತ್ರ್ಯವನ್ನು ಪಡೆಯಲು ವಿಹಿತವಾದ ಕರ್ಮಗಳನ್ನು ಮಾಡಬೇಕು. ಆದ್ದರಿಂದ ಇಂದ್ರನನ್ನು 'ಶತಕ್ರತು' ಎಂಬ ಹೆಸರಿನಿಂದ ಕರೆಯುವುದು ಸೂಕ್ತವೇ ಆಗಿದೆ.

ಇಂದ್ರನು ತ್ರಿಲೋಕಾಧಿಪತಿ. ಅಧಿಪತಿಯು ದೇವರನ್ನು ಪೂಜಿಸುವ ಉದ್ದೇಶ ಪ್ರಜೆಗಳ ಕ್ಷೇಮ. ಪ್ರಜೆಗಳಿಗೆ ಯಾವ ರೀತಿಯ ಅನಿಷ್ಟವೂ ಆಗಬಾರದು. ಅವರಿಗೆ ವಜ್ರಪಂಜರವನ್ನು ತೊಡಿಸಿ ರಕ್ಷಿಸಬೇಕಾಗಿದೆ. ಆ ರಕ್ಷಣೆಯ ಭಾರ ಈತನಿಗೆ ಸೇರಿದ್ದು. ಆದ್ದರಿಂದ ವಜ್ರಧರ ಎಂಬ ಹೆಸರೂ ಸಾರ್ಥಕ.

**ಸಂದೇಶ** : ದೇವತೆಗಳಿಗೆ ದೇವರು ಹೆಸರಿಡುತ್ತಾನೆ. ಅದನ್ನು ದೇವತೆಗಳು ದೇವರ ಪೂಜೆಗೆ ಬಳಸಿಕೊಂಡು ಸಾರ್ಥಕಗೊಳಸುತ್ತಾರೆ.

**ರಥಂ ಸಮಾರುಹ್ಯ ಸಪತ್ನಸೇನಾಂ**
**ಜಘಾನ ಹಸ್ತ್ಯಶ್ವಪದಾತಿಪೀನಾಮ್ ।**
**ಪರಿಸ್ಥಿತಾತ್ಮೀಯ ಮನೋರಥಸ್ಥೋ**
**ದುರಿಷ್ಟಸೇನಾಮಪಿ ದೇವದೇವಃ ॥ ೫೫ ॥**

ದೇವ=ದೇವತೆಗಳಿಗೂ; ದೇವಃ=ಒಡೆಯನಾದ ಕೃಷ್ಣನು; ರಥಂ=ರಥವನ್ನು; ಸಮಾರುಹ್ಯ=ಏರಿ; ಹಸ್ತಿ=ಆನೆಗಳು; ಅಶ್ವ=ಕುದುರೆಗಳು; ಪದಾತಿ=ಕಾಲಾಳುಗಳಿಂದ; ಪೀನಾಂ=ಪುಷ್ಟವಾದ; ಸಪತ್ನ=ಶತ್ರುಗಳ; ಸೇನಾಂ=ಸೈನ್ಯವನ್ನು; ಜಘಾನ=ಕೊಂದನು; ಪರಿ=ಸುತ್ತಲೂ; ಸ್ಥಿತ=ಇರುವ; ಆತ್ಮೀಯ=ತನ್ನವರ; ಮನಃ=ಮನವೆಂಬ; ರಥ=ರಥದಲ್ಲಿ; ಸ್ಥ=ಇರುವವನಾಗಿ; ದುರಿಷ್ಟ=ಪಾಪಗಳೆಂಬ; ಸೇನಾಂ ಅಪಿ=ಸೈನ್ಯವನ್ನೂ.

ಕೃಷ್ಣನು ಮಧುರಾದಲ್ಲಿ ದುಷ್ಟದಮನವನ್ನು ಆರಂಭಿಸಿದ್ದನು. ಅಲ್ಲಿ ಬಹಳಷ್ಟು ಜನ ಸಜ್ಜನರೂ ಇದ್ದರು. ಕಂಸನ ಉಪಟಳದಿಂದ ಅವರೆಲ್ಲಾ ಬಹಳಷ್ಟು ನೊಂದಿದ್ದರು. ಅವರೆಲ್ಲಾ ಈಗ ನೆಮ್ಮದಿಯ ಉಸಿರು ಬಿಡುವಂತಾಗಿದೆ. ತಮ್ಮ ಮನವೆಂಬ ರಥದಲ್ಲಿ ಕೃಷ್ಣನನ್ನು ಕುಳ್ಳಿರಿಸಿದ್ದಾರೆ. ಅಂದರೆ ಕೃಷ್ಣನನ್ನು ಚಿಂತಿಸುತ್ತಾ ಪುನಃ ತಮ್ಮ ಅನುಷ್ಠಾನವನ್ನು ಮುಂದುವರಿಸಿದ್ದಾರೆ. ಕಂಸನ ಭಯದಿಂದ ಇವರು ಜಪಾದಿಗಳನ್ನು ನಿಲ್ಲಿಸಿದ್ದರು. ಇದರಿಂದ ಅವರಿಗೆ ಪಾಪ ಬಂದಿತ್ತು. ಇವರ ಮನೋರಥದಲ್ಲಿ ಕೂತ ಕೃಷ್ಣನು ಇವರ ಪಾಪಗಳೆಂಬ ಕೆಟ್ಟ ಸೈನ್ಯವನ್ನು ಒಡಿದನು. ಕಂಸನ ಸೈನ್ಯವೂ ಬಹಳ ಕೆಟ್ಟದ್ದಾಗಿತ್ತು. ಆನೆಯೇ ಮೊದಲಾದ ನಾಲ್ಕು ಅಂಗಗಳೂ ಇದ್ದವು. ಇಂತಹ ಸೈನ್ಯವನ್ನು ಕೃಷ್ಣನು ಇಂದ್ರನ ರಥವನ್ನು ಹತ್ತಿ ಸಂಹರಿಸಿದನು.

'ತಂ ಯಥಾ ಯಥಾ ಉಪಾಸತೇ ತಥೈವ ಭವತಿ' ರಥಾರೂಢನಾದ ಕೃಷ್ಣನು ದುಷ್ಟ ಸೈನ್ಯವನ್ನು ಸಂಹರಿಸುತ್ತಾನೆ ಎಂದು ಉಪಾಸಿಸಿದರೆ ನಮ್ಮ ಮನಸ್ಸಿನಲ್ಲಿ ಇದ್ದು ನಮ್ಮ ಪಾಪಗಳನ್ನು ಧ್ವಂಸ ಮಾಡುತ್ತಾನೆ.

**ಶರೈಃ ಕರೋರ್ವಂಘ್ರಿ ಶಿರೋಧರಾದೀಂ-**
**ಶ್ಚಕರ್ತ ಶಸ್ತ್ರಾಸ್ತ್ರವಿಧಾಂ ರಿಪೂಣಾಮ್ ।**
**ಸ್ವಯಂ ಮುದೋನ್ಮೀಲಿತಲೋಚನಾಂತ**
**ಶರೈಸ್ತದಾ ತಾಡ್ಯತ ಕಾಮಿನೀನಾಮ್ ॥ ೫೬ ॥**

ಶರೈಃ=ಬಾಣಗಳಿಂದ; ಶಸ್ತ್ರ=ಶಸ್ತ್ರಗಳನ್ನು; ಅಸ್ತ್ರ=ಅಸ್ತ್ರಗಳನ್ನು; ವಿದಾಂ=ತಿಳಿದಿರುವ; ರಿಪೂಣಾಂ=ಶತ್ರುಗಳ; ಕರ=ಕೈಗಳನ್ನು; ಊರು=ತೊಡೆಗಳನ್ನು; ಅಂಘ್ರಿ=ಕಾಲುಗಳನ್ನು; ಶಿರೋಧರ=ಕುತ್ತಿಗೆಗಳು; ಆದೀನ್=ಮೊದಲಾದ್ದನ್ನು; ಶರೈಃ=ಬಾಣಗಳಿಂದ; ಚಕರ್ತ= ಕತ್ತರಿಸಿದನು; ತದಾ=ಆಗ; ಸ್ವಯಂ=ತಾನು; ಕಾಮಿನೀನಾಂ=ನಾರಿಯರ; ಮುದಾ= ಆನಂದದಿಂದ; ಉನ್ಮೀಲಿತ=ಅರಳಿದ; ಲೋಚನ=ಕಣ್ಣುಗಳ; ಅಂತ=ಕೊನೆ ಎಂಬ; ಶರೈಃ=ಬಾಣಗಳಿಂದ; ಅತಾಡ್ಯತ=ಹೊಡೆಯಲ್ಪಟ್ಟನು.

ಶತ್ರುಗಳು ಯುದ್ಧದಲ್ಲಿ ಬಹಳ ಚತುರರಿದ್ದರು. ಚತುರಂಗದಲ್ಲಿ ಸೇರಿದ ಪ್ರಾಣಿಗಳಿಂದ ಕೂಡಿದ ಜನರ ಎಲ್ಲಾ ಅವಯವಗಳನ್ನೂ ಕೃಷ್ಣನು ಕತ್ತರಿಸಿ ಬಿಸಾಡಿದನು. ಅದೇ ಸಮಯದಲ್ಲಿ ಈ ಕೃಷ್ಣನ ಶಕ್ತಿಯನ್ನು ಕಂಡ ಹೆಂಗಳೆಯರು ಆನಂದದಿಂದ ಕಣ್ಣರಳಿಸಿ ಕೃಷ್ಣನನ್ನು ನೋಡುತ್ತಿದ್ದರು. ತಮ್ಮ ಕಡೆಗಣ್ಣ ನೋಟದಿಂದ ಕೃಷ್ಣನನ್ನು ಹೊಡೆಯುತ್ತಿದ್ದರು.

**ಸಂದೇಶ** : ದುಷ್ಟರನ್ನು ನಾವು ಹೊಡೆದರೆ, ತನ್ಮೂಲಕ ಒಳ್ಳೆಯ ಕೆಲಸವನ್ನು ಮಾಡಿದರೆ ನಮಗೆ ಸಾತ್ವಿಕರ ಎಲ್ಲಾ ಇಂದ್ರಿಯಗಳಿಂದ ಪ್ರಶಂಸೆಗಳ ಹೊಡೆತದ ಸುರಿಮಳೆಯೇ ಆಗುತ್ತದೆ.

**ಚಿರಂ ಪುರಾ ವೈಷ್ಣವಸೇವನೇನ ಮುಕುಂದ ಸಾಮೀಪ್ಯಫಲಂ ಪ್ರಪನ್ನಃ ।**
**ಸ ಮಾತಲಿಸ್ತಸ್ಯ ವಿಚಿತ್ರವೀರ್ಯಮಭೂನ್ನಿರೀಕ್ಷ್ಯೋಭಯಥಾಪಿ ಸೂತಃ ॥ ೫೭ ॥**

ಪುರಾ=ಮೊದಲು; ಚಿರಂ=ಬಹಳ ಕಾಲ; ವೈಷ್ಣವ=ವಿಷ್ಣುಭಕ್ತನ; ಸೇವನೇನ=ಸೇವೆ ಯಿಂದ; ಮುಕುಂದ=ದೇವರ; ಸಾಮೀಪ್ಯ=ಸಾಮೀಪ್ಯವೆಂಬ; ಫಲಂ=ಫಲವನ್ನು; ಪ್ರಪನ್ನಃ=ಹೊಂದಿದ; ಸಃ=ಆ; ಮಾತಲಿಃ=ಮಾತಲಿಯು; ತಸ್ಯ=ಕೃಷ್ಣನ; ವಿಚಿತ್ರ= ಅದ್ಭುತವಾದ; ವೀರ್ಯಂ=ಶಕ್ತಿಯನ್ನು; ನಿರೀಕ್ಷ್ಯ=ನೋಡಿ; ಉಭಯಥಾ ಅಪಿ=ಎರಡು ರೀತಿಯಿಂದಲೂ; ಸೂತಃ=ಸೂತನು; ಅಭೂತ್=ಆದನು.

ಭಗವಂತನನ್ನು ಸಮೀಪದಿಂದ ನೋಡಬೇಕಾದರೆ, ಹೊಗಳಬೇಕಾದರೆ, ಸೇವೆ ಮಾಡಬೇಕಾದರೆ ಮೊದಲು ಭಾಗವತರ ಸೇವೆಯನ್ನು ಮಾಡಬೇಕು. ಈ ಮಾತಲಿಯು

ತಾನು ಬಹಳ ವರ್ಷ ಇಂದ್ರನ ಸೇವೆಯನ್ನು ಮಾಡಿದ್ದಾನೆ. ಇಂದ್ರನು ದೇವರ ಪರಮಭಕ್ತನು. ಅದರ ಫಲ ಮಾತಲಿಗೆ ಈಗ ಲಭಿಸಿತು. ದೇವರ ಸಮೀಪದಲ್ಲಿ ರಥದಲ್ಲಿ ಸಾರಥಿಯಾಗಿ ಕುಳಿತಿದ್ದಾನೆ. ಆತನ ಶಕ್ತಿಯನ್ನು ಕಣ್ಣಾರೆ ನೋಡುತ್ತಿದ್ದಾನೆ. ಆತನನ್ನು ಹೊಗಳುತ್ತಿದ್ದಾನೆ. ಮಾತಲಿಯು ಸೂತನು. ಸೂತ ಅಂದರೆ ರಥ ಓಡಿಸುವವನು ಹಾಗೂ ಹೊಗಳುವವನು. ಎರಡು ಅರ್ಥದಲ್ಲಿ ಆ ಶಬ್ದವು ಈತನಲ್ಲಿ ಸಾರ್ಥಕವಾಗಿದೆ.

**ಸಂದೇಶ** : ಭಾಗವತರ ಸೇವೆಯಿಂದ ಭಗವಂತನ ಸಾಮೀಪ್ಯ ಎಂಬ ಮೋಕ್ಷ ಲಭ್ಯ.

**ಧಾತ್ರೀಂ ಪ್ರಾಕ್ ಪರಿಪೋಷಣಾಯ ಪತಗಂ ವಾತಂ ವಿಲಾಸಾಯ ತಾನ್**
**ವತ್ಸಾನೋವೃಷಧೇನುಕಾದಿದಿತಿಜಾಂಸ್ತದ್ಭಾರವೋಢಾನಿವ ।**
**ಅಶ್ವೇಭೌ ರಜಕಂ ಚ ಮಾತುಲಕೃತೇ ಸಂಪ್ರೇಷ್ಯ ಮಲ್ಲಾಂಶ್ಚ ತ-**
**ತ್ಸೇನಾಂ ಪ್ರೇಷಯತಿ ಸ್ಮ ಗಾಢತಮಸೇ ಸಂಪ್ರೇಷಯಿಷ್ಯನ್ ಕ್ರಮಾತ್ ॥ ೫೮ ॥**

ಗಾಢ=ದೃಢವಾದ; ತಮಸೇ=ತಮಸ್ಸಿಗೋಸ್ಕರ.ಕಂಸನನ್ನು; ಸಂಪ್ರೇಷಯಿಷ್ಯನ್= ಕಳಿಸುವ ಕೃಷ್ಣನು; ಕ್ರಮಾತ್=ಕ್ರಮದಿಂದ; ಪ್ರಾಕ್=ಮೊದಲು; ಧಾತ್ರೀಂ=ಸಾಕು ತಾಯಿಯನ್ನು; ಪರಿಪೋಷಣಾಯ=ಕಂಸನನ್ನು ಸಾಕುವುದಕ್ಕೋಸ್ಕರ; ವಿಲಾಸಾಯ= ಕ್ರೀಡೆಗೋಸ್ಕರ; ಪತಗಂ=ಪಕ್ಷಿಯನ್ನು; ವಾತಂ=ತೃಣಾವರ್ತನನ್ನು; ತತ್=ಕಂಸನ; ಭಾರ=ಭಾರದ; ವೋಢಾನ್ ಇವ=ಹೊರುವವರಂತೆ; ತಾನ್=ಆ; ವತ್ಸ=ಕರುವು; ಅನಃ= ಬಂಡಿಯು; ವೃಷ=ವೃಷಭನು; ಧೇನುಕ=ಧೇನುಕನು; ಆದಿ=ಮೊದಲಾದ; ದಿತಿಜಾನ್= ದೈತ್ಯರನ್ನು; ಮಾತುಲಕೃತೇ=ಮಾವನಿಗಾಗಿ; ಅಶ್ವ=ಕುದುರೆಯನ್ನು; ಇಭೌ=ಆನೆಯನ್ನು; ರಜಕಂ=ಮಡಿವಾಳನನ್ನು; ಮಲ್ಲಾನ್ ಚ=ಜಟ್ಟಿಗಳನ್ನೂ; ಸಂಪ್ರೇಷ್ಯ=ಕಳಿಸಿ; ತತ್= ಕಂಸನ; ಸೇನಾಂ=ಸೈನ್ಯವನ್ನು; ಪ್ರೇಷಯತಿ ಸ್ಮ=ಕಳಿಸಿದನು.

ಕೃಷ್ಣನು ಯುದ್ಧಯಜ್ಞದ ಪೂರ್ಣಾಹುತಿಯ ಘಟ್ಟದಲ್ಲಿ ಇದ್ದಾನೆ. ಕೃಷ್ಣನು ದೈತ್ಯರ ಸಂಹಾರವನ್ನು ಆರಂಭಿಸಿದ್ದು ಪೂತನಿಯ ವಧೆಯ ಮೂಲಕ. ಈತ ಕಂಸನ ಸಂಹಾರಕ್ಕಿಂತ ಮೊದಲು ಕೊನೆಯ ಸಂಹಾರ ಆತನ ಸೈನ್ಯದ್ದು. ಇನ್ನು ಮುಂದೆ ಕಂಸನ ನಾಶ. ಇಷ್ಟು ಘಟನೆಯನ್ನು ರಾಜರು ಸುಂದರವಾಗಿ ಚಿತ್ರಿಸುತ್ತಾರೆ.

ಕಂಸನು ದೊಡ್ಡ ರಾಜ. ಆತನನ್ನು ಕೃಷ್ಣನು ಮಹಾನರಕವೆಂಬ ಊರಿಗೆ ಕಳಿಸುವವನಿದ್ದಾನೆ. ಅಲ್ಲಿ ಈತನಿಗೆ ಆಹಾರವನ್ನು ಒದಗಿಸಿ ಪೋಷಿಸುವ ಸಲುವಾಗಿ ಪೂತನಿಯನ್ನು ಮೊದಲು ಕಳಿಸಿದನು. ರಾಜರು ಪ್ರಯಾಣ ಬೆಳೆಸುತ್ತಾರೆ. ಯಾವ ಊರಿಗೆ ಹೋಗುತ್ತಾರೋ ಆ ಊರಿಗೆ ಅಡಿಗೆಯವರು ಮೊದಲೇ ಹೋಗಿ ಅಡಿಗೆಯನ್ನು ಸಿದ್ಧಮಾಡುವಂತೆ. ಭೋಜನದನಂತರ ರಾಜರುಗಳು ವಿಹರಿಸುತ್ತಾರೆ. ವಿಹಾರಕ್ಕೆ ತಂಪಾದ ಗಾಳಿ ಪಕ್ಷಿಗಳನ್ನು ಬಳಸುತ್ತಾರೆ. ಅದಕ್ಕಾಗಿ ಕೃಷ್ಣನು ಮೊದಲೇ ತೃಣಾವರ್ತ ಎಂಬ

ಗಾಳಿರೂಪದ ದೈತ್ಯನನ್ನು ಪಕ್ಷಿರೂಪದ ಬಕಾಸುರನನ್ನೂ ಕಳಿಸಿದ್ದನು. ನರಕದಲ್ಲಿಯೇ ಕಂಸನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗುವ ಪ್ರಸಂಗ ಬರುತ್ತದೆ. ಆಗ ತನಗೆ ಸಂಬಂಧಪಟ್ಟ ವಸ್ತುಗಳನ್ನು ಒಯ್ಯಲು ಒಂದು ಬಂಡಿಯು ಬೇಕು. ಅದಕ್ಕಾಗಿ ಬಂಡಿರೂಪದ ಶಕಟಾಸುರನನ್ನು ಆ ಬಂಡಿಯನ್ನು ಒಯ್ಯಲು ಕರು, ಎತ್ತು, ಕತ್ತೆ ರೂಪದ ಅಸುರರನ್ನೂ ಕಳಿಸಿದನು. ಕಂಸನಿಗೆ ಸಂಚರಿಸಲು ಆನೆ-ಕುದುರೆ ರೂಪದ ದೈತ್ಯರನ್ನೂ ಹಾಗೆಯೇ ಈತನ ಬಟ್ಟೆಗಳನ್ನು ತೊಳೆಯಲು ಮಡಿವಾಳರೂಪದ ಅಸುರನನ್ನೂ, ಈತನ ದೇಹಕ್ಕೆ ತೈಲವನ್ನು ಹಚ್ಚಿ ತಿಕ್ಕುವುದಕ್ಕೋಸ್ಕರ ಮುಷ್ಟಿಕ-ಚಾಣೂರರನ್ನೂ, ಪರಕೀಯರ ದಾಳಿಯನ್ನು ತಪ್ಪಿಸಿ ಆತನಿಗೆ ರಕ್ಷಣೆಯನ್ನು ಕೊಡುವುದಕ್ಕೋಸ್ಕರ ಕೊನೆಗೆ ಒಂದು ದೊಡ್ಡ ಸೈನ್ಯವನ್ನೂ ಕಳಿಸಿದನು. ಕೃಷ್ಣನು ಈ ರೀತಿ ತನ್ನ ಸೋದರಮಾವನನ್ನು ಆದರಿಸಿದನೆಂದು ಲೇವಡಿ ಮಾಡುತ್ತಾರೆ. ಕಂಸನನ್ನು ಒಬ್ಬನನ್ನು ಉಳಿಸಿ ಮತ್ತೆಲ್ಲಾ ಕಂಸನ ಪರಿವಾರವನ್ನು ಕೃಷ್ಣನು ಕೊಂದನು ಎಂದು ಅಬಿಪ್ರಾಯ.

**ಸಂದೇಶ** : ದುಷ್ಟತನ ಇಲ್ಲದಿದ್ದರೆ ಹಿರಿಯರನ್ನು ಆದರಿಸಬೇಕು. ಭಗವದ್ವೇಷಿಗಳನ್ನು ಚಿತ್ರಹಿಂಸೆಯ ಮೂಲಕ ಸಂಹರಿಸಬೇಕು.

**ವಿಸ್ತೀರ್ಣೈಃ ವರಹಾರಚಾಮರಸಿತಛತ್ರಾದಿವಿತ್ತೈಃ ಸಿತಾ**
**ನೀಲಾ ಪ್ರಸ್ತಕಚಾಸಿನೀಲಮಣಿಭಿಃ ಸಾರಂಗಭೂಮಿರ್ಮೃಧೇ ।**
**ರಕ್ತಾ ರಕ್ತಚಯೇನ ಹೈಮಕವಚಾಕಲ್ಪೈಶ್ಚ ಪೀತಾತ್ಮನಃ**
**ನಾಮಾಸೃಕ್ಸರಿದೋಘಮಗ್ನಕುಣಪಾ ಚಕ್ರೇನುಕೂಲಂ ತದಾ ॥ ೫೯ ॥**

ಸಾ=ಆ; ರಂಗಭೂಮಿಃ=ಯುದ್ಧಭೂಮಿಯು; ಮೃಧೇ=ಯುದ್ಧದಲ್ಲಿ; ವಿಸ್ತೀರ್ಣೈಃ=ಹರಡಿದ; ವರ=ಉತ್ತಮವಾದ; ಹಾರ=ಮುತ್ತಿನ ಸರಗಳು; ಚಾಮರ=ಚಾಮರಗಳು; ಸಿತ=ಬಿಳಿಯಾದ; ಛತ್ರ=ಕೊಡೆಯೇ; ಆದಿ=ಮೊದಲಾದ; ವಿತ್ತೈಃ=ದ್ರವ್ಯಗಳಿಂದ; ಸಿತಾ=ಬಿಳಿಯಾಗಿ; ಪ್ರಸ್ತ=ಬಿಚ್ಚಿದ; ಕಚ=ತಲೆಕೂದಲು; ಅಸಿ=ಕತ್ತಿಗಳು; ನೀಲಮಣಿಭಿಃ=ನೀಲಮಣಿಗಳಿಂದ; ನೀಲಾ=ನೀಲವಾಗಿ; ರಕ್ತ=ನೆತ್ತರಿನ; ಚಯೇನ=ಸಮೂಹದಿಂದ; ರಕ್ತಾ=ಕೆಂಪಾದ; ಹೈಮ=ಚಿನ್ನದ; ಕವಚ=ಕವಚಕ್ಕೆ; ಆಕಲ್ಪೈ=ಸಮಾನವಾದ ಆಭರಣಗಳಿಂದ; ಪೀತಾ=ಹಳದಿಯಾಗಿ; ಅಸೃಕ್=ನೆತ್ತರೆಂಬ; ಸರಿತ್=ನೀರಿನ; ಓಘ=ಪ್ರವಾಹದಲ್ಲಿ; ಮಗ್ನ=ಮುಳುಗಿದ; ಕುಣಪಾ=ಹೆಣವುಳ್ಳದ್ದಾಗಿ; ತದಾ=ಆಗ; ಆತ್ಮನ=ತನ್ನ; ನಾಮ=ಹೆಸರನ್ನು; ಅನುಕೂಲಂ=ಸಾರ್ಥಕವನ್ನಾಗಿ; ಚಕ್ರೇ=ಮಾಡಿತು.

ಯುದ್ಧಭೂಮಿಯನ್ನು ರಂಗಭೂಮಿ ಎಂದು ಕರೆಯುತ್ತಾರೆ. ರಂಗಭೂಮಿ ಅಂದರೆ ಬಣ್ಣಬಣ್ಣದ ಭೂಮಿ ಎಂದೂ ಅರ್ಥ ಇದೆ. ಪ್ರಕೃತ ಈ ಅರ್ಥವು ಇಲ್ಲಿ ಚೆನ್ನಾಗಿ ಕೂಡುತ್ತದೆ ಎಂದು ರಾಜರು ವಿವರಿಸುತ್ತಾರೆ -ಯುದ್ಧಕ್ಕೆ ಬಂದ ಸೈನ್ಯವು ನಾನಾರೀತಿಯ ಮುತ್ತಿನ ಹಾರಾದಿಗಳನ್ನು ಧರಿಸಿಕೊಂಡು ಬಂದಿತ್ತು. ಹಾಗೆಯೇ ಸೈನಿಕರಿಗೋ,

ರಥಿಕರಿಗೋ ಚಾಮರದ ವೈಭವವೂ ಇತ್ತು. ರಥಿಕರ ರಥಗಳಲ್ಲಿ ಬಿಳಿಯಾದ ಕೊಡೆಗಳಿದ್ದವು. ಅವುಗಳೆಲ್ಲಾ ಇಲ್ಲಿ ಅಸ್ತವ್ಯಸ್ತವಾಗಿ ಬಿದ್ದಿದ್ದವು. ಇದರಿಂದ ಯುದ್ಧಭೂಮಿಯು ಬಿಳಿಯಾಗಿ ಕಾಣುತ್ತಿತ್ತು. ಸೈನಿಕರ ತಲೆಗಳು ಉರುಳಿ ಕೆಳಗೆ ಬಿದ್ದಿದ್ದವು. ಅವುಗಳ ಕೂದಲುಗಳು ಬಿಚ್ಚಿದ್ದವು. ಕಬ್ಬಿಣದ ಕತ್ತಿಗಳೂ ಭೂಮಿಯಲ್ಲಿ ಬಿದ್ದಿದ್ದವು. ಇಂದ್ರನೀಲಮಣಿಮಯವಾದ ಆಭರಣಗಳು ಚೆಲ್ಲಾಪಿಲ್ಲಿಯಾಗಿದ್ದವು. ಇದರಿಂದ ಆ ಜಾಗವು ನೀಲವಾಗಿ ಕಾಣುತ್ತಿತ್ತು. ದೇಹದಿಂದ ಚೆಲ್ಲಿದ ರಕ್ತದಿಂದ ಕೆಂಪಾಗಿಯೂ ಇತ್ತು. ಚಿನ್ನದ ಕವಚವೇ ಮೊದಲಾದ ಬಂಗಾರದ ಆಭರಣಗಳಿಂದ ಹಳದಿಯಾಗಿ ಶೋಭಿಸುತ್ತಿತ್ತು. ಈ ರೀತಿಯಾಗಿ ರಂಗಭೂಮಿ ಯಾಗಲು ಬೇಕಾದ ಎಲ್ಲಾ ಅನುಕೂಲತೆಗಳೂ ಇತ್ತು. ಆದರೆ ಅಮಂಗಳಗಳಾದ ಹೆಣಗಳು ಅಲ್ಲೇ ಬಿದ್ದಿರುವುದರಿಂದ ಸ್ವಲ್ಪ ತೊಡಕಾಗುತ್ತದೆ. ಈ ತೊಡಕನ್ನು ರಾಜರು ನಿವಾರಿಸುತ್ತಾರೆ –ರಕ್ತಗಳ ಪ್ರವಾಹದಲ್ಲಿ ಹೆಣಗಳು ಮುಳುಗಿವೆ. ಆದ್ದರಿಂದ ಅವುಗಳು ಕಾಣಿಸುವುದಿಲ್ಲ ಎಂದು.

**ಸಂದೇಶ** : ಯೋಗ್ಯತೆ ಹಾಗೂ ದೊಡ್ಡವರ ದಯೆ ಇದ್ದರೆ ಎಂತಹ ಕೆಟ್ಟ ವಾತಾವರಣದಲ್ಲೂ ನಮ್ಮ ಜೀವನವನ್ನು ಸಾರ್ಥಕಪಡಿಸಿಕೊಳ್ಳಬಹುದು.

**ಕೋಪಾಟೋಪವಶೇನ ರಕ್ತನಯನಂ ತಂ ಖಡ್ಗಚರ್ಮೋಲ್ಲಸತ್–**
**ಪಾಣಿಂ ಪಾಪಮಿವೋತ್ಪತಂತಮಮತಂ ಮೂರ್ಧ್ನಿ ಪ್ರಗೃಹ್ಯ ಪ್ರಭುಃ ।**
**ಪೃಥ್ವೀಮೇತ್ಯ ನಿಪಾತ್ಯ ವಿಸ್ತೃತಕಚಂ ತ್ರಸ್ತಂ ಚಕರ್ಷಾಚ್ಯುತಃ**
**ಪ್ರೇಮಪ್ರಾವಿಲಸಾಧುಸಂಗನಯನೈಃ ಸಾನಂದಮಾಲೋಕಿತಃ ॥ ೬೦ ॥**

ಪ್ರಭುಃ=ಸಮರ್ಥನಾದ; ಅಚ್ಯುತಃ=ಕೃಷ್ಣನು; ಕೋಪ=ಸಿಟ್ಟಿನ; ಆಟೋಪ=ಆವೇಶದ; ವಶೇನ=ಕಾರಣದಿಂದ; ರಕ್ತ=ಕೆಂಪಾದ; ನಯನಂ=ಕಣ್ಣುಳ್ಳ; ಖಡ್ಗ=ಕತ್ತಿಯು; ಚರ್ಮ= ಚರ್ಮವು ಇವುಗಳಿಂದ; ಉಲ್ಲಸತ್=ಶೋಭಿಸುವ; ಪಾಣಿಂ=ಕೈವುಳ್ಳ; ಉತ್ಪತಂತಂ= ಸಿಟ್ಟಿನಿಂದ ಕುಣಿಯುತ್ತಿರುವ; ಅಮತಂ=ಅಪ್ರಿಯನಾದ; ಪಾಪಂ ಇವ=ಪಾಪಪುರುಷ ನನ್ನೆಂಬಂತೆ; ಮೂರ್ಧ್ನಿ=ತಲೆಯಲ್ಲಿ; ಪ್ರಗೃಹ್ಯ=ಹಿಡಿದುಕೊಂಡು; ಪೃಥ್ವೀ=ಕೆಳಗೆ; ಏತ್ಯ=ಬಂದು; ವಿಸ್ತೃತ=ಬಿಚ್ಚಿದ; ಕಚಂ=ತಲೆಕೂದಲುಳ್ಳ; ತ್ರಸ್ತಂ=ಉದ್ವಿಗ್ನನಾದ; ತಂ=ಆ ಕಂಸನನ್ನು; ಪ್ರೇಮ=ಪ್ರೀತಿಯಿಂದ; ಪ್ರಾವಿಲ=ಒದ್ದೆಯಾದ; ಸಾಧು=ಸಜ್ಜನರ; ಸಂಘ= ಸಮೂಹದ; ನಯನೈಃ=ಕಣ್ಣುಗಳಿಂದ; ಸಾನಂದಂ=ಸಂತೋಷ ಪೂರ್ವಕವಾಗಿ; ಆಲೋಕಿತಃ=ನೋಡಲ್ಪಟ್ಟವನಾಗಿ; ಚಕರ್ಷ=ಎಳೆದನು.

ತನ್ನವರನ್ನೆಲ್ಲಾ ಕಂಸನು ಕಳಕೊಂಡಿದ್ದಾನೆ. ಸಿಟ್ಟಿನಿಂದ ಆರ್ಭಟಿಸುತ್ತಿದ್ದಾನೆ. ಕಣ್ಣುಗಳು ಬಹಳ ಕೆಂಪಾಗಿವೆ. ಕೃಷ್ಣನ ಜೊತೆ ಕಾಳಗಕ್ಕಾಗಿ ಕೈಯಲ್ಲಿ ಕತ್ತಿಯನ್ನು ಚರ್ಮವನ್ನು ಹಿಡಿದುಕೊಂಡಿದ್ದಾನೆ. ಸಿಟ್ಟಿನಿಂದ ನಡುಗುತ್ತಿದ್ದಾನೆ. ಎತ್ತರದ ಮಂಚದಲ್ಲಿ ಇದ್ದಾನೆ.

ಕೃಷ್ಣನು ಅಲ್ಲಿಗೆ ಜಿಗಿದನು. ಕಂಸನ ತಲೆಕೂದಲಲ್ಲಿ ಹಿಡಿದು ಕೆಳಗೆ ತಳ್ಳಿದನು. ಕಂಸನು ಬಿದ್ದನು. ತಲೆಕೂದಲು ಪೂರಾ ಬಿಚ್ಚಿಹೋಯಿತು. ಈಗ ಬಹಳ ಹೆದರಿದ್ದಾನೆ.

ಕಂಸನ ಈ ಅವಸ್ಥೆಯನ್ನು ಕಂಡಾಗ ಪಾಪಪುರುಷನ ನೆನಪಾಗುತ್ತದೆ ಎಂದು ರಾಜರು ತಿಳಿಸುತ್ತಾರೆ. ನಾವು ಪ್ರತಿನಿತ್ಯ ನಾನಾ ರೀತಿಯ ಪಾಪವನ್ನು ಮಾಡುತ್ತೇವೆ. ಆ ಪಾಪಗಳಿಗೆ ಅಭಿಮಾನಿಯ ಹೆಸರೇ ಪಾಪಪುರುಷ ಎಂದು. ಆತನು ನಮ್ಮ ಮಾನಸಿಕ ಏಕಾಗ್ರತೆಯನ್ನು ತಪ್ಪಿಸುತ್ತಾನೆ. ಆದ್ದರಿಂದ ಜಪ ಆರಂಭಿಸುವುದಕ್ಕಿಂತ ಮೊದಲು ನಮ್ಮ ದೇಹದಿಂದ ಆತನನ್ನು ಹೊರಹಾಕಬೇಕು. ಆತನಿಗೆ ಶಾಸ್ತ್ರವು ಒಂದು ಆಕಾರವನ್ನು ಹೇಳಿದೆ. ಆತನೂ ಕೂಡಾ ಕಂಸನಂತೆ ಕೆಂಪುಕಣ್ಣಿನವ. ಕೈಯಲ್ಲಿ ಇದೇ ರೀತಿ ಆಯುಧವನ್ನು ಹಿಡಿದವನು. ಆತನನ್ನು ನಮ್ಮ ದೇಹದಲ್ಲಿ ಚಿಂತಿಸಬೇಕು. ದೇಹದಲ್ಲಿರುವ ಅಗ್ನಿಯಿಂದ ಆತನನ್ನು ಸುಡಬೇಕು. ಆತನ ಭಸ್ಮವನ್ನು ಮೂಗಿನ ಮೂಲಕ ಹೊರಗೆ ಹಾಕಬೇಕು. ಇದನ್ನೆಲ್ಲಾ ದೇವರೇ ಅಗ್ನಿಯಲ್ಲಿ ಇದ್ದುಕೊಂಡು ಮಾಡುತ್ತಾನೆ. ಕಂಸನಿಂದಾಗಿಯೂ ಸಾತ್ವಿಕರ ಮಾನಸಿಕ ಏಕಾಗ್ರತೆಗೆ ಭಂಗ ಬಂದಿತ್ತು. ಕೃಷ್ಣನು ಅಂತಹ ಕಂಸನನ್ನು ಚೆನ್ನಾಗಿ ಜಗ್ಗಾಡಿದನು.

**<u>ಸಂದೇಶ</u>** : ಸಾತ್ವಿಕರಿಗೆ ಉಪದ್ರವಿಗಳು ತನ್ನ ಬಂಧುಗಳಾದರೂ ಕೃಷ್ಣನು ಅವರನ್ನು ಶಿಕ್ಷಿಸಿಯೇ ಸಿದ್ಧ.

**ಕೃಷ್ಣೋಥೋ ಬಹಿರಾಜಗಾಮ ನಗರಾತ್ ಕಂಸಸ್ಯ ದೇಹಾಭಿಧಾತ್**
**ಚಕ್ಷುಃ ಶ್ರೋತ್ರಮುಖಾಕ್ಷಿಪಾಲನಪರೈಃ ಸ್ವೀಯೈಃ ಸಮೇತಃ ಸುರೈಃ ।**
**ನಷ್ಟಾನಿಷ್ಟಜನಾನ್ನಿರೀಕ್ಷ್ಯ ವಿಮತಂ ದೃಷ್ಟ್ವಾsತಿಪುಷ್ಟಂ ಭಟಾ–**
**ನಂದೋऽಪಿ ಕ್ಷಯಮೇಯಿವಾನ್ ಸ ಚ ಖಲೋ ಹೀನೋಗ್ರಸೇನೋ ಹತಃ ॥ ೬೧ ॥**

ಅಥೋ=ಅನಂತರ; ಕೃಷ್ಣಃ=ಕೃಷ್ಣನು; ಕಂಸಸ್ಯ=ಕಂಸನ; ದೇಹ=ದೇಹ ಎಂದು; ಅಭಿಧಾತ್=ಹೆಸರುಳ್ಳ; ನಗರಾತ್=ಪಟ್ಟಣದಿಂದ; ಚಕ್ಷುಃ=ಕಣ್ಣು; ಶ್ರೋತ್ರ=ಕಿವಿಯು; ಮುಖ ಮೊದಲಾದ; ಅಕ್ಷಿ=ಇಂದ್ರಿಯಗಳ; ಪಾಲನ=ರಕ್ಷಣೆಯಲ್ಲಿ; ಪರೈಃ=ಆಸಕ್ತರಾದ; ಸ್ವೀಯೈಃ= ತನ್ನವರಾದ; ಸುರೈಃ=ದೇವತೆಗಳಿಂದ; ಸಮೇತಃ=ಕೂಡಿದವನಾಗಿ; ಬಹಿಃ= ಹೊರಗೆ; ಆಜಗಾಮ=ಬಂದನು; ಇಷ್ಟಜನಾನ್=ಬಂಧುಗಳನ್ನು; ನಷ್ಟಾನ್=ಸತ್ತದ್ದನ್ನು; ನಿರೀಕ್ಷ್ಯ= ನೋಡಿ; ಅತಿಪುಷ್ಟಂ=ಚೆನ್ನಾಗಿ ಬೆಳೆದ; ವಿಮತಂ=ಶತ್ರುವಾದ ಕೃಷ್ಣನನ್ನು; ದೃಷ್ಟ್ವಾ=ನೋಡಿ; ಭಟ=ಸೇವಕರ; ಆನಂದೋऽಪಿ=ಸಂತೋಷವೂ; ಕ್ಷಯಂ=ನಾಶವನ್ನು; ಏಯಿವಾನ್= ಹೊಂದಿತು; ಹೀನ=ಕೆಟ್ಟ; ಉಗ್ರ=ಉಗ್ರವಾದ; ಸೇನಃ=ಸೈನ್ಯವುಳ್ಳ; ಖಲಃ=ದುಷ್ಟನಾದ ಕಂಸನು; ಹತಃ=ಸತ್ತನು.

ಇದೇ ಸರ್ಗದ 50ನೇ ಶ್ಲೋಕದಲ್ಲಿ ಕಂಸನು ಕೆಲವು ಅಪ್ಪಣೆಗಳನ್ನು ಮಾಡಿದ್ದನು.

ಅದನ್ನು ನಡೆಸಿಕೊಡಲೋ ಎಂಬಂತೆ ಕೃಷ್ಣನು ಕಂಸನ ಬಳಿಗೆ ಬಂದನು ಎಂದು ತಿಳಿಸಿದ್ದರು. ಕೃಷ್ಣನು ಆ ಮಾತುಗಳನ್ನು ನಡೆಸಿಕೊಟ್ಟನು ಎಂದು ಈ ಶ್ಲೋಕದಲ್ಲಿ ತಿಳಿಸುತ್ತಾರೆ.

ಕೃಷ್ಣನು ಕಂಸನ ದೇಹದಿಂದ ಹೊರಗೆ ಬಂದನು. ಆತನ ಜೊತೆಗೆ ಸಮಸ್ತ ಇಂದ್ರಿಯಾಭಿಮಾನಿಗಳೂ ಹೊರಬಂದರು. ಅಭಿಪ್ರಾಯ ಕಂಸನು ಸತ್ತನು ಎಂದು. ಸಾಯುವುದು ಎಂದರೆ ದೇಹದಲ್ಲಿ ಇರುವ ದೇವರ ಒಂದು ರೂಪವು ಹೊರಡುವುದು ತಾನೆ. ಇಂದ್ರಿಯಗಳು ಎಷ್ಟು ಚೆನ್ನಾಗಿದ್ದರೂ ದೇವರು ಹೊರಡುವಾಗ ಸ್ತಬ್ಧವಾಗುವುದು ಸಹಜ. ಕಂಸನ ಎಲ್ಲಾ ಬಂಧುಗಳು ಮಿತ್ರರೂ ಹತರಾದರು. ಇದರಿಂದ ಕೃಷ್ಣನು ಬಹಳ ಸಂತುಷ್ಟನಾದನು. ಆದರೆ ಕಂಸನ ಭಟರು ಬಹಳ ದುಃಖಿತರಾದರು. ಕೆಟ್ಟ ಸೈನ್ಯದಿಂದ ಕೂಡಿದ ಕಂಸನೂ ಹತನಾದನು.

**ಸಂದೇಶ** : ದೇವರು ದುಷ್ಟರ ಮಾತನ್ನೂ ನಡೆಸುತ್ತಾನೆ. ಅದರಿಂದ ಸಜ್ಜನರಿಗೆ ಉಪಕಾರ ಆಗುವುದಾದರೆ ಮಾತ್ರ.

**ಕಂಸೋಂತರ್ವೃತಗರ್ವಪರ್ವತವರಃ ಪೋತಸ್ಯ ಘಾತಾಹತೋ**
**ವಕ್ತ್ರಂ ದರ್ಶಯಿತುಂ ಸುಲಜ್ಜಿತ ಇವ ಪ್ರಾಪೋಗ್ರಮಂಧಂ ತಮಃ ।**
**ಅನ್ಯಃ ಶ್ರೀರಮಣಸ್ಯ ಧಾಮ ಸುಮಹಸ್ತೋಮಂ ಜಗಾಮ ದ್ವಿಷಾ**
**ಯುಕ್ತಂ ಮಾಂ ಹರಿರಗ್ರಹೀತ್ಕರುಣಯೇತ್ಯಾಶ್ರಾವ್ಯ ಭವ್ಯೋತ್ಸವಃ ॥ ೬೨ ॥**

ಅಂತಃ=ಒಳಗೆ; ವೃತ=ಇರುವ; ಗರ್ವ=ಅಹಂಕಾರವೆಂಬ; ಪರ್ವತ ವರಃ=ದೊಡ್ಡ ಪರ್ವತವುಳ್ಳ; ಕಂಸಃ=ಕಂಸನು; ಪೋತಸ್ಯ=ಮಗುವಿನ; ಘಾತ=ಒದೆತದಿಂದ; ಆಹತಃ=ಪೀಡಿತನಾಗಿ; ವಕ್ತ್ರಂ=ಮುಖವನ್ನು; ದರ್ಶಯಿತುಂ=ತೋರಿಸಲು; ಸುಲಜ್ಜಿತ ಇವ=ನಾಚಿದವನಂತೆ; ಉಗ್ರಂ=ಕ್ರೂರವಾದ; ಅಂಧಂತಮಃ=ನರಕವನ್ನು; ಪ್ರಾಪ= ಹೊಂದಿದನು; ದ್ವಿಷಾ=ಶತ್ರುವಿನಿಂದ; ಯುಕ್ತಂ=ಕೂಡಿದ; ಮಾಂ=ನನ್ನನ್ನು; ಹರಿಃ=ಕೃಷ್ಣನು; ಕರುಣಯಾ=ದಯೆಯಿಂದ; ಅಗ್ರಹೀತ್=ಸ್ವೀಕರಿಸಿದನು; ಇತಿ=ಎಂದು; ಆಶ್ರಾವ್ಯ=ಕೇಳಲು ಯೋಗ್ಯವಾದ; ಭವ್ಯ=ಉತ್ತಮವಾದ; ಉತ್ಸವಃ=ನೆಮ್ಮದಿ ಉಳ್ಳ; ಅನ್ಯಃ=ಇನ್ನೊಬ್ಬನು; ಸುಮಹ=ಬಹಳ ಕಾಂತಿಗಳ; ಸ್ತೋಮಂ=ಸಮೂಹವುಳ್ಳ; ಶ್ರೀರಮಣಸ್ಯ=ಲಕ್ಷ್ಮೀಪತಿಯ; ಧಾಮ=ಮನೆಯನ್ನು; ಜಗಾಮ=ಹೊಂದಿದನು.

ತನಗೆ ಹತ್ತುಸಾವಿರ ಆನೆಗಳ ಬಲ ಇದೆ. ನನ್ನನ್ನು ಕೊಲ್ಲುವವರು ಯಾರೂ ಇಲ್ಲ ಎಂದು ಕಂಸನಿಗೆ ಒಳಗಿನಿಂದ ಬಹಳ ಅಹಂಕಾರ ಇತ್ತು. ಇಂತಹ ಕಂಸನು ಇನ್ನೂ ಏಳೂ ತುಂಬದ ಹುಡುಗನಿಂದ ಹತನಾದನು. ಇದರಿಂದ ಕಂಸನಿಗೆ ಬಹಳ ನಾಚಿಕೆ ಯಾಯಿತು. ಯಾರಿಗೂ ಮುಖ ತೋರಿಸದೆ ಸೀದಾ ಹೊರಟು ಹೋದನು. ಎಲ್ಲಿಗೆ

ಅಂದರೆ ಎಲ್ಲಿಗೆ ಹೋದರೆ ಇನ್ನೊಬ್ಬರು ಈತನ ಮುಖವನ್ನು ನೋಡಲು ಸಾಧ್ಯವಾಗುವುದಿಲ್ಲವೋ ಅಲ್ಲಿಗೆ. ಅದೇ ನಿತ್ಯನರಕ. ಅಲ್ಲಿ ಬಹಳ ಕತ್ತಲು ಯಾವಾಗಲೂ ಇರುತ್ತದೆ. ಅಲ್ಲಿ ಒಬ್ಬರ ಮುಖದರ್ಶನ ಇನ್ನೊಬ್ಬರಿಗೆ ಆಗುವುದಿಲ್ಲ. ಕಂಸನ ದೇಹದಲ್ಲಿ ಇನ್ನೊಂದು ಚೇತನ ಇತ್ತು. ಅದೇ ಭೃಗು ಋಷಿ. ಆತನು ಕೃಷ್ಣನ ಮನೆಯಾದ ವೈಕುಂಠವನ್ನು ಪ್ರವೇಶಿಸಿದನು. ಅಲ್ಲಿ ನರಕಕ್ಕೆ ವಿರುದ್ಧವಾಗಿ ಬಹಳ ಬೆಳಕು ಸದಾ ಇರುತ್ತದೆ. ಹೋಗುವಾಗ ಈ ರೀತಿ ಹೇಳಿಕೊಂಡು ಹೋದನು– ನಾನು ಕೃಷ್ಣನ ಶತ್ರುವಿನ ಜೊತೆಗೆ ಇದ್ದವನು. ಆದರೂ ಕೃಷ್ಣನು ದಯೆಯಿಂದ ನನ್ನನ್ನು ತನ್ನ ಲೋಕಕ್ಕೆ ಕಳುಹಿಸುತ್ತಿದ್ದಾನೆ ಎಂದು. ಈ ಮಾತನ್ನು ಕೇಳುವಾಗ ಯಾರಿಗಾದರೂ ಆನಂದ ಆಗಲೇ ಬೇಕು. ಹೇಳುವಾಗ ಸ್ವಯಂ ಭೃಗುವೇ ತುಂಬಾ ಉಲ್ಲಾಸದಲ್ಲಿದ್ದ. ಯಾಕೆಂದರೆ ಆತನು ಈ ಮಾತನ್ನು ಅನುಭವಿಸಿ ಹೇಳುತ್ತಿದ್ದನು.

**<u>ಸಂದೇಶ</u>** : ಅಹಂಕಾರಿಗಳ ಅಂತ್ಯಕಾಲವು ನಾಚಿಕೆಗೇಡಿನದ್ದಾಗಿರುತ್ತದೆ. ಸಾತ್ವಿಕರು ಎಷ್ಟು ಕೆಟ್ಟದ್ದಾಗಿ ವರ್ತಿಸಿದರೂ ದೇವರು ಕ್ಷಮಿಸುತ್ತಾನೆ.

**ಸಂಚೂರ್ಣಿತಾಂಗಾನ್ ಕತಿಚಿತ್ ಸಹತ್ವಾ**
**ಭಿನ್ನಾಂಗಸಂಧೀಂಶ್ಚ ತಥಾ ನ ಕಂಸಮ್ ।**
**ಜಘಾನ ಕಾಯಂ ಪರಿರಭ್ಯ ದೋರ್ಭ್ಯಾಂ**
**ಪತ್ನ್ಯಾ ರುದಂತ್ಯಾ ಇವ ದರ್ಶಯಿಷ್ಯನ್ ॥ ೬೩ ॥**

ಕತಿಚಿತ್=ಕೆಲವರನ್ನು; ಸಂಚೂರ್ಣಿತ=ಪುಡಿಯಾದ; ಅಂಗಾನ್=ಶರೀರವುಳ್ಳವರನ್ನಾಗಿ; ಭಿನ್ನ=ಪುಡಿಯಾದ; ಅಂಗಸಂಧೀನ್ ಚ=ಅವಯವಗಳ ಜೋಡಣೆವುಳ್ಳವರನ್ನಾಗಿಯೂ; ಸಃ=ಕೃಷ್ಣನು; ಹತ್ವಾ=ಕೊಂದು; ಕಾಯಂ=ದೇಹವನ್ನು; ದೋರ್ಭ್ಯಾಂ=ಕೈಗಳಿಂದ; ಪರಿರಭ್ಯ=ಆಲಿಂಗಿಸಿ; ರುದಂತ್ಯಾಃ=ಅಳುವ; ಪತ್ನ್ಯಾಃ=ಪತ್ನಿಗೆ; ದರ್ಶಯಿಷ್ಯನ್ ಇವ=ತೋರಿಸುವವನಂತೆ; ತಥಾ=ಹಾಗೆ; ಕಂಸಂ=ಕಂಸನನ್ನು; ನ ಜಘಾನ=ಕೊಲ್ಲಲಿಲ್ಲ.

ಕಂಸ ಒಬ್ಬನನ್ನು ಹೊರತು ಎಲ್ಲರನ್ನೂ ಕೃಷ್ಣನು ಹೆಣಗಳ ಪರಿಚಯ ಆಗದಂತೆ ಸಂಹರಿಸಿದ್ದನು. ಎಲ್ಲರ ಹೆಣಗಳೂ ಛಿದ್ರಗಳಾಗಿ ಬಿದ್ದಿದ್ದವು. ಅವಯವಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಆದರೆ ಕಂಸನ ದೇಹಕ್ಕೆ ಅಂತಹ ಯಾವ ರೀತಿಯ ದುರವಸ್ಥೆಯನ್ನೂ ದೇವರು ಒದಗಿಸಲಿಲ್ಲ. ದೇಹವು ಛಿದ್ರವಾಗಿ ಬಿದ್ದರೆ ಅದನ್ನು ಆಲಿಂಗಿಸಿ ರೋದಿಸಲು ಅವರ ಪತ್ನಿಯರಿಗೆ ಆಗುವುದಿಲ್ಲ. ಕಂಸನ ಪತ್ನಿಗೆ ಅದು ಸಾಧ್ಯವಾಗಬೇಕು ಎಂಬ ಉದ್ದೇಶದಿಂದ ಕೃಷ್ಣನು ಹೀಗೆ ಮಾಡಿದನು. ಕೃಷ್ಣನ ಉದ್ದೇಶವಾದರೂ ಯಾಕೆ ಹೀಗೆ? –ದುಷ್ಟರ ಕೈಹಿಡಿದರೆ ಹೆಮ್ಮಕ್ಕಳಿಗೆ ಎಂತಹ ಅವಸ್ಥೆ ಒದಗುತ್ತದೆ ಎಂದು ತಿಳಿಸಲು.

__ಸಂದೇಶ__ : ಪತಿಗಳು ಅನ್ಯಾಯ ಮಾಡಿದರೆ ಅದರ ಫಲವನ್ನು ಪತ್ನಿಯರೂ ಸಾರ್ವಜನಿಕವಾಗಿ ಅನುಭವಿಸಬೇಕಾಗುತ್ತದೆ.

**ಯಮಿವೃಂದಮನಶ್ಚಂದ್ರಃ ಶ್ರಮಂ ಪರಿಹರನ್ನಿವ ।**
**ಯಮುನಾಕೂಲಮಗಮದ್ವಿಮಲೀಕರ್ತುಮಂಜಸಾ ॥ ೬೪ ॥**

ಯಮಿ=ಸನ್ಯಾಸಿಗಳ; ವೃಂದ=ಸಮೂಹದ; ಮನಃ=ಮನಸ್ಸಿಗೆ; ಚಂದ್ರಃ= ಚಂದ್ರನಂತಿರುವ ಕೃಷ್ಣನು; ಶ್ರಮಂ=ಆಯಾಸವನ್ನು; ಪರಿಹರನ್ ಇವ=ಕಳೆಯುವವನಂತೆ; ಯಮುನಾ=ಯಮುನೆಯ; ಕೂಲಂ=ತೀರವನ್ನು; ಅಂಜಸಾ=ಚೆನ್ನಾಗಿ; ವಿಮಲೀಕರ್ತುಂ= ಸ್ವಚ್ಛಮಾಡಲು; ಅಗಮತ್=ಹೋದನು.

ಭಾಗವತಾದಿ ಗ್ರಂಥಗಳು ಕೃಷ್ಣನು ಕಂಸನನ್ನು ಕೊಂದು ಆಯಾಸವನ್ನು ಪರಿಹರಿಸಲು ಯಮುನೆಯ ತೀರಕ್ಕೆ ಹೋದನು ಎಂದು ಹೇಳುತ್ತವೆ. ದೇವರಿಗೆ ಎಲ್ಲಿಯ ಆಯಾಸ. ಸನ್ಯಾಸಿಗಳು ಎಂದೂ ಮಾನಸಿಕ ತಾಪಕ್ಕೆ ಒಳಗಾಗುವುದಿಲ್ಲ. ಅಕಸ್ಮಾತ್ ಆದರೂ ಅವರ ಬೇಸರವನ್ನು ಕಳೆಯುವ ಶಕ್ತಿಯು ಈ ಕೃಷ್ಣನಿಗೆ ಇದೆ. ಹಾಗಾದರೆ ಕೃಷ್ಣನು ಯಾಕೆ ಹೋದನು? ಉತ್ತರ– ಈ ಕಂಸನ ಆಡಳಿತದಲ್ಲಿ ಇದ್ದ ಯಮುನೆಯೇ ಸ್ವಯಂ ಅಶುದ್ಧಳಾಗಿದ್ದಳು. ಅವಳನ್ನು ಶುದ್ಧಿಮಾಡುವ ಸಲುವಾಗಿ ಹೋದನು. ಕಸಗುಡಿಸದೆ ಶುದ್ಧ ಮಾಡಿದರೆ ಶುದ್ಧಿಮಾಡಿದ್ದು ವ್ಯರ್ಥವಾಗುತ್ತದೆ. ಅದರಂತೆ ಕಂಸನನ್ನು ಕೊಲ್ಲದೆ ಯಮುನೆಯನ್ನು ಶುದ್ಧ ಮಾಡಿದರೆ ಅದು ಗಜಸ್ನಾನದಂತೆಯೇ ಸರಿ. ಆದ್ದರಿಂದ ಕಂಸನ ಸಂಹಾರದ ಅನಂತರ ಹೋದನು.

__ಸಂದೇಶ__ : ಕೆಟ್ಟ ವಸ್ತುಗಳನ್ನು ಸ್ಪರ್ಶಮಾಡಿದರೆ ನಾವು ಸ್ನಾನಮಾಡಿ ಶುದ್ಧರಾಗಬೇಕು. ತೀರ್ಥಸ್ನಾನ ಮಾಡಿದರೆ ಇನ್ನೂ ಪ್ರಶಸ್ತ.

**ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋಽಯಮೇಕಾದಶಃ ॥ ೬೫ ॥**

**॥ ಇತಿ ಏಕಾದಶಃ ಸರ್ಗಃ ॥**

# ॥ ಅಥ ದ್ವಾದಶ ಸರ್ಗಃ ॥

**ತತಃ ಸದಸ್ಯುಗ್ರಸೇನಮಾಹೂಯ ಮಧುರಾಪತಿಃ ।**
**ಯದೂನಾಮಧಿಪಂ ಚಕ್ರೇ ಮುದಾ ಪ್ರಣತವತ್ಸಲಃ ॥ ೧ ॥**

ತತಃ=ಅನಂತರ; ಪ್ರಣತ=ಸ್ತೋತೃಗಳಲ್ಲಿ; ವತ್ಸಲಃ=ಪ್ರಿಯನಾದ; ಮಧುರಾಪತಿಃ= ಮಧುರೆಯ ಅಧಿಪತಿಯಾದ ಕೃಷ್ಣನು; ಉಗ್ರಸೇನಂ=ಉಗ್ರಸೇನನನ್ನು; ಸದಸಿ=ಸಭೆಯಲ್ಲಿ; ಆಹೂಯ=ಕರೆದು; ಯದೂನಾಂ=ಯಾದವರಿಗೆ; ಅಧಿಪಂ=ರಾಜನನ್ನಾಗಿ; ಮುದಾ= ಸಂತೋಷದಿಂದ; ಚಕ್ರೇ=ಮಾಡಿದನು.

ಕಂಸನನ್ನು ಕೊಂದ ಕೃಷ್ಣನು ತಾನೇ ಸಿಂಹಾಸನವನ್ನು ಏರಲಿಲ್ಲ. 'ಯದುವಂಶಕ್ಕೆ ಸಿಂಹಾಸನ ಇಲ್ಲ' ಎಂಬ ಹಿರಿಯರ ಮಾತಿಗೆ ಬೆಲೆಕೊಡಲು ಹೀಗೆ ಮಾಡಿದನು. ರಾಜ್ಯ ಅರಾಜಕತೆಗೆ ಗುರಿಯಾಗಬಾರದು. ಅದಕ್ಕಾಗಿ ಕಂಸನ ತಂದೆಯಾದ ಉಗ್ರಸೇನನನ್ನು ಮಧುರೆಯ ಅಧಿಪತಿಯನ್ನಾಗಿ ಮಾಡಿದನು. ಉಗ್ರಸೇನನು ಸಹಜವಾಗಿ ಕೃಷ್ಣನ ಭಕ್ತನು. ಸಿಂಹಾಸನಕ್ಕಾಗಿ ಅಲ್ಲ. ಈ ರೀತಿ ಸಹಜ ಭಕ್ತರನ್ನು ಪ್ರೀತಿಸುವ ಕೃಷ್ಣನು ಅವರಿಗೆ ಏನಾದರೂ ಕೊಡುತ್ತಿರುತ್ತಾನೆ. ಆದ್ದರಿಂದ ಉಗ್ರಸೇನನಿಗೆ ಆಧಿಪತ್ಯವನ್ನು ಕೊಟ್ಟನು. ಆ ಸಂದರ್ಭದಲ್ಲಿ ಕೃಷ್ಣನಿಗೆ ಸ್ವಲ್ಪವೂ ಬೇಸರ ಆಗಲಿಲ್ಲ. ಸಂತೋಷದಿಂದಲೇ ಕೊಟ್ಟನು.

**ಸಂದೇಶ** : ದೇವರ ದುಡಿಮೆ ಸದಾ ಪರಾರ್ಥವಾಗಿಯೇ ಇರುತ್ತದೆ.

**ರಾಜ್ಯಂ ಮೇ ತವ ಶಾಸ್ತ್ರಮೇವ ನಿಯಮಾಃ ಸೇನಾ ತಿತಿಕ್ಷಾಂಗನಾ**
**ನಿತ್ಯಂ ಭಕ್ತಿ ವಿರಕ್ತಿದೈನ್ಯಶಮನಜ್ಞಾನಾದಿಲಾಭೋ ಧನಮ್ ।**
**ಮಚ್ಛ್ರೋತ್ರಾಂತಿಕಸಂಗನೇ ತವ ಯಶೋಧಾರೇ ಸ್ಫುರಚ್ಚಾಮರೇ**
**ಛತ್ರಂ ಮೂರ್ಧ್ನಿ ಕೃತಂ ಭವತಾಪಹರಂ ಹಸ್ತಾರವಿಂದಂ ತವ ॥ ೨ ॥**

ತವ=ನಿನ್ನ; ಶಾಸ್ತ್ರಂ ಏವ=ಶಾಸ್ತ್ರವೇ; ಮೇ=ನನಗೆ; ರಾಜ್ಯಂ=ರಾಜ್ಯವು; ನಿಯಮಾಃ= ವ್ರತಗಳು; ಸೇನಾ=ಸೈನ್ಯವು; ತಿತಿಕ್ಷಾ=ಸಹನೆಯು; ಅಂಗನಾ=ಪತ್ನಿಯು; ನಿತ್ಯಂ= ಯಾವಾಗಲೂ; ಭಕ್ತಿ=ಭಕ್ತಿಯು; ವಿರಕ್ತಿ=ವೈರಾಗ್ಯವು; ದೈನ್ಯ=ದೀನತ್ವವು; ಶಮನ= ಕಾಂತಿಯು; ಜ್ಞಾನ=ಜ್ಞಾನವು; ಆದಿ=ಮೊದಲಾದ; ಲಾಭಃ=ಲಾಭವು; ಧನಂ=ಸಂಪತ್ತು; ಮತ್=ನನ್ನ; ಶ್ರೋತ್ರ=ಕಿವಿಗಳಿಗೆ; ಅಂತಿಕ=ಸಮೀಪದಲ್ಲಿ; ಸಂಗತೇ=ಸಂಬದ್ಧವಾದ; ತವ=ನಿನ್ನ; ಯಶೋ=ಕೀರ್ತಿಗಳ; ಧಾರೇ=ಧಾರೆಯು; ಸ್ಫುರತೌ=ಶೋಭಿಸುವ; ಚಾಮರೇ= ಚಾಮರವು; ಭವ=ಸಂಸಾರದ; ತಾಪ=ದುಃಖವನ್ನು; ಹರಂ=ಪರಿಹರಿಸುವ; ತವ=ನಿನ್ನ;

ಹಸ್ತ=ಕೈ ಎಂಬ; ಅರವಿಂದಂ=ತಾವರೆಯು; ಮೂರ್ಧ್ನಿ=ತಲೆಯಲ್ಲಿ; ಕೃತಂ=ಮಾಡಲ್ಪಟ್ಟ; ಛತ್ರಂ=ಕೊಡೆಯು.

ಜಡವಾದ ರಾಜ್ಯದ ಆಧಿಪತ್ಯವನ್ನು ಒಪ್ಪದ ಉಗ್ರಸೇನನು ಕೃಷ್ಣನನ್ನು ಪ್ರಾರ್ಥಿಸುತ್ತಾನೆ– ಕೃಷ್ಣ, ಎನಗೆ ಈ ಲೌಕಿಕ ಸಾಮ್ರಾಜ್ಯ ಬೇಡ. ಈ ರಾಜ್ಯದಲ್ಲಿ ಯಾವ ಒಳ್ಳೆಯ ಗುಣಗಳೂ ಇಲ್ಲ. ನಿನ್ನ ಗುಣಗಳನ್ನು ಪ್ರತಿಪಾದಿಸುವ ವೇದಾಂತ ಸಾಮ್ರಾಜ್ಯವನ್ನು ಎನಗೆ ಕೊಡು. ಲೌಕಿಕ ರಾಜರೂ ಕೂಡಾ ವೇದಾಂತಿಗಳ ಮುಂದೆ ತಲೆಬಾಗುತ್ತಾರೆ. ಈ ರಾಜ್ಯದಿಂದ ಉಭಯಲೋಕದಲ್ಲಿಯೂ ಆದರ ಸಿಗುತ್ತದೆ. ಹಾಗೆಯೇ ಈ ನಶ್ವರ ಸೈನ್ಯದಿಂದ ನಮ್ಮ ರಾಜ್ಯದ ಅಭಿವೃದ್ಧಿಯು ನಿಶ್ಚಿತವಲ್ಲ. ಕೆಲವೊಮ್ಮೆ ನಮ್ಮ ಸೈನ್ಯಕ್ಕೇ ಪರಾಜಯವಾಗಬಹುದು. ಆದ್ದರಿಂದ ಏಕಾದಶ್ಯಾದಿ ವ್ರತಗಳೆಂಬ ಸೈನ್ಯವನ್ನು ಎನಗೆ ಒದಗಿಸು. ಈ ವ್ರತಗಳನ್ನು ಮಾಡಿದರೆ ಅಂತಃಕರಣಶುದ್ಧಿಯಾಗುತ್ತದೆ. ಶುದ್ಧಾಂತಃ ಕರಣದಿಂದ ದೇವರ ಗುಣಗಳನ್ನು ಹೆಚ್ಚು ಹೆಚ್ಚು ಅನುಸಂಧಾನ ಮಾಡಲು ಆಗುತ್ತದೆ. ಇದು ನಿಶ್ಚಿತ.

ನಶ್ವರವಾದ ಈ ಆಸ್ತಿ, ಚಿನ್ನ, ಧನ ಎಂಬ ಸಂಪತ್ತು ಬೇಡ. ಇವುಗಳಿಂದ ತಾತ್ಕಾಲಿಕವಾದ ದಾರಿದ್ರ್ಯಗಳು ಹೋಗಬಹುದು. ಈ ಸಂಪತ್ತು ಇದ್ದರೆ ಕಳ್ಳಕಾಕರಿಂದ ಭಯ ತಪ್ಪಿದ್ದಲ್ಲ. ಇದರಿಂದ ಮಾನಸಿಕ ನೆಮ್ಮದಿಯೂ ಇಲ್ಲ ಎಂದಾಗುತ್ತದೆ. ಆದ್ದರಿಂದ ನನಗೆ ಬೇಕಾದ ಸಂಪತ್ತು ಅಂದರೆ ನಿನ್ನಲ್ಲಿ ಭಕ್ತಿ, ಅನ್ಯತ್ರ ವಿರಕ್ತಿ. ಹಾಗೆಯೇ ನಿನ್ನ ತಿಳುವಳಿಕೆ. ನಿನ್ನ ತಿಳುವಳಿಕೆ ಇದ್ದರೆ ಇನ್ನೊಬ್ಬರ ಮುಂದೆ ಕೈ ಒಡ್ಡುವ ಪ್ರಸಂಗ ಬರುವುದಿಲ್ಲ. ಯಾರ ಭಯವೂ ಇಲ್ಲ. ನನಗೆ ಜೀವನದಲ್ಲಿ ತಾಳ್ಮೆ ಎಂಬ ಪತ್ನಿಯನ್ನು ಒದಗಿಸು. ಪತ್ನಿಯಿಂದ ಸುಖ ಸಿಗುವಂತೆ ತಾಳ್ಮೆ ಉಳ್ಳ ಜನರು ಜೀವನದಲ್ಲಿ ನೆಮ್ಮದಿಯಿಂದ ಇರುತ್ತಾರೆ. ನಿನ್ನ ಕಥಾಶ್ರವಣವು ಸದಾ ಆಗುತ್ತಿರುವುದೇ ಎನಗೆ ಚಾಮರದ ಗಾಳಿ. ಅಕ್ಕಪಕ್ಕದಲ್ಲಿ ಇಬ್ಬರು ನಿಂತುಕೊಂಡು ಚಾಮರಗಳನ್ನು ಬೀಸುತ್ತಾರೆ. ಅದಕ್ಕಿಂತ ಇಬ್ಬರು ಅತ್ತಿತ್ತ ಇದ್ದು ಸದಾ ನಿನ್ನ ಕಥಾಶ್ರವಣ ಮಾಡಿಸಿದರೆ ಅದೇ ಒಂದು ನಿಜವಾದ ಚಾಮರಸೇವೆ. ನಿನ್ನ ಹಸ್ತಕಮಲವು ಸದಾ ಎನ್ನ ಶಿರದಲ್ಲಿ ಇರಲಿ. ಇದುವೇ ಎನಗೆ ಒಂದು ದೊಡ್ಡ ಕೊಡೆ. ಲೌಕಿಕ ಕೊಡೆಗಳ ಅಡಿಯಲ್ಲಿ ಇದ್ದರೆ ದೈಹಿಕವಾದ ಸೂರ್ಯನ ತಾಪ ಸ್ವಲ್ಪ ಕಡಿಮೆಯಾಗಬಹುದು. ಆದರೆ ಆಂತರಿಕ ಸಾಂಸಾರಿಕ ತಾಪಗಳು ಕಮ್ಮಿ ಆಗದು. ಅದಕ್ಕಾಗಿ ನಿನ್ನ ಹಸ್ತಕಮಲವೇ ಎನಗೆ ಕೊಡೆಯಾಗಲಿ.

**ತ್ವತ್ಕ್ಷೇತ್ರಂ ಮಮ ದುರ್ಗಮಾರ್ಯಕರುಣಾ ವರ್ಮ ತ್ವದಂಘ್ರಿಧ್ವಜಾ–**
**ಸಕ್ತ ಸೌಮ್ಯ ಮನೋರಥೋ ಮಮ ರಥಶ್ಛಂದಾಸ್ಯಮಂದಾಹಯಾಃ ।**
**ಪ್ರಾಣಃ ಸಾರಥಿರಾಯುಧಂ ತ್ವದಭಿಧಾ ಜೇಯಃ ಕಲಿಸ್ತದ್ಭಟಾಃ**
**ಷಟ್ ತೇಷಾಂ ನಗರೀ ಚ ಸಂಸ್ಕೃತಿರಥೋ ಲಭ್ಯಾ ವಿಮುಕ್ತಿಃ ಪುರೀ ॥ ೩ ॥**

ತ್ವತ್=ನಿನ್ನ; ಕ್ಷೇತ್ರಂ=ಕ್ಷೇತ್ರವು; ಮಮ=ನನಗೆ; ದುರ್ಗಂ=ದುರ್ಗವು; ಆರ್ಯ=ಗುರು

ಗಳ; ಕರುಣಾ=ದಯೆಯು; ವರ್ಮ=ಕವಚವು; ಸೌಮ್ಯ=ಶಾಂತನೇ; ತ್ವತ್=ನಿನ್ನ; ಅಂಘ್ರಿ= ಪಾದದ ಧ್ವಜದಲ್ಲಿ; ಆಸಕ್ತ=ಸಂಬದ್ಧವಾದ; ಮನೋರಥಃ=ಮನೋರಥವು; ಮಮ=ನನಗೆ; ರಥಃ=ರಥವು; ಛಂದಾಂಸಿ=ವೇದಗಳು; ಅಮಂದಾಃ=ಚುರುಕಾದ; ಹಯಾಃ=ಕುದುರೆಗಳು; ಪ್ರಾಣಃ=ಮುಖ್ಯಪ್ರಾಣನು; ಸಾರಥಿಃ=ಸಾರಥಿಯು; ತ್ವತ್=ನಿನ್ನ; ಅಭಿಧಾ=ನಾಮವು; ಆಯುಧಂ=ಆಯುಧವು; ಕಲಿಃ=ಕಲಿಯು; ಷಟ್=ಆರು; ತತ್=ಅವನ; ಭಟಾಃ=ಸೇವಕರು; ತೇಷಾಂ=ಅವರ; ನಗರೀ=ಪಟ್ಟಣವಾದ; ಸಂಸೃತಿಃ=ಸಂಸಾರವು; ಜೇಯಃ=ಗೆಲ್ಲಲ್ಪಡ ಬೇಕು; ಅಥೋ=ಅನಂತರ; ವಿಮುಕ್ತಿಃ=ಮೋಕ್ಷವೆಂಬ; ಪುರೀ=ಪಟ್ಟಣವು; ಲಭ್ಯಾ= ಹೊಂದಲ್ಪಡಬೇಕು.

ರಾಜ್ಯಕ್ಕೆ ದುರ್ಗಗಳು ಇರುತ್ತವೆ. ಶತ್ರುಗಳು ಅದನ್ನು ದಾಟಿಕೊಂಡು ರಾಜ್ಯವನ್ನು ಪ್ರವೇಶಿಸುವುದು ಅಸಾಧ್ಯವಾಗುತ್ತದೆ. ಆದರೂ ಕೆಲವೊಮ್ಮೆ ಪ್ರವೇಶಿಸುತ್ತಾರೆ. ತೀರ್ಥಕ್ಷೇತ್ರಗಳೆಂಬ ದುರ್ಗಗಳನ್ನು ಆಶ್ರಯಿಸಿ ಅಧ್ಯಯನವೆಂಬ ರಾಜ್ಯವನ್ನು ಆಳುತ್ತಿದ್ದರೆ ಯಾವ ಶತ್ರುಗಳೂ ಎಂದೂ ಪ್ರವೇಶಿಸುವುದಿಲ್ಲ. ಶತ್ರುಗಳ ಬಾಣ ತಾಗದಂತೆ ರಾಜರುಗಳಿಗೆ ಕವಚ ಇರುತ್ತದೆ. ಗುರುಗಳ ಆಶೀರ್ವಾದವೇ ಒಂದು ಭದ್ರವಾದ ಕವಚ. ಪ್ರತಿಯೊಂದು ಕಾರ್ಯಕ್ಕೂ ಗುರುಗಳ ಆಶೀರ್ವಾದ ಬೇಕು. ಆಗ ಯಾವ ಕಾಮಾದಿಗಳೂ ಉಪದ್ರವ ಮಾಡುವುದಿಲ್ಲ. ಮನೋರಥವೇ ರಥವು. ಮನೋರಥ ಏನೆಂದರೆ ಸದಾ ಕೃಷ್ಣನ ಪಾದದ ಧ್ಯಾನ. ಆಗ ರಥಕ್ಕೆ ಒಂದು ಧ್ವಜವನ್ನು ನೆಟ್ಟಂತೆಯೂ ಆಗುತ್ತದೆ. ರಥ ಎಂದಮೇಲೆ ಅದಕ್ಕೊಂದು ಧ್ವಜ ಬೇಕು ತಾನೆ. ಕೃಷ್ಣನ ಪಾದದಲ್ಲಿ ಧ್ವಜದ ಚಿಹ್ನೆ ಇದೆ. ಮನಸ್ಸಿನಿಂದ ಪಾದದ ಧ್ಯಾನ ಮಾಡುವಾಗ ಪಾದದಲ್ಲಿದ್ದ ಧ್ವಜದ ಸಂಬಂಧ ಮನೋರಥಕ್ಕೆ ಆಗುತ್ತದೆ. ಈ ರಥಕ್ಕೆ ನಾಲ್ಕು ವೇದಗಳೇ ಕುದುರೆಗಳಂತೆ. ಇವುಗಳು ಎಂದೂ ಜಾಡ್ಯವುಳ್ಳವುಗಳಲ್ಲ. ಲೌಕಿಕರಥದ ಕುದುರೆಗಳು ಅಡ್ಡದಾರಿಯಲ್ಲಿಯೂ ರಥವನ್ನು ಎಳೆಯುತ್ತವೆ. ಆದರೆ ವೇದಗಳು ಜೀವರ ಉದ್ಧಾರಕ್ಕೇ ಇರುತಕ್ಕವುಗಳು. ಎಂದೂ ಮನೋರಥವನ್ನು ಅಡ್ಡದಾರಿಯಲ್ಲಿ ಎಳೆಯುವುದಿಲ್ಲ. ರಥಿಕನಾದ ಜೀವನ ಮನಸ್ಸಿಗೆ ಸರಿಯಾದ ತಿಳುವಳಿಕೆಯನ್ನು ಕೊಟ್ಟು ಈತನನ್ನು ಕರೆದುಕೊಂಡು ಹೋಗುತ್ತವೆ. ಈ ಮನೋರಥಕ್ಕೆ ಮುಖ್ಯಪ್ರಾಣನೇ ಸಾರಥಿಯಾಗಿರಲಿ. ಕುದುರೆಗಳು ಸದಾ ಚಟುವಟಿಕೆಯಲ್ಲಿ ಇರುವಂತೆ ಮಾಡುವುದು ಸಾರಥಿಯ ಕೆಲಸ. ಲೌಕಿಕ ಕುದುರೆಗಳು ಕೆಲವೊಮ್ಮೆ ಸಾರಥಿಯ ನಿಯಂತ್ರಣವನ್ನು ಮೀರಬಹುದು. ಆದರೆ ವೇದಗಳು ನಮಗೆ ಉಪಲಬ್ಧವಿರುವಷ್ಟು ವಾಯುದೇವರ ಹಿಡಿತದಲ್ಲಿ ಇದೆ. ಅದಕ್ಕೆ ಭಾಷ್ಯಾದಿಗಳನ್ನು ಬರೆದು ಅದರ ಅಭಿಪ್ರಾಯವನ್ನು ಒಳ್ಳೆಯ ರೀತಿಯಲ್ಲಿ ತಿಳಿಸುತ್ತಾರೆ. ರಥಿಕನಿಗೆ ಆಯುಧವು ಭಗವಂತನ ನಾಮಗಳು. ಅಚ್ಯುತ, ಅನಂತಾದಿ ನಾಮಗಳ ಉಚ್ಚಾರಣೆಯಿಂದ ಎಲ್ಲಾ ಪಾಪಗಳೂ ನಾಶವಾಗುತ್ತವೆ. ಈ ಪಾಪಗಳಿಗೆ ಮುಖ್ಯ ಅಭಿಮಾನಿ ಕಲಿ. ಪಾಪಮಾಡಲು ಕಾರಣ ಕಾಮಕ್ರೋಧಾದಿಗಳು ಆರು ಮಂದಿ. ಇವರು ಕಲಿಯ ಸೈನ್ಯ. ಶತ್ರುಗಳ ನಾಶಕ್ಕೆ

ನಿರಂತರ ಹೋರಾಟ ಅಗತ್ಯ. ಅದೇ ರೀತಿ ತೈಲಧಾರೆಯಂತೆ ಹರಿಸ್ಮರಣೆ ನಿರಂತರ ನಡೆಯುತ್ತಿದ್ದರೆ ಪಾಪಗಳು ನಷ್ಟವಾಗುತ್ತವೆ. ಕಲಿಯ ಸಾಮ್ರಾಜ್ಯ ಈ ಸಂಸಾರ. ಇದೂ ನಷ್ಟವಾಗುತ್ತದೆ. ಮೋಕ್ಷವೆಂಬ ಶಾಶ್ವತವಾದ ಊರು ನಮಗೆ ಸಿಗುತ್ತದೆ.

**ಸಂದೇಶ** : ಸಂಸಾರದಿಂದ ಬಿಡುಗಡೆ ಹೊಂದಿ ಮೋಕ್ಷವನ್ನು ಪಡೆಯಲು ಕೇವಲ ಹರಿಸರ್ವೋತ್ತಮ ಎಂಬ ತಿಳುವಳಿಕೆ ಸಾಲದು. ಈ ಎರಡು ಶ್ಲೋಕಗಳಲ್ಲಿ ಹೇಳಿದ ಎಲ್ಲಾ ಕ್ರಮಗಳೂ ಬೇಕು.

**ಯಥಾ ತ್ವಂ ಸತತಂ ಪೂರ್ಣಃ ಸಾಮ್ರಾಜ್ಯಂ ನೇಚ್ಛಸಿ ಪ್ರಭೋ ।**
**ತಥಾ ತ್ವತ್ಸೇವಯಾ ಪೂರ್ಣಾಃ ವಯಮಪ್ಯಬ್ಜಲೋಚನ ॥ ೪ ॥**

ಪ್ರಭೋ=ಕೃಷ್ಣ; ಯಥಾ=ಹೇಗೆ; ಸತತಂ=ಯಾವಾಗಲೂ; ಪೂರ್ಣಃ=ತುಂಬಿದ; ತ್ವಂ= ನೀನು; ಸಾಮ್ರಾಜ್ಯಂ=ರಾಜ್ಯವನ್ನು; ನ ಇಚ್ಛಸಿ=ಇಚ್ಛಿಸುವುದಿಲ್ಲವೋ; ತಥಾ=ಹಾಗೆಯೇ; ತ್ವತ್=ನಿನ್ನ; ಸೇವಯಾ=ಸೇವೆಯಿಂದ; ಪೂರ್ಣಾಃ=ತುಂಬಿದ; ವಯಂ ಅಪಿ=ನಾವೂ ಕೂಡಾ; ಅಬ್ಜ=ಕಮಲದಂತೆ; ಲೋಚನ=ಕಣ್ಣುಳ್ಳ ಕೃಷ್ಣನೇ; ನ ಇಚ್ಛಾಮಃ=ಇಚ್ಛಿಸುವುದಿಲ್ಲ.

ಕೃಷ್ಣ, ನೀನು ಕಮಲದಂತೆ ಕಣ್ಣು ಉಳ್ಳವನು. ಕಮಲವು ನೀರಲ್ಲಿಯೇ ಇರುವುದು. ನೀರನ್ನು ತನ್ನಲ್ಲಿ ಅಂಟಿಸಿಕೊಳ್ಳುವುದಿಲ್ಲ. ಅದೇ ರೀತಿ ನೀನು ಎಲ್ಲಾ ಕಡೆ ಇರುವವನು. ಆದರೂ ಯಾವುದನ್ನೂ ಅಂಟಿಸಿಕೊಳ್ಳದಿರುವ ಶಕ್ತಿ ಉಳ್ಳವನು. ನೀನು ಸರ್ವತೋಮುಖ ವಾಗಿ ಅಭಿವೃದ್ಧನು. ಆದ್ದರಿಂದ ನೀನು ಯಾವ ಕಾಲ, ದೇಶಗಳಲ್ಲಿಯೂ ಯಾವುದನ್ನೂ ಅಪೇಕ್ಷಿಸುವವನಲ್ಲ. ಆದ್ದರಿಂದ ನೀನು ಈ ಮಧುರೆಯ ಆಧಿಪತ್ಯವನ್ನು ಇಚ್ಛಿಸುವುದಿಲ್ಲ. ಅದೇ ರೀತಿ ನಾವು ನಿನ್ನ ಸೇವೆಯಿಂದಲೇ ಸದಾ ತೃಪ್ತರು. ನಮಗೆ ಯಾವುದರ ಕೊರತೆಯೂ ಇಲ್ಲ. ಆದ್ದರಿಂದ ನಮಗೂ ಈ ರಾಜ್ಯವು ಬೇಡ.

**ಸಂದೇಶ** : ದೇವರ ಸೇವೆಯ ರುಚಿ ಕಂಡವರು ಇತರತ್ರ ವಿರಕ್ತರಾಗುತ್ತಾರೆ.

**ಯೇ ತ್ವಾಂ ಶಾಸ್ತ್ರವಿಚಾರವಿಸ್ತೃತಧಿಯಃ ಶ್ರೇಯಸ್ಕರಂ ಶ್ರೀಕರಂ**
**ಸೇವಂತೇ ಪುಲಕಾಂಕಿತಾಂಗಮುದಿತ ಪ್ರೇಮಾಶ್ರುಧಾರಾಧರಾಃ ।**
**ತೇಷಾಂ ನೈಹಿಕಸಂಪದಸ್ತಿ ವಿದುಷಾಂ ಇತ್ಯಜ್ಞಗೀತಾಂ ಕಥಾಂ**
**ನಾಥೋನ್ಮೂಲಯಿತುಂ ಕರೋಮಿ ಗದಿತಂ ನ ಸ್ಯಾನ್ಮದೋ ಮೇ ಯದಿ॥ ೫ ॥**

ಶಾಸ್ತ್ರ=ಶಾಸ್ತ್ರದ; ವಿಚಾರ=ವಿಮರ್ಶೆಯಿಂದ; ವಿಸ್ತೃತ=ವಿಸ್ತಾರವಾದ; ಧಿಯಃ= ಬುದ್ಧಿವುಳ್ಳ; ಯೇ=ಯಾರು; ಪುಲಕ=ರೋಮಾಂಚನದಿಂದ; ಅಂಕಿತ=ಕೂಡಿದ; ಅಂಗಂ= ಶರೀರವುಳ್ಳವರಾಗಿ; ಉದಿತ=ಉಂಟಾದ; ಪ್ರೇಮ=ಪ್ರೀತಿಯ; ಅಶ್ರು=ಕಣ್ಣೀರಿನ; ಧಾರಾ= ಧಾರೆಯನ್ನು; ಧರಾಃ=ಧರಿಸಿದವರಾಗಿ; ಶ್ರೇಯಸ್ಕರಂ=ಮೋಕ್ಷವನ್ನು ಕೊಡುವ;

ಶ್ರೀಕರಂ=ಲೌಕಿಕ ಸಂಪತ್ತನ್ನು ಕೊಡುವ; ತ್ವಾಂ=ನಿನ್ನನ್ನು; ಸೇವಂತೇ=ಸೇವಿಸುತ್ತಾರೋ; ತೇಷಾಂ=ಅಂತಹ; ವಿದುಷಾಂ=ಜ್ಞಾನಿಗಳಿಗೆ; ಐಹಿಕ=ಈ ಲೋಕದ; ಸಂಪತ್=ಸಂಪತ್ತು; ನಾಸ್ತಿ=ಇಲ್ಲ; ಇತಿ=ಎಂದು; ಅಜ್ಞ=ಅಜ್ಞಾನಿಗಳಿಂದ; ಗೀತಾಂ=ಹೇಳಲ್ಪಡುವ; ಕಥಾಂ= ಮಾತನ್ನು; ಉನ್ಮೂಲಯಿತುಂ=ಮುರಿಯಲು; ನಾಥ=ಒಡೆಯನೇ; ಗದಿತಂ=ನಿನ್ನ ಮಾತನ್ನು; ಕರೋಮಿ=ಮಾಡುತ್ತೇನೆ; ಯದಿ=ಒಂದುವೇಳೆ; ಮೇ=ನನಗೆ; ಮದಃ= ಅಹಂಕಾರವು; ನ ಸ್ಯಾತ್=ಬಾರದಿದ್ದರೆ.

ಕೃಷ್ಣ, ಶಾಸ್ತ್ರದಲ್ಲಿ ಒಂದು ಮಾತು ಇದೆ. 'ಯಸ್ಯ ಅನುಗ್ರಹಂ ಇಚ್ಛಾಮಿ ತಸ್ಯ ವಿತ್ತಂ ಹರಾಮಿ ಅಹಂ' –ಯಾರನ್ನು ಅನುಗ್ರಹಿಸಲು ಇಚ್ಛಿಸುವಿಯೋ ಅವರ ಸಂಪತ್ತನ್ನು ಕಸಿಯುವಿ. ಅವರನ್ನು ದರಿದ್ರರನ್ನಾಗಿ ಮಾಡುವಿ ಎಂದು. ನಿನ್ನ ಅನುಗ್ರಹಕ್ಕೆ ಪಾತ್ರರಾಗಬೇಕಾದವರು ಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸ ಮಾಡಿರಬೇಕು. ಹೃದಯ ವೈಶಾಲ್ಯವುಳ್ಳವರಾಗಬೇಕು. ದೇವರ ಗುಣಗಳನ್ನು ಮೆಲುಕುಹಾಕುವಾಗ ಮೈರೋಮಾಂಚನ ಗೊಂಡಿರಬೇಕು. ತಮಗೆ ಅರಿವಿಲ್ಲದಂತೆಯೇ ಕಣ್ಣುಗಳಲ್ಲಿ ಆನಂದಬಾಷ್ಪವು ಧಾರಾಕಾರವಾಗಿ ಸುರಿಯುತ್ತಿರಬೇಕು. ಐಹಿಕ ಆಮುಷ್ಮಿಕ ಸಂಪತ್ತನ್ನು ಕೊಡುವವನು ನೀನೇ ಎಂದು ತಿಳಿದು ನಿನ್ನನ್ನು ಸೇವಿಸುವವರು ಆಗಬೇಕು. ಈ ರೀತಿ ಆಧ್ಯಾತ್ಮಿಕ ಶ್ರೀಮಂತರು ಲೌಕಿಕವಾಗಿ ಪ್ರಾಯಃ ದರಿದ್ರರಾಗಿರುತ್ತಾರೆ. ಇದನ್ನು ನೋಡಿದ ಅಜ್ಞಾನಿಗಳು ಇದಕ್ಕೆ ತುಪ್ಪ ಸುರಿದಂತೆ ತಾವು ಪ್ರಚಾರವನ್ನೂ ಮಾಡುತ್ತಾರೆ –ಜ್ಞಾನಿಗಳಿಗೆ ದಾರಿದ್ರ್ಯ ತಪ್ಪಿದ್ದಲ್ಲ. ಆದ್ದರಿಂದ ಯಾರೂ ಶಾಸ್ತ್ರ ಓದಬೇಡಿ ಎಂದು. ಈ ಮಾತನ್ನು ಸುಳ್ಳು ಮಾಡಬೇಕಿದೆ. ಅದಕ್ಕಾಗಿ 'ಮಧುರೆಯ ಅಧಿಪತಿಯಾಗು' ಎಂಬ ನಿನ್ನ ಮಾತನ್ನು ನಡೆಸಿಕೊಡುವೆನು. ಈ ಅಧಿಕಾರದಿಂದ ಎನಗೆ ಅಹಂಕಾರ ಬರಬಾರದು. ಬರುವುದಾದರೆ ಎನಗೆ ಈ ರಾಜ್ಯ ಬೇಡ.

**ಸಂದೇಶ** : ಶಾಶ್ವತ ಸಂಪತ್ತಿನ ಪ್ರಾಪ್ತಿಗೆ ನಶ್ವರ ಸಂಪತ್ತು ಅಡ್ಡಿಯಾಗುತ್ತದೆ. ಆದ್ದರಿಂದ ದೇವರು ತನ್ನ ಭಕ್ತರ ಹಿತದೃಷ್ಟಿಯಿಂದ ನಶ್ವರಸಂಪತ್ತನ್ನು ಕೀಳುತ್ತಾನೆ.

**ಉಗ್ರಸೇನಂ ಯದುಪತಿಂ ಚಕ್ರೇ ಚಕ್ರಧರಃ ಕಿಲ ।**
**ಯದುಮಾತ್ರಾಧಿಪತ್ಯೇನ ತಸ್ಯ ವಿಶ್ವೇಶ್ವರಸ್ಯ ಕಿಮ್ ॥ ೬ ॥**

ಚಕ್ರ=ಚಕ್ರವನ್ನು; ಧರಃ=ಧರಿಸಿದ ಕೃಷ್ಣನು; ಉಗ್ರಸೇನಂ=ಉಗ್ರಸೇನನನ್ನು; ಯದುಪತಿಂ=ಯದುಗಳಿಗೆ ಪತಿಯನ್ನಾಗಿ; ಚಕ್ರೇ ಕಿಲ=ಮಾಡಿದನಷ್ಟೇ; ವಿಶ್ವ=ಜಗತ್ತಿಗೇ; ಈಶ್ವರಸ್ಯ=ಒಡೆಯನಾದ; ತಸ್ಯ=ಕೃಷ್ಣನಿಗೆ; ಯದುಮಾತ್ರ=ಕೇವಲ ಯದುಗಳಿಗೆ; ಆಧಿಪತ್ಯೇನ=ಒಡೆತನದಿಂದ; ಕಿಂ=ಏನು ಲಾಭವು?

ಕೃಷ್ಣನು ಮಧುರೆಯ ಸಿಂಹಾಸನದಲ್ಲಿ ಉಗ್ರಸೇನನನ್ನು ಕುಳ್ಳಿರಿಸಿ ಮಧುರೆಯ

ಅಧಿಪತಿಯನ್ನಾಗಿ ಮಾಡಿದನು. ಕೃಷ್ಣನೇ ಯಾಕೆ ಸಿಂಹಾಸನದಲ್ಲಿ ಕೂತಿಲ್ಲ? ರಾಜರು ಉತ್ತರ ಕೊಡುತ್ತಾರೆ– ಕೃಷ್ಣನು ಹದಿನಾಲ್ಕು ಲೋಕಕ್ಕೂ ಅಧಿಪತಿ. ಮಧುರೆಯ ಸಿಂಹಾಸನದಲ್ಲಿ ಕೂತರೆ ಕೃಷ್ಣನನ್ನು ಕೇವಲ ಮಧುರೆಯ ಅಧಿಪತಿ ಎಂದು ಸಂಕೋಚ ಮಾಡಿ ಕರೆಯುತ್ತಾರೆ. ಅದು ಕೃಷ್ಣನಿಗೆ ಇಷ್ಟ ಇಲ್ಲ. ಅದಕ್ಕಾಗಿ ಕೃಷ್ಣನು ಸಿಂಹಾಸನವನ್ನು ಏರಲಿಲ್ಲ ಎಂದು.

**ಸಂದೇಶ** : ದೇವರನ್ನು ಸಂಕುಚಿತ ಮನೋಭಾವನೆಯಿಂದ ತಿಳಿಯಬಾರದು.

ಸಃ ಕೃಷ್ಣಃ ಕಂಸವಿಧ್ವಂಸೀ ತತ್ಪಿತ್ರೇ ತನ್ಮಹೀಂ ದದೌ ।
ಪರಾರ್ಥೈಕಫಲಃ ಸಾಕ್ಷಾತ್ಪುರಾಣಪುರುಷೋಹ್ಯಸೌ ॥ ೭ ॥

ಕಂಸ=ಕಂಸನನ್ನು; ವಿಧ್ವಂಸೀ=ನಾಶಮಾಡಿದ; ಸಃ=ಆ; ಕೃಷ್ಣಃ=ಕೃಷ್ಣನು; ತತ್= ಕಂಸನ; ಪಿತ್ರೇ=ತಂದೆಗೆ; ತತ್=ಆ; ಮಹೀಂ=ಭೂಮಿಯನ್ನು; ದದೌ=ಕೊಟ್ಟನು; ಹಿ= ಯಾವ ಕಾರಣದಿಂದ; ಅಸೌ=ಕೃಷ್ಣನು; ಸಾಕ್ಷಾತ್=ಮುಖ್ಯವಾಗಿ; ಪುರಾಣ= ಅನಾದಿಯಾದ; ಪುರುಷಃ=ಪುರುಷನು; ಅತಃ=ಆದ್ದರಿಂದ; ಪರ=ಇನ್ನೊಬ್ಬರ; ಅರ್ಥ=ಪ್ರಯೋಜನವೇ; ಏಕ=ಮುಖ್ಯವಾಗಿ; ಫಲಃ=ಫಲವುಳ್ಳವನು.

ತಂದೆ ಉಗ್ರಸೇನನನ್ನು ಸೆರೆಯಲ್ಲಿಟ್ಟು ಕಂಸನು ರಾಜ್ಯದ ಆಧಿಪತ್ಯವನ್ನು ವಹಿಸಿಕೊಂಡಿದ್ದನು. ಇಂತಹ ಕಂಸನನ್ನು ಕೊಂದು ರಾಜ್ಯವನ್ನು ಉಗ್ರಸೇನನಿಗೇ ಒಪ್ಪಿಸಿದನು. ದೇವರು ಉತ್ಪತ್ತಿ ಇಲ್ಲದವನು. ಅನಾದಿಯು. ಹುಟ್ಟುವ ಪ್ರತಿಯೊಬ್ಬರಲ್ಲಿಯೂ ನ್ಯೂನತೆ ಇದ್ದೇ ಇರುತ್ತದೆ. ಅದನ್ನು ಭರ್ತಿ ಮಾಡಿಕೊಳ್ಳಲು ಸ್ವಾರ್ಥಕ್ಕಾಗಿ ಪ್ರವೃತ್ತಿಯನ್ನು ಮಾಡುತ್ತಾರೆ. ದೇವರಲ್ಲಿ ನ್ಯೂನತೆ ಇಲ್ಲ. ಆದ್ದರಿಂದ ಭರ್ತಿ ಮಾಡಿಕೊಳ್ಳುವ ಪ್ರಸಂಗ ಇಲ್ಲ. ಆದರೂ ಜಗತ್ಸೃಷ್ಟ್ಯಾದಿ ದೊಡ್ಡ ಕೆಲಸಗಳಲ್ಲಿ ಪ್ರಯತ್ನವನ್ನು ಮಾಡುತ್ತಾನೆ. ಕೇವಲ ಪರಾರ್ಥಕ್ಕಾಗಿ. ಆದ್ದರಿಂದ ಕಂಸನನ್ನು ಕೊಂದು ರಾಜ್ಯವನ್ನು ಉಗ್ರಸೇನನಿಗೆ ಒಪ್ಪಿಸಿದ್ದು ಈ ದೃಷ್ಟಿಯಿಂದಲೇ.

**ಸಂದೇಶ** : ದೊಡ್ಡವರಾಗುವುದು ಸಣ್ಣತನವಾದ ಸ್ವಾರ್ಥತ್ಯಾಗದಿಂದ.

ತ್ವದುಕ್ತಿಕಾರಿಣಃ ಸರ್ವೇ ವಯಮಿತ್ಯಬ್ರವೀದ್ಧರಿಃ ।
ಭಕ್ತಮಾತ್ರೋಕ್ತಕರ್ತುಸ್ತತ್ಕಿಮಪೂರ್ವಂ ಕೃಪಾಂಬುಧೇಃ ॥ ೮ ॥

ಹರಿಃ=ಕೃಷ್ಣನು; ವಯಂ=ನಾವು; ಸರ್ವೇ=ಎಲ್ಲರೂ; ತ್ವತ್=ನಿನ್ನ; ಉಕ್ತಿ=ಮಾತು ಗಳನ್ನು; ಕಾರಿಣಃ=ಮಾಡುವವರು; ಇತಿ=ಎಂದು; ಅಬ್ರವೀತ್=ಹೇಳಿದನು; ಭಕ್ತಮಾತ್ರ= ಕೇವಲ ಭಕ್ತರು; ಉಕ್ತ=ಹೇಳಿದ್ದನ್ನು; ಕರ್ತುಃ=ಮಾಡುವ; ಕೃಪಾ=ದಯೆಯಿಂದ; ಅಂಬುಧೇಃ= ಸಮುದ್ರದಂತಿರುವ ಕೃಷ್ಣನಿಗೆ; ತತ್=ಅದು; ಅಪೂರ್ವಂ ಕಿಂ=ಹೊಸತೇನು?

ಕೃಷ್ಣನು ಉಗ್ರಸೇನನ ಮುಂದೆ ಸಾಮಾನ್ಯಜನರಂತೆ ಇದ್ದಾನೆ. ಆತನು ಉಗ್ರಸೇನನಿಗೆ ಹೇಳುತ್ತಾನೆ: ರಾಜನೇ, ನಾವು ನಿನ್ನ ಸೇವಕರು. ಏನು ಕೆಲಸ ಆಗಬೇಕೆಂದು ಅಪ್ಪಣೆ ಮಾಡಬೇಕು. ನಾವು ಅದನ್ನು ಪೂರೈಸುತ್ತೇವೆ ಎಂದು. ರಾಜರು ಹೇಳುತ್ತಾರೆ: ಇದು ಕೃಷ್ಣನಿಗೆ ಹೊಸತಲ್ಲ. ಆತನು ಇರುವುದೇ ಭಕ್ತರ ಮಾತನ್ನು ನಡೆಸಿಕೊಡಲು. ಈ ವಿಷಯದಲ್ಲಿ ದೇವರದ್ದೇ ಒಂದು ಮಾತಿದೆ: 'ಅಹಂ ಭಕ್ತಪರಾಧೀನಃ ಅಸ್ವತಂತ್ರ ಇವ', ನಾನು ಯದ್ಯಪಿ ಸ್ವತಂತ್ರ, ಆದರೂ ಭಕ್ತರು ಹೇಳಿದಂತೆ ಕೇಳುವವ ಎಂದು.

ಸಂದೇಶ : ದೈವವು ನಮ್ಮ ಸಂಕಲ್ಪಕ್ಕೆ ಅನುಗುಣವಾಗಿ ಇರಬೇಕಾದರೆ ನಾವು ದೇವರ ಭಕ್ತರಾಗಬೇಕು.

**ಸೇನಾ ಮಧ್ಯಗತಾ ರಾಜನ್ ವಯಮಿತ್ಯಾಹ ಮಾಧವಃ ।**
**ವಿಶ್ವಮಧ್ಯಗತಸ್ಯಾಸ್ಯ ಸೇನಾಂತಃ ಕಿಂ ನು ದೂಷಣಮ್ ॥ ೯ ॥**

ರಾಜನ್=ರಾಜನೇ; ವಯಂ=ನಾವು; ಸೇನಾ=ಸೈನ್ಯದ; ಮಧ್ಯ=ಮಧ್ಯದಲ್ಲಿ; ಗತಾ= ಇರುವವರು; ಇತಿ=ಎಂದು; ಮಾಧವಃ=ಕೃಷ್ಣನು; ಆಹ=ಹೇಳಿದನು; ವಿಶ್ವ=ಎಲ್ಲದರ; ಮಧ್ಯ=ಮಧ್ಯದಲ್ಲಿ; ಗತಸ್ಯ=ಇರುವ; ಅಸ್ಯ=ಇವನಿಗೆ; ಸೇನಾ=ಸೈನ್ಯದ; ಅಂತಃ= ಮಧ್ಯವು; ಕಿಂನು ದೂಷಣಂ=ಏನು ದೋಷವು.

ರಾಜನೇ, ನಾವು ನಿನ್ನ ಸೈನ್ಯದಲ್ಲಿ ಸೇರಿದವರು. ಕಂಸನನ್ನು ಕೊಂದು ನಿನಗೆ ರಾಜ್ಯವನ್ನು ಕೊಟ್ಟವನು ಎಂಬ ಭಾವನೆ ನನಗಿಲ್ಲ. ಇಷ್ಟು ದೊಡ್ಡ ವ್ಯಕ್ತಿತ್ವವುಳ್ಳ ಕೃಷ್ಣನು ಸಾಮಾನ್ಯವಾದ ದೈನ್ಯದಲ್ಲಿ ಇರುವೆನೆಂದು ಹೇಳುವುದು ಆತನಿಗೆ ಎಷ್ಟು ಸಮಂಜಸ? ಈ ಪ್ರಶ್ನೆಗೆ ರಾಜರು ಉತ್ತರಿಸುತ್ತಾರೆ: ಕೃಷ್ಣನು ಇಡೀ ವಿಶ್ವದ್ದೇ ಅಂತರ್ಯಾಮಿ. ಸೈನ್ಯಕ್ಕಿಂತಲೂ ನಿಕೃಷ್ಟವಾದ ವಸ್ತುವಿನ ಒಳಗೂ ಇದ್ದಾನೆ. ಹೀಗಿರುವಾಗ ಸೈನ್ಯದ ಒಳಗೆ ಇರುವುದು ದೋಷ ಹೇಗಾಗುತ್ತದೆ?

ಸಂದೇಶ : ಪ್ರತಿಯೊಂದು ವಸ್ತುವೂ ತನ್ನ ವ್ಯಕ್ತಿತ್ವವನ್ನು ಮೆರೆಯುವುದು ಒಳಗಿರುವ ದೇವರಿಂದ.

**ವಕ್ರಂ ಸರ್ವಮವಕ್ರಯತ್ಸನುದಿನಂ ಕುಬ್ಜಾತನೂ ಜೃಂಭಕಃ**
**ಮಲ್ಲಾನಾಂ ಲಯಕೃದ್ಧುನೋತು ಸರಿಪೂನ್ ಕಂಸಸ್ಯ ಹಿಂಸಾಕರಃ ।**
**ಬಂಧೂನ್ ಬಂಧಕರಾನ್ವಿಜೋಯ ತು ಮೇ ರಮ್ಯಾಂ ಧುರಂ ಮಾಧುರಃ**
**ಸಂದದ್ಯಾದ್ಧರಿರಂತರಂಗವಿಭವಂ ರಂಗಸ್ಥಲೀರಂಜಕಃ ॥ ೧೦ ॥**

ಕುಬ್ಜಾ=ತ್ರಿವಕ್ರೆಯ; ತನು=ಶರೀರವನ್ನು; ಉಜ್ಜೃಂಭಕಃ=ಬೆಳೆಸಿದ; ಸಃ=ಕೃಷ್ಣನು; ಅನುದಿನಂ=ಯಾವಾಗಲೂ; ಸರ್ವಂ=ಎಲ್ಲಾ; ವಕ್ರಂ=ಮಾನಸಿಕ-ವಾಚಿಕ-ಕಾಯಿಕ

ವಕ್ರತೆಯನ್ನು; ಅವಕ್ರಯತು=ನಾಶಮಾಡಲಿ; ಮಲ್ಲಾನಾಂ=ಮಲ್ಲರ; ಲಯ=ನಾಶವನ್ನು; ಕೃತ್=ಮಾಡಿದ ಕೃಷ್ಣನು; ರಿಪೂನ್=ಶತ್ರುಗಳನ್ನು; ಧುನೋತು=ಧ್ವಂಸಮಾಡಲಿ; ಕಂಸಸ್ಯ=ಕಂಸನಿಗೆ; ಹಿಂಸಾ=ನಾಶವನ್ನು; ಕರಃ=ಮಾಡಿದ ಕೃಷ್ಣನು; ಬಂಧ=ಬಂಧನ ವನ್ನು; ಕರಾನ್=ಮಾಡುವ; ಬಂಧೂನ್=ಬಂಧುಗಳನ್ನು; ವಿಯೋಜಯತು=ಬಿಡಿಸಲಿ; ಮಾಧುರಃ=ಮಧುರೆಯನ್ನು ರಕ್ಷಿಸುವ ಕೃಷ್ಣನು; ಮೇ=ನನಗೆ; ರಮ್ಯಾಂ=ಯೋಗ್ಯವಾದ; ಧುರಂ=ಭಾರವನ್ನು; ಸಂದದ್ಯಾತ್=ಕೊಡಲಿ; ರಂಗಸ್ಥಲೀ=ರಂಗಸ್ಥಳವನ್ನು; ರಂಜಕ= ಬೆಳಗಿಸಿದ; ಹರಿಃ=ಕೃಷ್ಣನು; ಅಂತರಂಗ=ಮನಸ್ಸಿಗೆ; ವಿಭವಂ=ವೈಭವವನ್ನು; ಸಂದದ್ಯಾತ್=ಉಂಟುಮಾಡಲಿ.

ಕೃಷ್ಣನಿಗೆ ಮಾಧುರ ಎಂದು ಹೆಸರು. ಅಂದರೆ ಮಧುರೆಯ ರಕ್ಷಕ. ಮಧುರಾ ಊರಿನಂತೆ ನಮ್ಮ ದೇಹವೂ ಒಂದು ಮಧುರೆ. ಕೃಷ್ಣನು ಮಧುರೆಯನ್ನು ಪ್ರವೇಶಮಾಡಿ ಯಾವ ಕಾರ್ಯಗಳನ್ನು ಮಾಡಿದನೋ ಅವುಗಳೆಲ್ಲಾ ನಮ್ಮ ಶರೀರಕ್ಕೆ ಬಹಳ ಅಗತ್ಯ. ಕೃಷ್ಣನು ಮಧುರೆಗೆ ಬಂದವನೇ ತ್ರಿವಕ್ರೆಯನ್ನು ಋಜುವನ್ನಾಗಿ ಮಾಡುತ್ತಾನೆ. ಮಾನವನು ಒಮ್ಮೊಮ್ಮೆ ಮಾನಸಿಕವಾಗಿ ಕೆಟ್ಟ ವಿಚಾರವನ್ನು ಮಾಡುತ್ತಾನೆ. ಮಾತೂ ಕೂಡಾ ಬಹಳ ತೀಕ್ಷ್ಣವಾಗಿ ಚುಚ್ಚುವಂತೆ ಇರುತ್ತದೆ. ಪ್ರಾರಬ್ಧವಶಾತ್ ದೇಹವೂ ವಕ್ರವಾಗಿರಬಹುದು. ಇವುಗಳಲ್ಲಿ ಯಾವುದಿದ್ದರೂ ವ್ಯಕ್ತಿಯ ಅಭಿವೃದ್ಧಿಗೆ ತೊಂದರೆ ಇದೆ. ಆದ್ದರಿಂದ ಆ ವಕ್ರತೆಯನ್ನು ತೆಗೆಯಬೇಕೆಂದು ಪ್ರಾರ್ಥಿಸುತ್ತಾರೆ. ನಮ್ಮ ಸುತ್ತಮುತ್ತ ಶತ್ರುಗಳಿದ್ದರೂ ಅವರು ನಮ್ಮನ್ನು ಮುಂದೆ ಬರಲು ಅಡ್ಡಿಯಾಗುತ್ತಾರೆ. ಶತ್ರುಗಳಾದ ಮಲ್ಲರನ್ನು ಮುರಿದ ಕೃಷ್ಣನು ನಮ್ಮ ಶತ್ರುಗಳನ್ನು ಮುರಿದು ನಮ್ಮ ದಾರಿಯನ್ನು ಸುಗಮಗೊಳಿಸಲಿ. ನಮಗೆ ಬಂಧುಗಳು ಕೆಲವರು ಇರುತ್ತಾರೆ. ಮೇಲ್ನೋಟಕ್ಕೆ ಅವರು ನಮಗೆ ಹಿತರಂತೆ ಇರುತ್ತಾರೆ. ನಿಜವಾಗಿ ಅವರು ನಮಗೆ ಬಂಧಕರಾದ್ದರಿಂದ ಬಂಧುಗಳು ನಮ್ಮ ಅಭಿವೃದ್ಧಿಯನ್ನು ಕಂಡು ಮತ್ಸರಿಸುವವರು. ನಮ್ಮ ದುಃಖದಲ್ಲಿ ಭಾಗಿಯಾಗುವುದಿಲ್ಲ. ಸಂತೋಷದಲ್ಲಿ ಪಾಲು ಕೇಳಲು ಬರುವರು. ಇಂತಹ ಬಂಧುಗಳಿಂದ ನಮ್ಮನ್ನು ದೂರ ಇಡಲು ಕೃಷ್ಣನನ್ನು ಕಂಸಧ್ವಂಸಿ ಎಂದು ಉಪಾಸಿಸಬೇಕು. ಕಂಸನು ವಸುದೇವದೇವಕಿ ಯರನ್ನು ಬಂಧಿಸುವ ಮೂಲಕ ಬಂಧುವಾಗಿದ್ದ. ಮಧುರಾ ಶಬ್ದಕ್ಕೆ ಚಂದ ಎಂಬ ಅರ್ಥವೂ ಇದೆ. ಧುರಾ ಅಂದರೆ ಭಾರ ಎಂದು ಅರ್ಥ. ಮಧುರನಾದ ಕೃಷ್ಣನು ಎನಗೆ ಚಂದದ ಭಾರವನ್ನು ಹೊರಿಸಲಿ ಎಂದು ರಾಜರು ಪ್ರಾರ್ಥಿಸುತ್ತಾರೆ. ಪ್ರತಿಯೊಬ್ಬ ಮಾನವನಿಗೂ ಒಂದು ಕರ್ತವ್ಯ ಇದೆ. ಬ್ರಾಹ್ಮಣನಾದವನಿಗೆ ಪಾಠಪ್ರವಚನಾದಿಗಳು ಕ್ಷತ್ರಿಯನಿಗೆ ರಕ್ಷಣಾದಿಗಳು. ಇವು ಒಳ್ಳೆಯ ಭಾರಗಳು. ಅಂದರೆ ಜವಾಬ್ದಾರಿಗಳು. ಇವುಗಳನ್ನು ಚೆನ್ನಾಗಿ ನಿಭಾಯಿಸುವಂತೆ ಕೃಷ್ಣನು ಅನುಗ್ರಹಿಸಲಿ. ಮಲ್ಲಯುದ್ಧದ ಸಮಯದಲ್ಲಿ ರಂಗಸ್ಥಳವನ್ನು ಪ್ರವೇಶಿಸಿದ ಕೃಷ್ಣನು ತನ್ನ ಕೌಶಲ್ಯದಿಂದ ಅದನ್ನು ಚೆನ್ನಾಗಿ ಬೆಳಗಿದವನು. ನಮ್ಮಲ್ಲಿಯೂ ಒಂದು ರಂಗಸ್ಥಳ ಇದೆ. ಅದನ್ನು ಅಂತರಂಗ ಎಂದು ಕರೆಯುವರು. ಅಂತರಂಗ ಅಂದರೆ ಮನಸ್ಸು. ಹೊರಗಿನ ರಂಗಸ್ಥಳದ ಕಶ್ಮಲವಾದ

ಮಲ್ಲರನ್ನು ಧ್ವಂಸಮಾಡಿದಂತೆ ಅಂತರಂಗದ ಕಶ್ಮಲವನ್ನೂ ನಾಶಮಾಡಲಿ. ಚೆನ್ನಾಗಿ ಬೆಳಗುವಂತೆ ಮಾಡಲಿ. ಹೀಗಾದಾಗ ನಮ್ಮ ದೇಹವು ಉತ್ತಮ ಮಧುರೆಯು ಆಗುತ್ತದೆ.

**ಸಂದೇಶ** : ದೇವರ ಪ್ರತಿಯೊಂದು ಕ್ರಿಯೆಯೂ ನಮ್ಮ ಆಧ್ಯಾತ್ಮಿಕ ಜೀವನಕ್ಕೆ ಸಂಬದ್ಧವಾಗಿರುತ್ತದೆ.

**ಮಧುರಾ ಮಧುರಾ ಯೇನ ಸಮಭೂತ್ಸಮಭೂಜ್ಝಿತಾ ।**
**ಸ್ಮರತ ಸ್ಮರತಾತಂ ತಂ ಮಹತಾಮಹತಾರ್ಥದಮ್** ॥ ೧೧ ॥

ಮಧುರಾ=ಚಂದದ; ಮಧುರಾ=ಮಧುರೆಯು; ಯೇನ=ಯಾವ ಕೃಷ್ಣನಿಂದ; ಸಮ=ಸದೃಶವಾದ; ಭೂ=ಭೂಮಿಯಿಂದ; ಉಜ್ಝಿತಾ=ರಹಿತವಾಗಿ; ಸಮಭೂತ್=ಆಯಿತು; ಮಹತಾಂ=ದೊಡ್ಡವರಿಗೆ; ಅಹತ=ನಾಶರಹಿತವಾದ; ಅರ್ಥ=ಪ್ರಯೋಜನವನ್ನು; ದಂ=ಕೊಡುವ; ಸ್ಮರ=ಮನ್ಮಥನ; ತಾತಂ=ತಂದೆಯಾದ; ತಂ=ಕೃಷ್ಣನನ್ನು; ಸ್ಮರತ= ಸ್ಮರಿಸಿರಿ.

ಈ ಊರಿಗೆ ಮಧುರೆ ಎಂಬ ಹೆಸರು ಮೊದಲೇ ಇತ್ತು. ಕೃಷ್ಣನು ಅಲ್ಲಿಗೆ ಪ್ರವೇಶಮಾಡಿ ಕಂಸಾದಿ ದುಷ್ಟರನ್ನು ನಾಶಮಾಡಿದನು. ಅನಂತರ ಅದರ ಹೆಸರು ಸಾರ್ಥಕವಾಯಿತು. ಈ ಕ್ಷೇತ್ರಕ್ಕೆ ಸದೃಶವಾದ ಸ್ಥಳವು ಯಾವುದೂ ಇಲ್ಲ ಎಂದು ಹೇಳಬಹುದು. ಇನ್ನು ಈ ಕ್ಷೇತ್ರಕ್ಕೆ ಈ ಹೆಸರು ಸ್ಥಿರವಾಯಿತು. ಹೀಗೆ ಜ್ಞಾನಿಗಳಿಗೆ ಕೃಷ್ಣನು ಏನು ಕೊಟ್ಟರೂ ಅದು ಶಾಶ್ವತ. ಹಾಗೆಯೇ ಚಂದವೂ ಕೂಡಾ. ಯಾಕೆಂದರೆ ಈತನು ಚಂದದ ಮನ್ಮಥನ ತಂದೆ ತಾನೆ. ಇಂತಹ ಕೃಷ್ಣನನ್ನು ಸ್ಮರಿಸಿರಿ ಎಂದು ರಾಜರು ಭಕ್ತರಿಗೆ ಆಜ್ಞಾಪಿಸುತ್ತಾರೆ.

**ಸಂದೇಶ** : ಹಿರಿಯರು ನಮಗೆ ಇಡುವ ಹೆಸರನ್ನು ದೇವರ ದಯದಿಂದ ಸಾರ್ಥಕಪಡಿಸಲು ಸಾಧ್ಯ ಇದೆ. ಸಾರ್ಥಕವಾದರೆ ಜನ್ಮಜನ್ಮಗಳಲ್ಲಿಯೂ ಸ್ಥಿರ.

**ಕೃಷ್ಣೋದಾರವಿಹಾರಖಂಡಿತಮಲಂ ಯಸ್ಯಾಂ ಜಲಂ ಮಂಗಲಂ**
**ತತ್ಪಾದಾಂಬುಜಲಕ್ಷ್ಮಲಕ್ಷ್ಯವಿಭವಾ ಧನ್ಯಸ್ಥಲೀ ಯತ್ಸ್ಥಲೀ ।**
**ಯದ್ಗೇಹಾನಿ ಕೃತಸ್ಪೃಹಾಣಿ ರಮಯಾ ನಿತ್ಯಂ ಸ್ವಭರ್ತುಃ ಸ್ಥಿತೇಃ**
**ದದ್ಯಾತ್ ಸಾ ಮಧುರಾಪುರೀ ಶುಭಕರೀ ಶ್ರೇಯಾಂಸಿ ಭೂಯಾಂಸಿ ನಃ** ॥ ೧೨ ॥

ಯಸ್ಯಾಂ=ಯಾವ ಊರಲ್ಲಿ; ಜಲಂ=ನೀರು; ಕೃಷ್ಣ=ಕೃಷ್ಣನ; ಉದಾರ=ಉತ್ತಮವಾದ; ವಿಹಾರ=ಆಟದಿಂದ; ಖಂಡಿತ=ನಷ್ಟವಾದ; ಮಲಂ=ಕಶ್ಮಲವುಳ್ಳದ್ದಾಗಿ; ಮಂಗಲಂ= ಪವಿತ್ರವಾಯಿತೋ; ಯತ್=ಯಾವ ಊರಿನ; ಸ್ಥಲೀ=ಜಾಗವು; ತತ್=ಕೃಷ್ಣನ; ಪಾದ= ಚರಣವೆಂಬ; ಅಂಬುಜ=ಕಮಲದ; ಲಕ್ಷ್ಮ=ಚಿಹ್ನೆಯಿಂದ; ಲಕ್ಷ್ಯ=ದೃಶ್ಯವಾದ;

ವಿಭವಾ=ವೈಭವವುಳ್ಳದ್ದಾಗಿ; ಧನ್ಯ=ಪುಣ್ಯಕರವಾದ; ಸ್ಥಲೀ=ಸ್ಥಳವಾಯಿತೋ; ಯತ್=ಯಾವ ಊರಲ್ಲಿ; ಗೇಹಾನಿ=ಮನೆಗಳು; ಸ್ವ=ತನ್ನ; ಭರ್ತುಃ=ಪತಿಯ; ನಿತ್ಯಂ=ಸದಾ; ಸ್ಥಿತೇಃ=ವಾಸದಿಂದ; ರಮಯಾ=ಲಕ್ಷ್ಮಿಯಿಂದ; ಕೃತ=ಮಾಡಲ್ಪಟ್ಟ; ಸ್ಪೃಹಾಣಿ=ಅಪೇಕ್ಷೆವುಳ್ಳದ್ದೋ; ಸಾ=ಅಂತಹ; ಶುಭಕರೀ=ಶುಭವನ್ನು ಮಾಡುವ; ಮಧುರಾ=ಮಧುರೆ ಎಂಬ; ಪುರೀ=ಊರು; ನಃ=ನಮಗೆ; ಭೂಯಾಂಸಿ=ಬಹಳ; ಶ್ರೇಯಾಂಸಿ=ಒಳ್ಳೆದನ್ನು; ದದ್ಯಾತ್=ಕೊಡಲಿ.

ಮಧುರೆಯಲ್ಲಿ ಯಮುನೆಯು ಹರಿಯುತ್ತಿದ್ದಾಳೆ. ಆ ನೀರಲ್ಲಿ ಕೃಷ್ಣನು ಉತ್ತಮವಾದ ವಿಹಾರವನ್ನು ಮಾಡುತ್ತಿದ್ದನು. ಕೃಷ್ಣನ ಪಾದಸ್ಪರ್ಶದಿಂದಲೇ ಯಮುನೆಯ ಪಾಪಗಳೆಲ್ಲ ಪರಿಹೃತವಾಯಿತು. ನಾವೆಲ್ಲಾ ಯಮುನೆಯಲ್ಲಿ ಸ್ನಾನ ಮಾಡಿ ನಮ್ಮ ಪಾಪಗಳನ್ನು ಯಮುನೆಯಲ್ಲಿ ಬಿಡುತ್ತೇವೆ. ಅವುಗಳನ್ನು ದೇವರು ಸುಟ್ಟುಬಿಡುತ್ತಾನೆ. ಆದ್ದರಿಂದ ಯಮುನೆಯ ನೀರು ಪವಿತ್ರವಾಯಿತು. ಕೃಷ್ಣನು ಅಲ್ಲಿಯ ನೆಲದಲ್ಲಿ ಅಡ್ಡಾಡಿದ್ದಾನೆ. ಆಗ ಆತನ ಪಾದದಲ್ಲಿರುವ ಧ್ವಜ ಅಂಕುಶಾದಿ ಚಿಹ್ನೆಗಳು ಭೂಮಿಯಲ್ಲಿ ಕಾಣಿಸುತ್ತಿದ್ದವು. ಅಂತಹ ನೆಲವನ್ನು ನೋಡುವುದೇ ಒಂದು ಚಂದ. ಇದು ಈ ನೆಲದ ವೈಭವ. ಮಧುರೆಯಲ್ಲಿ ಬಹಳ ಮನೆಗಳಿದ್ದವು. ಎಲ್ಲಾ ಮನೆಗಳಲ್ಲಿಯೂ ಕೃಷ್ಣನು ಇರುತ್ತಿದ್ದನು. ಆಗ ರಮೆಗೂ ಈ ಮನೆಗಳಲ್ಲಿ ಇರಬೇಕೆಂದು ಆಸೆ ಆಗುತ್ತಿತ್ತು. ಹಾಗೇ ಆಕೆ ಸಂಪತ್ತಿನ ರೂಪದಿಂದ ಅಲ್ಲಿ ವಾಸಿಸುತ್ತಿದ್ದಳು. ಈ ರೀತಿ ಪವಿತ್ರವಾದ ಜಲನೆಲಗಳಿಂದ ಕೂಡಿದ ಶ್ರೀಮಂತವಾದ ಮನೆಗಳಿಂದ ಕೂಡಿದ ಆದ್ದರಿಂದಲೇ ಮಧುರೆಯಾದ ಈ ಊರು ನಮಗೆ ಸಾಧನೆ ಮಾಡಲು ಬಹಳ ಉಚಿತವಾಗಿದೆ. ನಮ್ಮಿಂದ ಬಹಳ ಸಾಧನೆಯನ್ನು ಮಾಡಿಸಿ ನಮಗೆ ಪೂರ್ಣವಾದ ಮುಕ್ತಿಯನ್ನು ಕೊಡಲಿ. ತನ್ಮೂಲಕ ಮಧುರಾ ಎಂಬ ಹೆಸರನ್ನು ಸಾರ್ಥಕಪಡಿಸಿಕೊಳ್ಳಲಿ.

**ಸಂದೇಶ** : ಪವಿತ್ರಾಣಾಂ ಪವಿತ್ರಂ ಯಃ...... ಎಂಬ ಮಾತಿನಂತೆ ಲೋಕದಲ್ಲಿ ಪವಿತ್ರಗಳಾದ ವಸ್ತುಗಳಿಗೆ ಪಾವಿತ್ರ್ಯವನ್ನು ಕೊಡುವವನು ಕೃಷ್ಣನು. ಪತ್ನಿಯಾದ ಲಕ್ಷ್ಮಿಯು ನಮ್ಮಲ್ಲಿ ಇರಬೇಕಾದರೆ ಪತಿಯಾದ ದೇವರನ್ನು ಅರ್ಚಿಸಬೇಕು.

**ಜಗತ್ಪಿತ್ರಾಽಥ ಪಿತರೌ ಮೃದುಭಾಷಣಪೂರ್ವಕಮ್ ।**
**ನತೌ ನ ತೌ ಪುತ್ರಬುದ್ಧಿಂ ಚಕ್ರತುಶ್ಚಕ್ರಿಣೀಶ್ವರೇ ॥ ೧೩ ॥**

ಅಥ=ಅನಂತರ; ಜಗತ್=ಜಗತ್ತಿಗೆ; ಪಿತ್ರಾ=ತಂದೆಯಾದ ಕೃಷ್ಣನಿಂದ; ಪಿತರೌ=ತಂದೆತಾಯಿಯರು; ಮೃದು=ಮೆತ್ತಗಿನ; ಭಾಷಣ=ಮಾತು; ಪೂರ್ವಕಮ್=ಮೊದಲಾಗಿ; ನತೌ=ವಂದಿಸಲ್ಪಟ್ಟರು; ತೌ=ಅವರು; ಈಶ್ವರೇ=ಒಡೆಯನಾದ; ಚಕ್ರಿಣಿ=ಕೃಷ್ಣನಲ್ಲಿ; ಪುತ್ರ=ಮಗನೆಂಬ; ಬುದ್ಧಿಂ=ಬುದ್ಧಿಯನ್ನು; ನ ಚಕ್ರತುಃ=ಮಾಡಲಿಲ್ಲ.

ಕಂಸನನ್ನು ಕೊಂದ ಕೃಷ್ಣನು ನೇರವಾಗಿ ಸೆರೆಮನೆಗೆ ಹೋದನು. ಅಲ್ಲಿ

ತಂದೆತಾಯಿಯರಾದ ವಸುದೇವದೇವಕಿಯರು ಇದ್ದರು. ಕೃಷ್ಣನು ಅವರನ್ನು ಮೆತ್ತಗಿನ ಮಾತುಗಳಿಂದ ವಿಚಾರಿಸಿದನು. ಅನಂತರ ಅವರನ್ನು ನಮಸ್ಕರಿಸಿದನು. ಇವರಿಗೆ ಕೃಷ್ಣನ ಅವತಾರಕಾಲದ ಸಂಸ್ಕಾರ ಇತ್ತು. ಕೃಷ್ಣನು ಅವತಾರಕಾಲದಲ್ಲಿ ಇವರಿಗೆ ತನ್ನ ಶಿಶುತ್ವವನ್ನು ತೋರಿಸದೆ ದೇವತ್ವವನ್ನು ತೋರಿಸಿದ್ದ. ಆ ಸಂಸ್ಕಾರ ಈಗ ಪ್ರಕಟವಾಯಿತು. ಆದ್ದರಿಂದ ಕೃಷ್ಣನು ನಮಸ್ಕರಿಸಿದಾಗ ಆತನಿಗೆ ಇವರು ಆಶೀರ್ವಾದ ಮಾಡಲಿಲ್ಲ.

**ಸಂದೇಶ** : ದೇವರು ತಾನಾಗಿ ಒಲಿದಾಗ ನಮಗೆ ಆವರಕವಾದ ಮಾಯೆಯನ್ನು ಸರಿಸುತ್ತಾನೆ.

**ವಿಮುಚ್ಯ ನಿಗಡಾದೀಶಃ ಸ್ಮಿತವಕ್ತ್ರಃ ಪ್ರಿಯಂ ವದನ್ ।**
**ಕೃತಸ್ನೇಹೋಽಥ ನಿಗಡಂ ಮಾಯಾಮಯಂ ಅಯೂಯುಜತ್ ॥ ೧೪ ॥**

ಈಶಃ=ಕೃಷ್ಣನು; ನಿಗಡಾತ್=ಸೆರೆಯಿಂದ; ವಿಮುಚ್ಯ=ಬಿಡಿಸಿ; ಸ್ಮಿತ=ನಗುವಿನ; ವಕ್ತ್ರಃ=ಮುಖವುಳ್ಳವನಾಗಿ; ಪ್ರಿಯಂ=ಇಷ್ಟವನ್ನು; ವದನ್=ಹೇಳುವವನಾಗಿ; ಕೃತ=ಮಾಡಲ್ಪಟ್ಟ; ಸ್ನೇಹಃ=ಪ್ರೀತಿ ಉಳ್ಳವನಾಗಿ; ಅಥ=ಅನಂತರ; ಮಾಯಾಮಯಂ=ಮಾಯಾರೂಪವಾದ; ನಿಗಡಂ=ಬಂಧನವನ್ನು; ಅಯೂಯು ಜತ್=ಜೋಡಿಸಿದನು.

ಕೃಷ್ಣನು ಅವರನ್ನು ಸೆರೆಯಿಂದ ಬಿಡಿಸಿದನು. ಒಂದು ಮೋಹಕವಾದ ನಗುವನ್ನು ಬೀರಿದನು. ಅವರಿಗೆ ಇವನಲ್ಲಿ ಪುತ್ರವಾತ್ಸಲ್ಯ ಬರುವ ರೀತಿಯಲ್ಲಿ ಅಮ್ಮ, ಅಪ್ಪ ಇತ್ಯಾದಿ ಶಬ್ದಗಳಿಂದ ಅವರನ್ನು ಸಂಬೋಧಿಸಿದನು. ಇದರಿಂದ ಅವರಿಗೆ ಕೃಷ್ಣನಲ್ಲಿ ದೇವತ್ವದ ಪ್ರಜ್ಞೆ ಹೋಯಿತು. ಪುತ್ರತ್ವದ ಪ್ರಜ್ಞೆ ಬಂತು. ಈ ಪ್ರಜ್ಞೆಯು ಸಂಸಾರದಲ್ಲಿ ಪುನಃ ಪುನಃ ಹುಟ್ಟಲು ಕಾರಣ. ಇದು ಒಂದು ಕಾಣದ ಬಂಧನ. ಇದನ್ನೇ ಮಾಯೆ ಎನ್ನುವುದು.

**ಸಂದೇಶ** : ದೇವರು ತೃಪ್ತನಾಗಿ ಬಾಹ್ಯಬಂಧನದಿಂದ ಬಿಡಿಸುತ್ತಾನೆ. ಪ್ರಾರಬ್ಧ ಇತ್ತೆಂದರೆ ಮಾಯಾಬಂಧನಕ್ಕೆ ಸಿಲುಕಿಸುತ್ತಾನೆ.

**ಅಥ ಧರ್ಮಪಥಾಧ್ಯಕ್ಷೋ ಜಗದೇ ಜಗದೇಕರಾಟ್ ।**
**ವಾರ್ತಯಾಹಂ ಭವತ್ಪುತ್ರೋ ಯಶ್ಚಕಾರ ನವಾಂ ಹಿತಮ್ ॥ ೧೫ ॥**

ಅಥ=ಅನಂತರ; ಧರ್ಮ=ಧರ್ಮದ; ಪಥ=ಮಾರ್ಗದ; ಅಧ್ಯಕ್ಷಃ=ಅಧಕ್ಷನಾದ; ಜಗತ್=ಲೋಕಕ್ಕೆ; ಏಕ=ಮುಖ್ಯನಾದ; ರಾಟ್=ರಾಜನಾದ ಕೃಷ್ಣನು; ಯಃ=ಯಾವ; ಅಹಂ=ನಾನು; ವಾರ್ತಯಾ=ಮಾತಿನಿಂದ; ಭವತ್=ನಿಮ್ಮ; ಪುತ್ರಃ=ಮಗನು; ವಾಂ= ನಿಮಗೆ; ಹಿತಂ=ಹಿತವನ್ನು; ನ ಚಕಾರ=ಮಾಡಲಿಲ್ಲ; ಇತಿ=ಎಂದು; ಜಗದೇ=ಹೇಳಿದನು.

ಯಾರ ಜೊತೆ ಹೇಗೆ ವ್ಯವಹರಿಸಬೇಕು ಎಂಬುದನ್ನು ಸಮಾಜಕ್ಕೆ ಉಪದೇಶಿಸುವವರು ಋಷಿಗಳು. ಅವರಿಗೆ ಆ ದಾರಿಯನ್ನು ಹಾಕಿಕೊಟ್ಟವನು ಕೃಷ್ಣನು. ಹಾಗಂತ ತಾನು ಆ ರೀತಿ ಇರಬೇಕು ಎಂದೇನಿಲ್ಲ. ಯಾಕೆಂದರೆ ಈತನು ನಿತ್ಯಮುಕ್ತನು. ಎಲ್ಲಾ

ಕಟ್ಟುಪಾಡುಗಳನ್ನೂ ಮೀರಿ ನಿಂತವನು. ಆದರೂ ಲೋಕದ ನಿಯಮಗಳನ್ನು ತಪ್ಪದೇ ಪಾಲಿಸುತ್ತಾನೆ. ಯಾಕೆಂದರೆ ಎಲ್ಲರ ದೃಷ್ಟಿಯೂ ಈತನ ಮೇಲೆ ಇರುವುದರಿಂದ. ಇಂತಹ ಕೃಷ್ಣನು ವಸುದೇವದೇವಕಿಯರನ್ನು ಸೆರೆಯಿಂದ ಬಿಡಿಸಿ ಅವರಲ್ಲಿ ಹೇಳುತ್ತಾನೆ– 'ನಾನು ನಿಮಗೆ ಮಗನಾಗಿ ಹುಟ್ಟಿದ್ದು ಮಾತ್ರ. ಮಗನಾದವನಿಗೆ ತಂದೆತಾಯಿಗಳ ಕರ್ತವ್ಯ ಇದೆ. ಅದನ್ನು ಮಾಡಲು ನನ್ನಿಂದ ಆಗಲಿಲ್ಲ. ನಾನೆಲ್ಲೋ ದೂರದಲ್ಲಿ ಬೆಳೆದೆ ಎಂದು.

**ಸಂದೇಶ** : ನಾವು ಪಾಠಪ್ರವಚನದ ಮೂಲಕ ದೇವರನ್ನು ಸಾತ್ವಿಕರಿಗೆ ತೋರಿಸಬೇಕು. ಇದಕ್ಕೆ ದೇವರು ಸ್ಪಂದಿಸುತ್ತಾನೆ. ಪ್ರತಿಯಾಗಿ ನಮಗೆ ಅನುಕೂಲಮಾಡುವ ಕಳಕಳಯನ್ನು ತೋರಿಸುತ್ತಾನೆ. ಮಕ್ಕಳಾದವರು ತಂದೆತಾಯಿಯ ಸೇವೆಯನ್ನು ಅವಶ್ಯ ಮಾಡಲೇಬೇಕು.

**ಸರ್ವಂ ತಾತ ಕೃತಂ ತ್ವಯಾ ಯದುದಿತಂ ಪ್ರೀತ್ಯಾಸ್ಮದೀಯಾನ್ವಯೇ**
**ತೇನೇದಂ ತಿಲಕೀ ಬಭೂವ ಹಿ ಕುಲಂ ಕೀರ್ತಿಶ್ಚ ಮೇ ವಿಸ್ತೃತಾ ।**
**ಯೇನಾನೇಕ ಖಲಾನ್ನಿಹತ್ಯ ಬಲಿನಂ ಕಂಸಂ ಚ ವಂಶದ್ರುಹಂ**
**ಬಂಧಗ್ರಂಥಿರಯಂ ವ್ಯಯೋಜಿ ದಯಯಾ ಕಿಂ ಕಿಂ ಕೃತಂ ನ ತ್ವಯಾ ॥ ೧೬ ॥**

ಹೇ ತಾತ=ಎಲೋ ಮಗುವೇ; ತ್ವಯಾ=ನಿನ್ನಿಂದ; ಸರ್ವಂ=ಎಲ್ಲವೂ; ಕೃತಂ= ಮಾಡಲ್ಪಟ್ಟಿದೆ; ಅಸ್ಮದೀಯ=ನಮ್ಮ; ಅನ್ವಯೇ=ವಂಶದಲ್ಲಿ; ಪ್ರೀತ್ಯಾ=ಪ್ರೀತಿಯಿಂದ; ಯತ್=ಯಾವ ಕಾರಣದಿಂದ; ಉದಿತಂ=ಅವತರಿಸಲ್ಪಟ್ಟಿತೋ; ತೇನ=ಆ ಕಾರಣದಿಂದ; ಇದಂ=ಈ; ಕುಲಂ=ವಂಶವು; ತಿಲಕೀಬಭೂವ=ತಿಲಕಪ್ರಾಯವಾಯಿತು; ಮೇ=ನನ್ನ; ಕೀರ್ತಿಶ್ಚ=ಕೀರ್ತಿಯೂ; ವಿಸ್ತೃತಾ=ಹರಡಿತು; ಯೇನ=ಯಾವ ಕೃಷ್ಣನಿಂದ; ಅನೇನ= ಬಹಳ; ಖಲಾನ್=ದುಷ್ಟರನ್ನು; ನಿಹತ್ಯ=ಕೊಂದು; ಬಲಿನಂ=ಬಲಿಷ್ಠನಾದ; ವಂಶ=ವಂಶಕ್ಕೆ; ದ್ರುಹಂ=ದ್ರೋಹ ಎಸಗಿದ; ಕಂಸಂ ಚ=ಕಂಸನನ್ನಾದರೂ; ನಿಹತ್ಯ=ಕೊಂದು; ಅಯಂ=ಈ; ಬಂಧ=ಸಂಸಾರದ; ಗ್ರಂಥಿಃ=ಗಂಟು; ದಯಯಾ=ದಯೆಯಿಂದ; ವ್ಯಯೋಜ= ಬಿಡಿಸಲ್ಪಟ್ಟಿತು; ತ್ವಯಾ=ನಿನ್ನಿಂದ; ಕಿಂ ಕಿಂ=ಏನು ಏನು; ನಕೃತಂ=ಮಾಡಲ್ಪಡಲಿಲ್ಲ.

ಕೃಷ್ಣನ ಸೌಜನ್ಯದ ಮಾತಿಗೆ ಈ ವಸುದೇವದೇವಕಿಯರು ಈ ರೀತಿ ಪ್ರತಿಕ್ರಯಿಸುತ್ತಾರೆ– ಕೃಷ್ಣ, ಮಗನಾದವನು ತಂದೆತಾಯಿಯರಿಗೆ ಏನು ಮಾಡಬೇಕೋ ಅದನ್ನೆಲ್ಲಾ ನೀನು ಮಾಡಿದ್ದಿ. ಮಗನು ಉತ್ತಮ ಗುಣಿಯಾಗಿದ್ದರೆ ಪಿತೃಗಳ ವಂಶವು ಇತರ ವಂಶಕ್ಕಿಂತ ಉತ್ತಮವಾಗುತ್ತದೆ. ನೀನು ದೇವರು. ಯದುವಂಶದ ನಮ್ಮಲ್ಲಿ ಅವತರಿಸಿದ್ದಿ. ನಿನ್ನನ್ನು ಎಲ್ಲರೂ 'ಯಾದವಕೃಷ್ಣ' ಎನ್ನುತ್ತಾರೆ. ನಿನ್ನ ಹೆಸರಿನ ಜೊತೆಗೆ ನಮ್ಮ ವಂಶದ ಹೆಸರೂ ಸೇರಿತು. ಇದರಿಂದ ನಮ್ಮ ವಂಶವು ಶಿಖರಪ್ರಾಯವಾಗಿ ಮೆರೆಯಿತು. ನಾನು ವಾಸುದೇವ. ನನ್ನಲ್ಲಿ ನೀನು ಅವತರಿಸಿದಿ. ನಿನ್ನನ್ನು ವಾಸುದೇವ ಎಂದು ಕರೆಯುತ್ತಾರೆ. ಜ್ಞಾನಿಗಳು

ನಿನ್ನನ್ನು ಈ ರೀತಿ ಕರೆದಾಗ ನನ್ನ ಹೆಸರು ಸರ್ವತ್ರ ಪ್ರಚಾರಕ್ಕೆ ಬಂತು. ಸಮಾಜಕ್ಕೆ ದೇವರನ್ನು ಕೊಟ್ಟವ ಎಂದು ನನಗೆ ಕೀರ್ತಿಯೂ ಬಂತು. ನೀನು ಅವತರಿಸಿದ್ದು ದುಷ್ಟನಿಗ್ರಹ-ಶಿಷ್ಟ ಅನುಗ್ರಹಕ್ಕಾಗಿ. ದುಷ್ಟರಾದ ಪೂತನಾದಿಗಳನ್ನು ಸಂಹಾರ ಮಾಡಿದಿ. ಅವತಾರದ ಉದ್ದೇಶವನ್ನು ಈಡೇರಿಸಿದಿ. ಇದು ಮುಖ್ಯವಾದ ಉದ್ದೇಶ. ನೀನು ಕೇವಲ ಒಬ್ಬ ವ್ಯಕ್ತಿಯ ಲೌಕಿಕ ಪ್ರಯೋಜನಕ್ಕೋಸ್ಕರ ಬರುವವನಲ್ಲ. ಆದರೂ ಈಗ ನೀನು ನಮ್ಮ ಮಗನ ಸ್ಥಾನದಲ್ಲಿ ಇದ್ದೀಯಾ. ತಂದೆತಾಯಿಗಳಿಗೆ ಬಂಧುಗಳು ಪೀಡೆ ಕೊಡುತ್ತಿದ್ದರೆ ಆ ಬಂಧುಗಳನ್ನು ಧ್ವಂಸಮಾಡಿ ತಂದೆತಾಯಿಗಳನ್ನು ರಕ್ಷಿಸುವುದು ಮಗನ ಕರ್ತವ್ಯ. ಕಂಸನನ್ನು ನೀನು ಕೊಂದು ನಮ್ಮ ಪೀಡೆಯನ್ನು ತೊಲಗಿಸಿದ್ದಿ. ಇದಕ್ಕೆಲ್ಲಾ ನಿನ್ನ ದಯೆಯು ನಮ್ಮ ಮೇಲೆ ಇರುವುದೇ ಕಾರಣ.

**ಸಂದೇಶ** : ದೇವರು ನಮಗೆ ಮಾಡಿದ ಅನುಗ್ರಹವನ್ನು ಸ್ತೋತ್ರದ ರೂಪದಿ ದೇವರ ಮುಂದೆ ನಿವೇದಿಸಿಕೊಳ್ಳಬೇಕು.

ಅಂಬಾ ತಂ ಪರಿರಭ್ಯ ಫುಲ್ಲಕರಸನ್ಮಾಲ್ಯೇನ ತಸ್ಯಾರ್ಚನಂ
ನೇತ್ರಾನಂದ ಜಲೇನ ಸಿಂಚನಮುರೋಜೋದ್ಯತ್ಪಯೋಧಾರಯಾ ।
ನೈವೇದ್ಯಂ ಚ ನಿವೇದ್ಯ ವೀಕ್ಷಣಲಸನ್ನೀರಾಜನಂ ಶೋಭನಂ
ಭಾವಿಸ್ವೀಯವಿಮುಕ್ತಿಕಲ್ಪಲತಿಕಾಬೀಜಂ ನಿಜಂ ನಿರ್ಮಮೇ ॥ ೧೭ ॥

ಅಂಬಾ=ತಾಯಿ ದೇವಕಿಯು; ತಂ=ಕೃಷ್ಣನನ್ನು; ಪರಿರಭ್ಯ=ಆಲಿಂಗಿಸಿ; ಫುಲ್ಲ=ರೋಮಾಂಚಗೊಂಡ; ಕರ=ಕೈಗಳೆಂಬ; ಸತ್=ಒಳ್ಳೆಯ; ಮಾಲ್ಯೇನ=ಮಾಲಿಕೆಯಿಂದ; ತಸ್ಯ=ಕೃಷ್ಣನಿಗೆ; ಅರ್ಚನಂ=ಪೂಜೆಯನ್ನು; ನೇತ್ರ=ಕಣ್ಣುಗಳ; ಆನಂದಜಲೇನ=ಆನಂದಬಾಷ್ಪದಿಂದ; ಸಿಂಚನಂ=ಅಭಿಷೇಕವನ್ನು; ಉರೋಜ=ಸ್ತನಗಳಿಂದ; ಉದ್ಯತ್=ಸುರಿಯುವ; ಪಯಃ=ಹಾಲಿನ; ಧಾರಯಾ=ಧಾರೆಯಿಂದ; ನೈವೇದ್ಯಂ= ಆಹಾರವನ್ನು; ವೀಕ್ಷಣ=ನೋಟವೆಂಬ; ಲಸತ್=ಶೋಭಿಸುವ; ನೀರಾಜನಂ=ಆರತಿಯನ್ನು; ನಿವೇದ್ಯ=ಅರ್ಪಿಸಿ; ಶೋಭನಂ=ಒಳ್ಳೆಯ; ಭಾವಿ=ಮುಂದಿನ; ಸ್ವೀಯ=ತನ್ನ; ವಿಮುಕ್ತಿ= ಮೋಕ್ಷವೆಂಬ; ಕಲ್ಪಲತಿಕಾ=ಕಲ್ಪಲತೆಯ; ಬೀಜಂ=ಬೀಜವನ್ನು; ನಿಜಂ=ಸ್ವಸಂಬಂಧಿಯನ್ನಾಗಿ; ನಿರ್ಮಮೇ=ರಚಿಸಿದಳು.

ಏಳುವರ್ಷದ ಹಿಂದೆ ಸೆರೆಮನೆಯಲ್ಲಿ ಹಡೆದ ಸಂದರ್ಭದಲ್ಲಿ ಮಾತ್ರ ಅವಳಿಗೆ ಕೃಷ್ಣದರ್ಶನ ಆಗಿತ್ತು. ಅನಂತರ ಇವತ್ತೇ ಆದದ್ದು. ಆದ್ದರಿಂದ ಆ ಮಾತೃತ್ವವು ಈಗ ಉಕ್ಕೇರಿತು. ತನ್ನೆರಡು ಕರಗಳಿಂದ ಕೃಷ್ಣನನ್ನು ಬಿಗಿದಪ್ಪಿದಳು. ಕಣ್ಣುಗಳಲ್ಲಿ ಆನಂದಬಾಷ್ಪವು ಸುರಿಯುತ್ತಿತ್ತು. ಇದರಿಂದ ಕೃಷ್ಣನು ಪೂರಾ ತೊಯ್ದನು. ತನ್ನ ಎದೆಯ ಹಾಲನ್ನು ಈಕೆ ಈತನಕ ಯಾವ ಮಗುವಿಗೂ ಉಣಿಸಲಾಗಲಿಲ್ಲ. ಕೃಷ್ಣನು ಈಗ ಏಳರ ಹರೆಯ. ಈಗ

ಏನು ಆತನಿಗೆ ಸ್ತನ್ಯಪಾನ ಎನ್ನುವುದನ್ನು ಮರೆತಳು. ತನ್ನ ಎದೆಹಾಲನ್ನು ಕುಡಿಸಿದಳು. ಕೃಷ್ಣನೂ ಏನೂ ಸಂಕೋಚಿಸದೆ ಏಳು ತಿಂಗಳ ಮಗುವಿನಂತೆ ಕುಡಿದನು. ತನ್ನ ಪ್ರೀತಿ ತುಂಬಿದ ಕಣ್ಣುಗಳಿಂದ ಕೃಷ್ಣನನ್ನು ಒಮ್ಮೆ ನಖಶಿಖಾಂತ ನೋಡಿದಳು.

ಇದೇ ಚಿತ್ರಣವನ್ನು ರಾಜರು ಆಧ್ಯಾತ್ಮಿಕವಾಗಿ ಬಳಸುತ್ತಾರೆ. ಯಾವನಿಗೆ ಮೋಕ್ಷವೆಂಬ ಬಳ್ಳಿಯನ್ನು ಬೆಳೆಯಬೇಕು ಎಂದು ಆಸೆ ಇದೆಯೋ ಆತನು ದೇವರ ನಾನಾ ರೀತಿಯ ಆರಾಧನೆಯನ್ನು ಮಾಡಬೇಕು. ದೇವರನ್ನು ಸ್ನಾನಿಸುವುದು, ಅಲಂಕರಿಸುವುದು, ನಿವೇದಿಸುವುದು ಇತ್ಯಾದಿ. ದೇವಕಿಯ ಕಣ್ಣುಗಳಿಂದ ಹೊರಟ ಬಾಷ್ಪಗಳಿಂದ ಕೃಷ್ಣನನ್ನು ಸ್ನಾನಮಾಡಿಸಿದಳು. ಈ ಕೈಗಳೆಂಬುದೇ ಒಂದು ಹೂಮಾಲೆ. ಕೃಷ್ಣನನ್ನು ಆಲಿಂಗಿಸಿದಾಗ ಆತನನ್ನು ಅಲಂಕರಿಸಿದಂತೇ ಆಯಿತು. ಎದೆಹಾಲನ್ನೇ ನೈವೇದ್ಯವನ್ನಾಗಿ ಅರ್ಪಿಸಿದಳು. ಕೃಷ್ಣನನ್ನು ಆಪಾದಮಸ್ತಕ ತನ್ನ ಪ್ರೀತಿಪೂರ್ವಕ ಕಣ್ಣುಗಳಿಂದ ನೋಡುವುದೇ ಒಂದು ಆರತಿ. ಆರತಿಯೂ ಕಣ್ಣುಗಳಂತೆ ಚಂಚಲ. ಆರತಿಯನ್ನೂ ಪಾದದಿಂದ ಆರಂಭಿಸಿ ತಲೆಯ ತನಕ ಮಾಡುತ್ತಾರೆ. ಇದೆಲ್ಲವನ್ನೂ ದೇವಕಿಯು ಸಹಜವಾಗಿಯೇ ಮಾಡಿದ್ದಾಳೆ. ನೈವೇದ್ಯವಂತೂ ಹೃದಯದ ಅಂತರಾಳದಿಂದ ಬಂದದ್ದು. ಈ ರೀತಿಯಾಗಿ ಈಕೆ ತನ್ನ ಮುಕ್ತಿ ಎಂಬ ಉದ್ಯಾನದ ಬಳ್ಳಿಗೆ ತಾನೇ ಬೀಜ ಹಾಕಿದಳು. ಇನ್ನೊಬ್ಬನ ಶ್ರಮದಿಂದ ಮತ್ತೊಬ್ಬನು ಫಲವನ್ನು ಪಡೆಯಲು ಆಧ್ಯಾತ್ಮಿಕದಲ್ಲಿ ಅಸಾಧ್ಯ.

**ಸಂದೇಶ** : ನಾರಿಯರೂ ತಮಗೆ ವಿಹಿತ ಸಾಧನೆಯಿಂದ ಮೋಕ್ಷ ಪಡೆಯಲು ಸಾಧ್ಯ.

**ವ್ರಜೇ ಗೃಹಸ್ಥೋಚಿತರಮ್ಯಲೀಲ ಪ್ರಚಕ್ರತುರ್ಯೌ ಸಮಮಂಗನಾಭಿಃ ।**
**ಅಥೋಪನೀತೌ ವಿಧಿನೋಪನೀತೌ ಸುತೌ ವಿತೇನೇ ಕಿಲಶೂರಸೂನುಃ ॥ ೧೮ ॥**

ಯೌ=ಯಾವ ರಾಮಕೃಷ್ಣರು; ವ್ರಜೇ=ಗೋಕುಲದಲ್ಲಿ; ಅಂಗನಾಭಿಃ=ನಾರಿಯರಿಂದ; ಸಮಂ=ಕೂಡಿಕೊಂಡು; ಗೃಹಸ್ಥ=ಗೃಹಸ್ಥರಿಗೆ; ಉಚಿತ=ಯೋಗ್ಯವಾದ; ರಮ್ಯ=ಚಂದದ; ಲೀಲಾಃ=ಕ್ರೀಡೆಗಳನ್ನು; ಪ್ರಚಕ್ರತುಃ=ಮಾಡಿದರೋ; ಅಥ=ಅನಂತರ; ವಿಧಿನಾ=ಅದೃಷ್ಟದಿಂದ; ಉಪನೀತೌ=ಸಮೀಪ ಬಂದಿರುವ; ಸುತೌ=ಮಕ್ಕಳನ್ನು; ಶೂರ=ಶೂರನ; ಸೂನುಃ= ಮಗನಾದ ವಸುದೇವನು; ಉಪನೀತೌ=ಉಪನೀತರನ್ನಾಗಿ; ವಿತೇನೇ= ಮಾಡಿದನು.

ಕೃಷ್ಣಬಲರಾಮರಿಗೆ ಲೌಕಿಕವಾಗಿ ಏಳು ತುಂಬಿದೆ. ಉಪನಯನದ ಸಮಯ. ಈ ತನಕ ಅಪ್ಪಮಕ್ಕಳು ಬೇರೆ ಬೇರೆ ಕಡೆ ಇದ್ದರು. ವಸುದೇವನ ಪುಣ್ಯವಶಾತ್ ಮಕ್ಕಳು ಸಮೀಪ ಬಂದಿದ್ದಾರೆ. ಅವರಿಗೆ ಉಪನಯನವನ್ನು ವಸುದೇವನು ಮಾಡಿದನು. ಇವು ಎರಡೂ ಕೂಡಾ ದಿವ್ಯಶಕ್ತಿಗಳು. ಆದ್ದರಿಂದ ಉಪನಯನದಿಂದ ಆ ಶಕ್ತಿಯನ್ನು ತುಂಬಿಸುವ ಅಗತ್ಯವಿಲ್ಲ. ದೇವ-ದೇವತೆಗಳು ಯಾವಾಗಲೂ ಎಲ್ಲಾ ವರ್ಣಗಳ ಎಲ್ಲಾ ಆಶ್ರಮಗಳ ಧರ್ಮವನ್ನು ಆಚರಿಸುತ್ತಿರುವವರು. ಇದನ್ನು ತಿಳಿಸಲು ರಾಜರು ನಂದಗೋಕುಲ ದಲ್ಲಿರುವಾಗ ಗೃಹಸ್ಥಾಶ್ರಮದಲ್ಲಿ ಇದ್ದ ರಾಮಕೃಷ್ಣರು ಎಂದು ಹೇಳಿದರು.

**ಸಂದೇಶ** : ಯೋಗ್ಯ ವಟುಗಳಿಗೆ ಯೋಗ್ಯ ಕಾಲಕ್ಕೆ ಯೋಗ್ಯ ದೇಶದಲ್ಲಿ ಉಪನಯವನ್ನು ತಂದೆಯಾದವನೇ ಮಾಡಬೇಕು.

**ಮುನಯಃ ಉಪಯಯುರ್ಮಹೇಕ್ಷಣೋತ್ಸುಕಾ**
**ಧೃತನಿಯಮಾಃ ಕಿಲ ಸರ್ವತಃ ಸಮೇತಾಃ ।**
**ಜನಿಮಿವ ಪರಿಹರ್ತುಮುತ್ತರತ್ರ**
**ಹ್ಯುಪನಯನಾದಿ ನಿದಾನಮಾಪ್ತಕಾಮಾಃ ॥ ೧೯ ॥**

ಮಹ=ಉತ್ಸವದ; ಈಕ್ಷಣ=ನೋಡುವಿಕೆಯಲ್ಲಿ; ಉತ್ಸುಕಾಃ=ಆಸಕ್ತರಾದ; ಧೃತ= ಧರಿಸಿದ; ನಿಯಮಾಃ=ನಿಯಮವುಳ್ಳ; ಆಪ್ತ=ಹೊಂದಿದ; ಕಾಮಾಃ=ಆಸೆವುಳ್ಳ; ಮುನಯಃ= ಋಷಿಗಳು; ಉತ್ತರತ್ರ=ಮುಂದೆ ಬರುವ; ಉಪನಯನ=ಉಪನಯನವೇ; ಆದಿ= ಮೊದಲಾದಕ್ಕೆ; ನಿದಾನಂ=ಮೂಲಕಾರಣವಾದ; ಜನಿಂ=ಉತ್ಪತ್ತಿಯನ್ನು; ಪರಿಹರ್ತುಂ ಇವ= ಪರಿಹರಿಸುವಂತೆ; ಸರ್ವತಃ=ಎಲ್ಲಾ ಕಡೆಯಿಂದಲೂ; ಉಪಯಯುಃ ಕಿಲ=ಬಂದರು.

ಋಷಿಗಳಿಗೂ ಈ ಉಪನಯನವನ್ನು ನೋಡುವ ಆಸೆ. ಯದ್ಯಪಿ ಅವರು ಮುನಿಗಳು. ಇತರ ಮದುವೆ ಮುಂಜಿ ಇತ್ಯಾದಿಗಳಲ್ಲಿ ಮೌನ ವಹಿಸುವವರು. ಇವುಗಳಿಂದ ಪಡೆಯಬಹುದಾದ ಆನಂದಾದಿಗಳನ್ನು ಮೊದಲೇ ಪಡೆದವರು. ಉಪನಯನವನ್ನು ನೋಡಿ ಇವರು ಶಿಕ್ಷಿತರಾಗಬೇಕಿಲ್ಲ. ಉಪನೀತ ವಟುಗಳೇ ಇವರಿಂದ ಶಿಕ್ಷಿತರಾಗಬೇಕಾಗಿದೆ. ಹಾಗಿದ್ದರೂ ಈ ಉಪನಯನಕ್ಕೆ ಬಂದರು. ಎಲ್ಲೆಲ್ಲಿಂದಲೋ ಬಂದರು. ಕಾರಣ– ಈ ಉಪನಯನಕ್ಕೆ ಮೊದಲಿನ ಕಾರಣ ಹುಟ್ಟು. ಹುಟ್ಟಿದ್ದಕ್ಕೆ ತಾನೆ ಒಂದೊಂದೇ ಸಂಸ್ಕಾರಗಳು ಆಗುವುದು. ಅದರಲ್ಲಿ ಉಪನಯನವೂ ಒಂದು. ಉಪ–ನಯನ ಅಂದರೆ ದೇವರ ಸಮೀಪಕ್ಕೆ ಒಯ್ಯುವುದು ಎಂದು ಅರ್ಥ. ದೇವರ ಉಪನಯನವನ್ನು ನೋಡಿದರೆ ನಾವು ದೇವರ ಸಮೀಪವಾಗುತ್ತೇವೆ. ಇದರಿಂದ ಹುಟ್ಟುಸಾವುಗಳು ತಪ್ಪುತ್ತವೆ.

**ಸಂದೇಶ** : ಉಪನಯನದ ದರ್ಶನಕ್ಕೇ ಇಂತಹ ಫಲ. ಯೋಗ್ಯ ವ್ಯಕ್ತಿಗೆ ಯೋಗ್ಯ ಕಾಲದಲ್ಲಿ ಯೋಗ್ಯ ದೇಶದಲ್ಲಿ ಉಪನಯನವನ್ನು ಮಾಡಿದರೆ ಏನು ಹೇಳತಕ್ಕದ್ದು.

**ವಾದ್ಯಾನಿನೇದುರ್ಮುನಯಶ್ಚ ಮಂತ್ರಾನುಚ್ಚಾರಯಂತಃ ಸಹ ಬಂದಿವೃಂದೈಃ ।**
**ವೃಂದಾರಕಾಣಾಂ ಸ್ತುತಯಶ್ಚ ರಮ್ಯಗಂಧರ್ವಗೀತೈಃ ಸಹ ನಾಕಿಲೋಕೈಃ ॥ ೨೦ ॥**

ವಾದ್ಯಾನಿ=ವಾದ್ಯಗಳು; ಮಂತ್ರಾನ್=ಮಂತ್ರಗಳನ್ನು; ಉಚ್ಚಾರಯಂತಃ=ಉಚ್ಚರಿಸುವ; ಮುನಯಶ್ಚ=ಋಷಿಗಳು; ಬಂದಿ=ಪಾಠಕರ; ವೃಂದೈಃ=ಸಮೂಹಗಳಿಂದ; ಸಹ= ಕೂಡಿಕೊಂಡು; ನೇದುಃ=ಧ್ವನಿಗೈದವು; ನಾಕಿ=ದೇವತೆಗಳ; ಲೋಕೇ=ಲೋಕದಲ್ಲಿ; ವೃಂದಾರಕಾಣಾಂ=ದೇವತೆಗಳ; ಸ್ತುತಯಃ ಚ=ಸ್ತೋತ್ರಗಳು; ರಮ್ಯ=ಚಂದದ; ಗಂಧರ್ವ=ಗಂಧರ್ವರ; ಗೀತೈಃ=ಹಾಡುಗಳಿಂದ; ಸಹ=ಕೂಡಿಕೊಂಡು; ನೇದುಃ=ಶಬ್ದ ಮಾಡಿದವು.

ಉಪನಯನ ಮಂಟಪದಲ್ಲಿ ಋಷಿಗಳು ಮಂತ್ರಗಳನ್ನು ಹೇಳುತ್ತಿದ್ದಾರೆ. ಹೊಗಳುಭಟರು ಹೊಗಳುತ್ತಿದ್ದಾರೆ. ವಾಲಗದವರು ನಾನಾ ರೀತಿಯ ವಾದ್ಯಗಳನ್ನು ನುಡಿಸುತ್ತಿದ್ದಾರೆ. ಅತ್ತ ದೇವಲೋಕದಲ್ಲಿಯೂ ದೇವತೆಗಳು ಹೊಗಳುತ್ತಿದ್ದಾರೆ. ಗಂಧರ್ವರು ಇಂಪಾಗಿ ಹಾಡುತ್ತಿದ್ದಾರೆ. ಈ ರೀತಿ ಧ್ವನ್ಯಾತ್ಮಕ ವರ್ಣಾತ್ಮಕ ಎರಡೂ ರೀತಿಯ ಶಬ್ದಗಳು ಕೃಷ್ಣನ ಉಪನಯನ ಸಂದರ್ಭದಲ್ಲಿ ದೇವರನ್ನು ಹೊಗಳಿದವು.

**ಸಂದೇಶ** : ಶುಭಕಾರ್ಯದಲ್ಲಿ ಹಾಳುಹರಟೆ ಕೂಡದು. ದೇವರ ಚಿಂತನೆ ಬೇಕು.

**ನಾರ್ಯಃ ಸಮಸ್ತಾಃ ನಯನೋತ್ಸವಂ ತಂ**
**ರಕ್ತಾಕ್ಷತೈಃ ರಾಗಯುತಾಃ ಮುಕುಂದಮ್ ।**
**ಅವಾಕಿರಂಸ್ತತ್ಪರಿರಂಭಣೋತ್ಕಾ**
**ಕುಬ್ಜಾ ದುರಂತಾಂ ಧ್ರುವಮಾಪ ಚಿಂತಾಮ್ ॥ ೨೧ ॥**

ರಾಗ=ಪ್ರೀತಿಯಿಂದ; ಯುತಾಃ=ಕೂಡಿದ; ಸಮಸ್ತಾಃ=ಎಲ್ಲಾ; ನಾರ್ಯಃ=ಸ್ತ್ರೀಯರು; ನಯನ=ಕಣ್ಣುಗಳಿಗೆ; ಉತ್ಸವಂ=ನೆಮ್ಮದಿಪ್ರದನಾದ; ತಂ=ಆ; ಮುಕುಂದಂ=ಕೃಷ್ಣನನ್ನು; ಅವಾಕಿರನ್=ಅರ್ಚಿಸಿದರು; ತತ್=ಕೃಷ್ಣನ; ಪರಿರಂಭಣ=ಆಲಿಂಗನದಲ್ಲಿ; ಉತ್ಕಾ= ಆಸಕ್ತಳಾದ; ಕುಬ್ಜಾ=ಕುಬ್ಜೆಯು; ದುರಂತಾಂ=ಕೊನೆ ಇಲ್ಲದ; ಚಿಂತಾಂ=ಚಿಂತೆಯನ್ನು; ಧ್ರುವಂ=ನಿಶ್ಚಯವಾಗಿಯೂ; ಆಪ=ಹೊಂದಿದಳು.

ಕೃಷ್ಣನ ಉಪನಯನವನ್ನು ನೋಡುವುದೇ ಕಣ್ಣಿಗೆ ಒಂದು ಹಬ್ಬ. ಸಾಲದ್ದಕ್ಕೆ ಕೃಷ್ಣನು ಸುಂದರನೂ ಇದ್ದನು. ಉಪನಯನಕ್ಕೆ ಬಹಳ ಜನರು ಸೇರಿದ್ದರು. ನಾರಿಯರ ಸಂಖ್ಯೆಯೂ ಬಹಳಷ್ಟಿತ್ತು. ಮುಹೂರ್ತದ ಸಮಯದಲ್ಲಿ ಅಕ್ಷತೆ ಕಾಳುಗಳನ್ನು ವಟುವಿನ ಮೇಲೆ ಹಾಕಬೇಕು. ಕೆಂಪಾದ ಅಕ್ಷತೆಗಳು, ಕೆಂಪು ಪ್ರೀತಿಯ ಸಂಕೇತವೂ ಹೌದು. ನಾರಿಯರು ವಿಶೇಷವಾಗಿ ಈ ಕಾಳುಗಳನ್ನು ಕೃಷ್ಣನ ಮೇಲೆ ಚೆಲ್ಲಿದರು. ಕೃಷ್ಣನಲ್ಲಿ ತಮಗಿರುವ ಪ್ರೀತಿಯನ್ನು ಪ್ರಕಟಿಸಿದರು. ಆ ಸಂದರ್ಭದಲ್ಲಿ ತ್ರಿವಕ್ರೆಯೂ ಇದ್ದಳು. ಆಕೆಯೂ ಕಾಳುಗಳನ್ನು ಕೃಷ್ಣನ ಮೇಲೆ ಚೆಲ್ಲಿದಳು. ಆದರೆ ಮುಖದಲ್ಲಿ ಉತ್ಸಾಹ ಇರಲಿಲ್ಲ. 'ಕೃಷ್ಣನು ಇನ್ನು ಮುಂದೆ ಬ್ರಹ್ಮಚಾರಿಯಾಗುತ್ತಾನೆ. ಅಧ್ಯಯನದಲ್ಲಿ ತೊಡಗುತ್ತಾನೆ. ನನ್ನ ಜೊತೆಗೆ ವಿಹರಿಸಲು ಶಾಸ್ತ್ರದ ಸಮ್ಮತಿ ಇಲ್ಲ'. ಇದು ಅವಳ ಚಿಂತೆಗೆ ಕಾರಣ. ಇದಕ್ಕೆ ಪರಿಹಾರವೇ ಆಕೆಗೆ ಸಿಗಲಿಲ್ಲ.

**ಸಂದೇಶ** : ಕಾರ್ಯಕ್ರಮಕ್ಕೆ ಹೋದರೆ ಅಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳಬೇಕು.

**ಅಂಬಾಯಾಃ ಪಿತುರಂಚತಾಂ ಅಪಿ ಸತಾಂ ಸತ್ಪ್ರೇಮದಾಮೋಪಮಮ್**
**ಸಂಬದ್ಧಂ ವಿಶದಂ ಗಲೇ ತ್ರಿಗುಣಿತಂ ಯಜ್ಞೋಪವೀತಂ ತಯೋಃ ।**
**ರೇಜೇ ತದ್ವಿಲಸದ್ಗುಣೈರ್ಬಹುಗುಣೈರಂತರ್ಗರಿಷ್ಠತ್ರಯಂ**
**ಸ್ತೋತೃಸ್ತವ್ಯತಯಾ ತದಾಶ್ರಯಯುತಂ ಸ್ವಚ್ಛಂ ಶ್ರುತೀನಾಮಿವ ॥ ೨೨ ॥**

ಅಂಬಾಯಾಃ=ತಾಯಿಯ; ಪಿತುಃ=ತಂದೆಯ; ಅಂಚತಾಂ=ಪೂಜಿಸುವ; ಸತಾ ಅಪಿ=ಸಜ್ಜನರದ್ದೂ ಕೂಡಾ; ಸತ್=ಒಳ್ಳೆಯ; ಪ್ರೇಮ=ಪ್ರೀತಿ ಎಂಬ; ದಾಮ=ಹಗ್ಗಕ್ಕೆ; ಉಪಮಂ=ಸದೃಶವಾದ; ವಿಶದಂ=ನಿರ್ಮಲವಾದ; ತ್ರಿಗುಣಿತಂ=ಮೂರು ಎಳೆಗಳಿಂದ ಕೂಡಿದ; ತಯೋಃ=ರಾಮಕೃಷ್ಣರ; ಗಲೇ=ಕುತ್ತಿಗೆಯಲ್ಲಿ; ಸಂಬದ್ಧಂ=ಇರುವ; ಬಹು= ಬಹಳ; ಗುಣೈಃ=ಗುಣಗಳಿಂದ; ತತ್=ಕೃಷ್ಣನ; ವಿಲಸತ್=ಶೋಭಿಸುವ; ಗುಣೈಃ= ಗುಣಗಳಿಂದ; ಅಂತಃ=ಒಳಗೆ; ಗರಿಷ್ಠಂ=ಗಟ್ಟಿಯಾದ; ಸ್ತೋತೃ=ಸ್ತುತಿಸುವವನ; ಸ್ತುತ್ಯತಯಾ= ಸ್ತುತ್ಯನ ನಿಮಿತ್ತದಿಂದ; ತತ್=ರಾಮಕೃಷ್ಣರೆಂಬ; ಆಶ್ರಯ=ಆಶ್ರಯದಿಂದ; ಯುತಂ= ಕೂಡಿದ; ಸ್ವಚ್ಛಂ=ನಿರ್ಮಲವಾದ; ಶ್ರುತೀನಾಂ=ವೇದಗಳ; ತ್ರಯಂ ಇವ=ಮೂರರಂತೆ; ರೇಜೇ= ಶೋಭಿಸಿತು.

ಈ ವಟುಗಳ ಕೊರಳಲ್ಲಿ ಯಜ್ಞೋಪವೀತವನ್ನು ತೊಡಿಸಿದರು. ಇದರಲ್ಲಿ ಮೂರು ಎಳೆಗಳಿವೆ. ವ್ಯಕ್ತಿಯನ್ನು ಪ್ರೀತಿ ಎಂಬ ಹಗ್ಗದಿಂದ ಮಾತ್ರ ಕಟ್ಟಲು ಸಾಧ್ಯ. ಇಲ್ಲಿ ತಾಯಿ, ತಂದೆ ಹಾಗೂ ಇತರ ಸಾತ್ವಿಕರ ಪ್ರೀತಿ ಎಂಬ ಹಗ್ಗಕ್ಕೆ ದ್ಯೋತಕ ಈ ಮೂರು ಎಳೆಗಳು. ಬಹಳ ಬಿಳಿಯಾಗಿತ್ತು.

ಇಬ್ಬರೂ ಮೂರು ವೇದಗಳನ್ನು ಧರಿಸಿದಂತೆ ಇತ್ತು. ವೇದಗಳು ದೇವರ ಅನೇಕ ಗುಣಗಳನ್ನು ಹೇಳುತ್ತವೆ. ಒಂದೊಂದು ಗುಣಗಳೂ ಬಹಳ ಗುಣಗಳಿಂದ ಕೂಡಿವೆ. ಗುಣ ಎಂದು ಹಗ್ಗಕ್ಕೂ ಹೆಸರಿದೆ. ಯಜ್ಞೋಪವೀತವೂ ಅನೇಕ ಗುಣಗಳಿಂದ ಅಂದರೆ ಹಗ್ಗಗಳಿಂದ ಕೂಡಿದೆ. ಒಂದೊಂದು ಹಗ್ಗವನ್ನೂ ಮೂರು ಮೂರು ಎಳೆಗಳಿಂದ ನೇಯುತ್ತಾರೆ. ಆದ್ದರಿಂದ ದೇವರ ಗುಣಗಳಂತೆ ಒಂದೊಂದು ಗುಣವೂ ಅನೇಕ ಗುಣಗಳಿಂದ ಕೂಡಿದೆ. ಎಂತಹ ಕೆಟ್ಟ ವಾದಗಳಾದರೂ ವೇದವು ಈ ಗುಣಗಳನ್ನು ಎಂದೂ ಸಡಿಲಿಸುವುದಿಲ್ಲ. ಯಜ್ಞೋಪವೀತದ ಎಳೆಗಳೂ ಎಂದೂ ತುಂಡಾಗುವುದಿಲ್ಲ. ಅಷ್ಟು ದೃಢವಾಗಿದೆ. ಬಲರಾಮನು ಜೀವನು. ವೇದಗಳಿಂದ ದೇವರನ್ನು ಹೊಗಳುವವನು. ಕೃಷ್ಣನು ಈಶನು. ವೇದಪ್ರತಿಪಾದ್ಯನು. ಹೀಗೆ ವೇದವು ಇಬ್ಬರನ್ನೂ ಆಶ್ರಯಿಸಿಕೊಂಡಿದೆ. ಯಜ್ಞೋಪವೀತವೂ ಇಬ್ಬರನ್ನೂ ಆಶ್ರಯಿಸಿದೆ. ವೇದಗಳು ಅಪೌರುಷೇಯಗಳು. ವ್ಯಕ್ತಿಯ ದೋಷಗಳು ಅಲ್ಲಿ ಸೇರಲು ಅವಕಾಶವಿಲ್ಲ. ಆದ್ದರಿಂದ ಉಪವೀತದಂತೆ ನಿರ್ಮಲವಾಗಿದೆ. ಈ ರೀತಿ ರಾಜರು ವೇದಗಳಿಗೂ ಯಜ್ಞೋಪವೀತಕ್ಕೂ ಹೋಲಿಕೆಯನ್ನು ತೋರಿಸುತ್ತಾರೆ.

**ಸಂದೇಶ** : ಉಪನಯನ, ಯಜ್ಞೋಪವೀತಧಾರಣೆ ಅಂದರೆ ವೇದಾಧ್ಯಯನದ ಅಧಿಕಾರವನ್ನು ಹೊರುವುದು ಎಂಬ ಅನುಸಂಧಾನ ಇರಬೇಕು.

**ಲೋಕಂ ವಿಡಂಬಯಿತುಮೇವ ಮಿಹೋಪನೀತಃ**
**ಸತ್ಯಾಂ ಕರಿಷ್ಯತಿ ಹರಿರ್ಮದಪತ್ಯವಾಂಛಾಮ್ ।**

ಇತ್ಥಂ ಪ್ರಹೃಷ್ಟಹೃದಿವಾಗ್ನಿರಸೌ ವಿಶಂಕಃ
ಜಜ್ವಾಲ ಯಜ್ವವರಮಂತ್ರಹುತೈರ್ಹವಿರ್ಭಿಃ ॥ ೨೩ ॥

ಲೋಕಂ=ಜನರನ್ನು; ವಿಡಂಬಯಿತುಂ ಏವ=ನಟಿಸಲು; ಇಹ=ಇಲ್ಲಿ; ಉಪನೀತಃ= ಉಪನೀತನಾದ; ಹರಿಃ=ಕೃಷ್ಣನು; ಮತ್=ನನ್ನ; ಅಪತ್ಯ=ಮಕ್ಕಳ; ವಾಂಛಾಂ= ಅಪೇಕ್ಷೆಯನ್ನು; ಸತ್ಯ=ಸತ್ಯವನ್ನಾಗಿ; ಕರಿಷ್ಯತಿ=ಮಾಡುತ್ತಾನೆ; ಇತ್ಥಂ=ಈ ರೀತಿಯಾಗಿ; ಪ್ರಹೃಷ್ಟ=ಸಂತೋಷಗೊಂಡ; ಹೃತ್ ಇವ=ಮನಸ್ಸಿನವನಂತೆ; ಅಸೌ=ಈ; ಅಗ್ನಿಃ= ಬೆಂಕಿಯು; ವಿಶಂಕಃ=ಸಂಶಯ ಇಲ್ಲದೆ; ಯಜ್ವ=ಯಾಜ್ಞಿಕರ; ವರ=ಶ್ರೇಷ್ಠರಿಂದ; ಮಂತ್ರ= ಮಂತ್ರಗಳಿಂದ; ಹುತೈಃ=ಹೋಮಿಸಲ್ಪಟ್ಟ; ಹವಿರ್ಭಿಃ=ಹವಿಸ್ಸುಗಳಿಂದ; ಜಜ್ವಾಲ=ಜ್ವಲಿಸಿತು.

ಈ ಉತ್ಸವದಲ್ಲಿ ಉತ್ತಮ ಪುರೋಹಿತರಿದ್ದರು. ಮಂತ್ರಪುರಸ್ಸರವಾಗಿ ಅಗ್ನಿಯಲ್ಲಿ ಆಹುತಿಯನ್ನು ಕೊಡುತ್ತಿದ್ದರು. ಅಗ್ನಿಯು ಚೆನ್ನಾಗಿ ಉರಿಯುತ್ತಿತ್ತು. ಇದು ಸಹಜವಾದ ಪ್ರಕ್ರಿಯೆ.

ರಾಜರು ಇದನ್ನು ಈ ರೀತಿ ಉತ್ಪ್ರೇಕ್ಷಿಸುತ್ತಾರೆ –ಕೃಷ್ಣನಿಗೆ ಉಪನಯನವಾದಾಗ ಅಗ್ನಿ ಬಹಳ ಸಂತೋಷದಲ್ಲಿದ್ದಾನೆ. ಪುರೋಹಿತರು ಕೊಡುವ ಆಹಾರವನ್ನು ಸ್ವೀಕರಿಸಿ ಕುಣಿಯುತ್ತಿದ್ದಾನೆ. ಕಾರಣ ಈ ಅಗ್ನಿಗೆ ಹದಿನಾರುಸಾವಿರ ಮಕ್ಕಳು. ಇವರಿಗೆಲ್ಲಾ ಕೃಷ್ಣನ ಪತ್ನಿಯರಾಗಬೇಕೆಂಬ ಆಸೆ ಆಯಿತು. ಆದರೆ ಇವರೆಲ್ಲಾ ಗಂಡುಮಕ್ಕಳು. ಹೆಣ್ಣಾಗುವುದಕ್ಕೋಸ್ಕರ ಬಹಳ ತಪಸ್ಸು ಮಾಡಿದರು. ವಾಯುದೇವರು 'ತಥಾಸ್ತು' ಅಂದರು. ಕೃಷ್ಣನಿಗೆ ಲಗ್ನದ ಅಧಿಕಾರ ಬರಬೇಕಾದರೆ ಆತನಿಗೆ ಉಪನಯನ ಆಗಬೇಕು. ಈಗ ಉಪನಯನ ಆಯಿತು. ಲಗ್ನದ ಅಧಿಕಾರ ಬಂತು. ಇನ್ನು ಈ ಮಕ್ಕಳನ್ನು ಲಗ್ನ ಆಗುತ್ತಾನೆ. ಒಂದೊಂದು ಹುಡುಗಿಗೆ ಲಗ್ನಮಾಡಲು ಲೋಕದಲ್ಲಿ ಜನರು ಬಹಳ ಶ್ರಮಿಸುತ್ತಾರೆ. ಈಗ ಹದಿನಾರು ಸಾವಿರವನ್ನೂ ಒಮ್ಮೆಲೆ ಮದುವೆ ಆಗುವಾಗ ಯಾರಿಗೆ ತಾನೆ ಸಂತೋಷ ಆಗಲಿಕ್ಕಿಲ್ಲ.

**ಸಂದೇಶ** : ಮಗಳಿಗೆ ಲಗ್ನದ ಪ್ರಸಂಗ ಬಂದಾಗ ಅಗ್ನಿಪುತ್ರಿಯರನ್ನೂ ಕೃಷ್ಣನನ್ನೂ ಧ್ಯಾನಿಸಬೇಕು.

ಆಚಾರ್ಯಃ ಪುರಾಣಪುಂಸೇ ಸಕಲವಿದೇ
ಗಾಯತ್ರೀಮನುಮದಿಶನ್ಮಮೇತ್ಥಮೂಹಃ
ತದ್ವ್ಯಾಜಾತ್ತವ ಗುಣಚಿಂತಕಾಯ ಮಹ್ಯಂ
ಸದ್ಬುದ್ಧಿಂ ದಿಶದಯಯೇತ್ಯಸೌ ಯಯಾಚೇ ॥ ೨೪ ॥

ಆಚಾರ್ಯಃ=ವಸುದೇವನು; ಸಕಲ=ಎಲ್ಲವನ್ನೂ; ವಿದೇ=ತಿಳಿದಿರುವ; ಪುರಾಣ= ಪ್ರಾಚೀನ; ಪುಂಸೇ=ಪುರುಷನಿಗೆ; ಗಾಯತ್ರೀ=ಗಾಯತ್ರೀ ಎಂಬ; ಮನುಂ=ಮಂತ್ರವನ್ನು;

ಅದಿಶತ್=ಕೊಟ್ಟನು; ತತ್=ಉಪದೇಶದ; ವ್ಯಾಜಾತ್=ನಿಮಿತ್ತದಿಂದ; ತವ=ನಿನ್ನ; ಗುಣ=ಗುಣಗಳ; ಚಿಂತಕಾಯ=ಧ್ಯಾಯಕನಾದ; ಮಹ್ಯಂ=ನನಗೆ; ದಯಯಾ= ದಯೆಯಿಂದ; ಸತ್=ಒಳ್ಳೆಯ; ಬುದ್ಧಿಂ=ಬುದ್ಧಿಯನ್ನು; ದಿಶ=ಕೊಡು; ಇತಿ=ಎಂದು; ಯಯಾಚೇ=ಬೇಡಿದನು; ಇತ್ಥಂ=ಈ ರೀತಿಯಾಗಿ; ಮಮ=ನನ್ನ; ಊಹಃ=ಊಹೆಯು.

ಕೃಷ್ಣನು ಸರ್ವಜ್ಞನು. ವಸುದೇವನಿಗಿಂತಲೂ ಮೊದಲಿನವನು. ಇಂತಹ ಕೃಷ್ಣನಿಗೆ ವಸುದೇವನು ಗಾಯತ್ರಿಯನ್ನು ಉಪದೇಶಿಸಿದನು. ಇದು ಹೇಗೆ ಸಾಧ್ಯ? ಯಾಕೆಂದರೆ ಈತನು ಸರ್ವಜ್ಞನಾದ್ದರಿಂದ ಉಪದೇಶದ ಅಗತ್ಯ ಇಲ್ಲ. ತಿಳಿಯದವರಿಗೆ ಉಪದೇಶವು. ಹಾಗೆಯೇ ದೊಡ್ಡವರು ಚಿಕ್ಕವರಿಗೆ ಉಪದೇಶ ಮಾಡುವ ಕ್ರಮ. ಕೃಷ್ಣನು ಎಲ್ಲರಿಗಿಂತಲೂ ಮೊದಲು ಇರುವವನು. ಹೀಗಿರುವಾಗ ವಸುದೇವನು ಕೃಷ್ಣನಿಗಿಂತ ಚಿಕ್ಕವನಾದ್ದರಿಂದ ಹೇಗೆ ಉಪದೇಶಮಾಡಿದ? ಈ ಪ್ರಶ್ನೆಗಳಿಗೆ ರಾಜರು ಈ ರೀತಿ ಹೇಳುತ್ತಾರೆ. ಇಲ್ಲಿ ಕೃಷ್ಣನಿಗೆ ಉಪದೇಶ ಮಾಡಿದ್ದೇ ಅಲ್ಲ. ವಸುದೇವನು ಕೃಷ್ಣನ ಕಿವಿಯಲ್ಲಿ ಗಾಯತ್ರಿಯನ್ನು ಹೇಳಿದನು. ಹಾಗೆಯೇ ಅದರ ಅರ್ಥವನ್ನೂ 'ಸದಾ ನಿನ್ನ ಗುಣಗಳನ್ನು ಮೆಲುಕುಹಾಕುವ ನನಗೆ ಒಳ್ಳೆಯ ಬುದ್ಧಿಯನ್ನು ಕೊಡು' ಎಂದು ಮೆಲುಕುಹಾಕಿದನು. ಈ ರೀತಿಯಾಗಿ ನನಗೆ ಒಳ್ಳೆಯ ರೀತಿಯಲ್ಲಿ ಪ್ರೇರಣೆ ಮಾಡು ಎಂದು ವಸುದೇವನು ಗಾಯತ್ರಿಯನ್ನು ಹೇಳುವ ಮೂಲಕ ಕೃಷ್ಣನಲ್ಲಿ ಪ್ರಾರ್ಥನೆ ಮಾಡಿದನು. ಹೊರತು ಕೃಷ್ಣನಿಗೆ ಉಪದೇಶ ಮಾಡಿದ್ದಲ್ಲ. ಆದ್ದರಿಂದ ಯಾವ ದೋಷವೂ ಇಲ್ಲ ಎಂದು.

**ಸಂದೇಶ** : ಗಾಯತ್ರಿಯನ್ನು ಜಪಿಸುವಾಗ ಸೂರ್ಯನನ್ನಲ್ಲ. ಸೂರ್ಯ-ನಾರಾಯಣನನ್ನು ಧ್ಯಾನಿಸಬೇಕು.

**ಇತಃ ಪರಂ ಶ್ರೌತಪಥಸ್ಥಿತೋಽಯಂ**
**ನ ಯಾತಿಗೋಪಾಲಕಬಾಲಲೀಲಾಮ್ ।**
**ಇತೀವ ಶೌರಿಃ ಸಹ ದಕ್ಷಿಣಾಭಿ-**
**ರ್ದದೌ ಮುದಾ ಗಾಃ ಸುಭಗಾ ಮುನಿಭ್ಯಃ ॥ ೨೫ ॥**

ಇತಃ ಪರಂ=ಇನ್ನು ಮುಂದೆ; ಅಯಂ=ಕೃಷ್ಣನು; ಶ್ರೌತ=ವೇದದ; ಪಥ=ದಾರಿಯಲ್ಲಿ; ಸ್ಥಿತಃ=ಇರುವವನು; ಗೋಪಾಲಕ=ಗೋಪಾಲರ; ಬಾಲ=ಬಾಲಕರ; ಲೀಲಾಂ=ಲೀಲೆಯನ್ನು; ನ ಯಾತಿ=ಹೊಂದುವುದಿಲ್ಲ; ಇತಿ ಇವ=ಎಂಬಂತೆ; ಶೌರಿಃ=ವಸುದೇವನು; ಸುಭಗಾಃ=ಒಳ್ಳೆಯ ಹಾಲುಳ್ಳ; ಗಾಃ=ಧೇನುಗಳನ್ನು; ದಕ್ಷಿಣಾಭಿಃ=ದಕ್ಷಿಣೆಗಳಿಂದ; ಸಹ=ಕೂಡಿ; ಮುನಿಭ್ಯಃ=ಬ್ರಾಹ್ಮಣರಿಗೆ; ಮುದಾ=ಸಂತೋಷದಿಂದ; ದದೌ=ಕೊಟ್ಟನು.

ಉಪನಯನದ ಕಾಲದಲ್ಲಿ ವಸುದೇವನು ಅನೇಕ ಗೋವುಗಳನ್ನು ಯೋಗ್ಯರಿಗೆ ದಾನ ಮಾಡಿದನು. ಜೊತೆಯಲ್ಲಿ ದಕ್ಷಿಣೆಯನ್ನೂ ಕೊಟ್ಟನು. ಉಪನಯನ ಕಾಲದಲ್ಲಿ

ತಿಳಿದೋ ತಿಳಿಯದೆಯೋ ಆಗುವ ತಪ್ಪಿನ ಪರಿಹಾರಕ್ಕಾಗಿ ಈ ದಾನ. ರಾಜರು ಈ ದಾನಕ್ಕೆ ಬೇರೆ ಕಾರಣವನ್ನು ತಿಳಿಸುತ್ತಾರೆ. ಕೃಷ್ಣನು ಈ ತನಕ ಸಂಸ್ಕಾರರಹಿತನಾಗಿದ್ದ. ಈಗ ಉಪನೀತನಾದ. ಅಸಂಸ್ಕೃತನಾಗಿರುವಾಗ ಯಾವ ಕಟ್ಟುಪಾಡುಗಳೂ ಇರುವುದಿಲ್ಲ. ದನಮೇಯಿಸುವವನಾಗಿದ್ದ. ಉಪನಯನದ ಅನಂತರ ಆ ಕೆಲಸ ಮಾಡಲು ಸಾಧ್ಯವಿಲ್ಲ. ವೇದಾಧ್ಯಯನ ಮಾಡಬೇಕು. ಆದ್ದರಿಂದ ಈ ಆಕಳುಗಳನ್ನು ಇಟ್ಟುಕೊಂಡು ಪ್ರಯೋಜನವಿಲ್ಲ ಎಂಬ ಅಭಿಪ್ರಾಯದಿಂದಲೋ ಎಂಬಂತೆ ವಸುದೇವನು ಆಕಳುಗಳನ್ನು ದಾನ ಮಾಡಿದನು.

**ಸಂದೇಶ** : ಉಪನೀತವಟುವು ಸ್ವೇಚ್ಛಾಚಾರಿಯಾಗದೆ ಅಧ್ಯಯನಶೀಲನಾಗಬೇಕು.

**ಯಜ್ಞೋಪವೀತೋಜ್ವಲಕಂಠದೇಶಃ**
**ಕೃಷ್ಣಾಜಿನಶ್ರೀರ್ಮುನಿಸಂಘಮಾನ್ಯಃ ।**
**ಪ್ರಾಣಪ್ರಣೇತಾ ಧೃತತರ್ಕಮುದ್ರಃ**
**ಧ್ಯಾಯನ್ ಮನುಂ ವ್ಯಾಸ ಇವಾನ್ವಶಿಕ್ಷತ್** ॥ ೨೬ ॥

ಯಜ್ಞೋಪವೀತ=ಉಪವೀತದಿಂದ; ಉಜ್ವಲ=ಶೋಭಿಸುವ; ಕಂಠ=ಕುತ್ತಿಗೆಯ; ದೇಶಃ=ಪ್ರದೇಶವುಳ್ಳ; ಕೃಷ್ಣಾಜಿನ=ಕೃಷ್ಣಾಜಿನದ; ಶ್ರೀಃ=ಕಾಂತಿವುಳ್ಳ; ಮುನಿ=ಋಷಿಗಳ; ಸಂಘ=ಸಮೂಹದಿಂದ; ಮಾನ್ಯಃ=ಆದೃತನಾದ; ಪ್ರಾಣಪ್ರಣೇತಾ=ಪ್ರಾಣಾಯಾಮ ಮಾಡುವ; ಧೃತ=ಧರಿಸಿದ; ತರ್ಕ=ಜ್ಞಾನದ; ಮುದ್ರಃ=ಮುದ್ರೆವುಳ್ಳ ಕೃಷ್ಣನು; ವ್ಯಾಸ ಇವ= ವೇದವ್ಯಾಸರಂತೆ; ಧ್ಯಾಯನ್=ಧ್ಯಾನಮಾಡುತ್ತಾ; ಮನುಂ=ಗಾಯತ್ರಿಯನ್ನು; ಅನ್ವಶಿಕ್ಷತ್= ಜಪಿಸಿದನು.

ಕೃಷ್ಣನು ಗಾಯತ್ರೀಜಪವನ್ನು ಮಾಡುತ್ತಿದ್ದಾನೆ. ಕೃಷ್ಣಾಜಿನವನ್ನು ಉಟ್ಟುಕೊಂಡು ಕೊರಳಲ್ಲಿ ಉಪವೀತವನ್ನು ಧರಿಸಿ, ಪ್ರಾಣಾಯಾಮ ಮಾಡುತ್ತಿದ್ದಾನೆ. ಕೈಯಲ್ಲಿ ಜ್ಞಾನಮುದ್ರೆಯನ್ನು ತೋರಿಸುತ್ತಿದ್ದಾನೆ. ಸುತ್ತ ಅನೇಕ ಮುನಿಗಳೂ ಇದ್ದಾರೆ. ಇಂತಹ ಕೃಷ್ಣನನ್ನು ಕಂಡಾಗ ರಾಜರಿಗೆ ವ್ಯಾಸರ ಸ್ಮರಣೆ ಬಂತು. ಕೃಷ್ಣನಲ್ಲಿ ಕಂಡ ಎಲ್ಲಾ ಧರ್ಮಗಳೂ ಋಷಿಶ್ರೇಷ್ಠರಾದ ವ್ಯಾಸರಲ್ಲಿಯೂ ಇದೆ. ಕೃಷ್ಣನು ಪ್ರಾಣಾಯಾಮ ಮಾಡುತ್ತಿದ್ದಾನೆ. ವ್ಯಾಸರು ಪ್ರಾಣನ ತೃತೀಯ ಅವತಾರರಾದ ಮಧ್ವರಿಗೆ ಪ್ರವಚನ ಮೂಲಕ ಪ್ರಣೇತೃಗಳು; ವ್ಯಾಸಕೃಷ್ಣರಿಗೆ ಐಕ್ಯ ಇದೆ. ಆದ್ದರಿಂದ ಇದು ಸಮಗ್ರ ಹೋಲಿಕೆ ಆಗುತ್ತದೆ.

**ಸಂದೇಶ** : ಜಪಿಸುವ ವ್ಯಕ್ತಿ ಈ ಎಲ್ಲಾ ಧರ್ಮಗಳಿಂದ ಕೂಡಿರಬೇಕು.

**ದಿನೇ ದಿನೇಗ್ನೌ ಸಮಿಧೋ ಜುಹಾವ**
**ತಥಾ ಶ್ರುತೀನಾಂ ಜನನೀಂ ಜಜಾಪ ।**
**ಸ್ವಕುಕ್ಷಿಪೂರ್ತೌ ನ ರತಿರ್ಹಿ ಕಸ್ಯ**
**ನಿಜಾನುಭಾವಸ್ಮರಣೋತ್ಸವೇ ಚ** ॥ ೨೭ ॥

ದಿನೇದಿನೇ=ಪ್ರತಿದಿನವೂ; ಅಗ್ನೌ=ಅಗ್ನಿಯಲ್ಲಿ; ಸಮಿಧಃ=ಸಮಿಧೆಗಳನ್ನು; ಜುಹಾವ=ಹೋಮಿಸಿದನು; ತಥಾ=ಹಾಗೆಯೇ; ಶ್ರುತೀನಾಂ=ವೇದಗಳ; ಜನನೀಂ=ತಾಯಿಯನ್ನು; ಜಜಾಪ=ಜಪಿಸಿದನು; ಸ್ವ=ತನ್ನ; ಕುಕ್ಷಿ=ಉದರದ; ಪೂರ್ತೌ=ಪೂರ್ತಿಯಲ್ಲಿ; ನಿಜ=ತನ್ನ; ಅನುಭಾವ=ಮಹಿಮೆಗಳ; ಸ್ಮರಣ=ಸ್ಮರಣೆಯೆಂಬ; ಉತ್ಸವೇ ಚ=ಉತ್ಸವದಲ್ಲಿಯೂ; ಕಸ್ಯ=ಯಾರಿಗೆ; ನರತಿಃ=ಆಸಕ್ತಿ ಇಲ್ಲ.

ಕೃಷ್ಣನು ಪ್ರತಿದಿನವೂ ಅಗ್ನಿಕಾರ್ಯ ಗಾಯತ್ರೀ ಜಪಾದಿಗಳನ್ನು ಬಹಳ ಶ್ರದ್ಧೆಯಿಂದ, ಉತ್ಸಾಹದಿಂದ ಮಾಡುತ್ತಿದ್ದನು. ಸ್ವಲ್ಪವೂ ಔದಾಸೀನ್ಯವನ್ನು ತೋರಿಸಲಿಲ್ಲ. ಇದೇನೂ ಆಶ್ಚರ್ಯವಲ್ಲ ಎಂದು ರಾಜರು ಹೇಳುತ್ತಾರೆ. ಯಾಕೆಂದರೆ ಲೋಕದಲ್ಲಿ ಊಟಕ್ಕೂ ಸನ್ಮಾನಕ್ಕೂ ಯಾರೂ ಉದಾಸೀನರಾಗುವುದಿಲ್ಲ. ಅಗ್ನಿಕಾರ್ಯದಲ್ಲಿ ಆಹುತಿಯನ್ನು ಕೊಡುವುದು ಅಂತರ್ಯಾಮಿಯಾದ ಹರಿಗೇ. ಆದ್ದರಿಂದ ಅಗ್ನಿಕಾರ್ಯ ಅಂದರೆ ಕೃಷ್ಣದೇವರಿಗೆ ಊಟ. ಸಮಗ್ರ ವೈದಿಕ ಸಾಹಿತ್ಯಕ್ಕೆ ತಾಯಿಯಂತೆ ಇದೆ ಗಾಯತ್ರೀ. ವೇದಗಳು ದೇವರನ್ನು ಹೊಗಳುತ್ತವೆ. ಆದ್ದರಿಂದ ಗಾಯತ್ರಿಯೂ ದೇವರನ್ನೇ ಹೊಗಳುವುದು. ಹೀಗೆ ಗಾಯತ್ರಿಯನ್ನು ಜಪಿಸುವುದು ಕೃಷ್ಣನನ್ನೇ ಹೊಗಳುವುದು ಎಂದರ್ಥ. ಹೊಗಳುವುದು ಸನ್ಮಾನದ ಒಂದು ಭಾಗ. ಸನ್ಮಾನ ಯಾರಿಗೆ ಅಪಥ್ಯವಾಗುತ್ತದೆ.

**ಸಂದೇಶ** : ನಾವು ಮಾಡುವ ಯಾಗಾದಿಗಳಲ್ಲಿ ಆಹುತಿಯು ಅಂತರ್ಯಾಮಿಗೇ. ಹೊಗಳುವ ಮಂತ್ರಗಳು ಅಂತರ್ಯಾಮಿ ಹರಿಗೇ ಎಂಬ ಅನುಸಂಧಾನ ಸದಾ ಇರಬೇಕು.

**ತಂ ಬ್ರಹ್ಮಚರ್ಯವ್ರತಧುರ್ಯಮಾರ್ಯಾಃ**
**ಸಂದೃಶ್ಯ ಹೃಷ್ಟಾಃ ಪರಮಬ್ಧಿಪುತ್ರೀ ।**
**ವಕ್ಷಸ್ಥಲಸ್ಥಾ ತ್ರಪಯಾಕುಲಾಸೀ-**
**ದಭ್ಯರ್ಥ್ಯಮಾನೌ ಚ ದಿನೇಶವಹ್ನೀ ॥ ೨೮ ॥**

ಆರ್ಯಾಃ=ಶ್ರೇಷ್ಠರು; ಬ್ರಹ್ಮಚರ್ಯ=ಬ್ರಹ್ಮಚರ್ಯವೆಂಬ; ವ್ರತ=ವ್ರತದಲ್ಲಿ; ಧುರ್ಯಂ=ಶ್ರೇಷ್ಠನಾದ; ತಂ=ಕೃಷ್ಣನನ್ನು; ಸಂದೃಶ್ಯ=ನೋಡಿ; ಹೃಷ್ಟಾಃ=ಸಂತೋಷಗೊಂಡರು; ಪರಂ=ಆದರೆ; ವಕ್ಷಸ್ಥಲ=ಎದೆಯಲ್ಲಿ; ಸ್ಥ= ಇರುವ; ಅಬ್ಧಿ=ಸಮುದ್ರದ; ಪುತ್ರೀ= ಮಗಳಾದ ರಮೆಯು; ಅಭ್ಯರ್ಥ್ಯಮಾನೌ=ಪ್ರಾರ್ಥಿಸಲ್ಪಡುವ; ದಿನೇಶ=ಸೂರ್ಯನು; ವಹ್ನೀ= ಅಗ್ನಿಯು; ತ್ರಪಯಾ=ನಾಚಿಕೆಯಿಂದ; ಆಕುಲಾ=ಗಾಬರಿಗೊಂಡವಳು; ಆಸೀತ್=ಆದಳು.

ಕೃಷ್ಣನು ಈಗ ಬ್ರಹ್ಮಚಾರಿ. ಬ್ರಹ್ಮಚಾರಿಯಾಗಿ ಇರಬೇಕಾದ ಎಲ್ಲಾ ನಿಯಮಗಳನ್ನೂ ಚೆನ್ನಾಗಿ ಪಾಲಿಸುತ್ತಿದ್ದಾನೆ. ಇದರಿಂದ ತಂದೆತಾಯಿಗಳಿಗೆ ಉಪನಯನಕ್ಕೆ ಬಂದಿರುವ ಜನರಿಗೆ ಬಹಳ ಆನಂದವಾಯಿತು. ಜವಾಬ್ದಾರಿಯ ಸ್ಥಾನದಲ್ಲಿರುವ ಕೃಷ್ಣನು ಬ್ರಹ್ಮಚಾರಿಗಳಿಗೆ ಒಳ್ಳೆಯ ಮಾರ್ಗದರ್ಶಕನಾಗಿದ್ದಾನೆ ಎಂದು. ಬ್ರಹ್ಮಚಾರಿಯಾದ ಕೃಷ್ಣನ

ಎದೆಯಲ್ಲಿ ರಮೆ ಇದ್ದಾಳೆ –ಶ್ರೀವತ್ಸರೂಪದಲ್ಲಿ. ಆಕೆಗೆ ಮಾತ್ರ ನಾಚಿಕೆ ಗಾಬರಿ ಎರಡೂ ಆಯಿತು. ಗಂಡನ ಜೊತೆಗೆ ಸಾರ್ವಜನಿಕವಾಗಿ ಕಾಣಿಸಿಕೊಂಡರೆ ಹೆಣ್ಣಿಗೆ ಏನೂ ನಾಚಿಕೆ ಗಾಬರಿ ಇರುವುದಿಲ್ಲ. ಇವನು ಬ್ರಹ್ಮಚಾರಿ. ಬ್ರಹ್ಮಚಾರಿಯ ಜೊತೆಗೆ ಇರಲು ಹೆಣ್ಣಿಗೆ ನಾಚಿಕೆ ಆಗುವುದು ಸಹಜ. ಸಮಾಜದಿಂದ ಎಲ್ಲಿ ಅಪವಾದ ಬರುತ್ತದೋ ಎಂಬ ಗಾಬರಿ. ಹೆಣ್ಣಿಗೆ ಬ್ರಹ್ಮಚಾರಿ ಬಳಿ ಏನು ಕೆಲಸ? ಯಾಕೆ ಇರುವುದು? ಎಂಬಿತ್ಯಾದಿ ಅಪವಾದಗಳು. ಯದ್ಯಪಿ ಈಕೆಯು ಕೃಷ್ಣನ ಪತ್ನಿಯೇ. ಆದ್ದರಿಂದ ನಾಚುವ, ಗಾಬರಿಗೊಳ್ಳುವ ಪ್ರಸಂಗ ಇಲ್ಲ. ಆದರೂ ಬ್ರಹ್ಮಚಾರಿಯು ಹೆಣ್ಣಿಂದ ದೂರವಿರಬೇಕು ಎಂದು ತಿಳಿಸಲು ರಾಜರು ಈ ರೀತಿ ಹೇಳುತ್ತಾರೆ.

ಹಾಗೆಯೇ ಜಪ ಅಗ್ನಿಕಾರ್ಯಗಳ ಪ್ರಸಂಗದಲ್ಲಿ ಕೃಷ್ಣನು ಸೂರ್ಯನಿಂದ ಆರೋಗ್ಯವನ್ನೂ, ಅಗ್ನಿಯಿಂದ ಆಯುಷ್ಯಾದಿಗಳನ್ನೂ ಬೇಡುತ್ತಿದ್ದನು. ಕೃಷ್ಣನು ಧನ್ವಂತರಿಯ ರೂಪನು. ಆದ್ದರಿಂದ ಎಲ್ಲರ ಆರೋಗ್ಯವೇ ಈತನ ಕೈಯಲ್ಲಿ. ಹೀಗಿರುವಾಗ ಸೂರ್ಯನಿಂದ ಆರೋಗ್ಯ ಬೇಡುವುದು ಎಷ್ಟು ಸರಿ. ಕೃಷ್ಣನಿಗೆ ಹುಟ್ಟು ಸಾವು ಎರಡೂ ಇಲ್ಲ. ಇವು ಉಳ್ಳವರಿಗೆ ಆಯುಷ್ಯಾದಿಗಳು ಬೇಕು. ಅಗ್ನಿಯ ಆಯುಷ್ಯವೇ ಈತನ ಅಧೀನ. ಆದ್ದರಿಂದ ಅಗ್ನಿಯಿಂದ ಆಯುಷ್ಯದ ಪ್ರಾರ್ಥನೆಯೂ ಸರಿ ಕಾಣುವುದಿಲ್ಲ. ಚಿಕ್ಕವರು ದೊಡ್ಡವರನ್ನು ಬೇಡುವುದು ಕ್ರಮ. ಇಲ್ಲಿ ದೊಡ್ಡವನಾದ ಕೃಷ್ಣನೇ ಬೇಡುತ್ತಿದ್ದಾನೆ. ಇದರಿಂದಾಗಿ ಸೂರ್ಯಾಗ್ನಿಗಳು ನಾಚಿದರು. ಭೀತರಾದರು.

ವಿದ್ಯಾರ್ಥಿಯು ನಿಶ್ಚಿತ ಪುಸ್ತಕವನ್ನು ತರಲಿಲ್ಲ ಎಂದು ತಿಳಿದ ಅಧ್ಯಾಪಕನು ಆತನಲ್ಲಿ ಅದೇ ಪುಸ್ತಕವನ್ನು ಕೇಳಿದಾಗ ವಿದ್ಯಾರ್ಥಿಯು ಗಾಬರಿಗೊಳ್ಳುವಂತೆ. ದೊಡ್ಡವರಲ್ಲಿ ಒಂದು ವಸ್ತು ಉತ್ತಮವಾದದ್ದು ಬಹಳವಾಗಿ ಇದೆ. ಚಿಕ್ಕವನಲ್ಲಿ ಅದೇ ರೀತಿಯ ವಸ್ತು ನಿಕೃಷ್ಟವಾದದ್ದು ಕಮ್ಮಿ ಇದೆ. ಹೀಗಿರುವಾಗ ದೊಡ್ಡವರು ಚಿಕ್ಕವರಲ್ಲಿ ಆ ವಸ್ತುವನ್ನು ಬೇಡಿದರೆ ಚಿಕ್ಕವರಿಗೆ ಅದನ್ನು ಕೊಡಲು ನಾಚಿಕೆ ಆಗುವಂತೆ.

**ಸಂದೇಶ** : ಬ್ರಹ್ಮಚಾರಿಯು ಸಂಪತ್ತಿನಿಂದ, ನಾರಿಯರಿಂದ ದೂರವಿರಬೇಕು. ಅಧ್ಯಯನದ ಸಲುವಾಗಿ ಆಯುಷ್ಯ ಆರೋಗ್ಯಗಳನ್ನು ಪ್ರಾರ್ಥಿಸಬೇಕು.

**ಗುರೋರ್ಗೃಹಂ ಸರ್ವವಿದಗ್ರಗಣ್ಯೌ ಉಪೇಯತುಸ್ತೌ ಸಮಿಧಃ ಸಮರ್ಪ್ಯ ।**
**ಭವಾನ್ ಭವಾರಣ್ಯಮಿದಂ ಚಿದಗ್ನಾವತಃ ಪರಂ ನಿರ್ದಹತಾದಿತೀವ ॥ ೨೯ ॥**

ಸರ್ವ=ಎಲ್ಲವನ್ನೂ; ವಿತ್=ತಿಳಿದವರಿಗೆ; ಅಗ್ರಗಣ್ಯೌ=ಶ್ರೇಷ್ಠರಾದ ರಾಮಕೃಷ್ಣರು; ಭವಾನ್=ನೀನು; ಇದಂ=ಈ; ಭವ=ಸಂಸಾರವೆಂಬ; ಅರಣ್ಯಂ=ಕಾಡನ್ನು; ಚಿತ್=ಜ್ಞಾನವೆಂಬ; ಅಗ್ನೌ=ಬೆಂಕಿಯಲ್ಲಿ; ಅತಃ ಪರಂ=ಇನ್ನುಮುಂದೆ; ನಿರ್ದಹತಾತ್=ಸುಡಿರಿ;

ಇತಿ ಇವ=ಎಂಬಂತೆ; ತೌ=ಅವರು; ಸಮಿಧಃ=ಸಮಿಧೆಗಳನ್ನು; ಸಮರ್ಪ್ಯ=ಅರ್ಪಿಸಿ; ಗುರೋಃ=ಗುರುಗಳ; ಗೃಹಂ=ಮನೆಯನ್ನು; ಉಪೇಯತುಃ=ಹೊಂದಿದರು.

ಉಪನಯದನಂತರ ಕೃಷ್ಣನು ಅಧ್ಯಯನಕ್ಕೆ ಗುರುಗಳ ಮನೆಗೆ ಹೋದನು. ಜೊತೆಯಲ್ಲಿ ಬಲರಾಮನೂ ಇದ್ದನು. ಅಧ್ಯಯನಕ್ಕೆ ಹೋಗುವಾಗ ಸಮಿಧೆಗಳನ್ನು ಹಿಡಿದುಕೊಂಡು ಹೋಗಬೇಕು. ಗುರುಗಳು ಪ್ರತಿದಿನ ಅಗ್ನಿಯಲ್ಲಿ ಆಹುತಿ ಕೊಡುತ್ತಾರೆ. ಆಹುತಿಗೆ ಸಮಿಧೆಗಳು ಬೇಕು. 'ಗುರು ಶುಶ್ರೂಷಯಾ ವಿದ್ಯಾ' ಗುರುಗಳ ಸೇವೆಯಿಂದ ವಿದ್ಯೆಯು ಲಭಿಸುವುದು ಎಂದು ಹಿರಿಯರ ಮಾತು. ಹಿರಿಯರ ಮಾತನ್ನು ಕೃಷ್ಣನು ಸ್ವ ಇಚ್ಛೆಯಿಂದಲೇ ನಡೆಸಿಕೊಡುವವನು. ಅದರಂತೆ ಇವರಿಬ್ಬರೂ ಸಮಿತ್ ಪಾಣಿಗಳಾಗಿಯೇ ಹೋದರು. ಕೃಷ್ಣನು ಸರ್ವಜ್ಞನು. ಬಲರಾಮನು ಸರ್ವಜ್ಞಕಲ್ಪನು. ಆದ್ದರಿಂದ ಅಧ್ಯಯನದ ಆವಶ್ಯಕತೆಯೇ ಇಲ್ಲ. ಆದರೂ ಲೋಕದ ನಿಯಮವನ್ನು ಅನುಸರಿಸಿದರು. ಆದರೆ ರಾಜರು ಇದನ್ನು ಬೇರೆ ರೀತಿ ಚಿತ್ರಿಸುತ್ತಾರೆ– ಈ ಗುರುಗಳು ಸಂಸಾರದಲ್ಲಿ ತುಂಬಾ ಶ್ರಮಪಡುತ್ತಿದ್ದಾರೆ. ಈ ಸಂಸಾರವನ್ನು ಅವರಿಂದ ಸುಡಿಸಿ ಅವರಿಗೆ ನೆಮ್ಮದಿ ಕೊಡಬೇಕಾಗಿದೆ. ಅಗ್ನಿಯಲ್ಲಿ ಸುಡಬೇಕು. ಅಗ್ನಿಯ ಹೆಸರು ಜ್ಞಾನ ಎಂದು. ಬೆಂಕಿಯು ಉರಿಯದೆ ಅದರಲ್ಲಿ ಯಾವುದನ್ನಾದರೂ ಸುಡಬಹುದು. ಉರಿಯಲು ಕಟ್ಟಿಗೆ ಬೇಕು. ಅದಕ್ಕಾಗಿ ಕಟ್ಟಿಗೆ ರೂಪದಲ್ಲಿ ಈ ಸಮಿಧೆಗಳನ್ನು ಹಿಡಿದುಕೊಂಡು ಹೋದರು. ಈ ಕಟ್ಟಿಗೆಯಿಂದ ಜ್ಞಾನವೆಂಬ ಅಗ್ನಿಯನ್ನು ಉರಿಸಿರಿ. ಅದರಲ್ಲಿ ನಿಮ್ಮ ಸಂಸಾರವನ್ನು ಸುಡಿರಿ ಎಂದು ತಿಳಿಸಲು ಎಂದು.

<u>**ಸಂದೇಶ**</u> : 'ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ಅರ್ಜುನ' ಜ್ಞಾನವೆಂಬ ಬೆಂಕಿಯು ಸಮಗ್ರ ಸಂಸಾರವನ್ನು ಸುಡುತ್ತದೆ. 'ಕರ್ಮಣಾ ಜ್ಞಾನಮಾತನೋತಿ' ಎಂಬ ಮಾತಿನಂತೆ ಯಾಗಾದಿ ಕರ್ಮಗಳಿಂದ ಜ್ಞಾನ ಬರುತ್ತದೆ. 'ಸಮಿಚ್ಚರ್ವಾಜ್ಯಕಾನ್ ಹುತ್ವಾ ಸಮ್ಯಕ್ ಪುರುಷಸೂಕ್ತಃ' ಯಾಗಾದಿಗಳನ್ನು ಸಮಿಧೆ, ಚರು, ಆಜ್ಯಗಳಿಂದ ಮಾಡಬೇಕು. ಈ ಮಾತಿನಂತೆ ಯಾಗಾದಿ ಕರ್ಮಗಳನ್ನು ಮಾಡಲು ಸಮಿಧೆಗಳು ಬೇಕು. ಸಮಿಧೆಯಿಂದ ಯಾಗ. ಯಾಗದಿಂದ ಜ್ಞಾನ. ಜ್ಞಾನದಿಂದ ಸಂಸಾರನಾಶ.

**ಅಥೋ ಚತುಃಷಷ್ಟಿದಿನೈಃ ಸ ತಾವತ್ ಕಲಾಃ ಪ್ರಜಗ್ರಾಹ ಬಲಶ್ಚ ಧೀಮಾನ್ ।**
**ಗುರೋಸ್ತತೋಽಪ್ಯಲ್ಪದಿನೈರ್ಯದಾಸಾಂ ಸಕೃತ್ಸಮುಚ್ಚಾರಣಮಪ್ಯಶಕ್ಯಮ್ ॥ ೩೦ ॥**

ಯತ್=ಯಾವ ಕಾರಣದಿಂದ; ತತಃ ಅಪಿ=೬೪ ದಿವಸಕ್ಕಿಂತಲೂ ಅಲ್ಪ=ಕಡಿಮೆ; ದಿನೈಃ=ದಿನಗಳಿಂದ; ಆಸಾಂ=ಈ ವಿದ್ಯೆಗಳ; ಸಕೃತ್=ಒಮ್ಮೆ; ಉಚ್ಚಾರಣಂ ಅಪಿ= ಉಚ್ಚಾರಣೆಯೂ ಕೂಡಾ; ಗುರೋಃ= ಗುರುಗಳಿಗೆ; ಅಶಕ್ಯಂ=ಅಸಾಧ್ಯವೋ; ಅಥೋ= ಆದ್ದರಿಂದ; ಚತುಃಷಷ್ಟಿ= ಅರುವತ್ತನಾಲ್ಕು; ದಿನೈಃ=ದಿನಗಳಿಂದ; ಸಃ ತಾವತ್=

ಕೃಷ್ಣನಾದರೂ; ಧೀಮಾನ್=ಬುದ್ಧಿವಂತನಾದ; ಬಲಶ್ಚ=ಬಲರಾಮನೂ; ಕಲಾಃ= ವಿದ್ಯೆಗಳನ್ನು; ಪ್ರಜಗ್ರಾಹ=ಸ್ವೀಕರಿಸಿದರು.

ಅರ್ವತ್ತನಾಲ್ಕು ರೀತಿಯ ವಿದ್ಯೆಗಳಿವೆ. ಅವೆಲ್ಲವನ್ನೂ ಇವರಿಬ್ಬರೂ ಅರುವತ್ತನಾಲ್ಕು ದಿವಸಗಳಲ್ಲಿ ಗುರುಗಳಿಂದ ಕಲಿತರು. ಸಾಮಾನ್ಯವಾಗಿ ದಡ್ಡರಿಗೆ ಅಧ್ಯಯನ ಮುಗಿಸಲು ಬಹಳ ಸಮಯ ಬೇಕು. ಒಂದೊಂದು ವಿದ್ಯೆಯನ್ನೂ ತುಂಬಾ ಸಲ ಹೇಳಿಕೊಡಬೇಕು. ಕೃಷ್ಣಬಲರಾಮರು ಬಹಳ ಮೇಧಾವಿಗಳು. ಹೀಗಿದ್ದರೂ ಇವರಿಗೆ ಯಾಕೆ ಇಷ್ಟು ಸಮಯ ತಗಲಿತು. ದಿವಸಕ್ಕೆ ಎರಡು–ಮೂರು ವಿದ್ಯೆಗಳನ್ನು ಒಂದೊಂದೇ ಬಾರಿ ಹೇಳಿಕೊಟ್ಟು ಬೇಗ ಮುಗಿಸಬಹುದಿತ್ತಲ್ಲಾ? ಎಂಬ ಪ್ರಶ್ನೆಗೆ ರಾಜರ ಉತ್ತರ ಈ ರೀತಿ ಇದೆ. ಇವರು ಬುದ್ಧಿವಂತರು ಎನ್ನುವುದರಲ್ಲಿ ಎರಡುಮಾತಿಲ್ಲ. ಗುರುಗಳು ಒಂದೊಂದೇ ಬಾರಿ ಹೇಳಿಕೊಟ್ಟದ್ದು ಹೌದು. ಇವರಿಗೆ ಅಧ್ಯಯನ ಮಾಡಿ ಆಯಾಸವೂ ಆಗುತ್ತಿರಲಿಲ್ಲ. ಆದರೆ ಗುರುಗಳು ಸಂಸಾರಿಗಳು, ಮನುಷ್ಯತಾನೆ. ಅವರ ಬುದ್ಧಿಗೆ ಸೀಮಾ ಇದೆ. ಆಯಾಸವೂ ಆಗುತ್ತದೆ. ಇವರಷ್ಟು ಬುದ್ಧಿವಂತನೂ ಅಲ್ಲ. ಪಾಠ ಮಾಡಬೇಕಾದರೆ ಪೂರ್ವಸಿದ್ಧತೆಯೂ ಬೇಕು. ದಿವಸಕ್ಕೆ ಒಂದು ಪಾಠಕ್ಕಿಂತ ಜಾಸ್ತಿ ಮಾಡಲು ತಾಕತ್ತು ಗುರುಗಳಿಗೆ ಇರಲಿಲ್ಲ. ಲೋಕದಲ್ಲಿ ಬೇರೆ ಕಡೆ ಶಿಷ್ಯರ ದೌರ್ಬಲ್ಯವು ಅಧ್ಯಯನ ವಿಳಂಬಕ್ಕೆ ಕಾರಣವಾದರೆ ಅಲ್ಲಿ ಗುರುಗಳ ದೌರ್ಬಲ್ಯವೇ ಕಾರಣವಾಯಿತು. ಇದೊಂದು ವಿಲಕ್ಷಣವಾದ ಅಧ್ಯಯನ ಎಂದು.

**ಸಂದೇಶ** : ಗುರುಗಳನ್ನು ಬೇಡಿ ಅಧ್ಯಯನ ಮಾಡಬೇಕು. ಕಾಡಿ ಅಧ್ಯಯನ ಮಾಡ ಬಾರದು.

**ಗುರುಂ ತತೋ ಪೃಚ್ಛದುಪಾಯನಂ ದಿಶನ್**
**ಸುತಂ ಯಯಾಚೇ ವಿಮಲೀಕೃತಾನ್ವಯಃ ।**
**ಮುಹುರ್ಮುರಾರೇಃ ಸದಯಾವಲೋಕ–**
**ನೈಸ್ತಮಪ್ಯವದ್ಯತ್ಪರಿಪಾಲಯನ್ನಿವ** ॥ ೩೧ ॥

ತತಃ=ಅನಂತರ; ಉಪಾಯನಂ=ದಕ್ಷಿಣೆಯನ್ನು; ದಿಶನ್=ಕೊಡುವವನಾಗಿ; ಗುರುಂ=ಗುರುವನ್ನು; ಅಪೃಚ್ಛತ್=ಕೇಳಿದನು; ವಿಮಲೀಕೃತ=ಪವಿತ್ರವಾದ; ಅನ್ವಯಃ= ವಂಶವುಳ್ಳ ಗುರುವು; ಮುರಾರೇಃ=ಕೃಷ್ಣನ; ಸದಯಾ=ದಯೆಯಿಂದ ಕೂಡಿದ; ಅವಲೋಕನೈಃ=ನೋಟದಿಂದ; ತಂ ಅಪಿ=ಅವನನ್ನೂ; ಅವದ್ಯಾತ್=ಪಾಪದಿಂದ; ಮುಹುಃ= ಮತ್ತು; ಪರಿಪಾಲಯನ್ನಿವ=ರಕ್ಷಿಸುವವನಂತೆ; ಸುತಂ=ಮಗನನ್ನು; ಯಯಾಚೇ= ಬೇಡಿದನು.

ಅಧ್ಯಯನ ಮುಗಿಯಿತು. ಅನಂತರ ಗುರುದಕ್ಷಿಣೆ ಕೊಡಬೇಕು. ಗುರುಗಳಿಗೆ ಅಪೇಕ್ಷಿತವಾದದ್ದನ್ನೇ ಕೊಡಬೇಕು. ಆದ್ದರಿಂದ ಕೃಷ್ಣನು ಗುರುಗಳನ್ನೇ ಕೇಳಿದನು:

'ಏನು ಬೇಕು' ಎಂದು. ಗುರುಗಳು ತನ್ನ ಮರಣಹೊಂದಿದ ಮಗನನ್ನು ತಂದುಕೊಡುವಂತೆ ಕೇಳಿದರು. ಈ ಗುರುಗಳು ಅರುವತ್ತನಾಲ್ಕು ದಿವಸ ದೇವರ ಜೊತೆಗೇ ಇದ್ದರು. ಆದರೂ ಇವರಿಗೆ ಸಂಸಾರದ ಮೋಹ ಹೋಗಿಲ್ಲ ಎಂದು ಮೇಲ್ನೋಟಕ್ಕೆ ತೋರುತ್ತದೆ. ಇದಕ್ಕೆ ಈ ರೀತಿ ಪ್ರತಿಕ್ರಯಿಸುತ್ತಾರೆ –ದೇವರ ಜೊತೆಗೆ ಇದ್ದದ್ದಕ್ಕೆ ಈ ಬ್ರಾಹ್ಮಣನಲ್ಲಿರುವ ಸ್ವಾರ್ಥ ಹೋಯಿತು. ಕೃಷ್ಣನ ಸಹವಾಸದಿಂದ ತನ್ನ ವಂಶದ ಪಾಪಗಳೆಲ್ಲಾ ಪರಿಹಾರ ವಾಯಿತು. ಪ್ರಾರಬ್ಧವಶಾತ್ ಮಗನು ತೀರಿಹೋಗಿದ್ದ. ಆತನೂ ಪಾಪದಿಂದ ಮುಕ್ತನಾಗಿ ದೇವರ ದರ್ಶನವನ್ನು ಮಾಡಬೇಕು. ಆ ಚೇತನದ ಉದ್ಧಾರವೂ ಆಗಬೇಕು ಎಂದು ಪರಾರ್ಥವು ಬಂತು ಹೊರತು ಸಂಸಾರದ ಮೋಹ ಅಲ್ಲ ಎಂದು.

<u>**ಸಂದೇಶ**</u> : ನಾವು ಒಬ್ಬರಿಗೆ ಉಪಕಾರ ಮಾಡುತ್ತೇವೆ. ಅವರು ಪ್ರತಿಯಾಗಿ ಏನು ಮಾಡಲಿ ಎಂದು ನಮ್ಮಲ್ಲಿ ಕೇಳುತ್ತಾರೆ. ಆಗ ನಾವು ಸ್ವಾರ್ಥವನ್ನು ಮುಂದಿಡಬಾರದು. 'ಲೋಕಾಃ ಸಮಸ್ತಾಃ ಸುಖಿನೋ ಭವಂತು' –ನಿನ್ನಿಂದ ಹತ್ತುಜನಕ್ಕೆ ಒಳ್ಳೆಯದಾಗಲಿ ಎನ್ನಬೇಕು.

**ಸುತಂ ವಿಜಾನನ್ನಪಿ ಮೃತ್ಯುನೀತಂ**
**ಸಶಂಖದೈತ್ಯಂ ವಿನಿಹಂತು ಕಾಮಃ ।**
**ಸಮುದ್ರಮಾಸಾದ್ಯ ನಿಹತ್ಯ ರಕ್ಷೋ**
**ಲಸದ್ಯಶಃ ಸಮ್ಮಿತಮಾಪ ಶಂಖಮ್** ॥ ೩೨ ॥

ಸಃ=ಕೃಷ್ಣನು; ಸುತಂ=ಮಗನನ್ನು; ಮೃತ್ಯು=ಯಮನಿಂದ; ನೀತಂ=ಒಯ್ಯದ್ದನ್ನು; ವಿಜಾನನ್ ಅಪಿ=ತಿಳಿದಿದ್ದರೂ; ಶಂಖ=ಶಂಖನೆಂಬ; ದೈತ್ಯಂ=ಅಸುರನನ್ನು; ವಿನಿಹಂತು= ಕೊಲ್ಲಲು; ಕಾಮಃ=ಇಚ್ಛಿಸಿದವನಾಗಿ; ಸಮುದ್ರಂ=ಸಮುದ್ರವನ್ನು; ಆಸಾದ್ಯ=ಹೊಂದಿ; ರಕ್ಷಃ=ಅಸುರನನ್ನು; ನಿಹತ್ಯ=ಕೊಂದು; ಲಸತ್=ಶೋಭಿಸುವ; ಯಶಃ=ಕೀರ್ತಿಗೆ; ಸಮ್ಮಿತಂ=ಸಮಾನವಾದ; ಶಂಖಂ=ಶಂಖವನ್ನು; ಆಪ=ಹೊಂದಿದನು.

ಮಗನು ತೀರಿ ಯಮಲೋಕದಲ್ಲಿದ್ದ. ಇದು ಕೃಷ್ಣನಿಗೆ ತಿಳಿದಿದೆ. ಆದರೂ ಕೃಷ್ಣನು ಯಮಲೋಕಕ್ಕೆ ಹೋಗದೆ ಸಮುದ್ರಕ್ಕೆ ಹೋದನು. ಸಮುದ್ರದಲ್ಲಿ ಪಂಚಜನ ಎಂಬ ಅಸುರನು ಇದ್ದನು. ಅವನ ಬಳಿ ಒಂದು ಉತ್ತಮವಾದ ಶಂಖ ಇದ್ದಿತು. ಅದನ್ನು ಪಡೆಯಬೇಕಾಗಿದೆ. ಅಸುರನನ್ನೂ ನಿಗ್ರಹಿಸಬೇಕಾಗಿದೆ. ಅಸುರನನ್ನು ಕೊಂದ ಕೃಷ್ಣನು ಆತನಲ್ಲಿರುವ ಶಂಖವನ್ನು ಪಡೆದನು. ಆ ಶಂಖದ ಹೆಸರು ಪಾಂಚಜನ್ಯ ಎಂದು. ಈ ಶಂಖವನ್ನು ಸ್ಮರಿಸಿದಾಗೆಲ್ಲಾ ದೇವರ ಅಸುರಸಂಹಾರಕಶಕ್ತಿಯ ನೆನಪಾಗುತ್ತದೆ. ಹೀಗೆ ಈ ಶಂಖವು ದೇವರ ಕೀರ್ತಿಗೆ ಗಮಕವಾಗಿದೆ.

<u>**ಸಂದೇಶ**</u> : ಮಂಗನ ಕೈಯಲ್ಲಿ ಮಾಣಿಕ್ಯದಂತೆ ಉತ್ತಮ ವಸ್ತುಗಳು ಒಮ್ಮೊಮ್ಮೆ ಅಯೋಗ್ಯರ ಪಾಲಾಗುತ್ತದೆ. ಆಗ ಅವರನ್ನು ಸಂಹರಿಸಿಯಾದರೂ ಆ ವಸ್ತುವನ್ನು ಅವರಿಂದ ಬಿಡಿಸಬೇಕು.

**ಸ ಪಂಚಜನ ದೇಹಸ್ಥಾನ್ ಪ್ರಾಣಾನ್ನಿಷ್ಕಾಸ್ಯ ಪಂಚ ಚ ।**
**ಅಪಂಚಜನಮಾತೇನೇ ಸಾಕಂ ತೇನ ಪಯೋನಿಧಿಮ್ ॥ ೩೩ ॥**

ಸಃ=ಕೃಷ್ಣನು; ಪಂಚಜನ=ಪಂಚಜನನ; ದೇಹ=ದೇಹದಲ್ಲಿ; ಸ್ಥಾನ್=ಇರುವ; ಪಂಚ= ಐದು; ಪ್ರಾಣಾನ್=ಪ್ರಾಣಗಳನ್ನು; ನಿಷ್ಕಾಸ್ಯ=ಬಿಡಿಸಿ; ತೇನ=ಅಸುರನಿಂದ; ಸಾಕಂ= ಕೂಡಿ ಕೊಂಡು; ಪಯೋನಿಧಿಂ ಚ=ಸಮುದ್ರವನ್ನೂ; ಅಪಂಚಜನಂ=ಅಪಂಚಜನವನ್ನಾಗಿ; ಆತೇನೇ=ಮಾಡಿದನು.

ಪ್ರತಿಯೊಬ್ಬ ವ್ಯಕ್ತಿಯ ಚೇಷ್ಟೆಗೆ ಪ್ರಾಣಾಪಾನಾದಿ ಐದು ಪ್ರಾಣರು ಕಾರಣರು. ಆದ್ದರಿಂದ ಯೌಗಿಕವಾಗಿ ಎಲ್ಲರೂ ಪಂಚಜನರು. ಈ ಅಸುರನಂತೂ ರೂಢಿಯಿಂದಲೂ ಪಂಚಜನನು. ಕೃಷ್ಣನು ಅಸುರನನ್ನು ಕೊಂದನು. ಆತನ ದೇಹದಲ್ಲಿದ್ದ ಐದು ಪ್ರಾಣರನ್ನು ಬಿಡಿಸಿದನು. ಅಸುರನು ಈಗ ಪಂಚಜನರಿಂದ ರಹಿತನಾದ. ಆದ್ದರಿಂದ ಅಪಂಚಜನನಾದ. ಈ ಪಂಚಜನನೆಂಬ ಅಸುರನು ಸಮುದ್ರದಲ್ಲಿ ಇದ್ದ. ಈತನನ್ನು ಕೊಂದ ಮೇಲೆ ಸಮುದ್ರವು ಪಂಚಜನನಿಂದ ರಹಿತವಾಯಿತು. ಅಪಂಚಜನವಾಯಿತು. ಈ ರೀತಿ ಕೃಷ್ಣನು ತನ್ನ ಒಂದು ಕ್ರಿಯೆಯಿಂದ ಇಬ್ಬರನ್ನು ಅಪಂಚಜನರನ್ನಾಗಿ ಮಾಡಿದನು.

**ಸಂದೇಶ** : ದೊಡ್ಡವರು ಮಾಡುವ ಒಂದು ಕೆಲಸದಿಂದ ಎರಡು ಪ್ರಯೋಜನಗಳು ಸಿದ್ಧವಾಗುತ್ತವೆ. ದುಷ್ಟನಾದ ಪಂಚಜನನಿಂದ ಶಿಷ್ಟರಾದ ಪಂಚಪ್ರಾಣರ ಮೋಚನೆ. ಶಿಷ್ಟನಾದ ಸಮುದ್ರದಿಂದ ದುಷ್ಟನಾದ ಪಂಚಜನನ ಬಿಡುಗಡೆ.

**ಯಮಾಲಯಂ ಪ್ರಾಪ್ಯ ಸ ಕಂಬುಮುದ್ಧೃತಂ**
**ವಿಭುಃ ಪ್ರದಧ್ಮೌ ರಿಪುದರ್ಪಹಾರಿಣಮ್ ।**
**ಗುರೋಃ ಸುತಂ ದೇಹಿ ನ ಚೇದಿಯಂದಶಾ**
**ಭವೇತ್ತವಾಪೀತಿ ನಿದರ್ಶಯನ್ನಿವ ॥ ೩೪ ॥**

ಸಃ=ಕೃಷ್ಣನು; ವಿಭುಃ=ಸಮರ್ಥನು; ಯಮ=ಯಮನ; ಆಲಯಂ=ಮನೆಯನ್ನು; ಪ್ರಾಪ್ಯ=ಹೊಂದಿ; ರಿಪು=ಶತ್ರುಗಳ; ದರ್ಪ=ಅಹಂಕಾರವನ್ನು; ಹಾರಿಣಂ=ಅಪಹರಿಸುವ; ಉದ್ಧೃತಂ=ಎತ್ತಿದ; ಕಂಬುಂ=ಶಂಖವನ್ನು; ಪ್ರದಧ್ಮೌ=ಊದಿದನು; ಗುರೋಃ=ಗುರುಗಳ; ಸುತಂ=ಮಗನನ್ನು; ದೇಹಿ=ಕೊಡು; ನ ಚೇತ್=ಇಲ್ಲವಾದರೆ; ತವ ಅಪಿ=ನಿನಗೂ ಕೂಡಾ; ಇಯಂ=ಈ; ದಶಾ=ಅವಸ್ಥೆಯು; ಭವೇತ್=ಆಗುತ್ತದೆ; ಇತಿ=ಎಂದು; ನಿದರ್ಶಯನ್ನಿವ= ತಿಳಿಸುವವನಂತೆ.

ಸಮುದ್ರದಿಂದ ಕೃಷ್ಣನು ಯಮಲೋಕವನ್ನು ಸೇರಿದನು. ಅಲ್ಲಿ ಈ ಶಂಖವನ್ನು ಊದಿದನು. ಯಮನು ಒಮ್ಮೆ ತತ್ತರಿಸಿದನು. ಈ ಶಂಖದ ಧ್ವನಿ ಎಂಥವರನ್ನೂ ಒಮ್ಮೆ

ದಂಗಾಗಿಸುತ್ತದೆ. ಶಂಖಧ್ವನಿಯ ಅಭಿಪ್ರಾಯ ಈ ರೀತಿ ಇದೆ– ಯಮನೇ, ನನ್ನ ಗುರುಪುತ್ರನನ್ನು ನೀನು ಕರೆತಂದಿದ್ದಿ. ಆತನನ್ನು ನನ್ನ ವಶಕ್ಕೆ ಒಪ್ಪಿಸು. ಇಲ್ಲವಾದರೆ ಪಂಚಜನ ಅಸುರನಿಗೆ ಆದ ಶಾಸ್ತಿಯನ್ನೇ ನಿನಗೂ ಮಾಡಬೇಕಾಗುತ್ತದೆ ಎಂದು.

**ಸಂದೇಶ** : ದೇವರು ಸಂತುಷ್ಟನಾದರೆ ನಾವು ಏನು ಕೇಳಿದರೂ ಒದಗಿಸಬಲ್ಲ.

**ಅಮುಷ್ಯ ಲಕ್ಷ್ಮೀಶಗುರೋಃ ಸುತಸ್ಯ**
**ಧ್ರುವಂ ವಿಮುಕ್ತಿಃ ಕರಸಂಗತಾಸೀತ್ ।**
**ತ್ವದಾಗಮಾತ್ಪ್ರಾಗಪಿ ತಂ ಜಹಾಸುಂ**
**ವಿಭುಸ್ತ್ವಮಾಜ್ಞಾಪಯಸೀಶ ಕಿಂ ಮಾಮ್** ॥ ೩೫ ॥

ಈಶ=ಕೃಷ್ಣನೇ, ಲಕ್ಷ್ಮೀಶ=ರಮೇಶನಾದ ನಿನ್ನ; ಗುರೋಃ=ಗುರುವಿನ; ಅಮುಷ್ಯ= ಈ; ಸುತಸ್ಯ=ಮಗನ; ವಿಮುಕ್ತಿಃ=ಬಿಡುಗಡೆಯು; ಕರ=ಕೈಯಲ್ಲಿ; ಸಂಗತಾ=ಇರತಕ್ಕದ್ದು; ಅಭೂತ್=ಆಯಿತು; ಧ್ರುವಂ=ನಿಶ್ಚಯ; ತ್ವತ್=ನಿನ್ನ; ಆಗಮಾತ್=ಬರುವುದಕ್ಕಿಂತ; ಪ್ರಾಗಪಿ=ಮೊದಲೇ; ತಂ=ಅವನನ್ನು; ಜಹಾಸುಂ=ಬಿಡಲು ಇಚ್ಛಿಸಿರುವ; ಮಾಂ=ನನ್ನನ್ನು; ವಿಭುಃ=ಶಕ್ತನಾದ; ತ್ವಂ=ನೀನು; ಕಿಂ=ಯಾಕೆ? ಆಜ್ಞಾಪಯಸಿ=ಆಜ್ಞಾಪಿಸುತ್ತಿ.

ಕೃಷ್ಣ, ನೀನು ಎಲ್ಲರಿಗೂ ಒಡೆಯ. ಅಂತಹ ನಿನಗೆ ಆ ಬ್ರಾಹ್ಮಣನು ಗುರುವಾಗಿ ಬಂದನು. ಆತನು ನಿನಗೆ ಗುರುವಾಗುವುದಕ್ಕಿಂತ ಮೊದಲು ಆತನ ಮಗನು ನನ್ನ ಆಲಯದಲ್ಲಿ ಇದ್ದನು. ಗುರು ಸ್ಥಾನಕ್ಕೆ ಬಂದಕೂಡಲೇ ಈತನನ್ನು ನಾನೇ ಇಲ್ಲಿಂದ ಬಿಡಿಸಿದ್ದೇನೆ. ದೇವರ ಗುರುಪುತ್ರನು ಯಮಾಲಯದಲ್ಲಿ ಇರಲು ಯೋಗ್ಯನಲ್ಲ ಎಂದು. ನನಗೆ ಅಪ್ಪಣೆ ಮಾಡದೆ ನೀನೇ ಬಂದು ನೇರವಾಗಿ ಆತನನ್ನು ಇಲ್ಲಿಂದ ಬಿಡಿಸಲೂ ಶಕ್ತನಿದ್ದಿ. ನಿನ್ನ ಅಪ್ಪಣೆಗಾಗಿ ನಾನು ಕಾಯಲೇ ಇಲ್ಲ. ಆದ್ದರಿಂದ ನೀನು ಯಾಕಾಗಿ ಅಪ್ಪಣೆ ಮಾಡುತ್ತಿ?

**ಸಂದೇಶ** : ಪಾಠ ಪ್ರವಚನ ಮಾಡುವವರಿಗೆ ಮಾತ್ರವಲ್ಲ ಅವರ ಸಂತತಿಗೂ ಯಮಲೋಕ ವಾಸವಿಲ್ಲ.

**ಇತೀವ ತತ್ತ್ಯಾಗವಿಶಂಕಮಾನಸೋ**
**ಯಮಃ ಸಮಭ್ಯರ್ಚ್ಯ ಸುತಂ ಸಮಾದಿಶತ್ ।**
**ಅಲಭ್ಯತದ್ದರ್ಶನ ಜಾತಸಂಭ್ರಮಃ**
**ಪ್ರಹೃಷ್ಟರೋಮಾ ಪ್ರಣಮನ್ಮುಹುರ್ಮುಹುಃ** ॥ ೩೬ ॥

ಇತಿ ಇವ=ಎಂಬಂತೆ; ತತ್=ಆ ಪುತ್ರನ; ತ್ಯಾಗ=ತ್ಯಾಗದಲ್ಲಿ; ವಿಶಂಕ=ಸಂಶಯ ರಹಿತವಾದ; ಮಾನಸಃ=ಮನಸ್ಸುಳ್ಳ; ಯಮಃ=ಯಮನು; ಅಲಭ್ಯ=ಲಭ್ಯವಲ್ಲದ; ತತ್=ಕೃಷ್ಣನ; ದರ್ಶನ=ದರ್ಶನದಿಂದ; ಜಾತ=ಉಂಟಾದ; ಸಂಭ್ರಮಃ=ಉತ್ಸಾಹವುಳ್ಳವ

ನಾಗಿ; ಪ್ರಹೃಷ್ಟ=ಪುಳಕಿತವಾದ; ರೋಮಾ=ರೋಮವುಳ್ಳವನಾಗಿ; ಮುಹುಃ ಮುಹುಃ=ಮತ್ತೂ ಮತ್ತೂ; ಪ್ರಣಮನ್=ನಮಸ್ಕರಿಸುತ್ತಾ; ಸುತಂ=ಮಗನನ್ನು; ಸಮಾದಿಶತ್=ಒಪ್ಪಿಸಿದನು.

ವಸ್ತುತಃ ಯಮಲೋಕಕ್ಕೆ ಹೋದವರು ಜನ್ಮಾಂತರವಲ್ಲದೆ ಅದೇ ದೇಹದಿಂದ ತಿರುಗಿ ಬರುವ ಕ್ರಮ ಇಲ್ಲ. ಆದರೆ ಯಮನಿಗೂ ಯಮನಾದ ಕೃಷ್ಣನೇ ಅಪ್ಪಣೆ ಮಾಡಿದ್ದಾನೆ ಎಂದ ಮೇಲೆ ಶಾಸ್ತ್ರದ ಮಾತನ್ನು ಮೀರಿದ್ದೇನೋ ಎಂಬ ಸಂಶಯ ಯಮನನ್ನು ಕಾಡಲಿಲ್ಲ. ಯಾಕೆಂದರೆ ಶಾಸ್ತ್ರವೆಂದರೆ ದೇವರದ್ದೇ ಮಾತು. ದೇವರು ಹೇಳಿದ್ದೇ ಶಾಸ್ತ್ರ. ಯಮನು ನಿಸ್ಸಂಶಯದಿಂದ ಹುಡುಗನನ್ನು ಕಳಿಸಿದನು.

ಇದೆಲ್ಲಕ್ಕಿಂತಲೂ ಯಮನ ಮನೆಯಲ್ಲಿ ದೊಡ್ಡ ಜಾತ್ರೆಯೇ ನಡೆದಿತ್ತು. ಯಾಕೆಂದರೆ ಕೃಷ್ಣ ಬಂದಿದ್ದಾನೆ. ಈ ಕೃಷ್ಣರೂಪವನ್ನು ಕಾಣಬೇಕಾದರೇನೇ ಬಹಳ ಪುಣ್ಯ ಬೇಕು. ಇನ್ನು ಆ ರೂಪ ಮನೆಗೆ ಬಂದಿದೆ ಎಂದರೆ ಇನ್ನೂ ಹೆಚ್ಚಿನ ಪುಣ್ಯ. ಈ ರೂಪವು ಕೆಲಸ ಇಲ್ಲದೆ ಎಲ್ಲಿಯೂ ಅಡ್ಡಾಡುವುದಿಲ್ಲ. ಗುರುಪುತ್ರನ ನಿಮಿತ್ತದಿಂದ ಕೃಷ್ಣರೂಪವು ಯಮನಲ್ಲಿಗೆ ಬಂತು. ಅದನ್ನು ಕಂಡು ಯಮನು ರೋಮಾಂಚಗೊಂಡನು. ಕೃಷ್ಣನನ್ನು ಚೆನ್ನಾಗಿ ಅರ್ಚಿಸಿದನು. ನಮಸ್ಕರಿಸಿದನು. ಅನಂತರದಲ್ಲಿ ಗುರುಪುತ್ರನನ್ನು ಒಪ್ಪಿಸಿದನು.

**ಸಂದೇಶ** : ಭಗವಂತನ ದರ್ಶನ ಆಗಬೇಕಾದರೆ ಸಾತ್ವಿಕರನ್ನು ನಮ್ಮಲ್ಲಿ ಇರಿಸಿಕೊಳ್ಳ ಬೇಕು.

**ಸುತಂ ಸಮಾನೀಯ ತತೋಂತಕಾಂತಿಕಾತ್**
**ಪ್ರದಾಯ ಶೌರಿರ್ಗುರವೇ ಸ್ವತಾಂ ಪುರೀಂ ।**
**ಉಪೇತ್ಯ ಪಿತ್ರೋರಪಿ ದಕ್ಷಿಣಾಮಿವ**
**ಪ್ರದರ್ಶಯಾಮಾಸ ನಿಜಾಂ ಸ್ವವಿಗ್ರಹಮ್** ॥ ೩೭ ॥

ಶೌರಿಃ=ಕೃಷ್ಣನು; ಅಂತಕ=ಯಮನ; ಅಂತಿಕಾತ್=ಸಮೀಪದಿಂದ; ಸುತಂ= ಮಗನನ್ನು; ಸಮಾನೀಯ=ತಂದು; ಗುರವೇ=ಗುರುಗಳಿಗೆ; ಪ್ರದಾಯ=ಒಪ್ಪಿಸಿ; ತತಃ= ಅನಂತರ; ಸ್ವಕಾಂ=ತನ್ನ; ಪುರೀಂ=ಊರನ್ನು; ಉಪೇತ್ಯ=ಹೊಂದಿ; ಪಿತ್ರೋರಪಿ= ತಂದೆತಾಯಿಗಳಿಗೂ; ದಕ್ಷಿಣಾಂ ಇವ=ದಕ್ಷಿಣೆಯಂತೆ; ನಿಜಂ=ತನ್ನ; ಸ್ವ=ಸ್ವರೂಪವಾದ; ವಿಗ್ರಹಂ=ರೂಪವನ್ನು; ಪ್ರದರ್ಶಯಾಮಾಸ=ತೋರಿಸಿದನು.

ಯಮನು ಅರ್ಪಿಸಿದ ಸುತನನ್ನು ಕೃಷ್ಣನು ಗುರುಗಳಿಗೆ ದಕ್ಷಿಣಾರೂಪದಲ್ಲಿ ಒಪ್ಪಿಸಿದನು. ತನ್ನ ಅಧ್ಯಯನ ಮುಗಿಯಿತು. ಕೃಷ್ಣನು ತನ್ನ ಊರಿಗೆ ಮಧುರೆಗೆ ಮರಳಿದನು. ವಿದ್ಯೆ ಕೊಟ್ಟ ಗುರುವಿಗೆ ದಕ್ಷಿಣೆ ಕೊಟ್ಟಾಯಿತು. ತನ್ನನ್ನು ಸಮಾಜಕ್ಕೆ ಕೊಟ್ಟ ತಂದೆತಾಯಿ ಗಳಿಗೂ ದಕ್ಷಿಣೆಯನ್ನು ಕೊಡಬೇಕು. ಗುರುವಿಗೆ ಆತನ ಮಗನ ದರ್ಶನ ಕೊಟ್ಟಂತೆ. ಇವರಿಗೆ ತಾನೇ ಮಗನ ಸ್ಥಾನದಲ್ಲಿ ನಿಂತು ದರ್ಶನ ಕೊಟ್ಟ. ತನ್ನ ಜ್ಞಾನಾನಂದಮಯ ವಾದ ದೇಹದಿಂದಲೇ ದರ್ಶನ ಕೊಟ್ಟನು. ಇಡೀ ಜಗತ್ತೇ ದೇವರ ವಿಗ್ರಹ. ಆದರೆ

ಇದು ಭಿನ್ನವಾದ ವಿಗ್ರಹ. ದೇವರಿಗೆ ಎರಡು ಶರೀರಗಳಿವೆ. ಸ್ವರೂಪವಾದದ್ದು ಭಿನ್ನವಾದದ್ದು ಎಂದು. ಇವರಿಗೆ ತನ್ನ ಸ್ವರೂಪಭೂತ ದೇಹದಿಂದಲೇ ದರ್ಶನ ಕೊಟ್ಟ, ಭಿನ್ನ ದೇಹದಲ್ಲಿ ದೇವರು ಕಾಣಿಸುವುದಿಲ್ಲ. ದೇಹ ಕಾಣಿಸುತ್ತೆ. ಆ ದೇಹದ ಚಟುವಟಿಕೆಯಿಂದ ದೇವರನ್ನು ಊಹಿಸಬೇಕು.

<u>ಸಂದೇಶ</u> : ಪರೋಕ್ಷಜ್ಞಾನದ ಮೂಲಕ ದೇವರನ್ನು ಸಾತ್ವಿಕ ಸಮಾಜಕ್ಕೆ ತೋರಿಸಿದರೆ ನಮಗೆ ದೇವರ ಅಪರೋಕ್ಷಜ್ಞಾನವಾಗುತ್ತದೆ.

**ರಾಜಧಾನೀ ಜಯತಿ ಸಾ ಭೋಜವೃಷ್ಣ್ಯಂಧಕಾಶ್ರಿತಾ ।**
**ರಾಜರಾಜಪದ ತ್ರಾತಾ ರಾಜಾ ಯತ್ರ ರಮಾಪತಿಃ ॥ ೩೮ ॥**

ಯತ್ರ=ಎಲ್ಲಿ; ರಾಜರಾಜ=ಕುಬೇರನ; ಪದ=ಸ್ಥಾನದ; ತ್ರಾತಾ=ರಕ್ಷಕನಾದ; ರಮಾಪತಿಃ=ಕೃಷ್ಣನು; ರಾಜಾ=ರಾಜನೋ; ಸಾ=ಅಂತಹ; ಭೋಜ=ಭೋಜರು; ವೃಷ್ಣಿ=ವೃಷ್ಣಿಗಳು; ಅಂಧಕಾ=ಅಂಧಕರೆಂಬ ಯಾದವರಿಂದ; ಆಶ್ರಿತಾ=ಆಶ್ರಯಿಸಲ್ಪಟ್ಟ; ರಾಜಧಾನೀ= ರಾಜಧಾನಿಯು; ಜಯತಿ=ಶ್ರೇಷ್ಠವಾಗಿದೆ.

ಒಂದು ಮಾಲಿಕೆಯಲ್ಲಿ ಅನೇಕ ಬಣ್ಣದ ಪುಷ್ಪಗಳು ಇರುತ್ತವೆ. ಆಗ ಆ ಮಾಲಿಕೆಯು ಶೋಭಿಸುತ್ತದೆ. ಅದರಂತೆ ನಾನಾ ಜಾತಿಗಳಿಂದ ಕೂಡಿದ ಯಾದವರು ಮಧುರೆಯಲ್ಲಿ ಇದ್ದಾರೆ. ಆದ್ದರಿಂದ ಅದು ಶೋಭಿಸುತ್ತದೆ. ನಿಜವಾಗಿ ಮಧುರೆ ಶೋಭಿಸಲು ಇವರು ಯಾರೂ ಕಾರಣರಲ್ಲ. ರಾಜನಿಂದಾಗಿ ರಾಜ್ಯವು ರಾಜಿಸುತ್ತದೆ. ರಾಜ–ರಾಜ್ಯ ರಾಜಿಸುವುದು ಎಲ್ಲಾ ಸಾಮಾನ್ಯವಾಗಿ ಒಂದೇ ಅರ್ಥವನ್ನು ಕೊಡುತ್ತದೆ. ಇಲ್ಲಿ ನಿಜವಾಗಿ ಶೋಭಿಸುವ ಕೃಷ್ಣನು, ರಾಜನ ಶ್ರೀಮಂತಿಕೆಯಿಂದ ರಾಜ್ಯವು ಶೋಭಿಸುವುದು. ಇಡೀ ಜಗತ್ತಿನಲ್ಲಿ ಶ್ರೀಮಂತಿಕೆಯಿಂದ ಶೋಭಿಸುವವ ಕುಬೇರ. ಆದ್ದರಿಂದ ಆತನನ್ನು ರಾಜರಿಗೂ ರಾಜ–ರಾಜರಾಜ ಎಂದು ಕರೆಯುತ್ತಾರೆ. ಆತನಿಗೆ ಇಂತಹ ಆಧಿಪತ್ಯವನ್ನು ಕೊಟ್ಟವನು ಕೃಷ್ಣನೇ. ಅದ್ದರಿಂದ ಕೃಷ್ಣನು ರಾಜ–ರಾಜ–ರಾಜನು. ಇಂತಹ ಕೃಷ್ಣನು ಇಲ್ಲಿದ್ದಾನೆ. ಆದ್ದರಿಂದ ಮಧುರೆಯು ಚೆನ್ನಾಗಿ ಬೆಳಗುತ್ತಿದೆ.

<u>ಸಂದೇಶ</u> : ಶ್ರೀಪತಿಯು ಇರುವಲ್ಲಿ ಪತಿವ್ರತೆಯಾದ ಶ್ರೀ ಇರಲೇಬೇಕು. ಬುಡಕ್ಕೆ ನೀರು ಹಾಕಿದರೆ ಗೆಲ್ಲುಗಳಿಗೆ ಸಿಗುವಂತೆ.

**ಉಗ್ರಸೇನೋ ವಿಜಯತೇ ಸ್ವರ್ಗಿಭಿರ್ಗೀತ ವೈಭವಃ ।**
**ಅಗ್ರೇಸರಾಃ ಯದ್ಧ್ವಜಿನ್ಯಾಮುಗ್ರಾ ರಮಾದಯೋ ದ್ವಿಷಾಮ್ ॥ ೩೯ ॥**

ಯತ್=ಯಾರ; ಧ್ವಜಿನ್ಯಾಂ=ಸೈನ್ಯದಲ್ಲಿ; ದ್ವಿಷಾಂ=ಶತ್ರುಗಳಿಗೆ; ಉಗ್ರಾಃ=ಕ್ರೂರರಾದ; ರಾಮಾದಯಃ=ಬಲರಾಮಾದಿಗಳು; ಅಗ್ರೇಸರಾಃ=ಮೊದಲು ಹೋಗುವವರು;

ಸ್ವರ್ಗಿಭಿಃ=ಸ್ವರ್ಗಿಗಳಿಂದ; ಗೀತ=ಹಾಡಲ್ಪಟ್ಟ; ವೈಭವಃ=ವೈಭವವುಳ್ಳ; ಉಗ್ರಸೇನಃ=ಉಗ್ರಸೇನನು; ವಿಜಯತೇ=ಉತ್ಕೃಷ್ಟನಾಗಿದ್ದಾನೆ.

ಉಗ್ರಸೇನನ ರಾಜ್ಯಭಾರ. ಮಾನಸಿಕವಾಗಿ ಬಹಳ ನೆಮ್ಮದಿಯಲ್ಲಿ ಇದ್ದಾನೆ. ಮಾನವರು ಮಾತ್ರವಲ್ಲ, ಮೇಲಿಂದ ದೇವತೆಗಳೂ ಈತನ ಅದೃಷ್ಟವನ್ನು ಹೊಗಳುತ್ತಿದ್ದಾರೆ. ರಾಜನಿಗೆ ನೆಮ್ಮದಿಗೆ ಕಾರಣ ಶತ್ರುಗಳ ಪೀಡೆ ಇಲ್ಲದಿರುವುದು. ಯಾವ ಶತ್ರುಗಳೂ ದಂಡೆತ್ತಿ ಬರಲಿಲ್ಲ. ಅಷ್ಟು ಪ್ರಬಲವಾದ ಸೈನ್ಯ ಈತನದ್ದು. ಈ ಸೈನ್ಯದ ಆಧಿಪತ್ಯ ಸ್ವಯಂ ಬಲಶಾಲಿಯಾದ ಬಲರಾಮನಲ್ಲಿ. ಆದ್ದರಿಂದ ಶತ್ರುಗಳೆಲ್ಲಾ ಭೀತರಾಗಿದ್ದರು. ಈ ರಾಜನಿಗೆ ಉಗ್ರಸೇನ ಎಂಬ ಹೆಸರು ಸಾರ್ಥಕವಾಗಿತ್ತು. ಯಾರ ಸೈನ್ಯವು ಶತ್ರುಗಳಿಗೆ ಉಗ್ರವೋ ಆತನು ಉಗ್ರಸೇನನು.

**ಸಂದೇಶ** : ದೈವಾನುಗ್ರಹ ಇದ್ದರೆ ನಮ್ಮಕ್ಕಿಂತ ದೊಡ್ಡವರೂ ನಮ್ಮನ್ನು ಹೊಗಳುತ್ತಾರೆ. ನಮ್ಮ ಹೆಸರೂ ಅನ್ವರ್ಥಕವಾಗುತ್ತದೆ.

**ಹೃದಯಜ್ಞಾ ರಾಜನೀತೇಃ ಸಭಾಯಾಂ ಶಾರ್ಙ್ಗಧನ್ವನಃ ।**
**ಮಂತ್ರಿಣೋ ಮಂತ್ರತಂತ್ರಜ್ಞಾ ಮಂತ್ರಯಂತೀತ್ಥಮನ್ವಹಮ್ ॥ ೪೦ ॥**

ರಾಜನೀತೇಃ=ರಾಜನೀತಿಯ; ಹೃದಯ=ಅಭಿಪ್ರಾಯವನ್ನು; ಜ್ಞಾಃ=ತಿಳಿದಿರುವ; ಮಂತ್ರ=ಮಂತ್ರಗಳನ್ನು; ತಂತ್ರ=ತಂತ್ರಗಳನ್ನು; ಜ್ಞಾಃ=ತಿಳಿದಿರುವ; ಮಂತ್ರಿಣಃ=ಮಂತ್ರಿಗಳು; ಶಾರ್ಙ್ಗ=ಶಾರ್ಙ್ಗವೇ; ಧನ್ವನಃ=ಧನುಸ್ಸುಳ್ಳ ಕೃಷ್ಣನ; ಸಭಾಯಾಂ=ಸಭೆಯಲ್ಲಿ; ಇತ್ಥಂ=ಈ ರೀತಿಯಾಗಿ; ಅನ್ವಹಂ=ಯಾವಾಗಲೂ; ಮಂತ್ರಯಂತಿ=ಆಲೋಚಿಸುತ್ತಾರೆ.

ಕೃಷ್ಣನೇ ಸ್ವಯಂ ರಾಜನೀತಿ, ಯುದ್ಧನೀತಿ ಎಲ್ಲವನ್ನೂ ತಿಳಿದವನು ಎಂದು ತಿಳಿಸಲು ರಾಜರು ಕೃಷ್ಣನನ್ನು ಧನುರ್ಧಾರೀ ಎಂದು ಹೇಳಿದ್ದಾರೆ. ಅಂತಹವನ ಸಭೆಯಲ್ಲಿ ಇರುವ ಮಂತ್ರಿಗಳು ರಾಜನು ಅನುಸರಿಸಬೇಕಾದ ನಿಯಮಗಳನ್ನು ತಿಳಿದಿರಲೇಬೇಕು. ರಾಜನಿಗೇ ತಿಳಿವಳಿಕೆ ಇಲ್ಲದಿದ್ದರೆ ಮಂತ್ರಿಗಳು ಆತನಿಗೆ ಮೋಸ ಮಾಡಬಹುದು. ಯಾವಾಗ ಏನು ಹೇಗೆ ಆಲೋಚಿಸಬೇಕು; ಅದನ್ನು ಎಲ್ಲಿ ಯಾವಾಗ ಕಾರ್ಯರೂಪಕ್ಕೆ ತರಬೇಕು ಎಂಬುದರ ಬಗ್ಗೆ ಕೂಲಂಕಶವಾದ ತಿಳುವಳಿಕೆಯವರು ಇಂತಹ ಮಂತ್ರಿಗಳು ಪ್ರತಿದಿನ ತಾವು ಕಾರ್ಯಪರರಾಗಿರುತ್ತಿದ್ದರು.

**ಸಂದೇಶ** : ದೇವರ ರಾಜ್ಯದಲ್ಲಿ ಯಾವುದಕ್ಕೂ ಕೊರತೆ ಇಲ್ಲ.

**ರಣೇ ಯದಾಜ್ಞಾಶರಶಂಕಿಚಿತ್ತಾ**
**ಭಟಾಃ ಪರಾವೃತ್ಯ ನ ಲಕ್ಷಯಂತೀ**
**ಜಯಾಂಗನಾಂ ವಾ ದಿವಿಜಾಂಗನಾಂ ವಾ**
**ಸ್ಪೃಶಂತಿ ರಾಜಾವಿಜಯೀ ಸ ಏವ ॥ ೪೧ ॥**

ರಣೇ=ಯುದ್ಧದಲ್ಲಿ; ಯತ್=ಯಾರ; ಆಜ್ಞಾ=ಅನುಮತಿ ಎಂಬ; ಶರ=ಬಾಣದಿಂದ; ಶಂಕಿ=ಸಂಶಯಗೊಂಡ; ಚಿತ್ತಾಃ=ಮನಸ್ಸುಳ್ಳವರಾಗಿ; ಭಟಾಃ=ಸೈನಿಕರು; ಪರಾವೃತ್ಯ= ತಿರುಗಿ; ನ ಲಕ್ಷಯಂತಿ=ನೋಡುವುದಿಲ್ಲವೋ; ಜಯ=ಜಯವೆಂಬ; ಅಂಗನಾಂ ವಾ= ನಾರಿಯನ್ನಾಗಲೀ; ದಿವಿಜ=ಸ್ವರ್ಗವೆಂಬ; ಅಂಗನಾಂ ವಾ=ನಾರಿಯನ್ನಾಗಲೀ; ಸ್ಪೃಶಂತಿ= ಕೈಹಿಡಿಯುತ್ತಾರೋ; ಸಃ=ಅಂತಹ; ರಾಜಾ ಏವ=ರಾಜನೇ; ವಿಜಯೀ=ಜಯಶಾಲಿಯು.

ಯುದ್ಧದಲ್ಲಿ ರಾಜನಿಗೆ ಜಯ ಲಭಿಸಲು ರಾಜನಿಗಿಂತಲೂ ಸೈನ್ಯದ್ದೇ ಪಾತ್ರ ಬಹಳ. ಯುದ್ಧಕ್ಕೆ ಹೋಗಿ ಎಂದಾಗ ಧೈರ್ಯದಿಂದ ಮುನ್ನುಗ್ಗಬೇಕು. ಮುನ್ನುಗ್ಗಿದಾಗ ಶತ್ರುಗಳ ಬಾಣಗಳು ಬರಬಹುದು. ಆದರೆ ಹಿನ್ನುಗ್ಗಿದರೆ ರಾಜನ ಆಜ್ಞೆ ಎಂಬ ಬಾಣವು ತಲೆಯನ್ನು ಆಹುತಿಯನ್ನಾಗಿ ತೆಗೆದುಕೊಳ್ಳುತ್ತದೆ. ಮುಂದೆ ಹೋದರೂ ಮರಣ. ಹಿಂದೆ ಬಂದರೂ ಮರಣ. ಹಿಂದೆ ಬಂದರೆ ಮರಣ ತನ್ನ ರಾಜನಿಂದಲೇ ನಿಶ್ಚಿತ. ಮುನ್ನುಗ್ಗಿದರೆ ಜಯವೂ ಲಭಿಸುವ ಸಾಧ್ಯತೆ ಇದೆ. ಈ ರೀತಿ, ಸತ್ತರೆ ಸ್ವರ್ಗ ಎಂಬ ಹುಡುಗಿಯು, ಬದುಕಿದರೆ ಜಯವೆಂಬ ಹುಡುಗಿಯು ನಿಶ್ಚಿತ. ಹಿಮ್ಮೆಟ್ಟಿದರೆ ಯಾವ ಹುಡುಗಿಯೂ ಇಲ್ಲ. ಆದ್ದರಿಂದ ಯಾವ ಸೈನಿಕರೂ ಹುಡುಗಿಯ ಆಸೆಯಿಂದ ಹಿಮ್ಮೆಟ್ಟದೆ ಯುದ್ಧದಲ್ಲಿ ಮುಂದೆ ಮುಂದೇ ಹೋಗುತ್ತಾರೆ. ಇಂತಹ ಸೈನ್ಯದಿಂದ ಕೂಡಿದ ರಾಜನು ಸರ್ವತ್ರ ಶೋಭಿಸುತ್ತಾನೆ.

**ಸಂದೇಶ** : ಸೇವಕನು ಯಜಮಾನನಿಗೆ ನಿಷ್ಠನಾಗಿರಬೇಕು. ತನಗೆ ವಹಿಸಿದ ಕೆಲಸವನ್ನು ಪ್ರಾಮಾಣಿಕವಾಗಿ ಮಾಡಬೇಕು. ಆಗ ಜಯ ನಿಶ್ಚಿತ. ಪ್ರಾರಬ್ಧವಶಾತ್ ಪರಾಜಯ ಬಂದರೂ ವೀರಸ್ವರ್ಗ ನಿಶ್ಚಿತ.

**ಚಾರೇಣ ಯೋ ವೇತ್ತಿ ರಿಪೋರ್ವಿಚಾರಂ**
**ಸದಾ ರಣೋಪಸ್ಕರಣಂ ಯುನಕ್ತಿ ।**
**ಅಗಮ್ಯಭೂಮಿಃ ಪರಿಖಾದಿನಾನ್ಯೈಃ**
**ಸ ಏವ ರಾಜಾ ವಿಜಯೀ ನ ಚಾನ್ಯಃ ॥ ೪೨ ॥**

ಯಃ=ಯಾರು; ಚಾರೇಣ=ದೂತನಿಂದ; ರಿಪೋಃ=ಶತ್ರುವಿನ; ವಿಚಾರಂ=ವಿಚಾರ ವನ್ನು; ಸದಾ=ಯಾವಾಗಲೂ; ವೇತ್ತಿ=ತಿಳಿಯುತ್ತಾನೋ; ರಣ=ಯುದ್ಧದ; ಉಪಸ್ಕರಣಂ= ತಯಾರಿಯನ್ನು; ಯುನಕ್ತಿ=ಸೇರಿಸುತ್ತಾನೋ; ಪರಿಖ=ಪಾಗಾರವೇ; ಆದಿನಾ= ಮೊದಲಾದ್ದ ರಿಂದ; ಅನ್ಯೈಃ=ಶತ್ರುಗಳಿಂದ; ಅಗಮ್ಯ=ದಾಟಲಸಾಧ್ಯವಾದ; ಭೂಮಿಃ= ರಾಜ್ಯವುಳ್ಳ ವನೋ; ಸಃ=ಅಂತಹ; ರಾಜಾ ಏವ=ರಾಜನೇ; ವಿಜಯೀ= ಜಯಶಾಲಿಯು; ಅನ್ಯಃ= ಇನ್ನೊಬ್ಬನು; ನಚ=ಅಲ್ಲ.

ರಾಜನು ತನ್ನ ಸೇವಕರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು. ಅವರನ್ನು

ಗೂಢಚಾರರನ್ನಾಗಿ ನೇಮಿಸಬೇಕು. ಶತ್ರುಗಳ ಚಲನಾದಿಗಳಲ್ಲಿ ನಿಗಾ ಇಡಬೇಕು. ಶತ್ರುಗಳ ಬಗ್ಗೆ ಔದಾಸೀನ್ಯ ತಾಳಬಾರದು. ರಾಜನಾದವನು ಎಂದೂ ಅಲ್ಪ ತೃಪ್ತನಾಗಬಾರದು. ತನ್ನ ರಾಜ್ಯವನ್ನು ಬೆಳೆಸುತ್ತಾ ಇರಬೇಕು. ಅದಕ್ಕಾಗಿ ಸೈನ್ಯವನ್ನು ಬಲಪಡಿಸುತ್ತಿರಬೇಕು. ದುರ್ಬಲ ಸೈನ್ಯದ ರಾಜನಿಗೆ ಎಂದೂ ಕ್ಷೇಮವಿಲ್ಲ. ತನ್ನ ರಾಜ್ಯದ ಸುತ್ತ ಅನೇಕ ಪರ್ವತ, ಜಲಾದಿ ದುರ್ಗಗಳನ್ನು ರಚಿಸಬೇಕು. ಇದರಿಂದಾಗಿ ಶತ್ರುಗಳ ಆಕ್ರಮಣವನ್ನು ತಡೆಗಟ್ಟಬಹುದು. ಇಂತಹ ರಾಜನೇ ಸದಾ ಜಯಶಾಲಿಯು. ಇವುಗಳ ಬಗ್ಗೆ ಅಲಕ್ಷ್ಯ ತಾಳಿದರೆ ರಾಜನೂ ರಾಜ್ಯವೂ ಮಸುಕಾಗುತ್ತದೆ.

<u>**ಸಂದೇಶ**</u> : 'ಅಸಂತುಷ್ಟಃ ದ್ವಿಜಃ ನಷ್ಟಃ ಸಂತುಷ್ಟಶ್ಚ ಕ್ಷತ್ರಿಯಃ' ಬ್ರಾಹ್ಮಣನಿಗೆ ಅಲ್ಪ ತೃಪ್ತಿ ಇರಬೇಕು. ಕ್ಷತ್ರಿಯನಿಗೆ ಇನ್ನೂ ಬೇಕು ಎಂಬ ಆಸೆ ಇರಬೇಕು. ಇದು ವ್ಯತ್ಯಾಸವಾದರೆ ಇಬ್ಬರೂ ಹಾಳಾಗುತ್ತಾರೆ.

**ಸ್ವ ಸಂಸದಿ ಪ್ರೌಢಜನೇಷು ಮಂತ್ರಿ–**
**ವರೇಷು ನೀತ್ಯಾಗಮ ತತ್ವವಿತ್ಸು ।**
**ಭೂಪಃ ವಿಚಾರ್ಯ ಕುರ್ಯಾದ್ವಿಷತಾಮುಪಾ–**
**ಯೈರ್ಮಿಥೋ ವಿಭೇದಂ ಸುಖಭಾಕ್ ಸ** ॥ ೪೩ ॥

ಸ್ವ=ತನ್ನ; ಸಂಸದಿ=ಸಭೆಯಲ್ಲಿ; ಪ್ರೌಢ=ಹಿರಿಯರಾದ; ಜನೇಷು=ಜನರಲ್ಲಿ; ನೀತ್ಯಾಗಮ=ನೀತಿಶಾಸ್ತ್ರಗಳ; ತತ್ವ=ತತ್ವವನ್ನು; ವಿತ್ಸು=ತಿಳಿದ; ಮಂತ್ರಿವರೇಷು=ಶ್ರೇಷ್ಠ ಮಂತ್ರಿಗಳಲ್ಲಿ; ವಿಚಾರ್ಯ=ವಿಚಾರಮಾಡಿ; ದ್ವಿಷತಾಂ=ಶತ್ರುಗಳಿಗೆ; ಉಪಾಯೈಃ= ಉಪಾಯಗಳಿಂದ; ಮಿಥಃ=ಪರಸ್ಪರವಾಗಿ; ವಿಭೇದಂ=ಭೇದವನ್ನು; ಕುರ್ಯಾತ್= ಮಾಡಬೇಕು; ಸಃ=ಅಂತಹ; ಭೂಪಃ=ರಾಜನು; ಸುಖಭಾಕ್=ಸುಖವನ್ನು ಅನುಭವಿಸುವವನು.

ರಾಜನು ಯಾವ ಗಂಭೀರ ವಿಷಯವನ್ನು ತಾನೇ ತೀರ್ಮಾನಿಸಬಾರದು. ಸಭೆಯಲ್ಲಿ ಆ ವಿಷಯವನ್ನು ಇಡಬೇಕು. ವೃದ್ಧರಿದ್ದರೆ ಮಾತ್ರ ಅದು ಸಭೆ ಎಂದಾಗುವುದು. ವೃದ್ಧರೆಂದರೆ ಮುದುಕರಲ್ಲ. ನೀತಿಶಾಸ್ತ್ರದ ಮರ್ಮವನ್ನು ತಿಳಿದವರು. ಕಾರ್ಯಾಕಾರ್ಯಗಳನ್ನು ಬಲ್ಲವರು. ಒಳ್ಳೆಯ ವಿಮರ್ಶಾತ್ಮಕ ದೃಷ್ಟಿವುಳ್ಳವರು. ಇವರಿಂದ ಕೂಡಿಕೊಂಡು ವಿಮರ್ಶೆ ಮಾಡಬೇಕು. ಶತ್ರುಗಳು ಅಥವಾ ಪ್ರಜೆಗಳೇ ಆಗಲಿ ದಂಗೆ ಏಳಬಹುದು. ಆಗ ಸಾಮ, ದಾನಾದಿ ಉಪಾಯಗಳಿಂದ ಅವರಲ್ಲಿ ಭಿನ್ನಾಭಿಪ್ರಾಯವನ್ನು ಉಂಟುಮಾಡಬೇಕು. ಇಂತಹ ರಾಜನು ರಾತ್ರಿಯಲ್ಲಿ ಸುಖವಾಗಿ ನಿದ್ರಿಸಬಹುದು.

<u>**ಸಂದೇಶ**</u> : 'ಏಕಶ್ಚ ಅರ್ಥಾನ್ ನ ಚಿಂತಯೇತ್' ಮನೆಯ, ಮನದ, ದೇಶದ ಸಮಸ್ಯೆಗಳನ್ನು ಒಬ್ಬನೇ ವಿಮರ್ಶೆ ಮಾಡಬಾರದು.

**ಉತ್ಸಾಹಸಂಗತಾ ನೀತಿಃ ಸೂತೇ ನರವರೋಚಿತೌ ।**
**ಕೀರ್ತಿ ಪ್ರತಾಪೌ ರಾಜೇಂದ್ರ ತತ್ರಾಲಸ್ಯಂ ಪ್ರತೀಪಕೃತ್ ॥ ೪೪ ॥**

ಹೇ ರಾಜೇಂದ್ರ, ಎಲೋ ರಾಜಶ್ರೇಷ್ಠನೇ, ಉತ್ಸಾಹ=ಉತ್ಸಾಹದಿಂದ; ಸಂಗತಾ= ಕೂಡಿದ; ನೀತಿಃ=ನೀತಿಯು; ನರವರ=ಶ್ರೇಷ್ಠರಾಜನಿಗೆ; ಉಚಿತೌ=ಯೋಗ್ಯ ವಾದ; ಕೀರ್ತಿ=ಕೀರ್ತಿಯನ್ನು; ಪ್ರತಾಪೌ=ಪರಾಕ್ರಮವನ್ನೂ; ಸೂತೇ=ಕೊಡುತ್ತದೆ; ತತ್ರ=ಅಲ್ಲಿ; ಆಲಸ್ಯಂ=ಔದಾಸೀನ್ಯವು; ಪ್ರತೀಪ=ವಿರೋಧವನ್ನು; ಕೃತ್=ಮಾಡುತ್ತದೆ.

ರಾಜನು ಸದಾ ಉತ್ಸಾಹಿಯಾಗಿರಬೇಕು. ಆಲಸಿಗನಾಗಬಾರದು. ಹಾಗಿದ್ದರೆ ಶತ್ರು ಗಳನ್ನು ಬಡಿದು ಪರಾಕ್ರಮಿಯಾಗಿ ಮೆರೆಯಬಹುದು. ಹಾಗೆಯೇ ನೀತಿವಂತನೂ ಆಗಬೇಕು. ಆಗ ಶತ್ರುಗಳ ಕಾಟದಿಂದ ತಪ್ಪಿಸಿಕೊಂಡು ಕೀರ್ತಿವಂತನಾಗಬಹುದು. ಇದನ್ನು ರಾಜರು ತನ್ನ ಶಬ್ದಗಳ ಹಾಗೂ ಅವುಗಳ ಲಿಂಗಗಳ ಚಮತ್ಕಾರದಿಂದ ತಿಳಿಸುತ್ತಾರೆ.

ರಾಜನ ಹೊಟ್ಟೆಯಿಂದ ಬಂದ ಮಕ್ಕಳು ರಾಜನ ಪರಲೋಕದ ಶ್ರೇಯಸ್ಸಿಗೆ ಕಾರಣರು. ರಾಜನಿಗೆ ಈ ಲೋಕದಲ್ಲೇ ಒಳ್ಳೆಯ ಮರೆಯುವಿಕೆ ಬರಬೇಕಾದರೆ ಎರಡು ಮಕ್ಕಳ ಅಗತ್ಯ ಇದೆ. ಅವುಗಳ ಹೆಸರು ಕೀರ್ತಿ ಹಾಗೂ ಪರಾಕ್ರಮ ಎಂದು. ಒಂದು ಹೆಣ್ಣು ಇನ್ನೊಂದು ಗಂಡು. ಸಂಸ್ಕೃತ ಸಾಹಿತ್ಯದಲ್ಲಿ ಕೀರ್ತಿ ಶಬ್ದವು ಸ್ತ್ರೀಲಿಂಗ. ಪ್ರತಾಪ ಶಬ್ದವು ಪುಲ್ಲಿಂಗ. ಈ ಮಕ್ಕಳನ್ನು ಹಡೆಯಬೇಕಾದ ಒಂದು ದಂಪತಿಗಳಿದ್ದಾರೆ. ಅವರ ಹೆಸರು ನೀತಿ ಹಾಗೂ ಉತ್ಸಾಹ. ಇಲ್ಲಿಯೂ ಕೂಡಾ ನೀತಿ ಶಬ್ದವು ಸ್ತ್ರೀಲಿಂಗ. ಉತ್ಸಾಹ ಶಬ್ದವು ಪುಲ್ಲಿಂಗ. ಇವುಗಳಲ್ಲಿ ಯಾವುದಾದರೂ ಒಂದು ಇಲ್ಲದಿದ್ದರೂ ರಾಜನಿಗೆ ಕೀರ್ತಿ ಪ್ರತಾಪಗಳು ಬರುವುದಿಲ್ಲ. ಉತ್ಸಾಹ ಇದೆ. ನೀತಿಶಾಸ್ತ್ರ ತಿಳಿದಿಲ್ಲ. ಆಗ ಆ ಉತ್ಸಾಹದಿಂದ ರಾಜನಿಗೆ ಅಪಾಯವೇ ಬಂದೀತು. ನೀತಿಶಾಸ್ತ್ರ ತಿಳಿದಿದೆ. ಉತ್ಸಾಹ ಇಲ್ಲದಿದ್ದರೆ ಮಂಕುಬಡಿದವನಂತೆ ಇರುತ್ತಾನೆ. ದಂಪತಿಗಳಲ್ಲಿ ಒಬ್ಬರು ಇಲ್ಲವಾದರೂ ಸಂತತಿ ಆಗದಿರುವಂತೆ. ದಂಪತಿಗಳಿಗೆ ವಿಭಿನ್ನ ಲಿಂಗದ ಎರಡು ಮಕ್ಕಳು ಯಾಕೆ? ಅಂದರೆ ಪ್ರಾಯಶಃ ಲೋಕದಲ್ಲಿ ಪತ್ನಿಯು ಹೆಣ್ಣನ್ನೂ ಪತಿಯು ಗಂಡನ್ನೂ ಬಯಸುತ್ತಾರೆ. ಆದ್ದರಿಂದ ಈ ರೀತಿಯ ಮಕ್ಕಳು ಸಂತತಿಯಾಗಬೇಕಾದರೆ ಹೆಣ್ಣು ಗಂಡಿನ ಜೊತೆ ಸೇರಬೇಕು, ಹೊರತು ನಪುಂಸಕನ ಜೊತೆ ಸೇರಿದರೆ ಯೋಗ್ಯ ಫಲ ದೊರಕದೆ ವಿಪರೀತ ಫಲ ಅಂದರೆ ಅಪವಾದ ದೊರಕುತ್ತದೆ. ಅದೇ ರೀತಿ ನೀತಿ ಎಂಬ ಹೆಣ್ಣು ಆಲಸ್ಯ ಎಂಬ ನಪುಂಸಕನ ಜೊತೆ ಸೇರಿದರೆ ನಾಶ ಎಂಬ ವಿಪರೀತ ಫಲವೇ ದೊರಕುತ್ತದೆ. ಇಲ್ಲಿ ಆಲಸ್ಯ ಶಬ್ದವು ನಪುಂಸಕಲಿಂಗ. ನೀತಿವಂತನಾಗಿ ಉದಾಸೀನನಾಗಿದ್ದರೆ ಶತ್ರುಗಳು ಆತನನ್ನು ನಾಶಮಾಡುತ್ತಾರೆ ಎಂದರ್ಥ.

**ಸಂದೇಶ** : ಒಂದು ಕ್ಷೇತ್ರದಲ್ಲಿ ಯಶಸ್ಸು ಗಳಿಸಬೇಕಾದರೆ ಆ ಕ್ಷೇತ್ರವನ್ನು ಮೊದಲು ತಿಳಿಯಬೇಕು. ಅನಂತರ ಉತ್ಸಾಹದಿಂದ ಧುಮುಕಬೇಕು.

**ಸಾಮಾದ್ಯುಪಾಯಾವಸರ ಜ್ಞಾನಶೂನ್ಯಸ್ಯ ಶೂರತಾ ।**
**ಆಮ್ನಾಯಾರ್ಥಾಪರಿಸ್ಫೂರ್ತೇಃ ಸಾಮರ್ಥ್ಯಮಿವ ವಾದಿನಃ ॥ ೪೫ ॥**

ಸಾಮ=ಸಾಮವೇ; ಆದಿ=ಮೊದಲಾದ; ಉಪಾಯ=ಉಪಾಯಗಳ; ಅವಸರ=ಸಂದರ್ಭಗಳ; ಜ್ಞಾನ=ತಿಳುವಳಿಕೆಯಿಂದ; ಶೂನ್ಯಸ್ಯ=ರಹಿತನಾದ ರಾಜನ ಶೂರತಾ=ಪರಾಕ್ರಮವು; ಆಮ್ನಾಯ=ವೇದಗಳ; ಅರ್ಥ=ಅರ್ಥಗಳ; ಅಪರಿಸ್ಫೂರ್ತೇಃ=ಹೊಳೆಯದ; ವಾದಿನ್=ಪಂಡಿತನ; ಸಾಮರ್ಥ್ಯಂ ಇವ=ಶಕ್ತಿಯಂತೆ.

ರಾಜನಿದ್ದಾನೆ. ಉತ್ಸಾಹ ಇದೆ. ದೇಹದಲ್ಲಿ ಬಲವೂ ಇದೆ. ಆದರೆ ಸಾಮಾದಿ ನಾಲ್ಕು ಉಪಾಯಗಳಲ್ಲಿ ಯಾವುದನ್ನು ಎಲ್ಲಿ ಪ್ರಯೋಗಿಸಬೇಕು ಎಂದು ಮಾತ್ರ ತಿಳಿದಿಲ್ಲ. ಹೀಗಿದ್ದರೆ ಏನು ಬಲ, ಉತ್ಸಾಹವಿದ್ದರೂ ಪ್ರಯೋಜನವಿಲ್ಲ. ಕೆಲವು ಶತ್ರುಗಳನ್ನು ಒಳ್ಳೆಯ ಮಾತಿನಿಂದಲೇ ಬಗ್ಗಿಸಲು ಬರುತ್ತದೆ. ಕೆಲವರು ಬಡತನದಿಂದಾಗಿ ರಾಜನಲ್ಲಿ ಸಿಟ್ಟಿಗೇಳುತ್ತಾರೆ. ಅವರನ್ನು ದಾನದಿಂದ ಮಣಿಸಲು ಬರುವುದು. ಇದು ಯಾವುದರ ಪರಿಜ್ಞಾನವೂ ಇಲ್ಲದೆ ಬಲ ಇದೆ ಎಂದು ಎಲ್ಲರನ್ನೂ ಬಡಿಯಲು ಆರಂಭಿಸಿದರೆ ಮತ್ತಷ್ಟು ಗೊಂದಲವೇ ಆಗುವುದು.

ಇದಕ್ಕೊಂದು ದೃಷ್ಟಾಂತವನ್ನು ರಾಜರು ಕೊಡುತ್ತಾರೆ –ಇಬ್ಬರು ವಾದಿಪ್ರತಿವಾದಿಗಳಾಗಿ ಚರ್ಚೆಗೆ ಕುಳಿತಿದ್ದಾರೆ. ಚರ್ಚೆಯಲ್ಲಿ ತಪ್ಪು ಸರಿಗಳನ್ನು ತೀರ್ಮಾನಿಸುವುದು ವೇದಾರ್ಥಗಳ ಮೂಲಕ. ವೇದಾರ್ಥಗಳೇ ಹೊಳೆಯದಿದ್ದರೆ ಆ ಒಣ ಚರ್ಚೆಯಿಂದ ಏನು ಪ್ರಯೋಜನ. ಒಂದಷ್ಟು ಕಂಠಶೋಷಣೆ ಆಗುತ್ತದೆ. ಚರ್ಚೆಯು ಕೊನೆಗೊಳ್ಳುವುದೂ ಇಲ್ಲ. ನಿರ್ಣಯವೂ ಆಗುವುದಿಲ್ಲ. ಅಂತಹ ವಾದಿಪ್ರತಿವಾದಿಗಳ ಮಾತುಗಾರಿಕೆ ವ್ಯರ್ಥವಾದಂತೆ.

__ಸಂದೇಶ__ :ರಾಜನ ಶಕ್ತಿಯು ಪಂಡಿತರ ಚರ್ಚೆಯು ಹಳತಪ್ಪಬಾರದು. ಅದಕ್ಕಾಗಿ ಕ್ರಮವಾಗಿ ನೀತಿಶಾಸ್ತ್ರ, ವೇದಶಾಸ್ತ್ರಗಳು ಬೇಕು.

**ಯಃ ಸಂಧಿಮುಖ್ಯಾಮಲನೀತಿಕಾಲಂ**
**ಅಜ್ಞಾನ್ಯವಿಜ್ಞಾಯ ರಣಂ ವಿಧತ್ತೇ ।**
**ಷಣ್ಣೈಗ್ರಹಾಣಾಂ ಸಮಯಾನಭಿಜ್ಞ**
**ವಾದೀವ ಸಂಸತ್ಸು ಸಯಾತ್ಯಕೀರ್ತಿಮ್ ॥ ೪೬ ॥**

ಅಜ್ಞಾನೀ=ಅವಿವೇಕಿಯಾದ; ಯಃ=ಯಾರು; ಸಂಧಿಃ=ಸಂಧಿಯೇ; ಮುಖ್ಯ=ಮೊದಲಾದ; ಅಮಲ=ಒಳ್ಳೆಯ; ನೀತಿ=ನೀತಿಗಳ; ಕಾಲಂ=ಸಮಯವನ್ನು; ಅವಿಜ್ಞಾಯ=ತಿಳಿಯದೆ; ರಣಂ=ಯುದ್ಧವನ್ನು; ವಿಧತ್ತೇ=ಮಾಡುತ್ತಾನೋ; ಸಃ=ಆ ರಾಜನು; ಷಟ್=

ಆರು; ನಿಗ್ರಹಾಣಾಂ=ನಿಗ್ರಹಗಳ; ಸಮಯ=ಕಾಲವನ್ನು; ಅನಭಿಜ್ಞ=ತಿಳಿಯದ; ವಾದೀ ಇವ= ವಾದಿಯಂತೆ; ಸಂಸತ್ಸು=ಸಭೆಗಳಲ್ಲಿ; ಅಕೀರ್ತಿಂ=ಅಪಜಯವನ್ನು; ಯಾತಿ= ಹೊಂದುತ್ತಾನೆ.

ವಾದಿಪ್ರತಿವಾದಿಗಳಾಗಿ ಇಬ್ಬರು ಚರ್ಚೆಯನ್ನು ಆರಂಭಿಸುತ್ತಾರೆ. ಇಬ್ಬರ ಪೈಕಿ ಒಬ್ಬನು ತಪ್ಪಿ ಮಾತನಾಡಿದರೆ ಮತ್ತೊಬ್ಬನು ದೋಷವನ್ನು ಹೇಳಬೇಕು. ಆಧಿಕ್ಯ, ನ್ಯೂನತೆ, ವಿರೋಧ ಇತ್ಯಾದಿ ರೀತಿಯಾಗಿ ದೋಷಗಳು ಆರು ರೀತಿ ಇವೆ. ಅಗತ್ಯಕ್ಕಿಂತ ಜಾಸ್ತಿ ಮಾತನಾಡಿದಾಗ ಆಧಿಕ್ಯ ಎಂಬ ದೋಷವನ್ನೇ ಹೇಳಬೇಕು ಹೊರತು ನ್ಯೂನತೆ ಎಂಬ ದೋಷವನ್ನಲ್ಲ. ಆಡಬೇಕಾದ ಮಾತನ್ನು ಪೂರ್ಣವಾಗಿ ಆಡದಿದ್ದರೆ ಮಾತ್ರ ನ್ಯೂನತೆ ಎಂಬ ದೋಷವನ್ನು ಹೇಳಬೇಕು. ಹೀಗೆ ದೋಷವನ್ನು ವ್ಯತ್ಯಾಸ ಮಾಡಿದರೆ ಅಪಜಯ ಬರುತ್ತದೆ.

ಇದೇ ನ್ಯಾಯ ರಾಜನಾದವನಿಗೂ ಇರಬೇಕು. ಯಾರ ಜೊತೆ ಒಪ್ಪಂದ ಮಾಡಿಕೊಳ್ಳಬೇಕು; ಯಾರ ಜೊತೆ ಹೋರಾಡಬೇಕು; ಯಾವ ಸಮಯದಲ್ಲಿ ಪ್ರಯಾಣ ಮಾಡಬೇಕು; ಎಲ್ಲಿ ವಾಸಮಾಡಬೇಕು; ಯಾರ ಮಧ್ಯದಲ್ಲಿ ಭಿನ್ನಾಭಿಪ್ರಾಯವನ್ನು ಬಿತ್ತಬೇಕು; ಯಾರಿಗೆ ಶರಣಾಗಬೇಕು –ಇವು ಆರು ರಾಜನಾದವನಿಗೆ ತಿಳಿದಿರಬೇಕು. ಶತ್ರು ನಮ್ಮಕ್ಕಿಂತ ಬಲಿಷ್ಠನಾಗಿದ್ದರೆ ಆತನೊಡನೆ ಜಗಳ ಸಲ್ಲದು. ಯುದ್ಧವಾದರೆ ನಮ್ಮ ಸರ್ವಸ್ವವೂ ಹೋಗುತ್ತದೆ. ಆತನೊಡನೆ ಸಂಧಾನ ಮಾಡಿಕೊಂಡರೆ ನಮ್ಮದಾದರೂ ನಮಗೆ ಉಳಿಯುತ್ತದೆ. ಶತ್ರು ದುರ್ಬಲನಾದರೆ ಸಂಧಾನ ಬೇಕಿಲ್ಲ. ಯುದ್ಧಮಾಡಿ ಆತನ ಸರ್ವಸ್ವವನ್ನು ಪಡೆಯಬೇಕು. ದೇಶದಲ್ಲಿ ಅತಿವೃಷ್ಟಿ ಅನಾವೃಷ್ಟಿಯಿಂದ ಜನರು ಬಳಲುತ್ತಿರುವಾಗ ರಾಜನು ವಿದೇಶಯಾತ್ರೆ ಮಾಡಬಾರದು. ಮಾಡಿದರೆ ಪ್ರಜೆಗಳ ಕೋಪಕ್ಕೆ ತುತ್ತಾಗಬೇಕಾಗುತ್ತದೆ. ಶತ್ರುಗಳ ದೇಶದಲ್ಲಿ, ಮನೆಯಲ್ಲಿ ವಸತಿ ಸರಿಯಲ್ಲ. ಜನರು ಒಟ್ಟಾಗಿ ದಂಗೆ ಏಳುವುದಾದರೆ ಅವರಲ್ಲಿ ಭೇದವನ್ನು ಉಂಟುಮಾಡಬೇಕು. ಹೊರತು ಹೊಡೆಯುವುದು ಬಡಿಯುವುದು ಅಲ್ಲ. ಹಾಗೆ ಮಾಡಿದರೆ ಕೆಲವು ಪ್ರಜೆಗಳು ಸಾಯಬೇಕಾಗುತ್ತದೆ. ರಾಜನಿಗಿಂತ ಹಿರಿಯರಿಗೆ ತಲೆಬಾಗಬೇಕು. ಆಗ ಅವರ ಆಶೀರ್ವಾದವು ಲಭಿಸುತ್ತದೆ. ಇಂತಹ ರಾಜನಿಗೆ ಎಲ್ಲಿಯೂ ಅಪಕೀರ್ತಿಯು ಇರುವುದಿಲ್ಲ.

**<u>ಸಂದೇಶ</u>** : ಶ್ರೇಷ್ಠ ವ್ಯಕ್ತಿಗಳಿಗೆ ಅಪಜಯವು ಬರಬಾರದು. ಅದು ಮರಣಕ್ಕಿಂತಲೂ ಹೆಚ್ಚು ದುಃಖದಾಯಕ.

ನಾನಾ ಪ್ರಕಾರೈರ್ದಶದಿಕ್ಷು ಶತ್ರೂನ್
ಯೋ ನೈವ ಜೇತುಂ ಯತತೇ ಕ್ಷಿತೀಶಃ ।
ಬತಾವಶೀಭೂತದಶೇಂದ್ರಿಯೌಘೋ
ವ್ರತೀವ ನಾಸೌ ಸುಖಭಾಕ್ ಕದಾಪಿ ॥ ೪೭ ॥

ಯಃ=ಯಾವ; ಕ್ಷಿತೀಶಃ=ರಾಜನು; ದಶ=ಹತ್ತು; ದಿಕ್ಷು=ದಿಕ್ಕುಗಳಲ್ಲಿ; ಶತ್ರೂನ್=ಶತ್ರುಗಳನ್ನು; ನಾನಾ ಪ್ರಕಾರೈಃ=ನಾನಾ ರೀತಿಗಳಿಂದ; ಜೇತುಂ=ಗೆಲ್ಲಲು; ನ ಏವ ಯತತೇ=ಪ್ರಯತ್ನಿಸುವುದಿಲ್ಲವೋ; ಅಸೌ=ಅವನು; ಅವಶೀಭೂತ=ಹಿಡಿತದಲ್ಲಿ ಇಲ್ಲದಿರುವ; ದಶ=ಹತ್ತು; ಇಂದ್ರಿಯ=ಇಂದ್ರಿಯಗಳ; ಓಘ=ಸಮೂಹವುಳ್ಳ; ವ್ರತೀ ಇವ=ಯತಿಯಂತೆ; ಕದಾ ಅಪಿ=ಎಂದೂ ಕೂಡ; ಸುಖ=ನೆಮ್ಮದಿಯನ್ನು; ಭಾಕ್=ಹೊಂದುವವನು; ನ=ಆಗುವುದಿಲ್ಲ; ಬತ=ದುಃಖವು.

ಒಬ್ಬ ರಾಜನ ಶ್ರೀಮಂತಿಕೆಯನ್ನು ನೋಡಿ ಮತ್ಸರಿಸುವ ಮಂದಿಯೇ ಬಹಳ. ಹತ್ತು ದಿಕ್ಕುಗಳಿಂದಲೂ ಅವರು ಈತನನ್ನು ಪೀಡಿಸುತ್ತಾರೆ. ಅವರನ್ನು ಈ ರಾಜನು ಚೆನ್ನಾಗಿ ನಿಗ್ರಹಿಸಬೇಕು. ಇಲ್ಲದಿದ್ದರೆ ಅವರ ಕಾಟದಿಂದ ಈತನಿಗೆ ನೆಮ್ಮದಿಯೇ ಇರುವುದಿಲ್ಲ.

ರಾಜರು ಇದನ್ನು ಉದಾಹರಣೆಯ ಮೂಲಕ ತಿಳಿಸುತ್ತಾರೆ –ಸನ್ಯಾಸಿಗೆ ಯತಿ ಎಂದು ಹೆಸರು. ಅಂದರೆ ಪ್ರಯತ್ನಶೀಲನು. ಈ ಶರೀರ ಎಂಬ ದೇಶದಲ್ಲಿ ಜೀವನೇ ರಾಜನು. ಈ ರಾಜನನ್ನು ಕೈಕಾಲು, ಕಣ್ಣು ಇತ್ಯಾದಿಗಳು, ಹತ್ತು ಇಂದ್ರಿಯಗಳು ನಾನಾ ಕಡೆ ಎಳೆಯುತ್ತವೆ. ಅಡ್ಡದಾರಿಗೆ ಎಳೆಯುವುದೇ ಹೆಚ್ಚು. ಆಗ ಈ ಜೀವನು ಅವುಗಳನ್ನು ನಿಗ್ರಹಿಸಬೇಕು. ಇಲ್ಲದಿದ್ದರೆ ಇವನಿಗೆ ಅನರ್ಥ ನಿಶ್ಚಿತ. ಇದರಿಂದ ದುಃಖ. ಆದ್ದರಿಂದ ಇಂದ್ರಿಯಗಳನ್ನು ನಿಗ್ರಹಿಸಿ ಸದಾ ಪ್ರಯತ್ನಶೀಲನಾಗುವಂತೆ ರಾಜನೂ ಹತ್ತು ದಿಕ್ಕಿನ ಶತ್ರುಗಳನ್ನು ನಾನಾ ಉಪಾಯಗಳಿಂದ ಬಡಿಯಲು ಪಯತ್ನಶೀಲನಾಗಬೇಕು.

**ಸಂದೇಶ** : 'ಪ್ರಯತ್ನಮೇಕಮಗ್ರತೋ ನಿಧಾಯ ಭೂತಿಮಾಪ್ನುಮಃ' ಸದಾ ಪ್ರಯತ್ನಶೀಲರಾದವರು ಜೀವನದಲ್ಲಿ ಯಶವನ್ನು ಗಳಸುತ್ತಾರೆ.

**ಯತ್ಸೈನ್ಯಕುಂತಾಃ ಸ್ವಸಪತ್ನಚಿಂತಾಂ**
**ಶಾರ್ದೂಲದಂತಾ ಇವ ಸಾಧಯಂತಿ ।**
**ಸ್ವರಾಷ್ಟ್ರಸಂತೋಷಮಪಿ ಸ್ವತಂತೌ**
**ತದೀಯದಂಷ್ಟ್ರಾ ಇವ ಸೋಽವನೀಶಃ** ॥ ೪೮ ॥

ಯತ್=ಯಾವ ರಾಜನ; ಸೈನ್ಯ=ಸೈನಿಕರ; ಕುಂತಾಃ=ಆಯುಧಗಳು; ಶಾರ್ದೂಲ=ಹುಲಿಗಳ; ದಂತಾ ಇವ=ಹಲ್ಲುಗಳಂತೆ; ಸ್ವ=ತನ್ನ; ಸಪತ್ನ=ಶತ್ರುಗಳಿಗೆ; ಚಿಂತಾಂ=ದುಃಖವನ್ನು; ಸಾಧಯಂತಿ=ಉಂಟುಮಾಡುತ್ತವೋ; ತದೀಯ=ಆ ಹುಲಿಯ; ದಂಷ್ಟ್ರಾಃ=ಹಲ್ಲುಗಳು; ಸ್ವ=ತನ್ನ; ತಂತೌ ಇವ=ಮಕ್ಕಳಲ್ಲಿಯಂತೆ; ಸ್ವ=ತನ್ನ; ರಾಷ್ಟ್ರ=ರಾಜ್ಯದ; ಸಂತೋಷಂ ಅಪಿ=ಆನಂದವನ್ನೂ; ಸಾಧಯಂತಿ=ಉಂಟುಮಾಡುತ್ತವೋ; ಸಃ=ಅವನು; ಅವನಿ=ಭೂಮಿಯ; ಈಶಃ=ಒಡೆಯನು.

ಸೈನಿಕರಲ್ಲಿ ಕ್ರೂರವಾದ ಆಯುಧಗಳು ಇರುತ್ತವೆ. ಇವುಗಳಿಂದ ಸೈನಿಕರು ಶತ್ರುಗಳಿಗೆ

ದುಃಖವನ್ನು ಕೊಡುತ್ತಾರೆ. ಈ ಆಯುಧಗಳು ಶತ್ರುಗಳಿಗಾಗುವಾಗ ದುಃಖದಾಯಕಗಳು; ತಮ್ಮ ರಾಜ್ಯದ ಜನಗಳಿಗೆ ನೆಮ್ಮದಿದಾಯಕಗಳು. ಶತ್ರುಗಳನ್ನು ಪೀಡಿಸುವ ಆಯುಧಗಳೇ ಪ್ರಜೆಗಳಿಗೆ ಆನಂದದಾಯಕಗಳು ಹೊರತು ಶತ್ರುಗಳಿಗೆ ಉಪಕಾರಕವಾಗಿ ಪ್ರಜೆಗಳಿಗೆ ಮಾರಕವಾದರೆ ರಾಜನೂ ಆತನ ವಂಶವೂ ಎರಡೂ ನಾಶವಾಗುತ್ತದೆ.

ಹುಲಿಗಳಿಗೆ ಹರಿತವಾದ ಹಲ್ಲುಗಳಿವೆ. ಆ ಹಲ್ಲುಗಳಿಂದ ತನ್ನ ಶತ್ರುವಾದ ಆಕಳು ಮೊದಲಾದ್ದನ್ನು ನಾಶಮಾಡುತ್ತವೆ. ಆ ಹಲ್ಲುಗಳಿಂದ ಆಕಳನ್ನು ಹಿಡಿದರೆ ಆಕಳು ಸತ್ತಿತು ಎಂದೇ ಅರ್ಥ. ಆದರೆ ಅದೇ ಹಲ್ಲುಗಳಿಂದ ತನ್ನ ಮರಿಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಒಯ್ಯುತ್ತದೆ. ಇಲ್ಲಿ ಹಲ್ಲುಗಳಿಂದ ಮರಿಗಳನ್ನು ಹಿಡಿದರೂ ಅವುಗಳಿಗೆ ಏನೂ ನೋವಾಗುವುದಿಲ್ಲ. ಇದರಿಂದ ಹುಲಿಯೂ ಉಳಿಯಿತು. ಅದರ ವಂಶವೂ ಬೆಳೆಯಿತು. ಈ ಉದಾಹರಣೆಯನ್ನು ರಾಜನಾದವನು ಅನುಸರಿಸಬೇಕು.

**<u>ಸಂದೇಶ</u>** : ನಮ್ಮ ಕಾನೂನುಗಳು ಪರಕೀಯರಿಗೆ ಮಾರಕವಾಗಿರಬೇಕು. ನಮಗೆ ಕಾರಕವಾಗಿರಬೇಕು.

**ರಾಜನ್ಮುಕ್ತೋಪಿ ತೇ ಬಾಣಃ ನಿಹಂತಿ ದಿಶಿ ದಿಶ್ಯರೀನ್ ।**
**ಗುಣಿಸಂಗಸ್ಯಾರ್ಜವಸ್ಯ ವಂಶಸ್ಯ ಹಿ ಫಲಂ ಚ ತತ್ ॥ ೪೯ ॥**

ರಾಜನ್=ಎಲೋ ರಾಜನೇ; ತೇ=ನಿನ್ನ; ಬಾಣಃ=ಬಾಣವು; ಮುಕ್ತಃ ಅಪಿ=ಬಿಡಲ್ಪಟ್ಟರೂ; ದಿಶಿ ದಿಶಿ=ದಿಕ್ಕುಗಳಲ್ಲಿ; ಅರೀನ್=ಶತ್ರುಗಳನ್ನು; ನಿಹಂತಿ=ಕೊಲ್ಲುತ್ತವೆ; ತತ್=ಅದು; ಗುಣಿ=ಗುಣಿಗಳ; ಸಂಗಸ್ಯ=ಸಂಬಂಧದ; ಆರ್ಜವಸ್ಯ=ಋಜುವಿನ; ವಂಶಸ್ಯ=ವಂಶದ; ಫಲಂ ಹಿ=ಫಲವಷ್ಟೇ.

ರಾಜನು ಬಿಲ್ಲಿಗೆ ಬಾಣವನ್ನು ಜೋಡಿಸಿ ಶತ್ರುಗಳ ಕಡೆಗೆ ಬಿಡುತ್ತಾನೆ. ಆ ಬಾಣಗಳು ಶತ್ರುಗಳು ಎಲ್ಲಿದ್ದರೂ ಕೊಲ್ಲುತ್ತವೆ. ಇದು ಈ ಶ್ಲೋಕದ ಅಭಿಪ್ರಾಯ. ಇದನ್ನು ರಾಜರು ಚಮತ್ಕಾರವಾಗಿ ವರ್ಣಿಸುತ್ತಾರೆ– ಬಾಣವನ್ನು ರಾಜನು ಬಿಟ್ಟನು. ಇಲ್ಲಿ ಪರಿತ್ಯಕ್ತ ಎಂಬ ಅರ್ಥವೂ ಹೊರಡುತ್ತದೆ. ಲೋಕದಲ್ಲಿಯೂ ಒಮ್ಮೊಮ್ಮೆ ಸೇವಕರು ರಾಜರಿಂದ ಪರಿತ್ಯಕ್ತರಾಗುತ್ತಾರೆ. ಆದರೂ ಅವರು ರಾಜರಿಗೆ ನಿಷ್ಠರಾಗಿಯೇ ಇರುತ್ತಾರೆ. ಇಂತಹವರು ತಾವು ಎಲ್ಲಿದ್ದರೂ ರಾಜರ ಕೆಲಸವನ್ನು ಮಾಡುತ್ತಾರೆ. ತಮ್ಮ ಸ್ವಾಮಿನಿಷ್ಠೆಯನ್ನು ಮೆರೆಯುತ್ತಾರೆ. ಇದಕ್ಕೆ ಕಾರಣ ತಾವು ಜೀವನದಲ್ಲಿ ಮಾನಸಿಕ ಯಾವ ವಕ್ರತೆ ಉಳ್ಳವರೂ ಆಗಿರುವುದಿಲ್ಲ. ಋಜುಗಳಾಗಿರುತ್ತಾರೆ. ಒಳ್ಳೆಯ ವಂಶದಿಂದ ಬಂದವರಾಗಿರುತ್ತಾರೆ. ಒಳ್ಳೆಯ ಗುಣಶಾಲಿಗಳ ಸಂಪರ್ಕಕ್ಕೆ ಒಳಗಾಗಿರುತ್ತಾರೆ. ಇವೆಲ್ಲಾ ಗುಣಗಳು ಬಾಣಕ್ಕೂ ಇವೆ. ಬಾಣವೂ ಋಜು ಅಂದರೆ ನೇರ. ಬಾಣ ಎಲ್ಲಿಯೂ ವಕ್ರವಾಗಿರುವುದಿಲ್ಲ. ವಕ್ರವಾಗಿದ್ದರೆ ಪ್ರಯೋಗಿಸಲೂ ಸಾಧ್ಯವಿಲ್ಲ. ಒಳ್ಳೆಯ ವಂಶದಿಂದ ಅಂದರೆ ಬಿದಿರಿನಿಂದ ತಯಾರಾದ ಬಿಲ್ಲಿನಿಂದ ಬಂದದ್ದು. ಅಂತೂ ಸದ್ವಂಶದಿಂದ ಬಂದದ್ದು ಎಂದಾಯಿತು.

ಆ ಧನುಸ್ಸಿಗೆ ಒಂದು ಹಗ್ಗವನ್ನು ಕಟ್ಟಿರುತ್ತಾರೆ. ಹಗ್ಗವನ್ನು ಗುಣ ಎಂಬ ಶಬ್ದದಿಂದಲೂ ಹೇಳುತ್ತಾರೆ. ತಥಾ ಚ ಧನುಸ್ಸು ಗುಣಿಯೂ ಆಯಿತು. ಈ ಬಾಣಕ್ಕೆ ಗುಣಿಯ ಸಂಬಂಧವೂ ಆಯಿತು. ಈ ರೀತಿ ಋಜುವಾದ, ಸದ್ವಂಶದಿಂದ ಬಂದ, ಗುಣಿಸಂಬಂಧವುಳ್ಳ ವ್ಯಕ್ತಿಯು ರಾಜನಿಂದ ಪರಿತ್ಯಕ್ತನಾದರೂ ರಾಜನ ಸೇವೆಯನ್ನು ಮಾಡುವಂತೆ ಈ ಬಾಣವೂ ರಾಜನಿಂದ ಬಿಡಲ್ಪಟ್ಟರೂ ಶತ್ರುಗಳನ್ನು ನಾಶಮಾಡುತ್ತದೆ.

**ಸಂದೇಶ** : ರಾಜನೂ ಪ್ರಜೆಗಳನ್ನು ಚೆನ್ನಾಗಿ ನೋಡಿಕೊಳ್ಳಬೇಕು. ಪ್ರಜೆಗಳೂ ಒಳ್ಳೆಯವರಾಗಿರಬೇಕು.

**ಪಾಂಥಾನ್ ಸಮಂತಾದ್ದಿವಸೇ ದಿನೇಶ-**
**ಪ್ರಖ್ಯೋ ರಜನ್ಯಾಂ ರಜನೀಶಕಲ್ಪಃ ।**
**ಯಸ್ತಸ್ಕರೇಭ್ಯೋವತಿ ದುಷ್ಕರಾಜ್ಞಃ**
**ಸ ಏವ ಕೀರ್ತ್ಯೈತಿ ದಿಶಾಮುಪಾಂತಮ್** ॥ ೫೦ ॥

ದುಷ್ಕರ=ಕಠಿಣವಾದ; ಆಜ್ಞಃ=ಅಪ್ಪಣೆವುಳ್ಳ; ಯಃ=ಯಾವ ರಾಜನು; ದಿನೇಶ=ಸೂರ್ಯ ನಿಗೆ; ಪ್ರಖ್ಯಃ=ಸಮನಾಗಿ; ದಿವಸೇ=ಹಗಲಿನಲ್ಲಿ; ಸಮಂತಾತ್=ಎಲ್ಲಾ ಕಡೆ; ಪಾಂಥಾನ್= ದಾರಿಗರನ್ನು; ರಜನ್ಯಾಂ=ರಾತ್ರಿಯಲ್ಲಿ; ರಜನೀ=ರಾತ್ರಿಗೆ; ಈಶ=ಒಡೆಯನಾದ ಚಂದ್ರನಿಗೆ; ಕಲ್ಪಃ=ಸಮನಾಗಿ; ತಸ್ಕರೇಭ್ಯಃ=ಕಳ್ಳರಿಂದ; ಅವತಿ=ರಕ್ಷಿಸುತ್ತಾನೋ; ಸಃ ಏವ=ಅವನೇ; ಕೀರ್ತ್ಯಾ=ಕೀರ್ತಿಯಿಂದ; ದಿಶಾಂ=ದಿಕ್ಕುಗಳ; ಉಪಾಂತಂ=ಸಮೀಪವನ್ನು; ಏತಿ= ಹೊಂದುತ್ತಾನೆ.

ರಾಜನು ದುರ್ಬಲನಾಗಿದ್ದರೆ ರಾಜ್ಯದಲ್ಲಿ ಕಳ್ಳರು ದರೋಡೆಕೋರರು ಸೇರುತ್ತಾರೆ. ಅಧಿಕಾರಿಗಳನ್ನು ಶಿಸ್ತಲ್ಲಿ ಇಟ್ಟುಕೊಳ್ಳಬೇಕು. ದರೋಡೆಕೋರರಿಗೆ ಹಗಲೂ, ರಾತ್ರಿ ಎರಡೂ ಹೊತ್ತು ಆಗುತ್ತದೆ. ಅವರು ಧೈರ್ಯವಂತರು. ಕಳ್ಳರಿಗೆ ರಾತ್ರಿಯೇ ಆಗಬೇಕು. ಅವರು ಭಯಗ್ರಸ್ತರು. ಅವರನ್ನು ಶಿಕ್ಷಿಸುವ ವಿಷಯದಲ್ಲಿ ರಾಜನು ಚಂದ್ರನಂತಿರಬೇಕು. ಚಂದ್ರನು ಎಲ್ಲಾ ವಸ್ತ್ರಗಳನ್ನು ಸ್ಪಷ್ಟವಾಗಿ ತೋರಿಸುವುದಿಲ್ಲ. ಅದೇ ರೀತಿ ಕಳ್ಳರಿಗೆ ಸ್ವಲ್ಪ ರಿಯಾಯಿತಿ ತೋರಿಸಬೇಕು. ಯಾಕೆಂದರೆ ಒಮ್ಮೆ ಕಳ್ಳತನ ಮಾಡಿ ಸಿಕ್ಕಿಬಿದ್ದರೆ ಭಯದಿಂದ ಅನಂತರ ಆ ಕೆಲಸವನ್ನು ಮಾಡುವುದಿಲ್ಲ. ತಮ್ಮ ತಪ್ಪಿನ ಅರಿವಾಗುತ್ತದೆ. ಒಪ್ಪಿಕೊಳ್ಳುತ್ತಾರೆ. ದರೋಡೆಕೋರರ ವಿಷಯದಲ್ಲಿ ಸೂರ್ಯನಂತಿರಬೇಕು. ಸೂರ್ಯನೂ ಮನೆಯ ಒಳಗೆ ಹೊರಗೆ ಇರುವ ಪ್ರತಿಯೊಂದು ವಸ್ತುವನ್ನೂ ಕೂಲಂಕಷವಾಗಿ ತೋರಿಸುವಂತೆ ದರೋಡೆಕೋರರ ಜನ್ಮವನ್ನೇ ಜಾಲಾಡಬೇಕು. ಸೂರ್ಯನಂತೆ ತೀಕ್ಷ್ಣನಾಗಿ ಪ್ರತಿಕ್ರಯಿಸಬೇಕು. ಹೀಗಾದರೆ ಆ ರಾಜನ ಪ್ರಜೆಗಳು ಈ ರಾಜನನ್ನು ಮೂಲೆಮೂಲೆಗಳಲ್ಲಿ ಹೊಗಳುತ್ತಾರೆ. ರಾಜನು ಕೀರ್ತಿಯಿಂದ ಎಲ್ಲಾ ಕಡೆ ಹರಡುತ್ತಾನೆ.

**<u>ಸಂದೇಶ</u>**: ರಾಜನು ಬೆಳಗಬೇಕಾದರೆ ಜಗತ್ತನ್ನು ಬೆಳಗುವ ಸೂರ್ಯಚಂದ್ರರ ಸನ್ನಿಧಾನ ತನ್ನ ಕಣ್ಣುಗಳಲ್ಲಿ ಇರುವಂತೆ ಮಾಡಬೇಕು.

**ನ್ಯಾಯಂ ಸಂಗೃಹ್ಯ ನೃಪತಿರನ್ಯಾಯಂ ಯಸ್ತು ಸಂತ್ಯಜೇತ್ ।**
**ಪದೇ ಪದೇ ತಮನ್ಯಾಯಃ ಸನ್ನಮ್ಯಾಭ್ಯರ್ಥಯಿಷ್ಯತೇ ॥ ೫೧ ॥**

ಯಃ=ಯಾವ; ನೃಪತಿಃ=ರಾಜನು; ನ್ಯಾಯಂ=ನ್ಯಾಯವನ್ನು; ಸಂಗೃಹ್ಯ=ಸ್ವೀಕರಿಸಿ; ಅನ್ಯಾಯಂ=ಅನ್ಯಾಯವನ್ನು; ಸಂತ್ಯಜೇತ್=ಬಿಡುತ್ತಾನೋ; ತಂ=ಅವನನ್ನು; ಪದೇ ಪದೇ=ಪ್ರತಿಕ್ಷಣವೂ; ಅನ್ಯಾಯಃ=ಅನ್ಯಾಯವು; ಸನ್ನಮ್ಯ=ನಮಸ್ಕರಿಸಿ; ಅಭ್ಯರ್ಥಯಿಷ್ಯತೇ=ಪ್ರಾರ್ಥಿಸುತ್ತದೆ.

ತನ್ನ ರಾಜ್ಯದ ಇಬ್ಬರು ಪ್ರಜೆಗಳಿಗೆ ಜಗಳವಾದಾಗ ರಾಜನು ನ್ಯಾಯದ ಪಕ್ಷಪಾತಿಯಾಗಬೇಕು. ತಪ್ಪು ಮಾಡದ ಪ್ರಜೆಗೆ ಅನ್ಯಾಯ ಆಗದಂತೆ ನೋಡಬೇಕು. ಅನ್ಯಾಯವನ್ನು ಓಡಿಸಬೇಕು. ಇದರಿಂದ ರಾಜನಿಗೆ ಅನ್ಯಾಯದ ಲಾಭ. ವಾದಿರಾಜರು ಇಲ್ಲಿ ಶಬ್ದದ ಚಮತ್ಕಾರವನ್ನು ತೋರಿಸುತ್ತಾರೆ. ತಪ್ಪು ಮಾಡಿದ ಪ್ರಜೆಯನ್ನು ರಾಜನು ತ್ಯಜಿಸಿದರೆ ಆಗ ಆ ಸೇವಕನು 'ನನ್ನನ್ನು ಕ್ಷಮಿಸು' ಎಂದು ವಿನೀತನಾಗಿ ಪ್ರಾರ್ಥನೆ ಮಾಡಿ ಪುನಃ ರಾಜನಲ್ಲಿ ಸೇರುತ್ತಾನೆ. ಅದೇ ರೀತಿ ರಾಜನು ಅನ್ಯಾಯವನ್ನು ತನ್ನ ರಾಜ್ಯದಿಂದ ಓಡಿಸಿದರೆ ಆಗ ಅನ್ಯಾಯವು ಅಂದರೆ ಅನ್ಯಾಯವೇ ತಿರುಗಿ ಬರುತ್ತದೆ ಎಂದರ್ಥವಲ್ಲ. ಅನ್ಯ-ಆಯ=ಅನ್ಯರ ಆಯ ಅಂದರೆ ಅನ್ಯರ ಸಂಪತ್ತು ರಾಜನಿಗೆ ಬರುತ್ತದೆ. ಆಯ ಅಂದರೆ ಲಾಭ. ರಾಜನು ನ್ಯಾಯಪಕ್ಷಪಾತಿಯಾಗಿ ಈ ಪ್ರಜೆಗಳಿಗೆ ಆಗುವ ಅನ್ಯಾಯವನ್ನು ಪರಿಹರಿಸಿದರೆ ಆಗ ಪ್ರಜೆಗಳು ತಾವಾಗಿಯೇ ಮುಂದೆ ಬಂದು ತಮ್ಮ ಸಂಪತ್ತಿನ ಲಾಭವನ್ನು ರಾಜನಿಗೆ ಅರ್ಪಿಸುತ್ತಾರೆ. ಈತನು ಒಳ್ಳೆಯ ರಾಜನು. ನ್ಯಾಯ ಪಕ್ಷಪಾತಿ ಎಂದು.

**<u>ಸಂದೇಶ</u>** : ರಾಜನು ಸದಾ ನ್ಯಾಯಪಕ್ಷಪಾತಿಯಾಗಬೇಕು. ಅನ್ಯಾಯದ ವಿರುದ್ಧ ಹೋರಾಡಬೇಕು.

**ದಿನೇ ದಿನೇಶ ಪ್ರಖ್ಯಃ ಯಃ ರಾತ್ರೌ ರಾತ್ರೀಶಸನ್ನಿಭಃ ।**
**ಕಾಪಥೇಭ್ಯಃ ಪ್ರಜಾರುಂಧೇ ಸ ರಾಜಾ ಸ ವಿಶಾಮಿನಃ ॥ ೫೨ ॥**

ಯಃ=ಯಾರು; ದಿನೇ=ಹಗಲಿನಲ್ಲಿ; ದಿನೇಶ=ಸೂರ್ಯನಿಗೆ; ಪ್ರಖ್ಯಃ=ಸಮನಾಗಿ; ರಾತ್ರೌ=ರಾತ್ರಿಯಲ್ಲಿ; ರಾತ್ರಿ=ರಾತ್ರಿಗೆ; ಈಶ=ಒಡೆಯನಾದ ಚಂದ್ರನಿಗೆ; ಸನ್ನಿಭಃ=ಸಮನಾಗಿ; ಪ್ರಜಾಃ=ಜನರನ್ನು; ಕಾಪಥೇಭ್ಯಃ=ಕೆಟ್ಟದಾರಿಗಳಿಂದ; ರುಂಧೇ=ತಡೆಯುತ್ತಾನೆ; ಸಃ=ಅವನು; ವಿಶಾಂ=ಪ್ರಜೆಗಳಿಗೆ; ರಾಜಾ=ಚಂದ್ರನು; ಇನಶ್ಚ=ಸೂರ್ಯನೂ ಕೂಡಾ.

ಸೂರ್ಯಚಂದ್ರರನ್ನು ಇನ, ರಾಜಾ=ಸ್ವಾಮಿಯು, ರಾಜನು ಎಂಬ ಶಬ್ದಗಳಿಂದ ಕ್ರಮವಾಗಿ ಕರೆಯುತ್ತಾರೆ. ಚಂದ್ರನು ಶೋಭಿಸುವುದರಿಂದ ರಾಜನು. ಸೂರ್ಯನು ಒಳ್ಳೆಯ ಬೆಳಕನ್ನು ಕೊಟ್ಟು ಜನರನ್ನು ಹೊಂಡಕ್ಕೆ ಬೀಳಿಸುವುದರಿಂದ ತಪ್ಪಿಸಿ ಸರಿಯಾದ ದಾರಿಯಲ್ಲಿ ಹೋಗುವಂತೆ ಮಾಡುತ್ತಾನೆ. ಆದ್ದರಿಂದ ಇವನು ಅಂದರೆ ಸ್ವಾಮಿಯು. ಈ ಎರಡು ಕೆಲಸಗಳನ್ನು ರಾಜನು ಮಾಡುತ್ತಾನೆ. ಜನರು ರಾಜನ ಭಯದಿಂದ ಅಡ್ಡದಾರಿ ಹಿಡಿಯುವುದಿಲ್ಲ. ಆದ್ದರಿಂದ ರಾಜನಿಗೆ ಇನ ಅಂದರೆ ಸ್ವಾಮಿ ಎಂಬ ಹೆಸರು ಯೋಗ್ಯ. ಸ್ವಯಂ ದಿಕ್ಕು ವಿದಿಕ್ಕುಗಳಲ್ಲಿ ಕೀರ್ತಿಯಿಂದ ಮೆರೆಯುತ್ತಾನೆ. ಆದ್ದರಿಂದ ರಾಜನು.

**ಪ್ರಾಯೇಣ ಧನವಾನೇವ ಜಾಯತೇ ಕ್ಲೇಶವಾನಪಿ ।**
**ಫಲವಾನೇವ ಹಿ ತರುಃ ಕಂಟಕೈರುಪರುಧ್ಯತೇ ॥ ೫೩ ॥**

ಪ್ರಾಯೇಣ=ಪ್ರಾಯಶಃ; ಧನವಾನ್ ಏವ=ಶ್ರೀಮಂತನೇ; ಕ್ಲೇಶವಾನ್ ಅಪಿ= ದುಃಖವುಳ್ಳವನೂ; ಜಾಯತೇ=ಆಗುತ್ತಾನೆ; ಫಲವಾನ್=ಹಣ್ಣುಗಳಿಂದ ಕೂಡಿದ; ತರುಃ ಏವ=ಮರವೇ; ಕಂಟಕೈಃ=ಮುಳ್ಳುಗಳಿಂದ; ಉಪರುಧ್ಯತೇ=ಆವರಿಸಲ್ಪಡುತ್ತದೆ.

ಸಂಪತ್ತು ಹೆಚ್ಚು ಹೆಚ್ಚು ಇದ್ದಷ್ಟು ನೆಮ್ಮದಿ ಹೆಚ್ಚು ಎಂದು ತಿಳಿಯುವವರು ಬಹಳ. ಆದರೆ ವಿಮರ್ಶೆ ಮಾಡಿದರೆ ದರಿದ್ರರಷ್ಟೂ ನೆಮ್ಮದಿ ಇರುವುದಿಲ್ಲ. ಇದಕ್ಕೆ ವಾದಿರಾಜರು ಒಂದು ಉದಾಹರಣೆ ಕೊಡುತ್ತಾರೆ– ಒಂದು ಮರದಲ್ಲಿ ತುಂಬಾ ಹಣ್ಣುಗಳಾಗಿದ್ದರೆ ಯಜಮಾನನು ಅದಕ್ಕೆ ತುಂಬಾ ಮುಳ್ಳಿನ ಬೇಲಿಯನ್ನು ಹಾಕುತ್ತಾನೆ. ಬರಡು ಮರಕ್ಕೆ ಯಾವ ಬೇಲಿಯೂ ಇರುವುದಿಲ್ಲ ಎಂದು.

**ಸಂದೇಶ** : ರಾಜನು ತನಗೆ ತೊಂದರೆ ಆಗುವುದಾದರೂ ಸಂಪತ್ತನ್ನು ಸಂಗ್ರಹಿಸಬೇಕು.

**ಕಾಲೇ ಕಾಲೇ ಧನಂ ನೂನಮರ್ಥಿಭ್ಯೋ ವಿತರೇದ್ಧಿಯಃ ।**
**ಮುಚ್ಯತೇ ಸರ್ವದುಃಖೇಭ್ಯಃ ಕಂಟಕೇಭ್ಯ ಇವ ದ್ರುಮಃ ॥ ೫೪ ॥**

ಕಾಲೇ ಕಾಲೇ=ಕಾಲದಲ್ಲಿ; ಯಃ=ಯಾರು; ಧನಂ=ಸಂಪತ್ತನ್ನು; ನೂನಂ= ನಿಶ್ಚಿತವಾಗಿ; ಅರ್ಥಿಭ್ಯಃ=ಬೇಡುವವರಿಗೆ; ವಿತರೇತ್=ದಾನಮಾಡುವನೋ; ಕಂಟಕೇಭ್ಯಃ= ಮುಳ್ಳುಗಳಿಂದ; ದ್ರುಮ ಇವ=ಮರದಂತೆ; ಸರ್ವ=ಎಲ್ಲಾ; ದುಃಖೇಭ್ಯಃ=ದುಃಖಗಳಿಂದ; ಮುಚ್ಯತೇ=ಮುಕ್ತನಾಗುತ್ತಾನೆ.

ರಾಜನು ಸಂಪತ್ತನ್ನು ಕೂಡಿಸುವಾಗ ನಾನಾ ಕ್ಲೇಶಗಳನ್ನು ಅನುಭವಿಸುವುದು ಸಹಜ. ಕೂಡಿಹಾಕಿದ ಸಂಪತ್ತನ್ನು ಯೋಗ್ಯ ಕಾಲದಲ್ಲಿ ಯೋಗ್ಯ ವ್ಯಕ್ತಿಗಳಿಗೆ ದಾನ ಮಾಡಬೇಕು. ಆಗ ತನಗೆ ಮಾನಸಿಕ ನೆಮ್ಮದಿ ಸಿಗುತ್ತದೆ. ದರಿದ್ರರಿಗೆ ದಾನಮಾಡಿದರೆ

ಅವರು ಚೆನ್ನಾಗಿ ಇರುತ್ತಾರೆ. ರಾಜನು ತನ್ನ ಬೊಕ್ಕಸವನ್ನು ಬೆಳೆಸುವುದು ಮಾತ್ರವಾದರೆ ಈ ದರಿದ್ರರು ಕಳ್ಳರಾಗಿ ಬೊಕ್ಕಸಕ್ಕೆ ಕನ್ನ ಹಾಕುತ್ತಾರೆ. ಮರವು ಫಲಿಸಲು ಆರಂಭಿಸುವಾಗ ಅದರ ಸುತ್ತ ಬೇಲಿ ಹಾಕಿದರೂ ಆ ಫಲಗಳು ಮಾಗಿ ಉದುರಲು ಆರಂಭಿಸುವಾಗ ಯಜಮಾನನು ಬೇಲಿಯನ್ನು ಕಿತ್ತು ಬಿಸಾಡುವಂತೆ.

<u>**ಸಂದೇಶ**</u> : ರಾಜರುಗಳಲ್ಲಿ ಸಂಗ್ರಹದಂತೆ ವಿತರಣೆಯ ಬುದ್ಧಿಯೂ ಇರಬೇಕು.

**ವಿತ್ತೈಃ ಕೀರ್ತಿಂ ಶರೈಃ ಶೌರ್ಯಂ ಪ್ರತ್ಯಹಂ ಯಃ ಸಮಾರ್ಜಯೇತ್ ।**
**ಸ ಏವ ಧನವಾನ್ ಸಮ್ರಾಟ್ ಅನ್ಯಂ ಮನ್ಯೇ ಹ್ಯಕಿಂಚನಮ್ ॥ ೫೫ ॥**

ಯಃ=ಯಾರು; ವಿತ್ತೈಃ=ಸಂಪತ್ತಿನಿಂದ; ಕೀರ್ತಿಂ=ಕೀರ್ತಿಯನ್ನು; ಶರೈಃ=ಬಾಣಗಳಿಂದ; ಶೌರ್ಯಂ=ಪರಾಕ್ರಮವನ್ನು; ಪ್ರತ್ಯಹಂ=ದಿನಾಲೂ; ಸಮಾರ್ಜಯೇತ್=ಗಳಿಸುತ್ತಾನೋ; ಸ ಏವ=ಅವನೇ; ಧನವಾನ್=ಶ್ರೀಮಂತನು; ಸಮ್ರಾಟ್=ಪರಾಕ್ರಮಿಯು; ಅನ್ಯಂ=ಇನ್ನೊಬ್ಬನನ್ನು; ಅಕಿಂಚನಂ=ದರಿದ್ರನನ್ನು; ಮನ್ಯೇ=ತಿಳಿಯುತ್ತೇನೆ.

ರಾಜನು ತನ್ನ ಸಂಪತ್ತನ್ನು ದೇವತಾಕಾರ್ಯಗಳಿಗೆ ಸಾಮಾಜಿಕ ಕಾರ್ಯಗಳಿಗೆ ಉಪಯೋಗಿಸಬೇಕು. ಇದರಿಂದ ತೃಪ್ತರಾದ ದೇವತೆಗಳು, ಪ್ರಜೆಗಳು ಆತನಿಗೆ ಒಳ್ಳೆಯ ಹೆಸರು ಬರುವಂತೆ ಮಾಡುತ್ತಾರೆ. ಸದಾಕಾಲ ಶತ್ರುಗಳ ಜೊತೆ ಕಾದಾಟದಿಂದ ಪರಾಕ್ರಮಿಯೂ ಆಗುತ್ತಾನೆ. ಇವೆರಡೇ ರಾಜನ ಶ್ರೀಮಂತಿಕೆಯ ದ್ಯೋತಕ. ವ್ಯಾಪಾರಿಗಳು ಶ್ರೀಮಂತರಾಗುವುದು ಹಣದಿಂದ. ರಾಜನೂ ವ್ಯಾಪಾರಿಗಳಂತೆ ಹಣವನ್ನು ಮಾತ್ರ ಗಳಿಸಿದರೆ ಆತನು ದರಿದ್ರನಂತೆಯೇ. ದರಿದ್ರನು ಅಪ್ರಸಿದ್ಧನು. ಶ್ರೀಮಂತರ ಪಟ್ಟಿಯಲ್ಲಿ ಸೇರುವುದಿಲ್ಲ. ರಾಜನೂ ಪ್ರಸಿದ್ಧನಾಗದಿದ್ದರೆ ಹಣ ಬಹಳ ಇದ್ದರೂ ಶ್ರೀಮಂತರ ಪಟ್ಟಿಯಲ್ಲಿ ಸೇರುವುದಿಲ್ಲ. ತಥಾ ಚ ದರಿದ್ರನೆಂದೇ ಅರ್ಥ.

<u>**ಸಂದೇಶ**</u> : ಬಾಹ್ಯ ಶ್ರೀಮಂತಿಕೆಗಿಂತ ಹೃದಯಶ್ರೀಮಂತಿಕೆಯೇ ನಿಜವಾದ ಸಂಪತ್ತು.

**ಅರ್ಥಿಭ್ಯೋಽರ್ಥಮನಾದಿಶ್ಯ ಯಸ್ತನ್ನಿಕ್ಷಿಪತಿ ಕ್ಷಿತೌ ।**
**ಮೃತ್ಸ್ನಾಂ ಸ್ವಯೋಗ್ಯಾಮಾದಾಯ ವಿತ್ತಂ ಭೂಮ್ಯೈ ಪ್ರದತ್ತವಾನ್ ॥ ೫೬ ॥**

ಯಃ=ಯಾರು; ಅರ್ಥಿಭ್ಯಃ=ಅಪೇಕ್ಷಿತರಿಗೆ; ಅರ್ಥಂ=ಸಂಪತ್ತನ್ನು; ಅನಾದಿಶ್ಯ=ಕೊಡದೆ; ತತ್=ಅದನ್ನು; ಕ್ಷಿತೌ=ಭೂಮಿಯಲ್ಲಿ; ನಿಕ್ಷಿಪತಿ=ಇಡುತ್ತಾನೋ; ಸ್ವ=ತನಗೆ; ಯೋಗ್ಯಾಂ=ಉಚಿತವಾದ; ಮೃತ್ಸ್ನಾಂ=ಮಣ್ಣನ್ನು; ಆದಾಯ=ಸ್ವೀಕರಿಸಿ; ವಿತ್ತಂ=ಸಂಪತ್ತನ್ನು; ಭೂಮ್ಯೈ=ಭೂಮಿಗೆ; ಪ್ರದತ್ತವಾನ್=ಕೊಟ್ಟನು.

ಬಹಳ ಜನರು ತಾವು ಸಂಗ್ರಹಿಸಿದ ಸಂಪತ್ತನ್ನು ತಾವೂ ಉಪಯೋಗಿಸುವುದಿಲ್ಲ. ಕೈಯಾರೆ ದಾನವನ್ನೂ ಮಾಡುವುದಿಲ್ಲ. ಆ ಸಂಪತ್ತನ್ನು ಒಂದು ಕೊಡದಲ್ಲಿ ತುಂಬಿಸಿ

ಅದರ ಬಾಯಿಯನ್ನು ಬಿಗಿಯುತ್ತಾರೆ. ರಾತ್ರಿಯಲ್ಲಿ ಎಲ್ಲರೂ ಮುಲಗಿದ ಮೇಲೆ ಹಿಂಬದಿಯ ತೋಟಕ್ಕೆ ಹೋಗುತ್ತಾರೆ. ಮಣ್ಣನ್ನು ಅಗೆಯುತ್ತಾರೆ. ಈ ಕೊಡವನ್ನು ಅದರೊಳಗೆ ಇಡುತ್ತಾರೆ. ಮುಂದೆ ಪೀಳಿಗೆಗೆ ಆಗುತ್ತದೆ ಎಂದು ಆಲೋಚಿಸುತ್ತಾರೆ. ಮುಂದಿನ ಪೀಳಿಗೆಗೆ ಸಿಗಬೇಕಾದರೆ ಅವರಿಗೆ ಗೊತ್ತಾಗಬೇಕು ತಾನೆ. ಗೊತ್ತಾಗಲು ಈತನು ಯಾರಿಗೂ ಹೇಳಿಲ್ಲ. ಗೊತ್ತಾಗುವುದು ಹೇಗೆ? ಹಾಗಾದರೆ ಹೂತಿಟ್ಟ ಅರ್ಥ ಏನು? ಇದನ್ನು ವಾದಿರಾಜರು ಸ್ವಾರಸ್ಯವಾಗಿ ವರ್ಣಿಸುತ್ತಾರೆ– ಹೂಳಬೇಕಾದರೆ ಮೊದಲು ಭೂಮಿಯನ್ನು ಅಗೆಯಬೇಕು. ಅಗೆಯುವಾಗ ಮಣ್ಣನ್ನು ನಮ್ಮ ಬಳಿಗೆ ಹಾಕುವುದು ಸಹಜ ಪ್ರಕ್ರಿಯೆ. ರಾಜರು ಇಲ್ಲೇ ರಹಸ್ಯ ಇರುವುದು ಎನ್ನುತ್ತಾರೆ – ಮಣ್ಣನ್ನು ನಮ್ಮ ಬಳಿಗೆ ಹಾಕುವುದರ ಅಭಿಪ್ರಾಯ ನಮ್ಮ ಪೀಳಿಗೆಗೆ ಹಾಗೂ ನಮಗೆ ಮಣ್ಣು ಎಂದು. ಅಗೆದನಂತರ ಕುಂಭವನ್ನು ಹೊಂಡದ ಒಳಗೆ ಇಡುತ್ತೇವೆ ತಾನೆ. ಇದರ ಅಭಿಪ್ರಾಯ ಭೂಮಿಗೆ ಸಂಪತ್ತು ಎಂದು. ಮುಂದೆ ಹೀಗೆಯೇ ಆಗುವುದು – ನಮ್ಮ ಪೀಳಿಗೆಗೆ ಸಂಪತ್ತು ಸಿಗದೆ ಭೂಮಿಯಲ್ಲೇ ಉಳಿದುಹೋಗುತ್ತದೆ.

<u>**ಸಂದೇಶ**</u> : ಸಂಪತ್ತನ್ನು ದಾನಮಾಡದೆ ಇಟ್ಟರೆ ಮಣ್ಣಪಾಲಾಗುತ್ತದೆ.

**ಸರ್ವೇಶೇ ಭುವಿ ಯಸ್ಯ ಭಕ್ತಿರಮಲಾ ನೈವೈತದಾಜ್ಞಾತ್ಮಕೇ**
**ಧರ್ಮೇ ವಾ ನ ರತಿಸ್ತದಾಶ್ರಿತಜನೇ ಸನ್ಮಾನಲೇಶೋಪಿವಾ ।**
**ದುಷ್ಟಪ್ರೀತಿರತಸ್ಯ ನಿಷ್ಠುರಗಿರೋ ದುರ್ಮಂತ್ರದತ್ತಶ್ರುತೇಃ**
**ಸಾಮ್ರಾಜ್ಯಂ ನಿಜವಂಶಪಾಂಸನಕೃತೇಃ ಕಂಸಸ್ಯ ಸಂಸಾರವತ್ ॥ ೫೭ ॥**

ಯಸ್ಯ=ಯಾವ ರಾಜನಿಗೆ; ಭುವಿ=ಭೂಮಿಯಲ್ಲಿ; ಸರ್ವ=ಎಲ್ಲರಿಗೂ; ಈಶೇ=ಒಡೆಯನಾದ ದೇವರಲ್ಲಿ; ಅಮಲಾ=ನಿರ್ಮಲವಾದ; ಭಕ್ತಿಃ=ಭಕ್ತಿಯು; ನೈವ=ಇಲ್ಲವೋ; ಏತತ್=ದೇವರ; ಆಜ್ಞಾತ್ಮಕೇ=ಆಜ್ಞಾರೂಪವಾದ; ಧರ್ಮೇ=ಧರ್ಮದಲ್ಲಿ; ನರತಿಃ=ಶ್ರದ್ಧೆ ಇಲ್ಲವೋ; ತತ್=ದೇವರನ್ನು; ಆಶ್ರಿತ=ಆಶ್ರಯಿಸಿರುವ; ಜನೇ=ಜನರಲ್ಲಿ; ಸನ್ಮಾನ=ಗೌರವದ; ಲೇಶಃ ಅಪಿ=ಸ್ವಲ್ಪವೂ; ನ ವಾ=ಇಲ್ಲವೋ; ದುಷ್ಟ=ಕೆಟ್ಟವರ; ಪ್ರೀತಿ=ಪ್ರೇಮದಲ್ಲಿ; ರತಸ್ಯ=ಆಸಕ್ತನಾದ; ನಿಷ್ಠುರ=ಕೆಟ್ಟ; ಗಿರಃ=ಮಾತುಳ್ಳ; ದುರ್ಮಂತ್ರ=ಚಾಡಿಮಾತಿಗೆ; ಶ್ರುತೇ=ಕಿವಿವುಳ್ಳ; ನಿಜ=ತನ್ನ; ವಂಶ=ವಂಶಕ್ಕೆ; ಪಾಂಸನ=ಕೆಟ್ಟದ್ದನ್ನು; ಕೃತೇಃ= ಮಾಡುವವನ; ಸಾಮ್ರಾಜ್ಯಂ=ರಾಜ್ಯವು; ಕಂಸಸ್ಯ=ಕಂಸನ; ಸಂಸಾರವತ್= ಸಂಸಾರದಂತೆ.

ಈ ತನಕ ಈ ಲೋಕಕ್ಕೆ ಸಂಬಂಧಪಟ್ಟ ರಾಜನೀತಿಯನ್ನು ತಿಳಿಸಿದರು. ಇನ್ನು ಮುಂದೆ ಉಭಯಲೋಕಕ್ಕೆ ಉಚಿತವಾದ ರಾಜನೀತಿಯನ್ನು ತಿಳಿಸುತ್ತಾರೆ. ರಾಜನಿಗೆ ದೇವರಲ್ಲಿ ಸಹಜವಾದ ಭಕ್ತಿ ಇರಬೇಕು. ಪ್ರಜೆಗಳ ಕಣ್ಣಿಗೆ ಮಣ್ಣೆರಚುವ ತಂತ್ರದ ಭಕ್ತಿ ಆಗಬಾರದು. ಪ್ರಜೆಗಳ ಮತಗಳ ಮೇಲೆ ಕಣ್ಣಿಟ್ಟು ಭಕ್ತಿಯನ್ನು ಮಾಡುವುದಲ್ಲ. ದೇವರ ಪ್ರೀತಿಯ ಮೇಲೆ ದೃಷ್ಟಿಯಿಟ್ಟು ಮಾಡುವ ಭಕ್ತಿ ಇರಬೇಕು. ಧರ್ಮಶಾಸ್ತ್ರಗಳು ದೇವರ

ಆಜ್ಞೆಗಳು. ಇವುಗಳನ್ನು ಶಿರಸಾ ಮನ್ನಣೆ ಮಾಡಬೇಕು. ಇವುಗಳನ್ನು ಮೀರಿ ನಡೆಯಬಾರದು. ತಾನು ಹೇಳಿದ್ದೇ ಧರ್ಮ ಎಂದೂ ಆಗಬಾರದು. ತನ್ನ ಇಚ್ಛೆಗೆ ವಿರುದ್ಧವಾಗಿ ಇದೆ ಎಂದು ಅದನ್ನು ತಿದ್ದುವ ಅಧಿಕಾರವನ್ನೂ ಚಲಾಯಿಸಬಾರದು. ಭಾಗವತರನ್ನು ಎಂದೂ ತಿರಸ್ಕರಿಸಬಾರದು. ದುಷ್ಟರ ಸಹವಾಸ ಕೆಟ್ಟದಾಗಿ ಮನಕ್ಕೆ ನೋವಾಗುವ ಮಾತು, ಚಾಡಿಯ ಮಾತಿಗೆ ಕಿವಿಕೊಟ್ಟು ಅಮಾಯಕರನ್ನು ಶಿಕ್ಷಿಸುವುದು, ವಂಶದ ಅಧಃಪತನಕ್ಕೆ ಕಾರಣವಾದ ಕೆಲಸವನ್ನು ಮಾಡುವುದು. ಇದನ್ನೆಲ್ಲಾ ತ್ಯಜಿಸಬೇಕು. ಇವೆಲ್ಲಾ ಇದ್ದರೆ ಕಂಸನ ಸಂಸಾರದಂತೆ ಆಗುತ್ತದೆ. ಆತನು ತಾನು ಕೆಟ್ಟ, ತನ್ನ ಅನುಚರರನ್ನೂ ಕೆಡಿಸಿದ. ಅಧೋಲೋಕವನ್ನು ಸೇರಿದ.

<u>**ಸಂದೇಶ**</u> : ಇಹ, ಪರ ಎಂಬ ಎರಡು ಹಳಿಗಳು ಉತ್ತಮವಾಗಿರಬೇಕು. ಆಗ ರಾಜ್ಯವೆಂಬ ಉಗಿಬಂಡಿಯೂ ಗುರಿ ತಲುಪುತ್ತದೆ.

**ವಿಷ್ಣುಭಕ್ತಿರತಂ ಭೂಪಂ ನೈವ ತ್ಯಕ್ಷತಿ ತತ್ಪ್ರಿಯಾ ।**
**ತದ್ವೇಷಿಣಿ ನ ಸಾ ಸ್ಥಾತುಮುತ್ಸಹೇತ ಪತಿವ್ರತಾ ॥ ೫೮ ॥**

ವಿಷ್ಣು=ದೇವರ; ಭಕ್ತಿ=ಭಕ್ತಿಯಲ್ಲಿ; ರತಂ=ಆಸಕ್ತನಾದ; ಭೂಪಂ=ರಾಜನನ್ನು; ತತ್=ದೇವರಿಗೆ; ಪ್ರಿಯಾ=ಪತ್ನಿಯು; ನ ಏವ ತ್ಯಕ್ಷತಿ=ಬಿಡುವುದಿಲ್ಲ; ತತ್=ದೇವರಲ್ಲಿ; ದ್ವೇಷಿಣಿ=ವಿರೋಧಿಯಲ್ಲಿ; ಸಾ=ಅವಳು; ಪತಿವ್ರತಾ=ಪತಿವ್ರತೆಯು; ಸ್ಥಾತುಂ=ಇರಲು; ನ ಉತ್ಸಹೇತ=ಇಚ್ಛಿಸುವುದಿಲ್ಲ.

ರಾಜನಲ್ಲಿ ರಾಜ್ಯವು ಸ್ಥಿರವಾಗಿ ನಿಲ್ಲಬೇಕಾದರೆ ಆತನು ದೇವರ ಭಕ್ತನಾಗಿರಬೇಕು. ಯಾರು ದೇವರನ್ನು ವಿರೋಧಿಸುವನೋ ಆತನನ್ನು ಈ ಭೂಮಿಯೂ ತ್ಯಜಿಸುವುದು. ಅಂದರೆ ಆ ರಾಜನು ರಾಜ್ಯಭ್ರಷ್ಟನಾಗುವನು. ದೇವರಿಗೆ ಭೂಪತಿ ಎಂದು ಹೆಸರಿದೆ. ಈ ಭೂಮಿಯು ದೇವರ ಪತ್ನಿಯು. ಇವಳು ಮಹಾಪತಿವ್ರತೆ. ತನ್ನ ಪತಿಯನ್ನು ವಿರೋಧಿಸುವವರ ಜೊತೆಯಲ್ಲಿ ಇರಲು ಇಷ್ಟಪಡುವುದಿಲ್ಲ. ಈ ನಿಯಮ ಲೋಕದಲ್ಲಿಯೂ ಇದೆ.

ರಾಜರು ಐನೂರು ವರ್ಷಗಳ ಹಿಂದೆ ಹೇಳಿದ ಮಾತು ಈಗಲೂ ಸತ್ಯವಾಗಿಯೇ ಇದೆ. ನಮ್ಮನ್ನು ಆಳುವವರು ದೇವರಲ್ಲಿ ನಿಜವಾಗಿ ನಂಬಿಕೆ ಉಳ್ಳವರಲ್ಲ. ಜನರನ್ನು ಮರಳುಮಾಡುವ ತಂತ್ರ, ಆದ್ದರಿಂದ ರಾಜ್ಯವು ಅವರ ಕೈಯಲ್ಲಿ ಅವಧಿ ಮುಗಿಯುವ ತನಕ ಇರುವುದಿಲ್ಲ. ಇದನ್ನು ನಾವು ಪ್ರತ್ಯಕ್ಷವಾಗಿ ಕಾಣುತ್ತಿದ್ದೇವೆ.

<u>**ಸಂದೇಶ**</u> : ದೇವರ ನೈಜ ಆರಾಧನೆಯಿಂದ ಸಂಪತ್ತು ಲಭಿಸುತ್ತದೆ.

**ಧರ್ಮದ್ವಿತೀಯಂ ನೃಪತಿಂ ಧರ್ಮೋಽನ್ಯೋ ನೈವ ಪೀಡಯೇತ್ ।**
**ಅನ್ಯಥಾ ಪ್ರತಿಮಲ್ಲೋಽಸೌ ಸಾನ್ವಯಂ ಸಂಹರಿಷ್ಯತಿ ॥ ೫೯ ॥**

ಧರ್ಮ=ಧರ್ಮವೇ; ದ್ವಿತೀಯಂ=ಸಹಾಯವಾಗಿ ಉಳ್ಳ; ನೃಪತಿಂ=ರಾಜನನ್ನು; ಅನ್ಯಃ= ಇನ್ನೊಬ್ಬ; ಧರ್ಮಃ=ಧರ್ಮನು; ನ ಏವ ಪೀಡಯೇತ್=ಪೀಡಿಸುವುದಿಲ್ಲ; ಅನ್ಯಥಾ= ಇಲ್ಲ ದಿದ್ದರೆ; ಪ್ರತಿಮಲ್ಲಃ=ಪ್ರತಿಮಲ್ಲನಾದ; ಅಸೌ=ಇವನು; ಸಾನ್ವಯಂ=ವಂಶದಿಂದ ಕೂಡಿ ಕೊಂಡು, ಸಂಹರಿಷ್ಯತಿ=ನಾಶ ಮಾಡುತ್ತಾನೆ.

ರಾಜನು ತನ್ನ ಪ್ರಜೆಗಳನ್ನು ಧಾರ್ಮಿಕರನ್ನಾಗಿ ಮಾಡಬೇಕು. ರಾಜರುಗಳ ಜೊತೆಗೆ ಸದಾ ಜಟ್ಟಿಗಳು ಇರುತ್ತಾರೆ. ಆಗ ಪ್ರತಿ ಜಟ್ಟಿಗಳು ಯಾರೂ ಬಂದು ರಾಜನನ್ನು ಪೀಡಿಸುವುದಿಲ್ಲ. ಪ್ರತಿ ಜಟ್ಟಿಗಳಲ್ಲಿ ಯಮನೂ ಒಬ್ಬ. ಇವನ ಪೀಡೆ ರಾಜರುಗಳಿಗೆ ಬರಬಾರದು. ಅದಕ್ಕಾಗಿ ರಾಜನು ಧಾರ್ಮಿಕತನ ಎಂಬ ಮಲ್ಲನನ್ನು ತನ್ನ ಜೊತೆ ಸದಾ ಇಟ್ಟುಕೊಂಡಿರಬೇಕು. ರಾಜನು ಧರ್ಮಭ್ರಷ್ಟನಾದರೆ ಯಮನು ಇವನ ವಂಶವನ್ನು ನಿರ್ವಂಶ ಮಾಡುತ್ತಾನೆ.

**<u>ಸಂದೇಶ</u>** : ಧರ್ಮೋ ರಕ್ಷತಿ ರಕ್ಷಿತಃ । ನಾವು ಧರ್ಮವನ್ನು ರಕ್ಷಿಸಿದರೆ ಅದು ನಮ್ಮನ್ನು ರಕ್ಷಿಸುತ್ತದೆ.

**ವಿಷ್ಣೋರರ್ಭಕ ಸಂಕಾಶಾನ್ ವೈಷ್ಣವಾನ್ ಯಸ್ತು ನಿಂದತಿ ।**
**ತತ್ರಾಪಿ ನ ಸ್ಥಿರಾ ಶ್ರೀಃಸ್ಯಾತ್ಪುತ್ರದ್ವೇಷಿಣಿ ಮಾತೃವತ್ ॥ ೬೦ ॥**

ಯಃ ತು=ಯಾವರಾಜನು; ವಿಷ್ಣೋಃ=ದೇವರ; ಅರ್ಭಕ=ಮಕ್ಕಳಿಗೆ; ಸಂಕಾಶಾನ್= ಸಮಾನರಾದ; ವೈಷ್ಣವಾನ್=ವೈಷ್ಣವರನ್ನು; ನಿಂದತಿ=ಪೀಡಿಸುತ್ತಾನೋ; ತತ್ರ ಅಪಿ=ಅವನ ಲ್ಲಿಯೂ; ಶ್ರೀಃ=ಸಂಪತ್ತು; ಪುತ್ರ=ಮಕ್ಕಳನ್ನು; ದ್ವೇಷಿಣಿ=ದ್ವೇಷಿಸುವವರಲ್ಲಿ; ಮಾತೃವತ್= ತಾಯಿಯಂತೆ; ಸ್ಥಿರಾ=ದೃಢವಾಗಿ; ನಸ್ಯಾತ್=ಇರುವುದಿಲ್ಲ.

ಪಾರತ್ರಿಕ ನೀತಿಗಳಲ್ಲಿ ವೈಷ್ಣವರನ್ನು ಗೌರವಿಸುವುದೂ ಒಂದು. ವೈಷ್ಣವರು ದೇವರ ಪುತ್ರರು. ಇವರನ್ನು ರಾಜನು ಅವಮಾನಿಸಿದರೆ ಆ ರಾಜನು ದರಿದ್ರನಾಗುತ್ತಾನೆ. ಶ್ರೀಯು ಆತನಿಂದ ದೂರಳಾಗುತ್ತಾಳೆ. ಶ್ರೀಯು ದೇವರ ಪತ್ನಿಯು. ಆದ್ದರಿಂದ ದೇವರ ಮಕ್ಕಳು ಲಕ್ಷ್ಮಿಗೂ ಮಕ್ಕಳು ತಾನೆ. ಮಕ್ಕಳನ್ನು ಯಾರು ದ್ವೇಷಿಸುತ್ತಾರೋ ಅವರನ್ನು ಆ ಮಕ್ಕಳ ತಾಯಿಯು ದೂರಮಾಡುವುದನ್ನು ಲೋಕದಲ್ಲಿ ನಾವು ಕಾಣುತ್ತೇವೆ.

**<u>ಸಂದೇಶ</u>** : ಸಂಪತ್ತು ಸಮೃದ್ಧಿ ಬೇಕಾದವರು ವೈಷ್ಣವರನ್ನು ಸತ್ಕರಿಸಬೇಕು.

**ದುಷ್ಟಪ್ರೀತಿರತಂ ಭೂಪಂ ದೋಷೋऽಪಿ ಸ್ಪೃಶತಿ ಕ್ರಮಾತ್ ।**
**ದೋಷಿಣಂ ಗುಣಲುಬ್ಧಾ ಶ್ರೀಃ ನಾಶ್ರಯೇ ದಿತಿ ಮೇ ಮತಿಃ ॥ ೬೧ ॥**

ದುಷ್ಟ=ದುಷ್ಟರ; ಪ್ರೀತಿ=ಸ್ನೇಹದಲ್ಲಿ; ರತಂ=ಆಸಕ್ತನಾದ; ಭೂಪಂ=ರಾಜನನ್ನು; ಕ್ರಮಾತ್=ಕ್ರಮೇಣ; ದೋಷಃ ಅಪಿ=ದೋಷವೂ; ಸ್ಪೃಶತಿ=ಅಂಟುತ್ತದೆ; ಗುಣ=ಗುಣಗಳಲ್ಲಿ;

ಲುಬ್ಧಾ=ಆಸೆವುಳ್ಳ; ಶ್ರೀಃ=ಲಕ್ಷ್ಮಿಯು; ದೋಷಿಣಂ=ದೋಷವುಳ್ಳವನನ್ನು; ನಾಶ್ರಯೇತ್= ಆಶ್ರಯಿಸುವುದಿಲ್ಲ; ಇತಿ=ಎಂದು; ಮೇ=ನನ್ನ; ಮತಿಃ=ವಿಚಾರವು.

ರಾಜನು ದುಷ್ಟರ ಸಹವಾಸದಲ್ಲಿ ಇರಬಾರದು ಎಂದು ಹಿಂದೆಯೇ ಹೇಳಿದ್ದಾರೆ. ಇದ್ದರೆ ರಾಜನಲ್ಲಿ ಸಹವಾಸದೋಷದಿಂದ ದುರ್ಗುಣಗಳು ಬರುತ್ತವೆ. ಎಲ್ಲಿ ಕೆಟ್ಟಗುಣ ಗಳೋ ಅಲ್ಲಿ ಲಕ್ಷ್ಮಿ ಇರುವುದಿಲ್ಲ. ಆಕೆಯು ಗುಣಪಕ್ಷಪಾತಿನೀ.

<u>**ಸಂದೇಶ**</u> : ಕೆಟ್ಟವರ ಸಹವಾಸದಿಂದ ದಾರಿದ್ರ್ಯ ಬರುವುದು.

**ಕಠೋರಗಿರಮುತ್ಸೃಜ್ಯ ವೃಣೋತ್ಯಪರಮಿಂದಿರಾ ।**
**ಘನಂ ಪುರೋಗ್ರಸ್ತನಿತಾದ್ವಿಹಾಯೇವ ತಟಿದ್ದಿಶಃ ॥ ೬೨ ॥**

ಇಂದಿರಾ=ಲಕ್ಷ್ಮಿಯು; ಕಠೋರ=ಕರ್ಕಶವಾದ; ಗಿರಂ=ಮಾತುಳ್ಳವನನ್ನು; ಉತ್ಸೃಜ್ಯ=ಬಿಟ್ಟು; ಅಪರಂ=ಇನ್ನೊಬ್ಬನನ್ನು; ವೃಣೋತಿ=ಸ್ವೀಕರಿಸುತ್ತಾಳೆ; ತಟಿತ್=ಮಿಂಚು; ಉಗ್ರ=ಕರ್ಕಶವಾದ; ಸ್ತನಿತಾತ್=ಧ್ವನಿಗಿಂತ; ಪುರಾ=ಮೊದಲೇ; ಘನಂ=ಮೋಡವನ್ನು; ವಿಹಾಯ=ಬಿಟ್ಟು; ದಿಶ ಇವ=ದಿಕ್ಕುಗಳನ್ನೆಂಬಂತೆ.

ಕೆಲವು ರಾಜರುಗಳು ನಿಷ್ಠುರಭಾಷಿಗಳು ಆಗಿರುತ್ತಾರೆ. ಅಂತಹವರಲ್ಲಿಯೂ ಸಂಪತ್ತು ನೆಲೆಸುವುದಿಲ್ಲ. ತನ್ನ ನಿಷ್ಠುರವಾದ ಮಾತಿನಿಂದಲೇ ಎಲ್ಲವನ್ನೂ ಕಳೆದುಕೊಳ್ಳುತ್ತಾನೆ. ಇದಕ್ಕೆ ಮೋಡವು ಒಳ್ಳೆಯ ಉದಾಹರಣೆ –ಆಕಾಶದಲ್ಲಿ ಮೋಡಗಳು ಇರುತ್ತವೆ. ಗುಡುಗು–ಮಿಂಚು ಅನಂತರ ಮಳೆ ಆರಂಭವಾಗುತ್ತದೆ. ಗುಡುಗಿಗಿಂತ ಮೊದಲು ಮಿಂಚು ಬರುತ್ತದೆ. ಮಿಂಚು ಪ್ರಕಾಶಮಯ ಸಂಪತ್ತಿಗೆ ದ್ಯೋತಕ. ಸಿಡಿಲು ಕರ್ಕಶ ಧ್ವನಿಯ ಸಂಕೇತ. ಮೋಡದಲ್ಲಿ ಸಿಡಿಲು ಮಿಂಚು ಎರಡೂ ಇರುತ್ತವೆ. ಈ ಮೋಡವು ಕರ್ಕಶವಾಗಿ ಧ್ವನಿ ಮಾಡುತ್ತದೆ ಎಂದು ತಿಳಿದು ಮಿಂಚು ತಾನು ಮೊದಲೇ ಅಲ್ಲಿಂದ ಹೊರಟು ದಿಕ್ಕುಗಳಲ್ಲಿ ಸೇರಿಕೊಳ್ಳುತ್ತದೆ.

<u>**ಸಂದೇಶ**</u> : ಸಂಪತ್ತು ಬೇಕಾದವರು ಯಾರ ಜೊತೆಯೂ ನಿಷ್ಠುರವಾದ ಮಾತನ್ನು ಆಡಬಾರದು.

**ಸನ್ಮಂತ್ರಶೀರ್ಣೋ ದುರ್ಮಂತ್ರಃ ಪ್ರಯೋಕ್ತಾರಂ ಕ್ಷಿಣೋತಿ ಹಿ ।**
**ಯಥಾ ನೃಸಿಂಹಸೂರ್ಯಾಗ್ರೇ ಭೈರವಃ ಕೈರವದ್ಯುತಿಃ ॥ ೬೩ ॥**

ಸತ್=ಒಳ್ಳೆಯ; ಮಂತ್ರ=ಮಂತ್ರದಿಂದ; ಶೀರ್ಣ=ಪುಡಿಯಾದ; ದುರ್ಮಂತ್ರಃ=ಚಾಡಿ ಮಾತು; ಪ್ರಯೋಕ್ತಾರಂ=ಹೇಳಿದವನನ್ನು; ಕ್ಷಿಣೋತಿ=ನಾಶಮಾಡುತ್ತದೆ; ಹಿ=ಪ್ರಸಿದ್ಧ; ಯಥಾ=ಹೇಗೆ; ನೃಸಿಂಹ=ನರಸಿಂಹನೆಂಬ; ಸೂರ್ಯ=ಸೂರ್ಯನ; ಅಗ್ರೇ=ಮುಂದೆ; ಭೈರವಃ=ಕಾಲಭೈರವಮಂತ್ರವು; ಕೈರವ=ಕುಮುದಪುಷ್ಪದಂತೆ; ದ್ಯುತಿಃ=ಕಾಂತಿವುಳ್ಳದ್ದು.

ಕೆಲವರು ರಾಜನಲ್ಲಿ ಚಾಡಿ ಹೇಳುತ್ತಾರೆ. ಹೇಳುವಾಗ ಕೇಳುವಾಗ ಬಹಳ ರಮ್ಯವಾಗಿರುತ್ತದೆ. ಅನಂತರದಲ್ಲಿ ರಾಜನು ವಿಮರ್ಶೆ ಮಾಡುತ್ತಾನೆ. ಆಗ ಅವರು ಹೇಳಿದ್ದು ಸುಳ್ಳು ಎಂದು ಗೊತ್ತಾಗುತ್ತದೆ. ಅನಂತರ ರಾಜನು ಚಾಡಿಕೋರನನ್ನೇ ಶಿಕ್ಷಿಸುತ್ತಾನೆ.

ಭೈರವಮಂತ್ರಕ್ಕೆ ಶಕ್ತಿ ಇರಬಹುದು. ವಾಮಾಚಾರಕ್ಕೆ ಆ ಮಂತ್ರವನ್ನು ಉಪಯೋಗಿಸುತ್ತಾರೆ. ಯಾರ ಮೇಲಾದರೂ ಪ್ರಯೋಗಿಸುತ್ತಾರೆ. ಆಗ ಬಹಳ ಖುಷಿ ಆಗುತ್ತದೆ. ಪ್ರಯೋಗಕ್ಕೆ ಒಳಗಾದ ವ್ಯಕ್ತಿಯು ತಿಳಿದನಂತರ ತಾನು ನರಸಿಂಹಮಂತ್ರವನ್ನು ಒಂದೇಸವನೆ ಜಪಿಸಲು ಆರಂಭಿಸುತ್ತಾನೆ. ಆಗ ಆ ಮಾಟವು ತಿರುಗಿ ಮಾಡಿದವನನ್ನೇ ಬಡಿಯುತ್ತದೆ.

**ಸಂದೇಶ** : ಉತ್ತಮ ರಾಜ್ಯವು ಚಾಡಿಕೋರರಿಂದ ರಹಿತವಾಗಿರಬೇಕು.

**ಪ್ರಜಾಯಂ ನ ಪ್ರಶಂಸಂತಿ ನಸ್ತುತಶ್ಚಾರ್ಥಿಭಿಶ್ಚ ಯಃ ।**
**ವಿಷಯಾಸಕ್ತಕುಮತೇಃ ನ ಸುಖಂ ತಸ್ಯ ಭೂಪತೇಃ ॥ ೬೪ ॥**

ಯಂ=ಯಾರನ್ನು; ಪ್ರಜಾಃ=ಜನರು; ನ ಪ್ರಶಂಸತಿ=ಹೊಗಳುವುದಿಲ್ಲ; ಯಃ=ಯಾರು; ಅರ್ಥಿಭಿಃ ಚ=ಯಾಚಕರಿಂದಲೂ; ನಸ್ತುತಃ=ಹೊಗಳಲ್ಪಡುವುದಿಲ್ಲ.; ವಿಷಯ=ವಿಷಯಗಳಲ್ಲಿ; ಆಸಕ್ತ=ಆಸಕ್ತವಾದ; ಕುಮತೇಃ=ಕೆಟ್ಟಬುದ್ಧಿ ಉಳ್ಳ; ತಸ್ಯ=ಆ; ಭೂಪತೇಃ=ರಾಜನಿಗೆ; ಸುಖಂ=ಶಾಂತಿಯು; ನ=ಇಲ್ಲ.

ಪ್ರಜೆಗಳು ಹಾಗೆಯೇ ಯಾಚಕರು ಎಲ್ಲರೂ ರಾಜನನ್ನು ಹೊಗಳುತ್ತಿರಬೇಕು. ರಾಜನ ಮುಂಭಾಗದಲ್ಲಿ ಮಾತ್ರ ಅಲ್ಲ, ಅವರು ಹೊಗಳಬೇಕಾದರೆ ಅವರನ್ನು ಚೆನ್ನಾಗಿ ನೋಡಿಕೊಂಡಿರಬೇಕು. ಉತ್ತಮ ವಸ್ತುಗಳನ್ನು ತಾನೊಬ್ಬನೇ ಅನುಭವಿಸುವುದಲ್ಲ. ಜನರಿಗೂ ಹಂಚಬೇಕು. ಇಲ್ಲದಿದ್ದರೆ ಜನರು ರಾಜನನ್ನು ವಿಷಯಲಂಪಟನೆಂದು ಹೀಯಾಳಿಸುತ್ತಾರೆ. ಇದು ರಾಜನಾದವನಿಗೆ ಒಳ್ಳೆಯದಲ್ಲ.

**ಸಂದೇಶ** : ಪ್ರಜೆಗಳು ರಾಜನಲ್ಲಿ ರಾಜನು ಪ್ರಜೆಗಳಲ್ಲಿ ದೇವರನ್ನು ಕಾಣಬೇಕು. ಆಗ ಇಬ್ಬರಿಗೂ ಕ್ಷೇಮ.

**ಪ್ರಜಾನಾಂ ಪೀಡನಂ ಕೃತ್ವಾ ಯೋ ಲುಬ್ಧೋ ಧನಮಾರ್ಜಯೇತ್ ।**
**ವಿಕ್ರೀಯ ಸ್ವಸುತಾನೇವ ಸ ವೈ ಸಂಚಿನುತೇ ವಸು ॥ ೬೫ ॥**

ಲುಬ್ಧಃ=ಲೋಭಿಯಾದ; ಯಃ=ಯಾರು; ಪ್ರಜಾನಾಂ=ಜನರ; ಪೀಡನಂ=ಪೀಡೆಯನ್ನು; ಕೃತ್ವಾ=ಮಾಡಿ; ಧನಂ=ಹಣವನ್ನು; ಆರ್ಜಯೇತ್=ಗಳಿಸುತ್ತಾನೋ; ಸಃ=ಅವನು; ಸ್ವ=ತನ್ನ; ಸುತಾನ್ ಏವ=ಮಕ್ಕಳನ್ನೇ; ವಿಕ್ರೀಯ=ಮಾರಿ; ವಸು=ಹಣವನ್ನು; ಸಂಚಿನುತೇ=ಸಂಗ್ರಹಿಸುತ್ತಾನೆ.

ರಾಜನ ಖಜಾನೆ ವೃದ್ಧಿಯಾಗಬೇಕು ಎಂಬ ವಿಷಯದಲ್ಲಿ ಚರ್ಚೆ ಇಲ್ಲ. ವೃದ್ಧಿ ಹೇಗೆ? ಪ್ರಜೆಗಳು ಕೊಡುವ ತೆರಿಗೆಯಿಂದ ತನ್ನ ಬೊಕ್ಕಸ ಬೆಳೆಯಬೇಕು ಎಂಬ ಒಂದೇ ಉದ್ದೇಶದಿಂದ ಕೆಲವು ರಾಜರು ಪ್ರಜೆಗಳನ್ನು ಪೀಡಿಸಿ ತೆರಿಗೆ ಸಂಗ್ರಹಿಸುತ್ತಾರೆ. ಪ್ರಜೆಗಳ ಶಕ್ತಿಗೆ ಅನುಗುಣವಾಗಿಯೇ ತೆರಿಗೆಯನ್ನು ಹೇರಬೇಕು. ಶಕ್ತಿಗೆ ಮೀರಿ ತೆರಿಗೆ ಹಾಕಿ ಬೊಕ್ಕಸವನ್ನು ಬೆಳೆಸುವವನು ತನ್ನ ಮಕ್ಕಳನ್ನು ಮಾರಿ ಶ್ರೀಮಂತನಾದವನಿಗೆ ಸಮಾನನು.

**ಸಂದೇಶ** : ಪ್ರಜೆಗಳನ್ನು ತನ್ನ ಮಕ್ಕಳಂತೆ ನೋಡಿಕೊಳ್ಳಬೇಕು.

**ಪ್ರಜಾಪರಂಪರಾಮೇತಿ ಪ್ರಜಾರಂಜನಕೃನ್ನೃಪಃ ।**
**ಪೀಡಿತಾ ಸಾ ಸನಾಮ್ನೀಂ ತಾಂ ನೋತ್ಪಾದಯತಿ ತತ್ಕುಲೇ ॥ ೬೬ ॥**

ಪ್ರಜಾ=ಜನರಿಗೆ; ರಂಜನ=ನೆಮ್ಮದಿಯನ್ನು; ಕೃತ್=ಮಾಡುವ; ನೃಪಃ=ರಾಜನು; ಪ್ರಜಾ=ಸಂತತಿಯು; ಪರಂಪರಾಂ=ಪರಂಪರೆಯನ್ನು; ಏತಿ=ಹೊಂದುತ್ತಾನೆ; ಪೀಡಿತಾ=ದುಃಖಿತವಾದ; ಸಾ=ಆ ಪ್ರಜೆಯ; ತತ್=ರಾಜನ; ಕುಲೇ=ವಂಶದಲ್ಲಿ; ಸನಾಮ್ನೀಂ=ಒಂದೇ ಹೆಸರುಳ್ಳದ್ದನ್ನು; ನ ಉತ್ಪಾದಯತಿ=ಉಂಟುಮಾಡುವುದಿಲ್ಲ.

ರಾಜನು ಧಾರ್ಮಿಕವಾಗಿ ಪ್ರಜೆಗಳನ್ನು ರಕ್ಷಿಸಬೇಕು. ಅವರಿಗೆ ಉಚಿತವಾದ ಮನೋರಂಜನೆಯನ್ನು ಒದಗಿಸಬೇಕು. ಆಗ ಆ ಪ್ರಜೆಗಳು ಈ ರಾಜನನ್ನು ಇವನ ವಂಶದಲ್ಲಿ ನಮ್ಮ ಹೆಸರಿನವರು ಅಂದರೆ ಪ್ರಜೆಗಳು ಬೆಳೆಯಲಿ ಎಂದು ಮನಸಾರೆ ಆಶಿಸುತ್ತಾರೆ. ರಾಜನು ಪೀಡಿಸಿದರೆ ಆಗ ಪ್ರಜೆಗಳು ಈತನ ವಂಶದಲ್ಲಿ ನಮ್ಮ ಹೆಸರಿನವರು ಬಾರದಿರಲಿ. ಅಂದರೆ ಇವನ ವಂಶದಲ್ಲಿ ಪ್ರಜೆಗಳು ಬೆಳೆಯದಿರಲಿ. ಬೆಳೆದರೆ ಅವರನ್ನು ಈ ರಾಜನು ಇದೇ ರೀತಿ ಪೀಡಿಸುತ್ತಾನೆ ಎಂದು ಶಪಿಸುತ್ತಾರೆ. ಪ್ರಜಾ ಶಬ್ದಕ್ಕೆ ಜನರು ಹಾಗೂ ಸಂತತಿ ಎಂದು ಎರಡು ಅರ್ಥ ಇದೆ.

**ಸಂದೇಶ** : ಯಾವುದಾದರೂ ಒಂದು ರೀತಿಯಿಂದ ಪ್ರಜೆಗಳನ್ನು ತೃಪ್ತಿಪಡಿಸುವುದೇ ದೇವರಪೂಜೆ.

**ಅಪೂಜಿತೋಽತಿಥಿಃ ಸ್ವೀಯಮತಿಥಿತ್ವಮಪಾರ್ಥಕಮ್ ।**
**ಸಮರ್ಪಯತಿ ತತ್ತಿಥ್ಯಾಂ ಅಪೂಜ್ಯತ್ವಮಿವಾರ್ಪಯನ್ ॥ ೬೭ ॥**

ಅಪೂಜಿತಃ=ಪೂಜಿಸಲ್ಪಡದ; ಅತಿಥಿಃ=ಅತಿಥಿಯು; ಸ್ವೀಯಂ=ತನ್ನ; ಅಪಾರ್ಥಕಂ=ಅರ್ಥ ಇಲ್ಲದ; ಅತಿಥಿತ್ವಂ=ಅತಿಥಿತ್ವವನ್ನು; ತತ್=ಆ ರಾಜನ; ತಿಥ್ಯಾಂ=ತಿಥಿಯಲ್ಲಿ; ಅಪೂಜ್ಯತ್ವಂ=ಪೂಜಾರಾಹಿತ್ಯವನ್ನು; ಅರ್ಪಯನ್ ಇವ=ಒಪ್ಪಿಸುವವನಂತೆ; ಸಮರ್ಪಯತಿ=ಸೇರಿಸುತ್ತಾನೆ.

ರಾಜನ ಮನೆಗೆ ಅತಿಥಿಗಳು ಬರುತ್ತಾ ಇರುತ್ತಾರೆ. ಮೊದಲೇ ತಿಳಿಸದೆ ಆಕಸ್ಮತ್ತಾಗಿ ಬರುವವರಿಗೆ ಅತಿಥಿಗಳು ಎಂದು ಹೆಸರು. ತಿಳಿಸಿ ಬರುವವರು ಅಭ್ಯಾಗತರು. ತಿಳಿಸಿ ಬಂದಿಲ್ಲ, ನನಗೆ ಈಗ ಅವಕಾಶ ಇಲ್ಲ ಎಂದು ಹೇಳಿ ರಾಜನು ಅತಿಥಿಗಳನ್ನು ಪೂಜಿಸದೆ ಇರಬಾರದು. ಹೀಗಾದರೆ ಆ ಅತಿಥಿಗಳು ತಮ್ಮ ಅತಿಥಿತ್ವವನ್ನು ಆ ತಿಥಿಗಳಲ್ಲಿಟ್ಟು ಅಲ್ಲಿಂದ ಹೊರಡುತ್ತಾರೆ. ಅಂದರೆ ಒಂದೊಂದು ತಿಥಿಯಲ್ಲಿ ಒಂದೊಂದು ದೇವತೆಯನ್ನು ಆರಾಧಿಸಿ ಇಷ್ಟವನ್ನು ಪಡೆಯಬೇಕು. ಇಂತಹ ತಿಥಿಗಳಲ್ಲಿ ಅತಿಥಿತ್ವವನ್ನು ಇಡುವುದೆಂದರೆ ಆ ಆ ದೇವತೆಗಳನ್ನು ಪೂಜೆಮಾಡಲು ವಿಘ್ನಗಳು ಉಂಟಾಗುವುದು. ಫಲಿತಾಂಶ ಇಷ್ಟಗಳು ಸಿದ್ಧವಾಗದೆ ಅನಿಷ್ಟಗಳ ಪ್ರಾಪ್ತಿ. ದೇವತೆಗಳನ್ನು ಪೂಜಿಸಿದರೆ ತಿಥಿಗಳಿಗೆ ತಿಥಿತ್ವ ಇಲ್ಲದಿದ್ದರೆ ಅತಿಥಿತ್ವ

<u>**ಸಂದೇಶ**</u> : ಪ್ರತಿಯೊಬ್ಬ ಗೃಹಸ್ಥನೂ ಅತಿಥಿಸತ್ಕಾರವನ್ನು ಮಾಡಲೇಬೇಕು.

**ವಿಷಯೇಷು ಉಪಭುಕ್ತೇಷು ತೃತೀಯಾಂಶೋಽಸ್ಯ ಜೀರ್ಯತೇ ।**
**ಶಿಷ್ಟಂ ತು ವಿಷಸಾರೂಪ್ಯಾತ್ ಕಷ್ಟಾಯ ಪರಿಕಲ್ಪತೇ ॥ ೬೮ ॥**

ವಿಷಯೇಷು=ವಿಷಯಪದಾರ್ಥಗಳು; ಉಪಭುಕ್ತೇಷು=ಅನುಭವಿಸಲ್ಪಡುತ್ತಿರಲು ; ಅಸ್ಯ=ರಾಜನಿಗೆ; ತೃತೀಯ=ಮೂರನೆಯ; ಅಂಶಃ=ಅಂಶವು; ಜೀರ್ಯತೇ=ಜೀರ್ಣ ವಾಗುತ್ತದೆ; ಶಿಷ್ಟಂ ತು=ಉಳಿದದ್ದು; ವಿಷ=ವಿಷಕ್ಕೆ; ಸಾರೂಪ್ಯಾತ್=ಸದೃಶವಾದ್ದರಿಂದ; ಕಷ್ಟಾಯ=ಕ್ಲೇಶಕ್ಕೆ; ಪರಿಕಲ್ಪತೇ=ಸಿದ್ಧವಾಗುತ್ತದೆ.

ವಿಷಯಪದಾರ್ಥಗಳು ವನಿತಾದಿಗಳು ಇವುಗಳನ್ನು ಅನುಭವಿಸುವಾಗ ಆರಂಭದಲ್ಲಿ ಸುಖದಂತೆ ತೋರುತ್ತದೆ. ವಿಷಯವಸ್ತುಗಳ ಸುಖವು ಮೂರುಪಾಲು ಉಳ್ಳದ್ದು. ಅವುಗಳಲ್ಲಿ ಒಂದುಪಾಲು ಮಾತ್ರ ನಮಗೆ ಜೀರ್ಣಕ್ಕೆ ಬರುವುದು. ಉಳಿದ ಎರಡುಪಾಲು ವಿಷವಾಗಿ ಪರಿಣಮಿಸುತ್ತದೆ. ಭೋಗದ ವಸ್ತುಗಳಿಗೆ ವಿಷಯ ಎಂದು ಹೆಸರು. ಈ ವಿಷಯ ಎಂಬ ಶಬ್ದದಲ್ಲಿ ಮೂರು ಅಕ್ಷರಗಳಿವೆ. ಈ ಮೂರು ಅಕ್ಷರಗಳು ಮೂರು ಭಾಗವುಳ್ಳ ಸುಖಕ್ಕೆ ಸಂಕೇತ. ಅದರಲ್ಲಿ ಒಂದು ಭಾಗ ಅಂದರೆ 'ಯ' ಎಂಬ ಭಾಗವು ಮೂರನೆಯದ್ದು. ಅದು ಜೀರ್ಣಕ್ಕೆ ಬರಬಹುದು. ಆದರೆ ಆರಂಭದ ಎರಡು ಭಾಗ 'ವಿಷ' ಎಂಬ ಎರಡು ಅಕ್ಷರಗಳಿಗೆ ಸಂಬಂಧಿಸಿದ್ದು. ನಮಗೆ ವಿಷವಾಗಿಯೇ ಪರಿಣಮಿಸುತ್ತದೆ.

ನಮ್ಮ ಜೀವನವನ್ನು ಬಾಲ್ಯ, ಯೌವನ, ವಾರ್ಧಕ್ಯ ಎಂದು ಮೂರು ಭಾಗ ಮಾಡುವುದು. ಕೊನೆಯ ವಾರ್ಧಕ್ಯದಲ್ಲಿ ಈ ವಸ್ತುಗಳನ್ನು ಎಷ್ಟು ಬೇಕೊ ಅಷ್ಟೇ ಉಪಯೋಗಿಸುತ್ತೇವೆ. ಬಾಲ್ಯ, ಯೌವನದಲ್ಲಿ ಮಿತಿಮೀರಿ ಉಪಯೋಗಿಸುತ್ತೇವೆ. ಆಗ ಅದು ವಿಷವಾಗುತ್ತದೆ.

**<u>ಸಂದೇಶ</u>** : ಎಲ್ಲವೂ ದೇವರ ಸೃಷ್ಟಿಯೇ. ಆದರೂ ಅತಿಯಾಗಿ ಸೇವಿಸಬಾರದು. ಸೇವಿಸಿದರೆ ಜೀವನವು ದುರಂತವನ್ನು ಕಾಣುತ್ತದೆ.

**ಇತ್ಯಾದ್ಯಮಾತ್ಯ ವರ್ಗೋಕ್ತನೀತ್ಯಾ ಪೃಥ್ವೀಂ ಸ ಪಾಲಯನ್ ।**
**ಭಕ್ತಿಂ ಮುಕುಂದೇ ಬಿಭ್ರಾಣಸ್ತತ್ಯಾಜ ವಿಷಯಸ್ಪೃಹಾಂ ॥ ೬೯ ॥**

ಇತಿ=ಇದೇ; ಆದಿ=ಮೊದಲಾದ; ಅಮಾತ್ಯ=ಮಂತ್ರಿಗಳ; ವರ್ಗ=ಗುಂಪಿನಿಂದ; ಉಕ್ತ= ಹೇಳಲ್ಪಟ್ಟ; ನೀತ್ಯಾ=ನೀತಿಯಿಂದ; ಸಃ=ಉಗ್ರಸೇನನು; ಪೃಥ್ವೀಂ=ಭೂಮಿಯನ್ನು; ಪಾಲಯನ್=ರಕ್ಷಿಸುತ್ತಾ; ಮುಕುಂದೇ=ದೇವರಲ್ಲಿ; ಭಕ್ತಿಂ=ಭಕ್ತಿಯನ್ನು; ಬಿಭ್ರಾಣಃ=ಮಾಡು ವವನಾಗಿ; ವಿಷಯ=ವಸ್ತುಗಳ; ಸ್ಪೃಹಾಂ=ಆಸೆಯನ್ನು; ತತ್ಯಾಜ=ತ್ಯಜಿಸಿದನು.

ಈ ರೀತಿಯಾಗಿ ಮಂತ್ರಿಗಳು ಉಗ್ರಸೇನನಿಗೆ ಉತ್ತಮ ಸಲಹೆಗಳನ್ನು ನೀಡಿದರು. ರಾಜನು ಅವೆಲ್ಲವನ್ನೂ ಸ್ವೀಕರಿಸಿದನು. ರಾಜನಿಗೆ ದೇವರಲ್ಲಿ ರತಿಯೂ ವಿಷಯಗಳಲ್ಲಿ ವಿರತಿಯೂ ಉಂಟಾಯಿತು.

**<u>ಸಂದೇಶ</u>** : ಯೋಗ್ಯ ಜನರಿಗೆ ಉಪದೇಶವು ಬೇಗನೆ ಸ್ವೀಕೃತವಾಗುತ್ತದೆ.

**ರೋಮ್ಣಾಂ ಹರ್ಷಣಕಾರಿಣಿಶ್ರವಣತಃ ಪಾಪೌಘವಿಧ್ವಂಸಿನೀ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋ ಮುದಾಂ ದ್ವಾದಶಃ ॥ ೭೦ ॥**

**॥ ಇತಿ ದ್ವಾದಶಸರ್ಗಃ ॥**



ರೋಮ್ಣಾಂ ಹರ್ಷಣಕಾರಿಣೆ ಶ್ರವಣತಃ ಪಾಪೌಘವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ದಶಮಃ ಸರ್ಗೋ ಮುದಾಂ ಸತ್ಕೃತಃ ॥

ಬರೇ ಶ್ರವಣ ನಡೆಸುವುದರಿಂದಲೇ ರೋಮಹರ್ಷಣವನ್ನುಂಟು ಮಾಡಬಲ್ಲ
ಹಾಗು ಪಾಪಗಳ ಸಮೂಹವನ್ನು ಪರಿಹರಿಸಬಲ್ಲ

ಆದರದಿಂದ ಚಿಂತನೆ ನಡೆಸತಕ್ಕವರಿಗೆ ಅದ್ಭುತ ನಿರ್ಮಲ ಪ್ರಶಂಸನೀಯ
ಅರ್ಥಗಳನ್ನು ಹೊರಡಿಸುವ ಮೂಲಕ ಅದ್ಭುತ ನಿರ್ದುಷ್ಟ ಪ್ರಶಂಸನೀಯಗಳಾದ
ಧರ್ಮಾರ್ಥಮೋಕ್ಷಪುರುಷಾರ್ಥಗಳನ್ನು ನೀಡಬಲ್ಲ

ಹರಿಗುರುಭಕ್ತರಾದ ಶ್ರೀವಾದಿರಾಜಗುರುಗಳಿಂದ ಹೇಳಲ್ಪಟ್ಟ ರುಗ್ಮಿಣೀಶವಿಜಯವು
ಭೂಮಿಯಲ್ಲಿ ಆವಿರ್ಭೂತವಾಗಲು

ಸ್ವರ್ಗದಲ್ಲಿರುವ ದೇವತೆಗಳ ಸಮೂಹದಲ್ಲಿ ಪ್ರಮೋದದ ಸೃಷ್ಟಿಯು
ಉಂಟಾಯಿತು

ಅಂತಹ ರುಗ್ಮಿಣೀಶವಿಜಯದಲ್ಲಿ ದೇವತೆಗಳ ಸಮೂಹದಲ್ಲಿ ಗೌರವಿಸಲ್ಪಟ್ಟ
ಹತ್ತನೆಯ ಸರ್ಗವು ಆವಿರ್ಭೂತವಾಗಿದೆ.

ISBN:978-93-81807-42-2